ಕನಕ ಸಾಹಿತ್ಯ
ದರ್ಶನ ಸಂಪುಟ ೩

# ಕನಕದಾಸರ ಕಾವ್ಯ ಭಾಗ - ೨

## ಮೋಹನತರಂಗಿಣಿ
(ಗದ್ಯಾನುವಾದದೊಂದಿಗೆ)



ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಕನಕ ಸಾಹಿತ್ಯ
## ದರ್ಶನ ಸಂಪುಟ ೩

# ಕನಕದಾಸರ ಕಾವ್ಯ ಭಾಗ-೨
## ಮೋಹನತರಂಗಿಣಿ
## (ಗದ್ಯಾನುವಾದದೊಂದಿಗೆ)

ಸಂಪಾದಕರು

.........................................

ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು - ೫೬೦ ೦೦೨

# ಪ್ರಕಾಶಕರ ಮಾತು

ಕನಕದಾಸರು ಕವಿ ವಿಶಿಷ್ಟವಾದ ಸಹಜ ಪ್ರತಿಭೆಯಿಂದ ಉದಾರತೆಯಿಂದ, ವಸ್ತುವೈವಿಧ್ಯ ಹಾಗೂ ಛಂದೋ ವೈವಿಧ್ಯತೆಯಿಂದ, ಸಮಕಾಲೀನ ಪ್ರಜ್ಞೆಯಿಂದ ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ಕನಕದಾಸರು ದಾಸರಲ್ಲಿ ಕವಿಗಳು ಇದೇ ಅವರ ವೈಶಿಷ್ಟ್ಯ. ಕನಕದಾಸರು ಹಲವಾರು ಭಾವಪೂರ್ಣ ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಸಾಹಿತ್ಯ ರಚನೆ ಕೇವಲ ಕೀರ್ತನೆಗಳಿಗೆ ಸೀಮಿತಗೊಳ್ಳದೆ, ಮೋಹನತರಂಗಿಣಿ, ನಳಚರಿತ್ರೆ, ಹರಿಭಕ್ತಿಸಾರ, ರಾಮಧಾನ್ಯಚರಿತ್ರೆ, ನೃಸಿಂಹಸ್ತವ ಎಂಬ ಕೃತಿಗಳನ್ನೂ ರಚಿಸಿದ್ದಾರೆ. ನೃಸಿಂಹಸ್ತವ ಉಪಲಬ್ಧವಿಲ್ಲ. ತತ್ತ್ವ-ನೀತಿ ಭಕ್ತಿಗಳಿಂದ ಮುಪ್ಪುರಿಗೊಂಡ ಹರಿಭಕ್ತಿಸಾರ, ನಳದಮಯಂತಿಯರ ಹೃದಯಸ್ಪರ್ಶಿಯಾದ ಪಾತ್ರ ಚಿತ್ರಣದ ನಳಚರಿತ್ರೆ, ಜನಾದರಣೀಯವಾಗಿದೆ. ಅಂದಿನ ಸಮಾಜದಲ್ಲಿ ನೆಲಸಿದ್ದ ವರ್ಗ, ವರ್ಣದ ಅಂತರವನ್ನು ವ್ಯಂಗ್ಯವಾಗಿ, ಮಾರ್ಮಿಕವಾಗಿ ಎತ್ತಿತೋರಿಸುವ ರಾಮಧಾನ್ಯಚರಿತ್ರೆಯು ವಿನೂತನವಾಗಿದ್ದು, ಕನ್ನಡ ಕಾವ್ಯಲೋಕದಲ್ಲಿ ಅನನ್ಯ ಕೃತಿಯೆನಿಸಿದೆ. ಕನಕದಾಸರು ತಮ್ಮ ಸ್ವೋಪಜ್ಞ ಸಾಧನೆ-ಸಿದ್ಧಿಗಳಿಂದ ದಾಸ ಪರಂಪರೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿದ್ದಾರೆ.

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ದಾಸಶ್ರೇಷ್ಠರಲ್ಲಿ ಒಬ್ಬರಾದ ಕನಕದಾಸರ ೫೦೦ನೆಯ ಜಯಂತ್ಯುತ್ಸವದ ಅಂಗವಾಗಿ ಡಾ. ದೇ. ಜವರೇಗೌಡ ಅವರ ಅಧ್ಯಕ್ಷತೆಯಲ್ಲಿ ಡಾ. ಹೆಚ್.ಜೆ. ಲಕ್ಕಪ್ಪಗೌಡ, ಡಾ. ಬರಗೂರು ರಾಮಚಂದ್ರಪ್ಪ ಮತ್ತು ಡಾ. ಸಾ.ಶಿ. ಮರುಳಯ್ಯನವರ ನ್ನೊಳಗೊಂಡ ಸಂಪಾದಕ ಮಂಡಳಿಯನ್ನು ರಚಿಸಿ, ಕನಕದಾಸರ ಸಮಗ್ರ ಸಾಹಿತ್ಯವನ್ನು ಕನಕಸಾಹಿತ್ಯ ದರ್ಶನ ಎಂಬ ಹೆಸರಿನಲ್ಲಿ ನಾಲ್ಕು ಸಂಪುಟಗಳಲ್ಲಿ ಹೊರತಂದಿತ್ತು.

ಕನಕ ಸಾಹಿತ್ಯ ದರ್ಶನದ ನಾಲ್ಕು ಸಂಪುಟಗಳು ಅಲಭ್ಯವಾಗಿದ್ದು, ಅದಕ್ಕೆ ಸಾರ್ವಜನಿಕರಿಂದ ಅಪಾರ ಬೇಡಿಕೆಯಿರುವುದರಿಂದ ಪ್ರಸಕ್ತ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಮೂರು ಸಂಪುಟಗಳ ಶೀರ್ಷಿಕೆಯಲ್ಲಿ ಅಲ್ಪ ಬದಲಾವಣೆಯೊಂದಿಗೆ ಮರುಮುದ್ರಣ ಮಾಡಲಾಗುತ್ತಿದೆ. ಮತ್ತು ಹೊಸದಾಗಿ ಪ್ರೊ॥ ಸುಧಾಕರ ಅವರು ಸಂಪಾದಿಸಿರುವ ಮೋಹನ ತರಂಗಿಣಿ ಕೃತಿಯನ್ನು ಗದ್ಯಾನುವಾದದೊಂದಿಗೆ ಪ್ರಕಟಿಸಲಾಗುತ್ತಿದೆ.

ಕನಕದಾಸರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಮರುಮುದ್ರಿಸಲು ಸಹಕರಿಸಿದ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರದವರಿಗೂ, ಈ ಸಂಪುಟದ ಸಂಪಾದಕರಾದ ಡಾ. ಸಾ.ಶಿ. ಮರುಳಯ್ಯ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಸದರಿ ಸಂಪುಟಗಳನ್ನು ಹೊರತರಲು ಒಪ್ಪಿಗೆ ನೀಡಿದ ಇಲಾಖೆಯ ಕಾರ್ಯದರ್ಶಿಗಳಾದ

ಶ್ರೀ ಬಸವರಾಜು ಅವರಿಗೂ, ಈ ಸಂಪುಟಗಳನ್ನು ಹೊರತರಲು ಸಹಕರಿಸಿದ ಶ್ರೀ ಕಾ.ತ. ಚಿಕ್ಕಣ್ಣ, ಜಂಟಿ ನಿರ್ದೇಶಕರು (ಆಡಳಿತ), ಶ್ರೀ ಬಲವಂತರಾವ್ ಪಾಟೀಲ್, ಜಂಟಿ ನಿರ್ದೇಶಕರು (ಸು.ಕ.), ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ, ಕಾರ್ಯಕ್ರಮ ಅಧಿಕಾರಿ ಮತ್ತು ಪ್ರಕಟಣಾ ಶಾಖೆಯ ಸಿಬ್ಬಂದಿಯವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಈ ಸಂಪುಟಗಳನ್ನು ಅಂದವಾಗಿ ಮುದ್ರಿಸಿಕೊಟ್ಟ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರು ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು.

ಕನ್ನಡ ಹರಿದಾಸ ಪರಂಪರೆಯಲ್ಲಿ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವವುಳ್ಳ ಕನಕದಾಸರ ಕೃತಿಗಳನ್ನು ಸುಲಭ ಬೆಲೆಯಲ್ಲಿ ಕನ್ನಡಿಗರಿಗೆ ಒದಗಿಸುವುದು ನಮ್ಮ ಆಶಯವಾಗಿದೆ. ಈ ಸಂಪುಟಗಳ ಪ್ರಯೋಜನವನ್ನು ಓದುಗರು ಪಡೆದುಕೊಂಡರೆ ನಮ್ಮ ಶ್ರಮ ಸಾರ್ಥಕ.

೧೮.೦೧.೨೦೧೨

(ಡಾ. ಮನು ಬಳಿಗಾರ್)
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

X

## ಮುನ್ನುಡಿ

ಪುರಂದರದಾಸರ ಪಂಚ ಶತಮಾನೋತ್ಸವ ಜರುಗಿದ ಐದಾರು ವರ್ಷಗಳ ಅಂತರದಲ್ಲಿಯೇ ಯುಗಪುರುಷ ಕನಕದಾಸರ ಐನೂರನೆಯ ವರ್ಷದ ಉತ್ಸವವನ್ನಾಚರಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡ ಸರ್ಕಾರದ ಧೋರಣೆ ಸ್ವಾಗತಾರ್ಹವಾದದ್ದು. ಕನಕದಾಸರನ್ನೂ, ಅವರ ಸಾಹಿತ್ಯವನ್ನೂ ಕುರಿತ ಪ್ರಶಸ್ತಿ ಗ್ರಂಥವನ್ನು ಪ್ರಕಟಿಸುವ ಯೋಜನೆ ಆ ಕಾರ್ಯಕ್ರಮದ ಒಂದು ಭಾಗವಾಗಿದೆ. ಮೂರುವರ್ಷಗಳ ಅವಧಿಯೊಳಗೆ ಸಾಹಿತ್ಯಕೃತಿಗಳನ್ನು ಹಾಗೂ ಪ್ರಶಸ್ತಿಗ್ರಂಥವನ್ನು ಸಂಪಾದಿಸಿ ಹೊರತರುವ ಹೊಣೆಯನ್ನು ಸರ್ಕಾರ ೨೮–೪–೧೯೮೯ನೆಯ ದಿನಾಂಕದ ತನ್ನ ನಿರೂಪದ ಮೂಲಕ ಕೆಳಗಿನ ಸಂಪಾದಕ ಮಂಡಲಿಗೆ ವಹಿಸಿತು.

೧. ಡಾ. ದೇ. ಜವರೇಗೌಡ, ಅಧ್ಯಕ್ಷರು
೨. ಡಾ. ಹೆಚ್. ಜೆ. ಲಕ್ಕಪ್ಪಗೌಡ, ಸದಸ್ಯರು
೩. ಶ್ರೀ ಬರಗೂರು ರಾಮಚಂದ್ರಪ್ಪ, ಸದಸ್ಯರು
೪. ಡಾ. ಸಾ. ಶಿ. ಮರುಳಯ್ಯ, ಸದಸ್ಯರು
೫. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಸದಸ್ಯ–ಕಾರ್ಯದರ್ಶಿ.

೬–೬–೧೯೮೯ರಂದು ಮಂಡಲಿಯ ಪ್ರಥಮ ಸಭೆಯು, ಸಂಪಾದನಾ ವಿಧಾನವನ್ನು ನಿರ್ಧರಿಸಿತು. ಆ ಪ್ರಕಾರ ನಿಶ್ಚಿತ ವೇಳೆಯೊಳಗೆ 'ಕನಕ ಸಾಹಿತ್ಯ ದರ್ಶನ' ಗ್ರಂಥ ಹೊರಬರುತ್ತಿರುವುದು ಸಂತೋಷದ ಸಂಗತಿ.

ಯಾರೇ ಸಂಪಾದಕರಿರಲಿ, ಅವನು ಎದುರಿಸಬೇಕಾದ ಕೆಲವು ಸಮಸ್ಯೆಗಳನ್ನು ಮುಂದಿನವರ ಅವಗಾಹನೆಗಾಗಿ ಇಲ್ಲಿ ನಿರೂಪಿಸಿದರೆ ಅಪ್ರಸ್ತುತವಾಗಲಾರದೆಂದು ಭಾವಿಸಿದ್ದೇನೆ. ವಿಷಯ ಹಾಗೂ ಲೇಖಕರ ಆಯ್ಕೆ ಮತ್ತು ಹೊಂದಾಣಿಕೆ ಮೊದಲ ಸಮಸ್ಯೆ. ಈ ಅಂಶದಲ್ಲಿ ಮಂಡಲಿಯ ಒಮ್ಮತ ಅಗತ್ಯವಾದ್ದರಿಂದ, ಪ್ರಸಕ್ತ ವಿಷಯದಲ್ಲಿ ಆಸಕ್ತಿ ಇಲ್ಲದ ಕೆಲವು ಹೆಸರುಗಳು ಪಟ್ಟಿಯಲ್ಲಿ ನುಸುಳಿಕೊಳ್ಳುವುದು ಸಹಜ. ಪ್ರತ್ಯುತ್ತರಕ್ಕೆಂದು ಸ್ಟಾಂಪು ಹಚ್ಚಿದ ಲಕೋಟೆ ಕಳಿಸಿದರೂ, ಅದರ ವಾಪಸಾತಿಗಾಗಿ ತಿಂಗಳುಗಟ್ಟಳೆ ಕಾಯಬೇಕಾಗುತ್ತದೆ ; ಕೆಲವರಂತು ಉತ್ತರಿಸುವುದೇ ಇಲ್ಲ. ಲೇಖನ ಬರೆಯಲೊಪ್ಪಿಕೊಂಡವರು 'ಅನಾನುಕೂಲ'ಗಳ ದೆಸೆಯಿಂದಾಗಿ ಹೆಚ್ಚು ಹೆಚ್ಚು ಸಮಯ ಕೇಳುತ್ತಾರೆ. ಮೂರ್ನಾಲ್ಕು ತಿಂಗಳಾದನಂತರ ತಮಗೆ ಪುರಸೊತ್ತಾಗಲಿಲ್ಲವೆಂದು ಕೆಲವರು ಬರೆದು ಕೈತೊಳೆದುಕೊಳ್ಳುತ್ತಾರೆ. ಅವರನ್ನು ಕೈಬಿಟ್ಟು, ಬೇರೆಯವರಿಗೆ ಪತ್ರ ಬರೆದಾಗಲೂ ಇದೇ ಕ್ರಮ ಪುನರಾವೃತ್ತವಾಗುತ್ತದೆ.

ಆ ಬೇರೆಯವರಲ್ಲಿ ಕೆಲವರು ಉತ್ತರಿಸುತ್ತಾರೆ, ಕೆಲವರು ಉತ್ತರಿಸುವುದಿಲ್ಲ. ಲೇಖನಕ್ಕೆ ಬೇಕಾದ ಮಾಹಿತಿಯನ್ನು ಸಂಗ್ರಹಿಸಿದ್ದಾಯಿತು. ಬರೆಯುವುದೊಂದೇ ಉಳಿದಿರುವ ಕೆಲಸವೆಂದು ಅಲ್ಪಮಂದಿ ಲೇಖಕರು ಬರೆದು ಮೂರುತಿಂಗಳಾದರೂ ಲೇಖನ ಹೊರಬರುವ ಸೂಚನೆ ಕಾಣುವುದಿಲ್ಲ. (ಪ್ರಾಯಶಃ ಕೆಲಸಕ್ಕಡ್ಡಿಯಾಗುವುದೇ ಆ ಹಿಡಿಮಂದಿಯ ಉದ್ದೇಶವಾಗಿರುವಂತೆ ತೋರುತ್ತದೆ.)

ಲೇಖನಗಳು ಕೈಸೇರಿದ ನಂತರ ಅವುಗಳನ್ನು ಸಂಪಾದಿಸುವ ಕಾರ್ಯ ಮತ್ತೂ ಜಟಿಲವಾದುದು. ಕೆಲವು ವಿಷಯಕ್ಕೆ ತಕ್ಕಂತೆ ಸಿದ್ಧಗೊಂಡ ಲೇಖನಗಳ ಜತೆಗೆ, ಅತಿವ್ಯಾಪ್ತಿ ಅಪೂರ್ಣತೆ ಅಸಮಗ್ರತೆಯಿಂದ ಕೂಡಿದ ಲೇಖನಗಳೂ ಸೇರಿಕೊಳ್ಳುತ್ತವೆ. ಎರಡನೆಯ ಗುಂಪಿಗೆ ಸೇರಿದ ಲೇಖನಗಳನ್ನು ಪುನರಾವರ್ತನೆಗಾಗಿ ಹಿಂದಿರುಗಿಸಿದರೆ, ಕೋಪಿಸಿಕೊಳ್ಳುವ ಮಿತ್ರರೂ ಉಂಟು. ಕೆಲವರು ಗೊಣಗಿಕೊಂಡು, ಕೆಲವರು ಹೃತ್ಪೂರ್ವಕವಾಗಿ ತಮ್ಮ ಲೇಖನಗಳನ್ನು ತಿದ್ದಿ, ತೀಡಿ ಹಿಂದಿರುಗಿಸುತ್ತಾರೆ; ಕೆಲವರು ಪುನರಾವರ್ತನೆ ಮಾಡದೆಯೇ ಹಳೆಯದನ್ನೆ ನಕಲುಮಾಡಿ ಕಳಿಸುತ್ತಾರೆ; ಪುನರಾವರ್ತನೆ ಸಾಧ್ಯವಿಲ್ಲ, ಅಗತ್ಯವೂ ಇಲ್ಲ, ತಾವು ಬರೆದದ್ದನ್ನೇ ಅಚ್ಚುಮಾಡಿಸಿರೆಂದು ಅಥವಾ ಹಿಂದಿರುಗಿಸಿರೆಂದು ಬರೆದವರೂ ಇದ್ದಾರೆ ; ಏನೂ ಬರೆಯದೆ, ಉತ್ತರವನ್ನು ಸಹ ಕೊಡದಿರುವವರೂ ಇದ್ದಾರೆ.

ಕೊನೆಗುಳಿಯುವುದು, ಕೆಲವು ಪ್ರಬಂಧಗಳಲ್ಲಿ ನಿರ್ಲಕ್ಷ್ಯದಿಂದಲೋ, ಅಜ್ಞಾನದಿಂದಲೋ ಉಳಿದಿರುವ ಕಾಗುಣಿತದ ತಪ್ಪುಗಳನ್ನು ತಿದ್ದುವ, ಅನಾವಶ್ಯಕವಾದ, ಪುನರಾವರ್ತನೆಯಾಗಬಹುದಾದ ಸಂಗತಿಗಳಿಗೆ ಕತ್ತರಿ ಪ್ರಯೋಗಮಾಡುವ ಕೆಲಸ. ಕತ್ತರಿ ಪ್ರಯೋಗ ಮಾಡಿದರೂ, ಪುನರಾವರ್ತನೆಗಳು ಇಂಥದೊಂದು ಸಂಕಲನ ಗ್ರಂಥದಲ್ಲಿ ಅನಿವಾರ್ಯವೆಂಬುದನ್ನು ವಿದ್ವಜ್ಜನರು ಬಲ್ಲರು. ಎಷ್ಟು ತಿಣುಕಿದರೂ ಕೈಬರಹದ ಮೋಡಿಯಿಂದಾಗಿ ಸಂಪಾದಕ ಗುರುತಿಸಲಾಗದ ಅಕ್ಷರಗಳು ಉಳಿದೇ ಉಳಿಯುತ್ತವೆ, ಗ್ರಂಥಗಳಿಂದ ಉದ್ಧೃತಗೊಳ್ಳುವ ಭಾಗಗಳಲ್ಲಿಯೂ ಅನೇಕ ತಪ್ಪುಗಳುಳಿಯುತ್ತವೆ. ಕ್ಷಿಪ್ರವಾಗಿ ಗ್ರಂಥ ಮುದ್ರಣ ಮಾಡಬೇಕಾದ ಸಂದರ್ಭದಲ್ಲಿ ಎಷ್ಟು ಎಚ್ಚರಿಕೆ ವಹಿಸಿದರು ಈ ಕೆಲವು ತಪ್ಪುಗಳು ನಿಂತು ಬಿಡುವ ಸಂಭವವುಂಟು. ತಪ್ಪುಗಳೇನಾದರೂ ನುಸುಳಿದ್ದರೆ ಲೇಖಕ, ಸಂಪಾದಕ, ಕರಡು ತಿದ್ದುಗಾರ ಮತ್ತು ಮುದ್ರಕರೆಲ್ಲರೂ ಹೊಣೆಗಾರರೆಂದು ಈ ಸಂದರ್ಭದಲ್ಲಿ ಹೇಳಬೇಕಾಗಿದೆ.

ಲೇಖನಗಳನ್ನು ಸಂಪಾದಿಸಿದ ಬಗ್ಗೆ ಒಂದೆರಡು ಮಾತು ಅತ್ಯವಶ್ಯ. ಸಮಿತಿಯ ಅಧ್ಯಕ್ಷರು ಲೇಖನಗಳನ್ನೊಮ್ಮೆ ಓದಿ, ತಮ್ಮ ಅಭಿಪ್ರಾಯದೊಡನೆ ಸಂಪಾದಕ ಮಂಡಲಿಯ ಮುಂದಿಡುತ್ತಾರೆ. ಅವರು ಅಧ್ಯಕ್ಷರಿಗೆ ಪೂರ್ಣ ಒಪ್ಪಿಗೆಯಾಗಿರುವ ಲೇಖನಗಳ ಮೇಲೆ ಕಣ್ಣಾಡಿಸಿ, ತಮ್ಮ ಸಮ್ಮತಿಯನ್ನು ಸೂಚಿಸುತ್ತಾರೆ. ಅಧ್ಯಕ್ಷರಿಗೆ ಪೂರ್ಣ ಒಪ್ಪಿಗೆಯಾಗದ ಪ್ರಬಂಧಗಳನ್ನು ಸದಸ್ಯರು ಮನೆಗೆ ಕೊಂಡೊಯ್ದು ಓದಿ, ಟಿಪ್ಪಣಿ ಮಾಡಿಕೊಂಡು ಬರುತ್ತಾರೆ. ಆ ಟಿಪ್ಪಣಿಗಳ ಹಿನ್ನೆಲೆಯಲ್ಲಿ ಅವುಗಳನ್ನು ಸಭೆಯಲ್ಲಿ ಪುನರ್ವಿಮರ್ಶಿಸಿ, ಅನಿವಾರ್ಯವೆಂದು ತೋರಿದಾಗ ಮಾತ್ರ,

ಪುನರಾವರ್ತನೆಗೆಂದು ಕೆಲವನ್ನು ಲೇಖಕರಿಗೆ ಹಿಂದಿರುಗಿಸಿರುವುದುಂಟು. ಹೀಗೆ ಹಿಂದಿರುಗಿಸುವಾಗ ಮಂಡಲಿಯ ಸದಸ್ಯರು ಬುದ್ಧಿವಂತರೆಂಬ ಭಾವನೆಯಾಗಲಿ, ಲೇಖಕರ ವಿದ್ವತ್ತಿನ ಬಗ್ಗೆ ಸಂಶಯವಾಗಲಿ ಇಲ್ಲ. ಮಂಡಲಿ ರೂಪಿಸಿಕೊಂಡ ಚೌಕಟ್ಟಿಗೆ ಹೊಂದಿಕೊಳ್ಳುವಂತೆ, ಒಟ್ಟು ಗ್ರಂಥದ ಹಿನ್ನೆಲೆಯಲ್ಲಿ ಸಾಧ್ಯವಾದಷ್ಟು ಸಮಗ್ರತೆಯನ್ನು ಸಾಧಿಸುವ ದೃಷ್ಟಿಯಿಂದ ಲೇಖನಗಳನ್ನು ಪುನರ್ವಿಮರ್ಶಿಸುವಂತೆ ಲೇಖಕರಿಗೆ ಕಳಿಸಿಕೊಡಲಾಗುತ್ತದೆ. ಹೀಗಿರುವಾಗ ಒಬ್ಬರು ಮಿತ್ರರು ಬರೆದರು : 'ನಾನು ಹಲವು ವರ್ಷಗಳಿಂದ ಅಧ್ಯಾಪನ ವೃತ್ತಿ ಕೈಗೊಂಡು. ಸಾಹಿತ್ಯಕ್ಷೇತ್ರದಲ್ಲಿ ಸಾಕಷ್ಟು ಕೃಷಿಮಾಡಿ, ವಿದ್ವಾಂಸರ ಮೆಚ್ಚುಗೆ ಪಡೆದಿದ್ದೇನೆ. ಪ್ರಸ್ತುತ ಲೇಖನವನ್ನು ವಿದ್ವಾಂಸರು ಪ್ರಶಂಸಿಸಿದ್ದಾರೆ. ನಾನು ತಿದ್ದುಪಡಿ ಮಾಡಬೇಕಾದದ್ದೇನೂ ಇಲ್ಲ' ಎಂದು. 'ಲೇಖನಗಳನ್ನು ಬಿಡಿಬಿಡಿಯಾಗಿ ನೋಡಿದಾಗ ಅವು ಸ್ವಯಂಪೂರ್ಣವಾಗಿ, ನ್ಯೂನತೆಗಳಿಂದ ಮುಕ್ತವಾಗಿ ತೋರುತ್ತವೆ ; ಆದರೆ ಇಡೀ ಗ್ರಂಥದ ಹಿನ್ನೆಲೆಯಲ್ಲಿ ನೋಡಿದಾಗ ಕೆಲವು ಅರೆಕೊರೆಗಳು ಕಾಣುತ್ತವೆ ; ದೋಷ ಶೋಧವಾಗಲಿ ಖಂಡನೆಯಾಗಲಿ ಸಮಿತಿಯ ಉದ್ದೇಶವಲ್ಲ. ಲೇಖಕರ ವಿದ್ವತ್ತನ್ನು ಅಭಿರುಚಿಯನ್ನು ಅನುಭವವನ್ನು ಗಮನದಲ್ಲಿರಿಸಿಕೊಂಡೇ ಸಮಿತಿ ಅವರನ್ನು ಆಯ್ಕೆ ಮಾಡಿದೆ. ಬಿಟ್ಟು ಹೋಗಿರುವ ಅಂಶಗಳನ್ನು ಸೇರಿಸಬೇಕೆಂಬುದು ಸಮಿತಿಯ ಅಭಿಪ್ರಾಯ. ವಿಷಯ ಪ್ರತಿಪಾದನೆಯ ಬಗ್ಗೆ. ವಾಕ್ಯರಚನೆಯ ಬಗ್ಗೆ, ಅಭಿಪ್ರಾಯ ಸಮರ್ಥನೆಯ ಬಗ್ಗೆ ಸಮಿತಿ ತಲೆಹಾಕುವುದಿಲ್ಲ, ನಿಮ್ಮ ವಿದ್ವತ್ತು ಸರಿಯಾಗಿ ಪ್ರಕಾಶಕ್ಕೆ ಬರಲೆಂದೇ ಈ ಕ್ರಮಕೈಗೊಂಡಿದೆ ಎಂದವರಿಗೆ ಸಮಿತಿಯ ಅಧ್ಯಕ್ಷರು ಪತ್ರ ಬರೆದಾಗ, ಕೆಲವರಿಗೆ ಸಮಾಧಾನವಾಗಿದೆಯೆಂದು ಅವರು ಬರೆದ ಉತ್ತರಗಳಿಂದ ಸ್ಪಷ್ಟವಾಗಿದೆ. ಅವರಿಗೆ ತೊಂದರೆಯಾದದ್ದಕ್ಕಾಗಿ ನಾನು ನನ್ನ ಮತ್ತು ಮಂಡಲಿಯ ಪರವಾಗಿ ಕ್ಷಮೆಯಾಚಿಸುತ್ತೇನೆ.

ಸಮಿತಿ ಯಾವೊಂದು ಲೇಖನವನ್ನು ತಿರಸ್ಕರಿಸಿಲ್ಲ. ಲೇಖಕರು ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಅವರೇ ಜವಾಬ್ದಾರರು. ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡಿದರೂ, ಹಸ್ತಪ್ರತಿಗಳಲ್ಲಿರುವ ದೋಷಗಳು ಅಚ್ಚಿನಲ್ಲಿಯೂ ಪುನರಾವರ್ತನೆಯಾಗಿವೆ. ಶ್ರೀ ಶಾರದಾಪ್ರಸಾದರು ಕರಡು ತಿದ್ದುವುದರಲ್ಲಿ ಜಾಣರು; ಕರಡಿನ ಬಹುಭಾಗದ ಮೇಲೆ ನಾನೂ ಕಣ್ಣಾಡಿಸಿದ್ದೇನೆ ; ಹ. ಕ. ರಾಜೇಗೌಡರು ಸಂತೋಷದಿಂದ ಕರಡು ತಿದ್ದಿದ್ದಾರೆ. ಆದರೂ ಕೆಲವು ದೋಷಗಳು ಉಳಿದಿರಲಾಗಿ ವಾಚಕರು ಕ್ಷಮಿಸುವರೆಂದು ನಂಬಿದ್ದೇನೆ.

ಸದ್ಯಕ್ಕೆ ಈ ಪ್ರಶಸ್ತಿ ಗ್ರಂಥ ಹೊರಬಂದಿದೆ. ಕನಕ ಸಾಹಿತ್ಯವನ್ನೊಳಗೊಂಡ ಎರಡು ಸಂಪುಟಗಳು ಈ ವರ್ಷ ತುಂಬುವುದರೊಳಗಾಗಿ ಮುದ್ರಣಗೊಂಡು ಹೊರ ಬರಲಿವೆಯೆಂದು ಮಂಡಲಿಯ ಪರವಾಗಿ ಆಶ್ವಾಸನೆ ನೀಡಬಯಸುತ್ತೇನೆ. ಈ ಪವಿತ್ರ ಕಾರ್ಯದಲ್ಲಿ ಸಹಾಯ ಹಸ್ತನೀಡಿ, ಸಂತೋಷದಿಂದ ಸಹಕರಿಸಿದ, ಕನ್ನಡನಾಡಿನ ಸಂಪತ್ತೆನ್ನಬಹುದಾದ ವಿದ್ವಜ್ಜನರು ಮನಸ್ಸು ಮಾಡದಿದ್ದರೆ

ಈ ಕೃತಿ ಇಷ್ಟು ಬೇಗ ಖಂಡಿತವಾಗಿಯೂ ಹೊರಗೆ ಬರುತ್ತಿರಲಿಲ್ಲವೆಂದು ವಿನಯಪೂರ್ವಕವಾಗಿ ಒಪ್ಪಿಕೊಳ್ಳುತ್ತೇನೆ.

ಕನಕದಾಸರು ನನ್ನ ಮೆಚ್ಚುಗೆಯ ಸಂತ ಕವಿಗಳಲ್ಲೊಬ್ಬರು. ಅವರಿಗೆ ಕೈಂಕರ್ಯ ಸಲ್ಲಿಸುವ ಅವಕಾಶವನ್ನು ಕಲ್ಪಿಸಿಕೊಟ್ಟದ್ದಕ್ಕಾಗಿ ಕರ್ನಾಟಕ ಸರ್ಕಾರದ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಸಂಪಾದಕಮಂಡಲಿಯ ಸದಸ್ಯ ಮಿತ್ರರು ತುಂಬ ಪ್ರೀತಿಯಿಂದ ಸೌಜನ್ಯದಿಂದ ನನ್ನೊಡನೆ ಸಹಕರಿಸಿದ್ದಾರೆ. ಅವರೆಲ್ಲರೂ ಕನ್ನಡನಾಡಿನ ಖ್ಯಾತ ವಿದ್ವಾಂಸರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಾದ ಶ್ರೀ ಐ. ಎಂ. ವಿಠಲಮೂರ್ತಿಯವರು ತರುಣರು, ಉತ್ಸಾಹಶೀಲರು, ದಕ್ಷರು, ಸುಸಂಸ್ಕೃತರು ; ಈ ಇಲಾಖೆಗೆ ಹೇಳಿ ಮಾಡಿಸಿದಂಥವರು. ಈ ಗ್ರಂಥ ಆದಷ್ಟು ಬೇಗ ಬರಬೇಕೆನ್ನುವ ದೃಷ್ಟಿಯಿಂದ ಮಂಡಲಿಗೆ ಎಲ್ಲ ಸಹಕಾರ ನೀಡಿದರು. ಸಹಾಯಕ ನಿರ್ದೇಶಕರೂ ಸ್ವಯಂ ಸಾಹಿತಿಗಳೂ ವಿವೇಕಿಗಳೂ ಆದ ಶ್ರೀ ಕಾ. ತ. ಚಿಕ್ಕಣ್ಣನವರ ಸಹಾಯ ಸಹಕಾರಗಳಿಂದ ಮಂಡಲಿಯ ಕೆಲಸ ಸುಸೂತ್ರವಾಗಿ ನಡೆಯಿತು. ಜಂಟಿ ನಿರ್ದೇಶಕರಾದ ಶ್ರೀ ದೇವರಸಯ್ಯನವರ, ಉಪನಿರ್ದೇಶಕರಾದ ಶ್ರೀ ಎಸ್. ವಿಶ್ವನಾಥ್ ಅವರ ಸೌಜನ್ಯ ಕಾರ್ಯೋತ್ಸಾಹ ಯಾವಾಗಲೂ ನೆನಪಿನಲ್ಲುಳಿಯು ವಂಥವು, ನಿರ್ದೇಶಕರ ಆಪ್ತ ಸಹಾಯಕಿ ಮೊದಲುಗೊಂಡು, ನಿರ್ದೇಶನಾಲಯದ ಸಿಬ್ಬಂದಿವರ್ಗದ ಜನರ ಮನಃಪೂರ್ವಕವಾದ ಸಹಾಯವನ್ನು ನಾನೆಂದೂ ಮರೆಯಲಾರೆ.

ಇಂಥ ಬೃಹದ್ಗ್ರಂಥವನ್ನು ಒಂದು ತಿಂಗಳಲ್ಲಿ ಅಚ್ಚುಕಟ್ಟಾಗಿ ಮುದ್ರಿಸುವುದೊಂದು ಸಾಹಸವೇ ಸರಿ. ಶ್ರೀ ಮೀರಾ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಕೆ.ಪಿ. ಪುಟ್ಟಸ್ವಾಮಿಯವರು ಹಗಲಿರುಳು ದುಡಿದು ಈ ಅದ್ಭುತವನ್ನು ಸಾಧಿಸಿದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಯ ಶ್ರೀ ಶಾರದಾಪ್ರಸಾದರು ಕರಡು ತಿದ್ದುವಲ್ಲಿ ತುಂಬ ಶ್ರಮ ವಹಿಸಿದ್ದಾರೆ. ಮಂಡಲಿಯ ಸದಸ್ಯರಲ್ಲದಿದ್ದರೂ, ನನ್ನ ಮೇಲಣ ಪ್ರೀತಿಯಿಂದ ಪ್ರಸಿದ್ಧ ಸಂಶೋಧಕರಾದ ಶ್ರೀ ಹ. ಕ. ರಾಜೇಗೌಡರು ನಾನಾ ರೀತಿಯಲ್ಲಿ ನನಗೆ ಸಹಾಯ ಮಾಡಿದ್ದಾರೆ. ಶ್ರೀ ಮೈ.ನಾ. ಶರ್ಮಾ ಅವರು ಸುಂದರವಾದ ಮುಖಪುಟವನ್ನು ರಚಿಸಿಕೊಟ್ಟಿದ್ದಾರೆ. ಈ ಎಲ್ಲ ಮಹನೀಯರಿಗೂ, ನಾನು ಹೃತ್ಪೂರ್ವಕ ಧನ್ಯವಾದಗಳನ್ನರ್ಪಿಸುತ್ತೇನೆ.

೨-೨-೧೯೮೦
ಮೈಸೂರು

ದೇ. ಜವರೇಗೌಡ

# ಅರಿಕೆ

ಕನಕದಾಸರು ಕನ್ನಡ ನಾಡು ನುಡಿ ಸಂಸ್ಕೃತಿಯಲ್ಲಿ ಬೆರೆತುಹೋಗಿರುವ ಒಬ್ಬ ಧೀಮಂತ ವ್ಯಕ್ತಿ. ದಾಸ ಸಾಹಿತ್ಯದಲ್ಲಿ ಅವರದು ವೈಶಿಷ್ಟ್ಯಪೂರ್ಣವಾದ ವರ್ಚಸ್ಸು. ಸಾಮಾನ್ಯ ಬದುಕಿನಿಂದ ಒಡಮೂಡಿ, ಕೀರ್ತನಕಾರರಾಗಿ, ಸಂತರಾಗಿ, ಸಮಾಜ ಸುಧಾರಕರಾಗಿ ಅವರು ಕನ್ನಡ ಸಾಂಸ್ಕೃತಿಕ ಜಗತ್ತಿಗೆ ನೀಡಿರುವ ಕೊಡುಗೆ ಅನನ್ಯವಾದದ್ದು. ಅವರು ಸಮಾಜದ ಅಂಕುಡೊಂಕುಗಳನ್ನು ತಿದ್ದಿ, ಮಾನವತೆಯನ್ನು ಮೆರೆದ ಕ್ರಾಂತಿಕಾರಿ ಕವಿ. ಅವರು ತಮ್ಮ ಬದುಕು ಮತ್ತು ಕೃತಿಗಳ ಮೂಲಕ ಪ್ರತಿಪಾದಿಸಿರುವ ಜೀವನದರ್ಶನ ಸಾರ್ವಕಾಲಿಕ ; ವಿಚಾರಪೂರ್ಣ. ತಮ್ಮ ಕೀರ್ತನೆ ಹಾಗೂ ಕಾವ್ಯಗಳಲ್ಲಿ ಕಾವ್ಯಗುಣದ ಜೊತೆಗೆ ಸಾಮಾಜಿಕ ಕಳಕಳಿಯನ್ನು, ದೇಸೀ ಸತ್ತ್ವವನ್ನು ಮೆರೆದಿದ್ದಾರೆ.

ಈ ಸಂತ ಶ್ರೇಷ್ಠ ಕವಿಯ ೫೦೦ನೆಯ ಜಯಂತ್ಯುತ್ಸವವನ್ನು ರಚನಾತ್ಮಕವಾಗಿ ಹಾಗೂ ಅರ್ಥವತ್ತಾಗಿ ಆಚರಿಸಲು ಸರ್ಕಾರವು ತೀರ್ಮಾನಿಸಿತು. ೧೯೮೮ರಲ್ಲಿ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಸಲಹಾ ಸಮಿತಿಯನ್ನು ರಚಿಸಲಾಯಿತು. ವರ್ಷಾದ್ಯಂತ ನಾಡಿನ ಎಲ್ಲೆಡೆ ಕನಕದಾಸರ ಜಯಂತ್ಯುತ್ಸವವನ್ನು ಆಚರಿಸುವುದರ ಜೊತೆಗೆ ಕನಕದಾಸರ ಸಮಗ್ರ ಕೃತಿಗಳು ಕನ್ನಡಿಗರಿಗೆ ಲಭ್ಯವಾಗುವಂತೆ ಮಾಡುವ ದಿಸೆಯಲ್ಲಿ ಪ್ರಕಟನಾ ಯೋಜನೆಯೊಂದನ್ನು ಕೈಗೊಳ್ಳಲಾಯಿತು, ಸರ್ಕಾರವು ಡಾ. ದೇ. ಜವರೇಗೌಡ, ಪ್ರೊ. ಎಲ್.ಎಸ್. ಶೇಷಗಿರಿರಾವ್. ಪ್ರೊ. ಹೆಚ್.ಜೆ. ಲಕ್ಕಪ್ಪಗೌಡ ಹಾಗೂ ಡಾ. ದೇವೇಂದ್ರ ಕುಮಾರ್ ಹಕಾರಿ ಇವರನ್ನೊಳಗೊಂಡಂತೆ ಒಂದು ಸಂಪಾದಕ ಮಂಡಳಿಯನ್ನು ರಚಿಸಿತು. ಇವರು ಮೊದಲಿಗೆ ಸಂಪಾದಿಸಿಕೊಟ್ಟ "ಜನಪ್ರಿಯ ಕನಕ ಸಂಪುಟ'ವನ್ನು ಸುಲಭ ಬೆಲೆಯಲ್ಲಿ ಪ್ರಕಟಿಸಲಾಯಿತು, ಅದಕ್ಕೆ ದೊರೆತ ಅಪಾರ ಜನಪ್ರಿಯತೆಯನ್ನು ಪರಿಗಣಿಸಿ, ಅದರ ಎರಡನೆಯ ಮುದ್ರಣವನ್ನು ಹೊರತರಲಾಯಿತು.

ಪ್ರಸಕ್ತ, ಸಂಪಾದಕ ಮಂಡಳಿಯು ಸಂಪಾದಿಸಿ ಕೊಟ್ಟಿರುವ "ಕನಕ ಸಾಹಿತ್ಯ ದರ್ಶನ–ಸಂಪುಟ–೧" ಗ್ರಂಥ ಪ್ರಕಟವಾಗುತ್ತಿದೆ. ಇದು ಕನಕದಾಸರ ಸಮಗ್ರ ಸಾಹಿತ್ಯವನ್ನು ಕುರಿತು ಎಲ್ಲ ನಿಟ್ಟಿನಿಂದ ವಿವೇಚಿಸಿ, ಮೌಲ್ಯಮಾಪನ ಮಾಡಿರುವ ಲೇಖನಗಳ ಸಂಕಲನ. ನಾಡಿನ ಪ್ರತಿಭಾನ್ವಿತ ವಿದ್ವಾಂಸರು ತಮ್ಮ ಅಮೂಲ್ಯ ಲೇಖನಗಳಿಂದ ಈ ಗ್ರಂಥದ ಗೌರವವನ್ನು ಹೆಚ್ಚಿಸಿದ್ದಾರೆ. ಈ ಬೃಹತ್ ಕೃತಿ ಕನ್ನಡಿಗರಿಗೆ ಕನಕದಾಸರ ಜೀವನ ದರ್ಶನ ಹಾಗೂ ಸಾಹಿತ್ಯಿಕ ಕೊಡುಗೆಗಳ ಸಮಗ್ರ ಪರಿಚಯವನ್ನು ಮಾಡಿಕೊಡುತ್ತದೆಂಬುದರಲ್ಲಿ ಸಂಶಯವಿಲ್ಲ.

ಈ ಗ್ರಂಥವನ್ನು ಜಯಂತ್ಯುತ್ಸವದ ಮುಕ್ತಾಯ ಸಮಾರಂಭದಲ್ಲಿ ಬಿಡುಗಡೆ ಮಾಡಲು ನಿರ್ಧರಿಸಿ, ತ್ವರಿತವಾಗಿ ಮುದ್ರಣ ಕಾರ್ಯವನ್ನು ಕೈಗೊಳ್ಳಲಾಗಿದೆ, ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಲೇಖಕರಿಗೆ ನನ್ನ ಕೃತಜ್ಞತೆಗಳು. ಅತ್ಯಂತ ಶೀಘ್ರವಾಗಿ ಹಾಗೂ ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟಿರುವ ಶ್ರೀ ಮೀರಾ ಪ್ರಿಂಟರ್ಸ್‌ನ ಶ್ರೀ ಕೆ. ಪಿ. ಪುಟ್ಟಸ್ವಾಮಿ ಅವರಿಗೆ ನನ್ನ ಕೃತಜ್ಞತೆಗಳು.

ಸದ್ಯದಲ್ಲಿಯೇ ಕನಕದಾಸರ ಸಮಗ್ರ ಕೃತಿಗಳ ಸಂಕಲನವನ್ನು ಪ್ರಕಟಿಸಲು ಕ್ರಮಕೈಗೊಳ್ಳುತ್ತಿದೆ. ಈ ಗ್ರಂಥ ಕನಕದಾಸರ ಸಾಹಿತ್ಯ–ಜೀವನ ಸಂದೇಶವನ್ನು ಸಹೃದಯವಾಚಕರಿಗೆ ತಲುಪಿಸಿದರೆ ನಮ್ಮ ಶ್ರಮ ಸಾರ್ಥಕ.

೭.೩.೧೯೯೦ — **ಐ.ಎಂ. ವಿಠಲಮೂರ್ತಿ**
ಬೆಂಗಳೂರು — ನಿರ್ದೇಶಕರು

# ದರ್ಶನ ಸೂಚಿ

# ಮೋಹನ ತರಂಗಿಣಿ

## ೧ ಪೀಠಿಕೆ

ಶ್ರೀ ಗಿರಿಜೇಶ್ವರನಾತ್ಮಾಭಿರಾಮ ಸ
ದ್ವಾಗೀಶ ಪಿತ ಪರಂಧಾಮ
ಕಾಗಿನೆಲೆಯ ರಂಗ ಸುರಸಾರ್ವಭೌಮ ಸು
ತ್ಯಾಗಿ ಪಾಲಿಸು ಪೂರ್ಣಕಾಮ ೧

ಪಾರ್ವತಿ ಪತಿಯಾದ ಈಶ್ವರನ ಸುಂದರಾತ್ಮ ಸದೃಶನೂ, ಬ್ರಹ್ಮನ ತಂದೆಯೂ, ಉನ್ನತ ಸ್ವರ್ಗವಾಸಿಯೂ, ದೇವಾನುದೇವತೆಗಳ ಚಕ್ರವರ್ತಿಯೂ, ಬಯಕೆಗಳನ್ನು ಈಡೇರಿಸುವ ಕಾಮಧೇನು ಕಲ್ಪವೃಕ್ಷ ಸದೃಶನೂ ಆದ ಕಾಗಿನೆಲೆಯ ರಂಗ ನಮ್ಮನ್ನು ಕಾಪಾಡು

ಶ್ರೀ ಮದ್ಗುರು ರಾಯ ದುರಿತವಿಜೇಯ ದು
ಷ್ಕಾಮ ವಿಚ್ಛೇದನಾಹ್ಲಾದ
ತಾಮಸುಗುಣ ನಾಶ ಸಾತ್ವಿಕೋಲ್ಲಾಸ ಶ್ರೀ
ರಾಮನುಜ ಮುನಿ ಶರಣು ೨

ಪಾಪವಿಜೇತನೂ ಕೆಟ್ಟ ಕಾಮನೆಗಳನ್ನು ಬಿಟ್ಟ ಆಹ್ಲಾದರೂಪಿಯೂ ತಾಮಸಗುಣ ವರ್ಜಿತನೂ ಸಾತ್ವಿಕ ಗುಣ ವಿಲಸಿತನೂ ಆದ ಗುರುಮಹಾರಾಜ ರಾಮಾನುಜಮುನಿಗೆ ಶರಣು

ಅರ್ಕನೊಳಾಟವೆ ತಮಕೆ ಗರುಡನ ಕೂಡೆ
ಕಾರ್ಕೋಟಕ ಮೇಳವಿಪುದೆ
ತರ್ಕಕೆ ರಾಮಾನುಜರೊಳು ವಾದಿ ಸಂ
ಪರ್ಕ ನಿಲ್ವುದೆ ನಿಲ್ಲಲರಿದು ೩

ಕತ್ತಲೆಗೆ ಸೂರ್ಯನೊಡನೆ ಮೇಲಾಟ ಸಾಧ್ಯವೆ? ಗರುಡನ ವಿರುದ್ಧ

ಸರ್ಪ ಸೆಣಸಿ ಗೆಲ್ಲಲು ಸಾಧ್ಯವೆ? ಹಾಗೆಯೇ ರಾಮಾನುಜರೊಡನೆ ವಾದಕ್ಕಿಳಿಯುವವರ ಗತಿಯು ಸಹ ಅಂದರೆ ಸೋಲೇ ಹೊರತು ಗೆಲುವಲ್ಲ

ಈ ರೀತಿಯ ಪೆಂಪುವಡೆದ ಸದ್ಗುರು ಕರ
ವಾರಿಜೋದ್ಭವ ಶಿಷ್ಯ ಜನರ
ಪ್ರೇರಿಸಿ ಚತುರ್ವಿಧ ಫಲವೀವ ತಾತಾ
ಚಾರಿಯರಡಿಗೆ ಎರಗುವೆನು ೪

ಈ ರೀತಿಯ ಹಿರಿಮೆ ಗರಿಮೆಯುಳ್ಳ ಸದ್ಗುರು ರಾಮಾನುಜರ ಕೈ ಕಮಲದಿಂದ ಉದ್ಭವಿಸಿದ ಶಿಷ್ಯರನ್ನು ಪ್ರೇರಿಸಿ, ಪ್ರಚೋದಿಸಿ ನಾಲ್ಕು ಬಗೆಯ ಫಲಗಳನ್ನು (ಧರ್ಮ, ಅರ್ಥ, ಕಾಮ, ಮೋಕ್ಷ) ನೀಡುವ ತಾತಾಚಾರ್ಯರ ಅಡಿಗಳಿಗೆ ನಮಿಸುವೆನು

ಅಡಿವಿಡಿದಬುಜಸಂಭವ ಪೂಜೆಗೆಯ್ಯೆ ನಿ
ಮ್ಮಡಿ ಗಗನಾಗ್ರದಿ ಮೆರೆಯಲು
ಅಡಿಯಲಿರ್ದಖಿಳ ದೇವತೆಗಳೆಲ್ಲ ಬೇಡಿ
ಯಡಿಯನೆಂಬರು ಕೃಷ್ಣ ನಿಮಗೆ ೫

ಕಮಲ ಸಂಭವನಾದ ಬ್ರಹ್ಮ ನಿಮ್ಮನ್ನು ಪೂಜಿಸುವಾಗ, ನಿಮ್ಮ ಪಾದ ಆಕಾಶದ ತುದಿಯಲ್ಲಿ ಮೆರೆಯುವಾಗ, ಅಡಿಯಲ್ಲಿದ್ದ (ಕೆಳಗಿದ್ದ) ಅಖಿಲ ದೇವತೆಗಳೆಲ್ಲ 'ಅಡಿಯನ್' (ನಿಮ್ಮ ಸೇವಕ)ಎನ್ನುವರು, ಓ ಕೃಷ್ಣ

ಅರುಣಾಬ್ಜನಿಳಯ ಕವಾಟ ಕೌಸ್ತುಭ ಮಣಿ
ಕಿರಣದಿಂ ತೆಗೆದೊಳಪೊಕ್ಕು
ತರುಣಿ ಲಕ್ಷ್ಮಿಯ ಕುಚವಿಡಿದ ಕೈಯಿಂದ ಸ
ತ್ಕರುಣವೀವುದು ಕೃಷ್ಣ ನಮಗೆ ೬

ಕೆಂದಾವರೆ ಮನೆಯ ಬಾಗಿಲ ಕದವನ್ನು, ತನ್ನೆದೆಯ ಮೇಲಿರುವ ಕೌಸ್ತುಭರತ್ನ ಕಿರಣದ ಕೀಲಿ ಕೈಯಿಂದ ತೆಗೆದು ಒಳಹೊಕ್ಕು, ತರುಣಿ ಲಕ್ಷ್ಮಿಯ ಬುಗುರಿ ಮೊಲೆಯನ್ನು ಹಿಡಿದ ಕೈಯಿಂದ ಕೃಷ್ಣ ನಮಗೆ ಕರುಣೆ ನೀಡು

ಕ್ಷೀರಾರ್ಣವ ಕನ್ಯೆ ಕಮನೀಯ ಮೂರ್ತಿಯೆ
ನಾರಾಯಣನುರಶ್ಚಿಹ್ನೆ
ಓರಂತೆ ಸಕಲೈಶ್ವರ್ಯ ಸಂಪನ್ನೆ ಮ
ದ್ಭಾರ ನಿನ್ನದು ಸುಪ್ರಸನ್ನೆ ೭

ಹಾಲು ಸಮುದ್ರದಲ್ಲಿ ಹುಟ್ಟಿದ ಸೌಂದರ್ಯ ಸಾಮ್ರಾಜ್ಞಿಯೂ, ನಾರಾಯಣನ ಎದೆಯ ಮೇಲಿನ ಚಿಹ್ನೆಯೂ, ಸತತವಾಗಿ ಸಕಲೈಶ್ವರ್ಯ ಸಂಪನ್ನೆಯೂ, ಸುಪ್ರಸನ್ನೆಯೂ ಆದ, ಓ ಲಕ್ಷ್ಮೀ ನಮ್ಮ ಭಾರವೆಲ್ಲ ನಿನ್ನದು.

ಭೂತಲದೊಳು ರಾಮನಾಮವ ಸುಜನ
ವ್ರಾತಕ್ಕೆ ವಾರಣಾಸಿಯಲಿ
ನೀ ತಪ್ಪದುಸುರುವ ಗುರು ಕಾಶಿಯ ವಿಶ್ವ
ನಾಥ ಕುಡೆನಗೆ ಸನ್ಮತಿಯ ೮

ವಾರಣಾಸಿಯುಲ್ಲಿ(ಕಾಶಿಯುಲ್ಲಿ) ಸಜ್ಜನ ಸಮೂಹಕ್ಕೆ ತಪ್ಪದೆ ರಾಮನಾಮವನ್ನು ಪ್ರವಚಿಸುವ ಗುರು ಕಾಶಿ ವಿಶ್ವನಾಥ, ನಮಗೆ ಸನ್ಮತಿಯನ್ನು ಕೊಡು.

ನಿಮ್ಮಯ ಪಿತ ಕೃಷ್ಣರಾಯನ ಮಹಿಮೆಯನು
ಹಮ್ಮನರಿದು ಕೀರ್ತಿಪೊಡೆ
ನಮ್ಮಳವಲ್ಲ ಶಾರದೆಗೂಡಿ ಚತುರಾಸ್ಯ
ಬೊಮ್ಮ ಬಾಯೆನ್ನೆದೆವನೆಗೆ ೯

ಚತುರ್ಮುಖ ಬ್ರಹ್ಮನೇ, ನಿಮ್ಮ ತಂದೆಯಾದ ಕೃಷ್ಣನ ಮಹಿಮೆಯ ಬಾಹುಳ್ಯವನ್ನು ಅರಿತು ಕೀರ್ತಿಸಲು ನಮಗೆ ಶಕ್ತಿ ಸಾಲದು. ಆದ್ದರಿಂದ ಶಾರದೆಯೊಡಗೂಡಿ ನನ್ನ ಎದೆ ಮನೆಗೆ ಬಂದು ನೆಲೆಗೊಳ್ಳು

ಖ್ಯಾತೆ ವೇದಾಗಮಾತೀತೆ ಶರ್ವನ ಮನಃ
ಪ್ರೀತೆ ಷಣ್ಮುಖ ವಿನಾಯಕರ
ಮಾತೆ ದನುಜಕುಲಭೀತೆ ತುಹಿನಗಿರಿ
ಜಾತೆ ಕೊಡೆನಗೆ ಸನ್ಮತಿಯ ೧೦

ಸುವಿಖ್ಯಾತೆಯೂ, ವೇದ ಶಾಸ್ತ್ರಗಳ ಅತೀತೆಯೂ, ಶಿವನ ಮನಃಪ್ರೀತೆಯೂ

ಷಣ್ಮುಖ ವಿನಾಯಕರ ಮಾತೆಯೂ, ರಾಕ್ಷಸಕುಲ ಭೀತೆಯೂ, ಹಿಮವತ್ ಪರ್ವತ ಜಾತೆಯೂ ಆದ ಓ ಪಾರ್ವತಿ, ನನಗೆ ಸನ್ಮತಿ ಕೊಡು

ಸಾವಿರ ಸಂತಾನವಡೆದಳ್ಗೆ ಮಮಕಾರ
ತೀವಿಹುದು ಬಾಲನ ಮೇಲೆ
ಕೋವಿದೆ ಪೆರ್ಮಕ್ಕಳ ಬಿಟ್ಟು ಸಲೆ ವಾ
ಗ್ದೇವಿಯೆನ್ನೊಳಗಿರು ತಾಯೆ ೧೧

ಸಾವಿರ ಸಂತಾನ ಹಡೆದ ತಾಯಿಗೆ ಬಾಲಕನ ಮೇಲೆ ಮಮಕಾರ ತುಂಬಿರುತ್ತದೆ. ವಿದ್ವತ್ತಿನ ಗಣಿಯಾದ ವಾಗ್ದೇವಿಯೆ, ನಿನ್ನ ಹಿರಿಮಕ್ಕಳ ಬಿಟ್ಟು ನನ್ನೊಳಗಿರು ತಾಯೆ.

ಕಾಯಕವಿದು ನಿನ್ನದು ಕೇಳು ನಿರ್ವಿಘ್ನ
ದಾಯಕ ಎನಗೆ ಸನ್ಮತಿಯ
ಜೀಯ ಕಾರುಣ್ಯದಿ ಕೊಡು ಪೊಂಬೊಳಲ ವಿ
ನಾಯಕ ವಿಶ್ವವಲ್ಲಭನೆ ೧೨

ಓ ಹೊಂಬೊಳಲ ವಿನಾಯಕ, ಸದಾ ನಿನ್ನ ಕಾಯಕ ನಿರ್ವಿಘ್ನ ದಾಯಕ, ವಿಶ್ವವಲ್ಲಭನಾದ ನೀನು ಕರುಣೆಯಿಂದ ನನಗೆ ಸನ್ಮತಿ ನೀಡು.

ಅಗಣಿತ ಲೋಕಾದಿಲೋಕಂಗಳುದರದಿ
ಸೊಗಯಿಪ ನಾರಾಯಣನ
ಹೆಗಲೊಳು ಹೊತ್ತು ಖೇಚರದಿ ಸಂಚರಿಸುವ
ಖಗರಾಜ ಕರುಣಿಪುದೆಮಗೆ ೧೩

ಅಸಂಖ್ಯಾತ ಲೋಕಾದಿಲೋಕಗಳಲ್ಲಿ ಸೊಗಯಿಸುವ ನಾರಾಯಣನ ಹೆಗಲಲ್ಲಿ ಹೊತ್ತು ಆಕಾಶದಲ್ಲಿ ಸಂಚರಿಸುವ ಪಕ್ಷಿರಾಜನಾದ ಗರುಡನೆ ನಮ್ಮನ್ನು ಕರುಣಿಸು.

ವರ ದುಗ್ಧಾಬ್ಧಿಯ ಮಥನದಿಂ ತುಸುಮಾತ್ರ
ಗರಳವ ಕರೆದಾಕ್ಷಣದಿ

ಸುರಮುಖ್ಯರ ಭೀತಿವಡೆಸಿದ ಧರಣೀ
ಧರ ಫಣಿರಾಜ ರಕ್ಷಿಪುದು ೧೪

ಹಾಲಸಮುದ್ರದ ಕಡೆತದಿಂದ ತುಸು ವಿಷವನ್ನು ಕರೆದು ಕ್ಷಣಾರ್ಧದಲ್ಲಿ ದೇವಾನುದೇವತೆಗಳನ್ನು ಭಯಗ್ರಸ್ತರನ್ನಾಗಿ ಮಾಡಿದ ಭೂಧರ ಆದಿಶೇಷನೇ ರಕ್ಷಿಸುವುದು.

ಸುರಪತಿ ಶಿಖಿ ಕಾಲ ನಿರುತಿ ವರುಣ ವಾಯು
ಹರಸಖನೀಶಾನ ಮುಖ್ಯ
ವರ ಮನು ಮುನಿಜನರುಗಳೆನ್ನ ಚಿತ್ತಕೆ
ಪರಮ ಸಂತಸವ ಪಾಲಿಪುದು ೧೫

ಇಂದ್ರ(ಮೂಡಣ ದಿಕ್ಕು) ಶಿಖಿ(ಅಗ್ನಿ) ಕಾಲ(ಯಮ=ದಕ್ಷಿಣ ದಿಕ್ಕು) ನಿರುತಿ(ನೈರುತ್ಯ) ವರುಣ(ಪಡುವಣ ದಿಕ್ಕು) ವಾಯು(ವಾಯುವ್ಯ) ಹರಸಖ(ಉತ್ತರದಿಕ್ಕಿನ ಒಡೆಯನಾದ ಕುಬೇರ)ಈಶಾನ( ಈಶಾನ್ಯ) ಮುಖ್ಯರು ಹಾಗೂ ಶ್ರೇಷ್ಠ ಮನು ಮುನಿಜನರು ನನ್ನ ಚಿತ್ತಕ್ಕೆ ಪರಮ ಸಂತಸವನ್ನು ಪಾಲಿಸತಕ್ಕುದು

ಬಲಿ ಪ್ರಹ್ಲಾದ ನಾರದ ವಿಭೀಷಣ ಧ್ರುವ
ಕಲಿಪಾರ್ಥ ವಿದುರನಕ್ರೂರ
ಸಲಿಲಜ ಶುಕ ಶೌನಕ ಪುಂಡರೀಕಾದ್ಯ
ರೊಲಿದೀವುದೆಮಗೆ ಸನ್ಮತಿಯ ೧೬

ಬಲಿ,ಪ್ರಹ್ಲಾದ, ನಾರದ, ವಿಭೀಷಣ, ಧ್ರುವ, ಪಾರ್ಥ(ಅರ್ಜುನ) ವಿದುರ, ಅಕ್ರೂರ, ಕಮಲ, ಶುಕ, ಶೌನಕ, ಪುಂಡರೀಕ ಮೊದಲಾದವರು ನಮಗೆ ಸನ್ಮತಿಯನ್ನು ಒಲಿದು ನೀಡುವುದು.

ಉರಗಾಲಯದ ಪೆಸರ್ವಡೆದನ ಮತ್ಸ್ಯೋ
ದರ ಜಾತೆಯಾತ್ಮಸಂಭವನ
ವರಪುರಾಣಂಗಳ ಕನ್ನಡಿಸಿದ ಕವೀ
ಶ್ವರರ ಕೊಂಡಾಡುವೆ ಮುದದಿ ೧೭

ಹಾವಿನ ಮನೆಯಾದ ಹುತ್ತದ ಹೆಸರು ಪಡೆದು ವಾಲ್ಮೀಕಿಯ

(ವಲ್ಮೀಕ=ಹುತ್ತ) ಮತ್ಸ್ಯಗಂಧಿಯ ಮಗನಾದ ವ್ಯಾಸನ ಕೃತಿಗಳನ್ನು ಕನ್ನಡಿಸಿದ ಕವೀಶ್ವರರನ್ನು (ಕುಮಾರ ವಾಲ್ಮೀಕಿ ಮತ್ತು ಕುಮಾರವ್ಯಾಸ) ಸಂತೋಷದಿಂದ ಕೊಂಡಾಡುವೆನು.

ರವಿರಶ್ಮಿ ಚರಿಸುವ ದೇಶದೊಳಿಹ ದೇವ
ಕವಿಗಳ ಕಾರುಣ್ಯವಡೆದು
ಸವಿವಾತುಗಳ ವಿಸ್ತರಿಸುವೆ ಕೇಳ್ವರ
ಕಿವಿಗೆ ಭೂಷಣವಪ್ಪ ತೆರದಿ ೧೮

ಸೂರ್ಯಕಿರಣ ಚಲಿಸುವ ದೇಶದಲ್ಲಿರುವ ದೇವಕವಿಗಳ ಕಾರುಣ್ಯ ಪಡೆದು ಕೇಳುವವರ ಕಿವಿಗೆ ಭೂಷಣವಾಗುವಂತೆ ಸವಿಮಾತುಗಳನ್ನು ವಿಸ್ತರಿಸುವೆನು.

ವಡಿಪ್ರಾಸ ಗಣನೇಮ ಲಕ್ಷಣವುಚಿತಾರ್ಥ
ವಿಡಿಕಿರಿದಿಹ ಭಾವ ಚಿತ್ರ
ನುಡಿ ತಪ್ಪಿದರೆ ತಿದ್ದುವುದೆನ್ನಯ ಸಂ
ಗಡಿಗರು ಸಲೆ ಬಲ್ಲವರು ೧೯

ವಡಿ, ಪ್ರಾಸ ,ಗಣ, ನೇಮ, ಲಕ್ಷಣ, ಉಚಿತಾರ್ಥ ತುಂಬಿ ತುಳುಕುತ್ತಿರುವ ಭಾವಚಿತ್ರ, ಮಾತು ತಪ್ಪಿದಲ್ಲಿ ಚೆನ್ನಾಗಿ ಬಲ್ಲ ನನ್ನ ಸಂಗಡಿಗರು ತಿದ್ದುವುದು.

ತಪ್ಪು ಸಾಸಿರವಿರಲೊಳಿತೊಂದು ಗುಣಬರೆ
ಒಪ್ಪುಗೊಂಬರು ಬಲ್ಲವರು
ಕಪ್ಪು ಕಿಂಚಿತ್ತಿರೆ ಕಳೆದಿನಿದಮೃತವ
ಚಪ್ಪರಿಸೀಂಟದಿರ್ದಪರೆ ೨೦

ಸಾವಿರ ತಪ್ಪುಗಳ ಮಧ್ಯೆ ಒಪ್ಪುವ ಗುಣವೊಂದು ಬಂದರೆ ತಿಳಿದವರು ಸ್ವೀಕರಿಸುವರು, ಇರುವ ತುಸು ಕಪ್ಪನ್ನು ಕಳೆದು ಸವಿಯಾದ ಅಮೃತವನ್ನು ಚಪ್ಪರಿಸಿ ಕುಡಿಯದಿರುವರೆ?

ಬರಹವ ತಿಳಿಯಬೇಡೆನುತೆನ್ನ ನೊಸಲೊಳು
ಬರೆದ ನಾಲ್ಮೊಗನದರಿಂದೆ
ಬರಹವನರಿಯೆ ನಾ ಪದವಿಟ್ಟು ಕಡಿತದೊಳ್
ಬರೆದು ಮಾಡಿದ ಕೃತಿಯಲ್ಲ ೨೧

ಬರಹ ನಿನಗೆ ಸಲ್ಲದೆಂದು ಚತುರ್ಮುಖ ಬ್ರಹ್ಮ ನನ್ನ ಹಣೆಯಲ್ಲಿ ಬರೆದಿದ್ದರಿಂದ ಬರಹವನ್ನು ತಿಳಿದಿಲ್ಲ. ನಾನು ಕಡತ(ಬಟ್ಟೆಯ ರಟ್ಟು) ದಲ್ಲಿ ಪದವಿಟ್ಟು ಬರೆದು ಮಾಡಿದ ಕೃತಿಯಲ್ಲ ಇದು.

ಗುಬ್ಬಿಯ ಕೊರಲ್ಗೆ ಗೋಲಗಲ್ಲ ಕಟ್ಟಿದ
ರುಬ್ಬಿ ಆಗಸಕೆ ಹಾರುವುದೆ
ಕಬ್ಬಿಗರಾನುಸುರಿದ ಕಾವ್ಯವ ತಿದ್ದಿ
ಹಬ್ಬಿಸುವುದು ಭೂತಳದೊಳು ೨೨

ಗುಬ್ಬಚ್ಚಿಯ ಕೊರಳಿಗೆ ಗೋಲಗಲ್ಲ(ಗುಂಡುಕಲ್ಲು) ಕಟ್ಟಿದರೆ ಅದು ಉಬ್ಬಿ ಆಕಾಶಕ್ಕೆ ಹಾರುವುದೆ? ನಾನು ಹೇಳಿದ ಈ ಕಾವ್ಯವನ್ನು ತಿದ್ದಿ ಕವೀಶ್ವರರು ಭೂತಳದೊಳಗೆ ಹಬ್ಬಿಸುವುದು.

ನೋಡಲು ಹಸ್ತವಿಲ್ಲದ ಗೀಜಗ ಸಲೆ
ಗೂಡ ಕಟ್ಟಿದ ಚಚ್ಚಳಿಕೆಯ
ಕೋಡಗ ಕಂಡು ಸೈರಿಸದೆ ವಿನಾಶವ
ಮಾಡಲದೇನು ಕೇಡಹುದು ೨೩

ಕೈಯಿಲ್ಲದ ಗೀಜಗ ಕಲಾತ್ಮಕ ಗೂಡನ್ನು ಕಟ್ಟಿದ ಕೌಶಲವನ್ನು ಕಂಡು ಸಹಿಸದ ಕೋಡಗ(ಕೋತಿ) ಅದನ್ನು ನಾಶಮಾಡಿದರೆ ಅದೆಂಥ ಕೇಡಾಗುವುದು?

ಬಟ್ಟವೆರೆಯ ಬೆಳ್ದಿಂಗಳ ನೆರೆಯ ವಂದರಿ
ವಟ್ಟಲೊಳು ಸೋದಿಪರುಂಟೆ
ನೆಟ್ಟನೆ ಕನಕದಾಸನ ಕಾವ್ಯದಿ ದೋಷ
ತಟ್ಟದೆಂದರೆ ತಪ್ಪೆನಿಸದು ೨೪

ಪೂರ್ಣಚಂದ್ರನ ಬೆಳ್ದಿಂಗಳ ಪ್ರವಾಹವನನು ಜಾಲರಿ(ರಂಧ್ರಮಯವಾದ ವಂದರಿ) ಬಟ್ಟಲಲ್ಲಿ ಶೋಧಿಸುವರುಂಟೆ? ನೇರವಾಗಿ ಕನಕದಾಸನ ಕಾವ್ಯದಲ್ಲಿ ದೋಷ ತಲೆ ಇಕ್ಕದು ಎಂದು ಹೇಳಿದರೆ ತಪ್ಪಾಗುವುದಿಲ್ಲ.

ರಸಿಕರ ಕರ್ಣಯುಗ್ಮವ ಪೊಕ್ಕು ಮುದದಿ ಹೃ
ದ್ವಿಸಜವನಲರಿಸಿ ಮೈಗೆ

ಎಸೆವ ಪುಳಕದೊಸಗೆಯನಿತ್ತು ಶಿರವ ತೂ
ಗಿಸುವುದೀ ವಚನರಚನೆ ೨೫

ರಸಿಕರ ಜೋಡಿ ಕಿವಿಗಳನ್ನು ಹೊಕ್ಕು, ಹೃದಯ ಕಮಲಗಳನ್ನು ಅರಳಿಸಿ, ಶರೀರಕ್ಕೆ ರೋಮಾಂಚನದ ಸಂತೋಷವನ್ನು ನೀಡಿ ತಲೆದೂಗಿಸುವುದು ಈ ಕೃತಿಯ ವಚನರಚನೆ.

ರಸಪೂರಿತ ಸುಪ್ರಬಂಧ ವಿಲಕ್ಷಣ
ವೆಸೆವಂತೆ ಪೇಳ್ದಪೆನಿದನು
ಹಸನಾದುದೆಂದು ಯೋಗ್ಯರು ತಲೆದೊಗುವೊಲು
ಉಸುರುವೆ ಕೃಷ್ಣಕೃಪೆಯಿಂದ ೨೬

ರಸಪೂರ್ಣ ಸುಪ್ರಬಂಧದ ಲಕ್ಷಣ ಪ್ರಕಾಶಿಸುವಂತೆ ಇದನ್ನು ಹೇಳುವೆನು. ತುಂಬ ಚೆನ್ನಾಗಿದೆ(ಹಸನಾಗಿದೆ) ಎಂದು ಯೋಗ್ಯರು ತಲೆದೂಗುವಂತೆ ಕೃಷ್ಣಕೃಪೆಯಿಂದ ನುಡಿಯುವೆನು.

ವಿಷಕರ್ತೃವಿನ ಮೇಲೊರಗಿರ್ದುದಲ್ಲದೆ
ವಿಷದ ಪೆರ್ಮೊಲೆವಾಲ ಸವಿದು
ವಿಷವರ್ಜಿತವಾಹನ ಕೃಷ್ಣಂಗೆನ್ನಯ
ವಿಷವಾಕ್ಕು ತಾಗಲೇನಹುದು ೨೭

ಆದಿಶೇಷನ ಮೇಲೆ ಮಲಗಿರುವುದಲ್ಲದೆ, ವಿಷದ ಗಡಿಗೆಮೊಲೆವಾಲ ಕುಡಿದು ವಿಷವರ್ಜಿತ ವಾಹನ (ಗರುಡ)ನಾದ ಕೃಷ್ಣನಿಗೆ ನನ್ನ ವಿಷ ಮಾತು ತಾಗಿದರೆ ಏನೂ ಆಗದು.

ಅಮೃತಾರ್ಣವದೊಳು ಮನೆಗಟ್ಟಿಕೊಂಡು ಮೇ
ಣಮೃತಾನ್ನವ ಸುರರ್ಗಿತ್ತು
ಅಮೃತಕರ ವಾಮಲೋಚನ ಕೃಷ್ಣಂಗೆ
ಅಮೃತವಾಕ್ಯದಿ ಲೇಸಹುದೆ ೨೮

ಅಮೃತ ಸಮುದ್ರದಲ್ಲಿ ವಾಸ ಮಾಡುತ್ತಾ, ದೇವತೆಗಳಿಗೆ ಅಮೃತಾನ್ನವನ್ನು ನೀಡುತ್ತಾ, ಅಮೃತ ರಶ್ಮಿಯ ಸುಂದರಾಂಬಕ ಕೃಷ್ಣನಿಗೆ ಅಮೃತವಾಕ್ಯದಲ್ಲಿ ಲೇಸಾಗುವುದೆ?

ಲೇಸಾವುದು ಹೊಲ್ಲೆಹವಾವುದು ಸ
ರ್ವೇಶನ ನಾಮಕೀರ್ತನದಿ
ದಾಸೋತ್ತಮ ಪ್ರಹ್ಲಾದನ ವಿಘ್ನ ವಿ
ನಾಶವಾದುದು ಜಗವರಿಯೆ ೨೯

ಲೇಸು ಯಾವುದು ಕೇಡು ಯಾವುದು ಸರ್ವಾಂತರ್ಯಾಮಿಯ ನಾಮಕೀರ್ತನದಲ್ಲಿ? ಜಗತ್ತೆಲ್ಲ ತಿಳಿದಂತೆ ದಾಸೋತ್ತಮನಾದ ಪ್ರಹ್ಲಾದನ ವಿಘ್ನ ವಿನಾಶವಾಯಿತು.

ಕೊಡವಾಲು ಪುಳಿವೆರೆದಳಿವುದಲ್ಲದೆ ಪಾ
ಲ್ಗಡಲು ನಾಶವನೈದುವುದೆ
ಬಡವಂಗೆ ಕೃತಿದೋಷವಲ್ಲದೆ ಬೊಮ್ಮನ
ಪಡೆದಾತಗೇತರ ದೋಷ ೩೦

ಕೊಡ ಹಾಲು ಎರೆದ ಹುಳಿಯಿಂದ ಕೆಡುವುದಲ್ಲದೆ, ಹಾಲ್ಗಡಲು ಕೆಡುವುದೆ? ಬಡವನಿಗೆ ಕೃತಿದೋಷ ಕಾಣುವುದಲ್ಲದೆ ಬ್ರಹ್ಮಜನಕನಿಗೆ ಯಾವ ದೋಷವೂ ಕಾಣದು.

ಅದರಿಂದ ವರ್ಣದೋಷಗಳು ಪರಮ ಸಂ
ಪದವೆತ್ತ ಕೃತಿಗಿಲ್ಲವೆಂದು
ಬುಧರಾಮ್ನಾಯ ಶಾಸ್ತ್ರಾರ್ಥವ ತಿಳಿದು ನಾ
ನಿದ ಪೇಳ್ವೆ ಕೇಳಾಯತಾಕ್ಷಿ ೩೧

ಆದ್ದರಿಂದ ಪರಮ ಸಂಪದ ಪಡೆದ ಈ ಕೃತಿಗೆ ವರ್ಣದೋಷಗಳು ಇಲ್ಲವೆಂದು ವಿದ್ವಾಂಸರ ವೇದಶಾಸ್ತ್ರಾರ್ಥವನ್ನು ತಿಳಿದು ನಾನು ಇದನ್ನು ಹೇಳುವೆನು ಕೇಳು ವಿಶಾಲಾಕ್ಷಿ.

ಹೇಳು ಹಿರಣ್ಯಾಂಬರನ ತಾತ್ಪರಿಯವೆ
ತ್ತಾಳುಗಳಡಿದಾವರೆಗೆ
ಬೀಳುವ ಪುರುಷ ಷಟ್ಪದ ನಿನ್ನ ವಚನವ
ಕೇಳುವೆ ಪರಮ ಸಂತಸದಿ ೩೨

ಸುವರ್ಣಾಂಬರನ(ಶ್ರೀಹರಿಯ) ತಾತ್ಪರ್ಯ ಹೊಂದಿ ವ್ಯಕ್ತಿಗಳ ಪಾದಕಮಲಕ್ಕೆ

ಎರಗುವ ಪುರುಷ ದುಂಬಿಯೇ, ಪರಮ ಸಂತೋಷದಿಂದ ನಿನ್ನ ವಚನವನ್ನು ಕೇಳುವೆನು.

ಪೂಸರ ದಹನ ಕಾಮೋತ್ಪತ್ತಿ ವರ ಶಂಬ
ರಾಸುರವಧೆ ಕಂತು ಸುತನ
ಭಾಸುರ ಲೀಲೆ ಬಾಣನ ಗೆದ್ದ ಜಯ ಲ
ಕ್ಷ್ಮೀಶನ ಕೃತಿಯ ವರ್ಣಿಪೆನು ೩೩

ಮನ್ಮಥನ ದಹನ, ಕಾಮೋತ್ಪತ್ತಿ, ಶಂಬರಾಸುರನ ವಧೆ, ಮನ್ಮಥನ ಮಗನ ಪ್ರಜ್ವಲ ಲೀಲೆ, ಬಾಣನ ಗೆದ್ದ ಜಯಲಕ್ಷ್ಮೀಶನ ಕೃಪೆಯ ವರ್ಣಿಸುವೆನು.

ವಾಣಿಯಧವವೆಂಬ ವ್ಯವಹಾರಿ ಪಟ್ಟೆಯ
ಗೋಣಿಯೊಳು ತುಂಬಿದ ರತ್ನ
ಓಣಿಯೊಳು ಚೆಲ್ಲಿದಂತಿದೆ ನಿನ್ನ ಕೃತಿಯೆಂಬ
ಮಾಣಿಕ ಮನ್ಮನೋನಾಥ ೩೪

ವಾಗ್ದೇವಿಯ ಪತಿಯೆಂಬ ವ್ಯವಹಾರಿ ರೇಷ್ಮೆಯ ಗೋಣಿಚೀಲದಲ್ಲಿ ತುಂಬಿದ ರತ್ನವನ್ನು ಓಣಿಯಲ್ಲಿ ಚೆಲ್ಲಿದಂತಿದೆ ನಿನ್ನ ಕೃತಿರತ್ನ, ನನ್ನ ಎದೆಯನ್ನ.

ಬದ್ಧವಾಗಿ ಎನ್ನಯ ಮನದಲಿ ನೆಲೆಗೊಂ
ಡಿದ್ದ ನೂತನ ಯುಕ್ತಿಯಿಂದ
ಮುದ್ದಾಗಿ ಪೇಳುವೆ ಶ್ರೀಕೃಷ್ಣ ಮೊಮ್ಮನನಿ
ರುದ್ಧನ ಚಾರಿತ್ರ್ಯಗಳನು ೩೫

ಬದ್ಧತೆಯಿಂದ ನನ್ನ ಮನಸ್ಸಿನಲ್ಲಿ ನೆಲೆಗೊಂಡಿದ್ದ ನೂತನ ಯುಕ್ತಿಯಿಂದ ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನ ಚಾರಿತ್ರ್ಯವನ್ನು ಮುದ್ದಾಗಿ ಹೇಳುವೆನು.

ನಾಡೊಳಗುಳ್ಳ ಜಾಣರು ಜಾಣೆಯರೊಡನೆ
ಆಡುವ ಸವಿವಾತುಗಳ
ಪಾಡುಗಬ್ಬವ ಪರುಠವಿಸಿದ ಬಗೆಯ ನೀ
ನೋಡು ಮಾನಿನಿ ಮುಂದೆ ಮುಂದೆ ೩೬

ನಾಡೊಳಗುಳ್ಳ ಜಾಣಜಾಣೆಯರು ಆಡುವ ಸವಿವಾತುಗಳ

ಹಾಡುಗಬ್ಬವನ್ನು ಹೇಳಿದ ರೀತಿಯನ್ನು ನೀನು ನೋಡು ಮುಂದೆ, ಮುಂದೆ.

ಬೆನಕನೊ ನಿನಗೀ ಮತಿಯನಿತ್ತವ ಬ್ರಹ್ಮ
ಜನಕನೊ ವರ ಸರಸ್ವತಿಯೊ
ಸನಕ ಸನಂದಾದ್ಯರೊ ಮೇಲ್ಲತೆ ಪೇಳು
ಕನಕದಾಸೊತ್ತಮ ನನಗೆ ೩೭

ನಿನಗೆ ಈ ಮತಿಯನ್ನಿತ್ತವನು ಬೆನಕನೋ? ಬ್ರಹ್ಮ ಜನಕನೊ? ಸರಸ್ವತಿಯೊ? ಸನಕಸನಂದಾದ್ಯರೊ? ಕನಕದಾಸೋತ್ತಮ ನನಗೆ ಮೇಲಾದ ಕಥೆಯನ್ನು ಹೇಳು.

ತೆಂಗಿನಕಾಯ ತೋರದ ಮೊಲೆಯಾಂತ ಲ
ತಾಂಗಿಯ ಬಂದುಗೆವಾಯ
ರಂಗಿಪ ಚೆಂದುಟಿ ಇನಿದೆನೆ ಮೋಹನ ತ
ರಂಗಿಣಿವೇಳ್ವೆ ಕೇಳಬಲೆ ೩೮

ತೆಂಗಿನಕಾಯಿ ಗಾತ್ರದ ಮೊಲೆ ಹೊಂದಿದ ಲತಾಂಗಿಯ ತೊಂಡೆಹಣ್ಣಿನ ಬಾಯ ರಂಗುರಂಗಾದ ಚೆಂದುಟಿ ಸವಿ ಎನ್ನುವಂತೆ ಮೋಹನ ತರಂಗಿಣಿಯನ್ನು ಹೇಳುವೆನು, ಕೇಳು ಪ್ರಿಯೆ.

ಹರಿಶರಣರ ಪೆಚ್ಚು ಬುಧ ಜನರಿಗೆ ಮೆಚ್ಚು
ದುರಿತ ವನಕೆ ಕಾಳ್ಕಿಚ್ಚು
ವಿರಹಿಗಳೆರ್ದೆಗಿಚ್ಚು ವೀರರ್ಗೆ ಪುಚ್ಚು ಕೇ
ಳ್ವರಿಗಿದು ತನಿಬೆಲ್ಲದಚ್ಚು ೩೯

ಹರಿಭಕ್ತರ ಹೆಚ್ಚು, ವಿದ್ವಾಂಸರ ಮೆಚ್ಚು, ಪಾಪದ ಕಾಡಿಗೆ ಕಾಳ್ಗಿಚ್ಚು, ವಿರಹಿಗಳ ಎದೆಗಿಚ್ಚು, ವೀರರಿಗೆ ಹುಚ್ಚು, ಕೇಳುವವರಿಗೆ ಇದು ತನಿಬೆಲ್ಲದಚ್ಚು.

ಕೋಟಿ ಜನ್ಮದ ಪಾಪಹರ ಕೃಷ್ಣ ಚರಿತೆಯ
ಪೀಠಿಕೆಯೊಳಗೊಂದು ಪದನ
ಪಾಟಿಸಿ ಕೇಳಿದ ಸುಜನರಿಗೆ ಮುಕುತಿ ವ
ಧೂಟಿಯ ಸಂಸರ್ಗವಹುದು ೪೦

ಕೋಟಿ ಜನ್ಮದ ಪಾಪವನ್ನು ಹೋಗಲಾಡಿಸುವ ಕೃಷ್ಣ ಚರಿತ್ರೆಯ ಪೀಠಿಕೆಯೊಳಗೆ ಒಂದು ಪದವನ್ನು ಲಕ್ಷ್ಯಕೊಟ್ಟು ಕೇಳಿದ ಜನರಿಗೆ ಮೋಕ್ಷಸ್ತ್ರೀಯ ಸಂಸರ್ಗ ಸಿದ್ಧಿಸುವುದು.

ವರ ಮೋಹನರತಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೧

'ವರ ಮೋಹನ ತರಂಗಿಣಿ'ಎಂಬ ಈ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಸತ್‌ಕೃಪೆಯಿಂದ ಬಿಡದೆ ರಕ್ಷಿಸುವನು ಶ್ರೀಕಾಂತ.

# ೨. ಸೌರಾಷ್ಟ್ರ ವರ್ಣನೆ

ಕೃತಿವೇಳ್ದವ ಕನಕದಾಸೋತ್ತಮು ಕೇಳ್ದವ
ಳ್ಸತಿ ಸುಜ್ಞಾನ ವಧೂಟಿ
ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ
ಕೃತಿಯ ಕೇಳ್ದರೆ ಪುಣ್ಯವಹುದು ೧

ಈ ಕೃತಿಯನ್ನು ಹೇಳಿದವನು ಕನಕದಾಸೋತ್ತಮ; ಕೇಳಿದವಳು ಸತಿ ಸುಜ್ಞಾನ ವಧೂಟಿ; ಈ ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ; ಕೃತಿಯ ಕೇಳಿದರೆ ಪುಣ್ಯ ಲಭಿಸುವುದು.

ವೆಂಠಣಿಸಿದ ವಿಷ್ಣುಭಕ್ತಿ ನಂದನ ಕಲ
ಕಂಠ ನಿನ್ನಯ ಸವಿವಾತು
ಉಂಟಾದುದೆನ್ನಯ ಕರ್ಣಕ್ಕೆ ಪರಲೋಕ
ನಂಟರು ಕೇಳುವಂತುಸಿರು ೨

ಆವರಿಸಿದ ವಿಷ್ಣುಭಕ್ತಿನಂದನದಲ್ಲಿ ಕೋಗಿಲೆಯಂತೆ ಇನಿದಾಗಿ ಕೂಗುತ್ತಿರುವ ನಿನ್ನ ಸವಿಮಾತುಗಳು ನನ್ನ ಕಿವಿ ಹೊಕ್ಕವು; ಪರಲೋಕ ನೆಂಟರು ಕೇಳುವಂತೆ ಹೇಳು.

ಎಲೆ ಎನ್ನ ಕಣ್ಗೆ ಮಂಗಳವಪ್ಪ ಬಟ್ಟ ಬ
ಲ್ಮೊಲೆಯ ಮೋಹನರನ್ನೆ ಕೇಳು
ಶಿಲೆ ವಕ್ಷದವರ ಚಿತ್ತವ ಕರಗಿಸುವ ನೈ
ದಿಲೆಯಾಣ್ಮನಂತೆನ್ನ ಕವಿತೆ ೩

ನನ್ನ ಕಣ್ಣಿಗೆ ಶುಭದಾಯಕ ದುಂಡುಕುಚಗಳ ಮೋಹಕ ಮೈಕಟ್ಟಿನಿಂದ ಕಾಣುವ ಮನದನ್ನೆ ಕೇಳು, ನನ್ನ ಕಾವ್ಯ ಕಲ್ಲುಹೃದಯದವರ ಚಿತ್ತವನ್ನು ಕರಗಿಸುವ ಚಂದ್ರ ಇದ್ದ ಹಾಗೆ

ಈ ಕಾವ್ಯಕಾದಿವರ್ಣನೆ ಯಾವುದೆನೆ ರ
ತ್ನಾಕರನಿಳೆವೆಣ್ಣಿನುಡೆಯ
ಮೇಖಲೆಯಂದದಿ ಪರಿವೇಷ್ಟಿಸಿರ್ದ ಬಹು
ತೇಕ ಸಂಭ್ರಮವನೇನೆಂಬೆ ೪

ಭೂದೇವಿಯುಟ್ಟ ಸೀರೆ ಜಾರದಂತೆ ಸೊಂಟದ ಸುತ್ತ ಡಾಬು ರಾರಾಜಿಸುವಂತೆ ರತ್ನಾಕರ (ಸಮುದ್ರ) ಭೂಮಿಯನ್ನು ಸುತ್ತವರಿದಿತ್ತು.

ನೀರಾನೆ ನೆಗಳು ಪಾಠೀನ ಕಮಠ ಶಿಂಶು
ಮಾರ ಕರ್ಕಟ ಜಳ್ಳೂಕ
ಘೋರಾಹಿ ಮೊದಲಾದ ದುಷ್ಟಜಂತುಗಳಿಂದ
ವಾರಾಶಿ ಕಣ್ಗೆ ಶೋಭಿಸಿತು ೫

ನೀರಾನೆ, ಮೊಸಳೆ, ಮೀನು, ಆಮೆ, ಏಡಿ, ಜಿಗಣೆ, ಭಯಂಕರ ಸರ್ಪ ಮೊದಲಾದ ದುಷ್ಟಜಂತುಗಳಿಂದ ಸಮುದ್ರ ರಂಜಿಸುತ್ತಿತ್ತು.

ತಂಡತಂಡದಿ ಹೊರವಳಯದಿ ಡಿಂಡೀರ
ಪಾಂಡುರ ಶಂಖ ಪ್ರವಾಳ
ದುಂಡು ಮುತ್ತುಗಳಿಂದ ಮೇರೆಯಬ್ಧಿಯ ಕೊರ
ಳ್ದಂಡೆಯಂತಿರ್ದುದೇನೆಂಬೆ ೬

ತಂಡೋಪತಂಡವಾಗಿ ಹೊರವಲಯದಲ್ಲಿ ಸಮುದ್ರದ ದಂಡೆ(ತೀರ) ಯಲ್ಲಿ ರಾರಾಜಿಸುತ ನೊರೆ ಬುರುಗು, ಬಿಳಿ ಶಂಖ, ಹರಳು ದುಂಡುಮತ್ತುಗಳು ಕೊರಳ ದಂಡೆ(ಹಾರ)ಯಂತೆ ಗೋಚರಿಸುತ್ತಿತ್ತು.

ದೈವಾಧೀನದಿ ವಜ್ರಿ ಮೈನಾಕನ
ಕೈವರ್ತಿಸಿ ಕೊಲಲೆಂದು
ವೈವಸ್ವತನೊಲು ಬಹನೆಂದು ಕಡಲಳ್ಳೆ
ಹೊಯ್ವಂದದೊಳು ಕಂಪಿಸಿತು ೭

ದೈವಾಧೀನದಿಂದ ಇಂದ್ರ ಮೈನಾಕ (ಹಿಮವಂತನ ಪುತ್ರ) ನನ್ನು ಕೈಚಳಕದಿಂದ ಕೊಲ್ಲಲು ಸೂರ್ಯನಂತೆ ಬರುವನೆಂದು ಸಮುದ್ರ ಅಳ್ಳೆ(ಪಕ್ಕೆ) ಹೊಯ್ದುಕೊಂಡು ಕಂಪಿಸಿತು.

ಹೊದ್ದಿರಲುರ್ವಿಯ ಹೆರಸಾರು ಸಾರೆಂದು
ಬುದ್ಧಿ ಹೇಳೆ ಕೇಳದಿರಲು
ಗದ್ದಿಸಿ ತೆರೆಗೈಗಳಿಂದ ತಾಡಿಸುವಂತೆ
ಗುದ್ದಿತು ಜಲನಿಧಿ ತಟವನು ೮

ಆವರಿಸಿದ ಸಮುದ್ರವು ಭೂಮಿಯನ್ನು ಹಿಂದೆ ಸರಿ ಎಂದು ಬುದ್ಧಿ ಹೇಳಿದರೂ ಕೇಳದಿದ್ದಾಗ ಗದ್ದರಿಸಿ ತನ್ನ ತೆರೆ(ಅಲೆ)ಗೈಗಳಿಂದ ತಾಡಿಸುವಂತೆ ದಡವನ್ನು ಸಮುದ್ರ ಗುದ್ದಿತು.

ವೇದತಸ್ಕರನ ತನ್ನೊಳಗಿಟ್ಟುಕೊಂಡಪ
ರಾಧಕ್ಕೆ ಪೊಡಮಡದಿರಲು
ಮಾಧವನಪ್ಪಣೆಯಂತೆ ಮರಳಿ ಬಂದಾ
ಗಾದುದು ಕಡಲೋಟ ಭರತ ೯

ವೇದಗಳನ್ನು ಕದ್ದುಕೊಂಡು ಹೋದ ಕಳ್ಳನನ್ನು ತನ್ನೊಳಗೆ ಅಡಗಿಸಿಕೊಂಡ ಅಪರಾಧಕ್ಕೆ ನಮಸ್ಕರಿಸದಿರಲು ಮಾಧವನಪ್ಪಣೆಯಂತೆ ಕುದಿದು ಬಂದಾಗ ಆದುದು ಕಡಲ ಉಬ್ಬರವಿಳಿತ

ಅಂಬುಧಿ ಮಧ್ಯದ ಧರೆಯೊಳಗೆ ಚತುರಾಸ್ಯ
ನೆಂಬ ವಿದ್ಯಾಧಿಕನೊಲಿದು
ಕಂಬಸೂತ್ರವ ಪ್ರತಿಷ್ಠೆಯ ಮಾಡಿದಂದದಿ
ಪೊಂಬೆಟ್ಟ ಕಣ್ಗೆ ರಾಜಿಸಿತು ೧೦

ಸಮುದ್ರ ಮಧ್ಯದ ಭೂಮಿಯೊಳಗೆ ಬ್ರಹ್ಮನು ಕಂಬಸೂತ್ರ(ಹಡಗಿನ ಹಾಯಿಪಟಗಳ ಹಗ್ಗಗಳನ್ನು ಕಟ್ಟುವ ಕಂಬ)ವನ್ನು ಪ್ರತಿಷ್ಠೆ ಮಾಡಿದಂತೆ ಹೊಂಬೆಟ್ಟ ಕಣ್ಣೆ ರಾಜಿಸಿತು.

ಆ ಶರಧಿಯ ಮಧ್ಯದಲಿ ಸುವರ್ಣದಾದಿ
ಶೇಷ ತಾ ನೆಟ್ಟನೆ ನಿಂದು
ಶ್ರೀಶನ ವೈಕುಂಠವ ನೋಡುವಂತೆ ಶೈ
ಲೇಶ ಹೇಮಾದ್ರಿ ರಂಜಿಸಿತು ೧೧

ಆ ಸಮುದ್ರ ಮಧ್ಯದಲ್ಲಿ ಹೊಂಬಣ್ಣದಾದಿಶೇಷ ನೆಟ್ಟಗೆ ನಿಂತು ಶ್ರೀಹರಿಯ ವೈಕುಂಠವನ್ನು ನೋಡುವಂತೆ ಬೆಟ್ಟಗಳೊಡೆಯ ಹೇಮಾದ್ರಿ ರಂಜಿಸಿತು.

ಎಂಭತ್ತುನಾಲ್ಕು ಲಕ್ಷದ ಜೀವರುಗ
ಳೆಂಬ ಬೀಜವ ಸೃಷ್ಟಿಕರ್ತ
ಮುಂಬೆಳಸಿಗೆ ಪಣತವ ಕಟ್ಟಿದಂದದಲಿ
ಪೊಂಬೆಟ್ಟ ಕಣ್ಗೆ ರಂಜಿಸಿತು ೧೨

ಸೃಷ್ಟಿಕರ್ತ ಎಂಬತ್ತುನಾಲ್ಕು ಲಕ್ಷ ಜೀವರುಗಳೆಂಬ ಬೀಜವನ್ನು ಮುಂಬೆಳಸಿಗೆ ಪಣತ(ಮೂಡೆ)ವ ಕಟ್ಟಿದಂದದಲ್ಲಿ ಹೊಂಬೆಟ್ಟ ಕಣ್ಗೆ ರಂಜಿಸಿತು.

ಆ ಪರ್ವತದ ದಕ್ಷಿಣ ಭಾಗದಿ ಜಂಬೂ
ದ್ವೀಪದ ಮಧ್ಯದೊಳಿರ್ದು
ಸೋಪಸ್ಕರವೆತ್ತ ನಿಖಿಲದೇಶಗಳ ಸ್ವ
ರೂಪವನೇನು ಬಣ್ಣಿಸಲಿ ೧೩

ಆ ಪರ್ವತದ ದಕ್ಷಿಣ ಭಾಗದಲ್ಲಿ ಜಂಬೂದ್ವೀಪದ ಮಧ್ಯದೊಳಿರುವ ಸಾಮಾನು ಸರಂಜಾಮುಗಳನ್ನು ಹೊಂದಿರುವ ಎಲ್ಲ ದೇಶಗಳ ಸ್ವರೂಪವನ್ನು ಹೇಗೆ ಬಣ್ಣಿಸಲಿ?

ಮಾಳವ ಮಗಧ ಕಾಶ್ಮೀರ ಗುಜ್ಜರ ಗೌಳ
ಲಾಳ ಕೋಸಲ ಮೇಣ್ ಬೋಟ
ಚೋಳ ಕನ್ನಡ ವಂಗ ಚೌಟ ಹೊಯ್ಸಳ ಮಲೆ
ಯಾಳ ದೇಶಗಳೊಪ್ಪಿದವು ೧೪

ಮಾಳವ, ಮಗಧ, ಕಾಶ್ಮೀರ, ಗುಜ್ಜರ, ಗೌಳ,ಲಾಳ, ಕೋಸಲ, ಬೋಟ,ಚೋಳ, ಕನ್ನಡ, ವಂಗ, ಚೌಟ, ಹೊಯ್ಸಳ, ಮಲೆಯಾಳ ದೇಶಗಳು ಒಪ್ಪಿದವು.

ಇಂತಿವು ಮೊದಲಾದ ಬಹುದೇಶದಲಿ ಶ್ರೀ
ಕಾಂತಂಗೆ ತವರೂರೆನಿಸಿ
ಸಂತಸವಡೆದುದಾ ಸೌರಾಷ್ಟ್ರ ಸಕಲ ದಿ
ಗಂತಕ್ಕೆ ಸತ್ಕೀರ್ತಿವಡೆದು ೧೫

ಇವೇ ಮೊದಲಾದ ಬಹು ದೇಶಗಳಲ್ಲಿ ಶ್ರೀಕೃಷ್ಣನಿಗೆ ತೌರೂರೆನಿಸಿದ ಸೌರಾಷ್ಟ್ರ ಸಕಲ ದಿಕ್ಕುಗಳಲ್ಲಿ ಸತ್ಕೀರ್ತಿ ಹೊಂದಿತ್ತು.

ನಗರಪಟ್ಟಣ ಖೇಡ ಖರ್ವಡ ಪುರ ಗ್ರಾ
ಮಗಳೆಂಬ ಬಹು ಪೆಸರಾಂತು
ಸೊಗಯಿಸುತಿಪ್ಪುವಾ ದೇಶದಿ ಬೀಳುವ
ಳ್ಳಿಗಳಿಲ್ಲ ಕೇಳಾಯತಾಕ್ಷಿ ೧೬

ನಗರ, ಪಟ್ಟಣ, ಖೇಡ(ಗ್ರಾಮ), ಖರ್ವಡ(ಬೆಟ್ಟಗಳಿಂದಾವರಿಸಿದ ಹಳ್ಳಿನಗರಗಳ ಮಧ್ಯಸ್ಥಿತಿಯ ಊರು) ಪುರ, ಗ್ರಾಮಗಳೆಂಬ ನಾನಾ ಹೆಸರುಗಳನ್ನು ಹೊಂದಿ ಸೊಗಯಿಸುತ್ತಿವೆಯೇ ವಿನಾ ಆ ದೇಶದಲ್ಲಿ ಬೀಳುವಳ್ಳಿ(ಕುಗ್ರಾಮ)ಗಳಿಲ್ಲ

ರಾರಾಜಿಸುತಿಪ್ಪ ತೊರೆಸಾಲು ನಿಖಿಳಾಗ್ರ
ಹಾರ ಷಡ್ದರ್ಶನಾರ್ಯರಿಗೆ
ವೀರ ಮಾನ್ಯವನಿತ್ತ ಪುರಗಳೊಪ್ಪಿದವು
ದ್ವಾರಾವತಿಯ ದೇಶದೊಳು ೧೭

ದ್ವಾರಾವತಿಯ ದೇಶದಲ್ಲಿ ತೊರೆಸಾಲು ಅಗ್ರಹಾರಗಳು, ಷಡ್ದರ್ಶನಗಳ (ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸೆ, ವೇದಾಂತಗಳೆಂಬ ಆರು ಶಾಸ್ತ್ರಗಳು) ಆರ್ಯರಿಗೆ ಮಾನ್ಯ ಹಾಕಿಕೊಟ್ಟ ಪುರಗಳು ಒಪ್ಪಿದುವು.

ಆವಾವ ಗ್ರಾಮಾನುಗ್ರಾಮದಿ ಶಿವ ವಿಷ್ಣು
ದೇವಾಲಯ ಪಾತ್ರಭೋಗ
ತೀವಿದ ಮೃಷ್ಟಾನ್ನ ಸತ್ರದೊತ್ತಿನಲಿ ರಾ
ಜೀವ ಪೆರ್ಗೊಳಗಳೊಪ್ಪಿದವು ೧೮

ಯಾವ ಯಾವ ಗ್ರಾಮಾನುಗ್ರಾಮಗಳಲ್ಲಿ ಶಿವ ವಿಷ್ಣು ದೇವಾಲಯಗಳಿವೆಯೋ ಅಲ್ಲಿ ನೃತ್ಯಗಾತಿಯರು, ಮೃಷ್ಟಾನ್ನ ಸತ್ರಗಳು ಹಾಗೂ ಪಕ್ಕದಲ್ಲಿಯೇ ಕೊಳಗಳು ರಾಜಿಸುತ್ತವೆ.

ಸಮಯನಿಷ್ಠರು ಉನ್ನತ ಕೀರ್ತಿವಿದರು ವಿ
ಕ್ರಮ ವಿದ್ಯೆ ಬುದ್ದಿಗಧಿಕರು
ಸುಮತಿಗಳು ಅಭವಾಚ್ಯುತ ಭಜಕರು ಸಂ
ಭ್ರಮದಿ ವರ್ತಿಪರೆಲ್ಲ ಕಡೆ ೧೯

ಧರ್ಮನಿಷ್ಠರು, ಕೀರ್ತಿವಿದರು, ವಿದ್ಯೆ ಬುದ್ಧಿಗಧಿಕರು, ಹರಿಹರ ಭಜಕರು ಎಲ್ಲ ಕಡೆ ಸಂಭ್ರಮದಿಂದ ವರ್ತಿಸುವರು.

ಪೊಡೆ ಎಂಬುದು ಗಂಧಶಾಲಿಯೊಳು ಕೈಯಲಿ
ಕೊಡೆಯೆಂಬರಾತಪತ್ರವನು
ತಡೆಯೊಂಬುದಹಿಮಂತ್ರದೊಳಗಲ್ಲದೆ ಬೇ
ರೆಡೆಯೊಳೀ ಶಬ್ದಗಳಿಲ್ಲ ೨೦

ಗಂಧಶಾಲಿ(ಸುವಾಸನಾಯುಕ್ತ ಭತ್ತ) ಯಲ್ಲಿ ಹೊಡೆ ಎಂಬ ಕೈಯ ಛತ್ತಿಯನ್ನು ಕೊಡೆ ಎಂಬ ಹಾವಿನ ಮಂತ್ರದಲ್ಲಿ ತಡೆ ಎಂಬ ಶಬ್ದಗಳು ಬಳಕೆಯಾಗುತ್ತವೆಯೇ ವಿನಾ ಬೇಡೆಡೆಯಲ್ಲಿ ಕಂಡು ಬರುವುದಿಲ್ಲ.

ಕಂಟಕವೆಂಬುದು ಕೇತಕಿಯೊಳು ರಾಜ
ಕಂಟಕವೆಂಬುದಂಬುಜದಿ
ಕಂಟಕವೆಂಬುದು ಹಲಸಿನೊಳಲ್ಲದೆ ಬೇರೆ
ಕಂಟಕವಾದೇಶಕಿಲ್ಲ ೨೧

ಕಂಟಕ ಎಂಬುದು ಕೇದಿಗೆಯಲ್ಲಿ, ರಾಜ (ಚಂದ್ರ) ಕಂಟಕ ಎಂಬುದು ಕಮಲದಲ್ಲಿ, ಕಂಟಕ ಎಂಬುದು ಹಲಸಿನಲ್ಲಿ ಇದೆಯೇ ವಿನಾ ಆ ದೇಶದಲ್ಲಿ ಬೇರೆ ಕಂಟಕವಿಲ್ಲ.

ದಂಡ ಸಂನ್ಯಾಸಿ ವರ್ಗದೊಳುಂಟು ಪುನರಪಿ
ದಂಡಗೋಪಾಲರೊಳುಂಟು
ದಂಡ ಪುಂಡ್ರೇಕ್ಷು ವಾಟಿಯೊಳುಂಟು ಮಿಕ್ಕ
ದಂಡವಾದೇಶದೊಳಿಲ್ಲ ೨೨

ದಂಡ(ದೊಣ್ಣೆ) ಸಂನ್ಯಾಸಿ ವರ್ಗದಲ್ಲುಂಟು, ದಂಡ ದನಗಾಹಿಗಳಲ್ಲುಂಟು ದಂಡ ಕಬ್ಬಿನ ತೋಟಗಳಲ್ಲುಂಟು, ಬೇರೆ ದಂಡ ಆ ದೇಶದಲ್ಲಿಲ್ಲ.

ಕಟ್ಟುವರು ನಿರಿಕೆಯ ನೀವಿಯೊಳಗೆ ಕೈಗೆ
ಕಟ್ಟುವರು ಕಂಕಣಗಳನು
ಕಟ್ಟುವರು ಧಮ್ಮಿಲ್ಲವೆಲೆಯ ಮುಂಡಿಗೆಯ
ಕಟ್ಟು ಕುಟ್ಟೆಂಬುದಲ್ಲಿಲ್ಲ ೨೩

ಸೀರೆಯ ನೆರಿಗೆಗಳನ್ನು ಸೊಂಟದ ಬಳಿ ಬಾಳೆಕಾಯಿಯೊಳಗೆ ಕಟ್ಟುವರು, ಮಂಗಳ ಪ್ರಸಂಗಗಳಲ್ಲಿ ಕಂಕಣ(ರಕ್ಷಾಸೂತ್ರ)ವನ್ನು ಮುಂಗೈಗೆ ಕಟ್ಟುವರು,

ದಮ್ಮಿಲ್ಲ (ತುರುಬು) ವನ್ನು ಕಟ್ಟುವರು ಹಾಗೆಯೇ ಎಲೆಯು ಮುಂಡಿಗೆ(ಪೆಂಡಿ)ಯನ್ನು ಕಟ್ಟುವರು. ಇದನ್ನು ಬಿಟ್ಟು ಕಟ್ಟು, ಕುಟ್ಟು ಎಂಬ ಶಬ್ದಗಳೇ ಇಲ್ಲ.

ಕುಟಿಲ ಕುಂತಳದೊಳು ಮಧುಪಾನ ತೊಂಡೆವ
ಣ್ಬುಟಿಯೊಳು ಕಠಿನ ಕಾಂತೆಯರ
ಘಟಕುಚದೊಳಗಲ್ಲದೀ ನುಡಿಗಳು ಸಂ
ಘಟಿಸವು ಸೌರಾಷ್ಟ್ರದಲ್ಲಿ ೨೪

ಕುಟಿಲ(ಕೊಂಕು) ಕೂದಲಿನಲ್ಲಿ, ಕುಟಿಲ ತೊಂಡೆ ಹಣ್ಣುತುಟಿಯಲ್ಲಿ, ಕುಟಿಲ ಕಾಂತೆಯರ ಗಡಿಗೆ ಮೊಲೆಗಳಲ್ಲಿ ಕಾಣಬಹುದೇ ವಿನಾ ಸೌರಾಷ್ಟ್ರದಲ್ಲಿ ಬೇರೆಡೆ ಕಾಣಿಸವು.

ಹಿಡಿವರು ವಾರನಾರಿಯರ ಬಲ್ಮೊಲೆಗಳ
ಕಡಿವರು ಚೆಂದುಟಿಗಳನು
ಉಡಿಗೆಯ ಸುಲಿವರು ಪಲ್ಲವಾಧರೆಯರ
ಪೊಡವಿಯೊಳು ಗರತಿಯ ಮುಟ್ಟನು ೨೫

ವೇಶ್ಯೆಯರ ಬಲ್ಮೊಲೆಗಳ ಹಿಡಿವರು, ಚೆಂದುಟಿಗಳನು ಕಡಿವರು, ಪಲ್ಲವಾಧರೆಯರ (ಚಿಗುರು ತುಟಿಯವರ) ಉಡಿಗೆಯನ್ನು ಬಿಚ್ಚುವರು ವಿನಾ ಗರತಿಯರನ್ನು ಮುಟ್ಟುವುದಿಲ್ಲ.

ಕೆರೆಬಾವಿಗಳಿರದ ಕಗ್ಗಾಡಿನೆಡೆಯಲಿ
ತೊರೆನೀರ ಕಂಬಿಯೊಳ್ತರಿಸಿ
ನೆರೆಧರ್ಮಿಷ್ಟರು ನಿರ್ಮಿತವನು ಮಾಡಿ
ದರವಟ್ಟಿಗೆಗಳೊಪ್ಪಿದವು ೨೬

ಕೆರೆ ಬಾವಿಗಳೊಂದೂ ಇರದ ಕಗ್ಗಾಡಿನಲ್ಲಿ ತೊರೆಯ ನೀರನ್ನು ಕಂಬಿ(ಅಡ್ಡೆ)ಯಲ್ಲಿ ತರಿಸಿ ಧರ್ಮಿಷ್ಟರು ಅರವಟ್ಟಿಗೆಗಳಲ್ಲಿ ದಾರಿ ಹೋಕರಿಗೆ ಬಾಯಾರಿಕೆಯನ್ನು ಹೋಗಲಾಡಿಸುವ ನಿರ್ಮಿತಿಯನ್ನು ಮಾಡಿದ್ದರು.

ಪಟಬದ್ಧ ದೀರ್ಘ ದಂಡಕ ನಿರಾಶ್ರಿತರ
ಮಠ ಭುಕ್ತ ಶಾಲೆ ಕಂಪೆಸೆವ
ಘಟಪೂರಿತ ಗಂಧ ಶೈತ್ಯೋದಕದರ
ವಟಿಗೆಯ ಮನೆಗಳೊಪ್ಪಿದವು ೨೭

ಬಟ್ಟೆದೊಟ್ಟ ದೀರ್ಘ ದೊಣ್ಣೆಯ ನಿರಾಶ್ರಿತರ ಶಿಬಿರ ಹಾಗೂ ಅನ್ನಸತ್ರ ಮತ್ತು ಸುವಾಸನಾಯುಕ್ತ ತಣ್ಣೀರಿನ ಗಡಿಗೆಗಳಿಂದ ಕೂಡಿದ ಅರವಟಿಗೆಗಳು ಒಪ್ಪಿದವು.

ಮಾಮರದಡಿಯಲ್ಲಿ ಮಂಗಳಮಯವಾದ
ಲಾಮಂಚದಮಳ ಚಪ್ಪರದಿ
ಹೇಮಾಂಬುರುಹ ಮೊಗ್ಗೆ ಮೊಲೆಯರು ನೀರ್ವಿಡಿ
ದಾ ಮಹಾ ಸ್ಥಲದೊಳೊಪ್ಪಿದರು ೨೮

ಮಾವಿನಮರದ ಕೆಳಗೆ ಲಾಮಂಚ(ಸುವಾಸನೆಯ ಬೇರು) ದ ನಿರ್ಮಲ ಚಪ್ಪರದಲ್ಲಿ ಹೊಂದಾವರೆ ಮೊಗ್ಗುಮೊಲೆಯರು ನೀರು ಹಿಡಿದು ಆ ಸ್ಥಲದಲ್ಲಿ ಒಪ್ಪಿದರು.

ಅಂಬರದಲಿ ಪ್ರತಿಬಿಂಬಿಸುತಿಹ ಕುಚ
ಕುಂಭ ತತ್ಕುಂಭವೆಂಬಂತೆ
ಕುಂಭಾನ್ವಿತ ಕರಕಮಲದಿ ಸ್ತ್ರೀ ನಿಕು
ರುಂಬ ನೀರ್ವಿಡಿದು ನಿಂದಿಹುದು ೨೯

ಅಂಬರ(ಬಟ್ಟೆ)ದಲ್ಲಿ ಪ್ರತಿಬಿಂಬಿತ ಕುಚಕುಂಭ(ಗಡಿಗೆಮೊಲೆ) ಸದೃಶ ಕುಂಭ(ಗಡಿಗೆ) ಎನ್ನುವ ಹಾಗೆ, ನೀರಿನ ಕುಂಭವನ್ನು ಕೈಯಲ್ಲಿಡಿದು ಸ್ತ್ರೀಯರ ನಿಕುರುಂಬ(ಗುಂಪು) ನಿಂತಿಹುದು.

ಕಳಶಸ್ತನ ಬಾಹುಮೂಲ ನಿರ್ಮಳದ ಕೌಂ
ಕುಳ ತೋಳ ನೆಗಹಿ ನೀರೆರೆಯೆ
ಗಳತೃಷ್ಣೆ ಪರಿದೊಡಮೀಂಟುವ ನೆವದಿ ಹೆಂ
ಗಳ ಮುದ್ದು ಮೊಗವ ನಿಟ್ಟಿಪರು ೩೦

ಕಳಶವೊಲೆ, ಬಾಹುಮೂಲದ ಕಂಕುಳು ಕಾಣುವಂತೆ ತೋಳೆತ್ತಿ ನೀರು ಎರೆಯುವಾಗ ದಾಹ ಅಡಗಿದ್ದರೂ ಇನ್ನೂ ನೀರು ಕುಡಿಯುವ ನೆವದಲ್ಲಿ ಹೆಂಗಸರ ಮುದ್ದುಮುಖವನ್ನು ನೋಡುತ್ತಾ ಸಂತಸ ಪಡುವರು.

ಕಡುರೂಪು ಕಣ್ಗೆ ಮೈಗಂಪು ಮೂಗಿಗೆ ಮೆ
ಲ್ನುಡಿ ಕೊಡಕೆಗೆ ಹೆಂಗಳೆರೆವ
ಕುಡಿನೀರಿನಿಂಪು ಜಿಹ್ವೆಗೆ ಶೈತ್ಯ ತನುವಿಂ
ಗಿಡಿದುದು ಬಳಲಿ ಬಂದವರಿಗೆ ೩೧

ಮೋಹಕ ರೂಪು ಕಣ್ಣಿಗೆ, ಮೈಕಂಪು ಮೂಗಿಗೆ, ಮೃದುನುಡಿ ಕೊಡಕೆಗೆ(ಕಿವಿಗೆ), ಹೆಂಗಸರು ಎರೆವ ಕುಡಿನೀರಿನ ಸವಿ ನಾಲಗೆಗೆ –ಎಲ್ಲ ಸೇರಿ, ಬಳಲಿ ಬಂದವರ ಶರೀರಕ್ಕೆ ಶೈತ್ಯ ಆವರಿಸತೊಡಗಿತು.

ಸಲ್ಲಲಿತೋಭಯ ತಟದ ಸಾಲ್ಮರದೊಳು
ಬೆಲ್ಲದ ಪಾನಕವನೆರೆದು
ಅಲ್ಲದ ಕೆನೆ ಮೊಸರಶನವ ಕರೆಕರೆ
ದೆಲ್ಲರಿಗುಣ ಬಡಿಸುವರು ೩೨

ಸುಂದರವಾದ ಎರಡೂ ಕಡೆಯ ಸಾಲ್ಮರಗಳಡಿಯಲ್ಲಿ ಬೆಲ್ಲದ ಪಾನಕವನ್ನು ಎರೆದು, ಅಲ್ಲ(ಶುಂಠಿ)ದ ಕೆನೆಮೊಸರಿನ ಅನ್ನವನ್ನು ಕರೆ ಕರೆದು ಎಲ್ಲರಿಗೂ ಉಣಬಡಿಸುವರು.

ಲೋಕದೊಳತಿ ಶೀಲವಂತ ಶ್ರೀವೈಷ್ಣವ
ರೇಕವ್ರತದ ಭೂಸೂರರು
ಏಕಾಂತನಿಳಯದೊಳೇಕವಾಗಿರೆ ಸ್ವಯಂ
ಪಾಕವ ಮಾಡಿ ಭುಂಜಿಪರು ೩೩

ಲೋಕದಲ್ಲಿ ಅತಿ ಶೀಲವಂತ ಶ್ರೀವೈಷ್ಣವ ಏಕವ್ರತದ ಬ್ರಾಹ್ಮಣರು ಪ್ರತ್ಯೇಕ ಮನೆಯಲ್ಲಿ ಒಂದಾಗಿದ್ದರೂ, ಬೇರೆ ಸ್ವಯಂ ಪಾಕವ(ಅಡಿಗೆ) ಮಾಡಿ ಉಣ್ಣುವರು.

ನಾಗವಲ್ಲಿಯ ಪರ್ಣ ಚೂರ್ಣ ಕರ್ಪೂರ
ಪೂಗದ ಪೋಳ ತಾಂಬೂಲ

ರಾಗಪೂರಿತ ಗಂಧ ಕುಸುಮಗಳಿಂದಲಿ
ಭೋಗವೀವರು ಪಾರ್ವರಿಗೆ ೩೪

ವೀಳೆಯದೆಲೆ, ಸುಣ್ಣ, ಕರ್ಪೂರ, ಅಡಕೆ ಹೋಳಿನ ತಾಂಬೂಲದ ಜೊತೆಗೆ ಪ್ರೇಮಪೂರ್ವಕ ಸುಗಂಧ ಪುಷ್ಪಗಳಿಂದ ಹಾರುವರಿಗೆ ಭೋಗದ ಸವಿ ನೀಡುವರು.

ಕುಸ್ತರಿಸುವರಲ್ಲಲ್ಲಿ ಸಲೆ ಬಳಲ್ದ ಸ
ಮಸ್ತರ ದೃಗುಯುಗಳಕ್ಕೆ
ವಿಸ್ತರಿಸುವೊಡಾಶ್ಚರ್ಯವೆನಿಪ ವಿಮಲ ಸ
ರಸ್ಥಲ ಕೆರೆಗಳೊಪ್ಪಿದವು ೩೫

ಅಲ್ಲಲ್ಲಿ ಹೆಚ್ಚು ಬಳಲಿದ ಸಮಸ್ತರನ್ನು ಕುಸ್ತರಿಸುವರು(ಉಪಚರಿಸುವರು) ಅವರ ಕಣ್ಣುಗಳಿಗೆ ಆಶ್ಚರ್ಯವನ್ನು ನೀಡುವ ಸರೋವರ ಕೆರೆಗಳು ಕಾಣಿಸಿದುವು.

ತೊರೆದಾಳ್ದವನ ಕಾರ್ಮುಕ ಸಿಂಜಿನಿಯಿಂದ
ನೆರೆ ಬಾಗಿಸಿದರೆಂಬಂತೆ
ಅರೆಗಲ್ಲುಗಳ ಕೀಲಿಸಿದೇರಿಗಳಿಂದ
ಕೆರೆಗಳೊಪ್ಪಿರ್ದುವಲ್ಲಲ್ಲಿ ೩೬

ಗಂಗಾಧರನ ಬಿಲ್ಲನ್ನು ಮೌರ್ವಿ(ಹೆದೆ)ಯಿಂದ ಬಾಗಿಸಿದರೆಂಬಂತೆ ಅರೆಕಲ್ಲುಗಳಿಂದ ಕೀಲಿಸಿದ ಏರಿಗಳುಳ್ಳ ಕೆರೆಗಳು ಅಲ್ಲಲ್ಲಿ ತೋರಿದವು.

ಜಲವಿದ್ದೊಡೇನೋ ಪಾನಕರ್ಹವಲ್ಲ ಸ
ತ್ಫಲಭೋಗಕೊದಗುವುದಿಲ್ಲ
ಮಲೆತ ಮೈನೀರೆಂದು ಸಿಂಧುವ ಜರೆದಿಳ
ಗೊಲಿದೀವ ಕೆರೆಗಳೊಪ್ಪಿದವು ೩೭

ನೀರಿದ್ದರೇನು ಕುಡಿಯಲು ಯೋಗ್ಯವಲ್ಲ, ಸತ್ಫಲ ಭೋಗಕ್ಕೆ ಒದಗುವಂಥವಲ್ಲ, ಮಲೆತ ಮೈನೀರು(ಮೂತ್ರ) ಎಂದು ಸಮುದ್ರವನ್ನು ಜರೆದು ಭೂಮಿಗೆ ಒಲಿದು ನೀಡುವ ಕೆರೆಗಳು ಒಪ್ಪಿದವು.

ಮಳೆಗಾಲದೊಳುಬ್ಬಿ ಬೇಸಗೆಯೊಳು ಕಾಲು
ಹೊಳೆಯಾದವೆಂಬ ನಿಂದೆಯನು

ತಳೆಯದೆ ತೂಬಲಿ ಪೊರಮಟ್ಟ ಕುಲ್ಯಗ
ಳಿಳೆಯಗಲದಿ ಚಲಿಸುತಿಹವು ೩೮

ಮಳೆಗಾಲದಲ್ಲಿ ಹುಟ್ಟಿ, ಬೇಸಿಗೆಯಲ್ಲಿ ಬತ್ತಿದ ಅಥವಾ ಜಿನುಗು ನೀರಿನ ಕಾಲುವೆಗಳಾದವು ಎಂಬ ನಿಂದೆಯನ್ನು ಹೊಂದದೆ, ತೂಬಿನಿಂದ ಹೊರಹೊರಟ ಕಾಲುವೆ ಕಂದಕಗಳು ಇಳೆಯಗಲ ಚಲಿಸುವಂತೆ ಪಸರಿಸಿದವು.

ಭಾಗೀರಥಿ ದೇವಿಯರು ಸಾವಿರಾರು ಮೊಗ
ವಾಗಿ ಸಾಗರ ಸೇರ್ವಂತೆ
ರಾಗಿಪ ಪರಿಗಾಲುವೆ ಸಾವಿರಾರು ಮೊಗ
ವಾಗಿ ಸದ್ವನವ ಸಾರಿದವು ೩೯

ಗಂಗಾದೇವಿಯರು ಸಾವಿರಾರು ಮುಖವಾಗಿ ಸಾಗರ ಸೇರಿದಂತೆ, ಹರಿಕಾಲುವೆಗಳೂ ಸಾವಿರಾರು ಮುಖವಾಗಿ ಗದ್ದೆ ತೋಟಗಳನ್ನು ಸೇರಿದವು.

ಆಪೋನಾರಾಯಣ ತತ್ತ್ವಮೆಂದು ಪ್ರಾ
ಣೋಪನೊಳ್ವೆರೆದ ಭೂಸತಿಯ
ರೂಪಾಂತ ರೋಮಾಂಚನದಂತೆ ಗಂಧ ಶಾ
ಲೀ ಫಲದಂಕುರವಿಹುದು ೪೦

ನೀರು ನಾರಾಯಣ ತತ್ವವೆಂದು ಪ್ರಾಣ ಪ್ರಿಯನೊಡನೆ ಬೆರೆದ ಭೂಸತಿಯ ರೋಮಾಂಚನವೇ ರೂಪು ತಳೆದಂತೆ ಭತ್ತದ ತೆನೆಯ ಮೊಳಕೆ ಕಂಗೊಳಿಸುವುದು.

ಬೀಗಿ ಬೆಳೆದು ನಭಕಡರ್ದೊಡೆ ದೇವರ್ಕಳಾ
ರೋಗಿಪ ಸವಿಗಾರರಲ್ಲ
ಪೋಗಿ ಮಾಡುವುದೇನೆನುತ ಲಜ್ಜಿಸಿ ತಲೆ
ವಾಗಿದಂತಿಹುದು ರಾಜಾನ್ನ ೪೧

ಬೀಗಿ ಬೆಳೆಯುತ್ತ ಮುಗಿಲು ಮುಟ್ಟಿದರೆ ದೇವರುಗಳು ಆರೋಗಿಸುವ (ಉಣ್ಣುವ) ಸವಿಗಾರರಲ್ಲ. ಅಷ್ಟು ಬೆಳೆದು ಅಲ್ಲಿಗೆ ಹೋಗಿ ಫಲವೇನು ಎನ್ನುತ್ತ ಲಜ್ಜೆಯಿಂದ ತಲೆ ಬಗ್ಗಿಸಿದಂತಿದೆ ರಾಜಾನ್ನ(ಭತ್ತ, ನೆಲ್ಲು)

ಮಡಿಗಳ ಕಾವ ಪುಳಿಂದಿನಿಯರ ರೂಪ
ಪಡಿಗಟ್ಟಬಲ್ಲವರಾರು
ಮುಡಿ ತೋರಮೊಲೆಯ ಭಾರದಿಂದಲುಂಗುರ
ವಿಡಿನಡು ಬಳುಕವಂತಿಹುದು ೪೨

ಮಡಿ(ಪಾತಿ,ಬೀಜ ಬಿತ್ತಿದ ಭೂಭಾಗ)ಗಳನ್ನು ಕಾಯುವ ಬೇಡತಿಯರ ರೂಪವನ್ನು ಸರಿಗಟ್ಟಬಲ್ಲವರು ಯಾರು? ತುರುಬು ಹಾಗು ಗಡಿಗೆಮೊಲೆಯ ಭಾರದಿಂದ ಹಿಡಿಯಲ್ಲಿ ಹಿಡಿಯುಬಹುದಾದ ಸಣ್ಣ ನಡು(ಸೊಂಟ) ಬಳುಕುವಂತಿರುವುದು.

ಕಾವನ ಕೈಯರಗಿಳಿಯಂತೆ ನುಡಿವುತ
ಕಾವನ ಬಿಲ್ಗೋಲ ಪಿಡಿದು
ಕಾವನ ರಥವಾಜಿ ಭುಂಜಿಸದಂತೆ ಕೈ
ಗಾವ ಪಾಮರಿಯರೊಪ್ಪಿದರು ೪೩

ಕಾಮನ ಕೈಯ್ಯ ಅರಗಿಳಿಯಂತೆ ಮಾತನಾಡುತ್ತಾ, ಕಾಮನ ಬಿಲ್ಗೋಲ ಹಿಡಿದು, ಕಾಮನ ರಥವಾಜಿ(ರಥದ ಕುದುರೆ=ಗಿಳಿ) ಭತ್ತದ ಗೊನೆಯನ್ನು ತಿನ್ನದಂತೆ ಕಾಯುವ ಪಾಮರಿಯರು ಒಪ್ಪಿದರು.

ಕೊನೆವಾಳೆ ಕುಸುಮಮಂಜರಿ ಮುಖ್ಯ ಶಾಲಿಯ
ಕೊನೆಗಳನಗಿವ ಕೀರಗಳು
ಕೊನೆಗಣ್ಣ ಪಾಮರಿಯರ ದಿಟ್ಟಿಗಂಡುರು
ಳ್ಗಣೆಯೆಂದು ಕೊನೆಗೆ ಪಾರಿದುವು ೪೪

ಬಾಳೆಯ ಗೊನೆ, ಹೂಗೊಂಚಲು, ಬತ್ತದ (ತೆನೆ)ಯನ್ನು ಅಗಿಯುವ ಕೀರಗಳು(ಗಿಳಿಗಳು) ಕಡೆಗಣ್ಣ ಪಾಮರಿಯರ ದೃಷ್ಟಿ ಕಂಡು ಉರುಳ್ಗಣೆ (ಉರುಳು ಹಾಕುವ ಬಾಣ) ಎಂದು ಭಾವಿಸಿ ಕೊನೆಗೆ(ಕೊಂಬೆಗೆ) ಹಾರಿದವು.

ಸುಟಿವೆತ್ತು ಕೊನೆಯಿಂದೆ ಮಗುಳೆ ಬಂದೆರಗುವ
ನಿಟಿಲಾಕ್ಷನ ಶತ್ರು ಹಯವ
ಕುಟಿಲ ಕುಂತಲೆಯರದ್ದರಿಸಲವರ ತೊಂಡೆವ
ಣ್ಣಟಿಗೆ ಪಣ್ಣೆಂದೆರಗಿದುವು ೪೫

ಚುರುಕಾಗಿ ಕೊಂಬೆಯಿಂದ ಮತ್ತೆ ಬಂದೆರಗುವ ಗಿಳಿಗಳನ್ನು ಕಾವಲುಗಾತಿಯರು ಅದ್ದರಿಸಿದರೆ, ಅವರ ತೊಂಡೆವಣ್ತುಟಿಗೆ ಹಣ್ಣೆಂದು ಎರಗಿದವು.

ನೆತ್ತಿಯೊಳು ಪಾರುವ ಗಿಳಿವಿಂಡು ಪಚ್ಚೆಯ
ಸತ್ತಿಗೆಯಂತೆ ಮಂಡಲಿಸೆ
ಮತ್ತಕಾಶಿನಿಯರ ದಿಟ್ಟಿ ಶಂಖದ ಕಾವ
ತೆತ್ತಿಸಿದಂತೆ ಶೋಭಿಸಿತು ೪೬

ಹಸಿರು ಬಣ್ಣದ ಗಿಳಿಗಳು ನೆತ್ತಿಯ ಮೇಲೆ ಪಚ್ಚೆಯಛತ್ರಿಯಂತೆ ಮಂಡಲಿಸುವುದನ್ನು ನೆಟ್ಟ ಕಣ್ಣಿನಿಂದ ನೋಡತೊಡಗಿದ ಮತ್ತಕಾಶಿನಿಯರ(ಸುಂದರಿಯರ) ದಿಟ್ಟಿ ಶಂಖದ ಕಾವು ತೆತ್ತಿಸಿದಂತೆ ಇತ್ತು.

ಕಂದುಗೊರಲನೊಳು ಕಾದಲ್ಕೆ ಸ್ಮರ ತನ್ನ
ದೊಂದು ಬಿಲ್ಲದು ಸಾಲದೆಂದು
ತಂದಿಲ್ಲಿ ಬೆಳೆಸಿದನೆಂಬಂತೆ ಬೆಳ್ಗಬ್ಬು
ಸಂದಣಿಸಿತ್ತು ಬನಬನದಿ ೪೭

ಈಶ್ವರನೊಡನೆ ಹೋರಾಡಲು ತನ್ನದೊಂದು ಬಿಲ್ಲು ಸಾಲದೆಂದು ಮನ್ಮಥ ತಂದು ಬೆಳೆಸಿದನೆಂಬಂತೆ ಬಿಳಿ ಕಬ್ಬು ಬನಬನದಲ್ಲಿ ಸಂದಣಿಸಿತ್ತು.

ಆಗರದೊಳು ರಸದಾಳಿ ಬಿರುಗಾಳಿಯಿಂ
ದಾಗಿ ಒಂದರೊಳಗೊಂದು ಹಳಚಿ
ಮೇಗೋಳೊಡೆದಿನಿರಸದ ಸರಿಯೊಳು ಕ್ಷೀರ
ಸಾಗರ ತುಂಬಿದಂತಿಹುದು ೪೮

ಆಗರ(ತೋಟ)ದಲ್ಲಿ ರಸದಾಳಿ ಕಬ್ಬು ಬಿರುಗಾಳಿಯಿಂದಾಗಿ ಒಂದರೊಳಗೊಂದು ಅಪ್ಪಳಿಸಿ ಕಬ್ಬಿನ ಜಲ್ಲೆಯೊಡೆದು ಇನಿರಸದ ಝರಿಯಿಂದಾಗಿ ಕ್ಷೀರ (ಕಬ್ಬಿನ ಹಾಲಿನ) ಸಾಗರ ತುಂಬಿದಂತಿಹುದು.

ಮಿಂಡಿವೆಂಗಳನಗಲಿದ ಚದುರರು ತಮ್ಮ
ದಂಡಿಪ ಸ್ಮರಚಾಪವೆಂದು

ಭಂಡಿ ಪೆರ್ಗುಡುಗೋಲುಗಳಿಂದಲಡಿಗಿಕ್ಕಿ
ಖಂಡಿಸುವರು ಕಬ್ಬುಗಳನು ೪೯

ಹದಿಹರೆಯದ ಪತ್ನಿಯರಿಂದ ದೂರವಿರುವ ಚದುರರು ತಮ್ಮನ್ನು ದಂಡಿಸುವ ಮನ್ಮಥನ ಬಿಲ್ಲಿದೆಂದು ಕಬ್ಬಿನ ಬುಡಗಳನ್ನು ಕೆಳಣಕ್ಕಿ ಭಂಡಿ(ದೊಡ್ಡ) ಕುಡುಗೋಲುಗಳಿಂದ ಖಂಡಿಸುವರು.

ಬಾಲೆಯ ಕೊರಳು ಹೊಂಗೋರೆ ಸುಸ್ವರ ಕರಣೆ
ಲೀಲಾ ಗಾತ್ರ ಅಚ್ಚುಮಣೆ
ಪಾಲಿರ್ದ ಕುಚ ಕೊಪ್ಪರಿಗೆ ನಿಟ್ಟೆಸಳ್ಗ
ಣ್ಣಾಲೆಯ ಮನೆಗಳೊಪ್ಪಿದವು ೫೦

ತರುಣಿಯ ಕೊರಳು ಹೊಂಗೋರೆ (ಬಂಗಾರದ ಕಾವು ಇರುವ ಗೋರುಮಣೆ) ಸುಸ್ವರ(ನಾಲಗೆ) ಕರಣೆ, ಲೀಲಾಗಾತ್ರ (ಸುಂದರ ದೇಹ) ಅಚ್ಚುಮಣೆ, ಹಾಲಿರುವ ಕುಚ(ಮೊಲೆ) ಕೊಪ್ಪರಿಗೆ, ನೀಳ ಎಸಳುಗಣ್ಣು ಆಲೆ(ಕಬ್ಬು ಅರೆಯುವ ಯಂತ್ರ, ಗಾಣ) ಮನೆಗಳು ಕಂಗೊಳಿಸಿದುವು.

ಮುದ್ದು ನಾಲುಕು ಮೂಲೆಯಾದಂತೆ ತನಿಬೆಲ್ಲ
ದುದ್ದಕ್ಕೆ ವರ ಪಂಚ ಧಾರೆ
ಬಿದ್ದಿಹುದಾಲೆಯ ಮನೆಮನೆಗಳ ಮುಂದೆ
ಹೆದ್ದೊರೆ ಮಳಲೊಟ್ಟಿಲಂತೆ ೫೧

ಚೆಲುವು ನಾಲ್ಕು ಮೂಲೆಯಾದಂತೆ ತನಿಬೆಲ್ಲದುದ್ದಕೆ ಪಂಚಧಾರೆ(ಸಕ್ಕರೆ) ಬಿದ್ದಿಹುದು ಆಲೆಯ ಮನೆಗಳ ಮುಂದೆ ದೊಡ್ಡ ತೊರೆಮರಳ ರಾಶಿಯಂತೆ.

ಅಂದೊಮ್ಮೆ ವರಾಹಾವತಾರದಲಿ ಗೋ
ವಿಂದ ತನ್ನಯ ಪೀತಾಂಬರವ
ಕುಂದದೆ ಭೂಮಿಗೆ ಪೊದಿಸಿದಂತಿರುವುದು
ಗಂಧಶಾಲಿಯ ವನ ಕಳಿತು ೫೨

ಶ್ರೀಹರಿ ಹಿಂದೊಮ್ಮೆ ವರಾಹಾವತಾರದಲ್ಲಿ ತನ್ನ ಪೀತಾಂಬರವನ್ನು ಭೂಮಿಗೆ ಹೊದಿಸಿದ್ದನೆಂಬಂತೆ ಭಾಸವಾಗುವುದು – ಕಳಿತು ಹೊಂಬಣ್ಣಕ್ಕೆ ತಿರುಗಿದ ಭತ್ತದ ಗದ್ದೆ.

ದಾಳಿಂಬ ಖರ್ಜೂರ ದ್ರಾಕ್ಷಿ ಸೌರಭವ
ತಾಳಿದನೇಕ ಪೂದೋಟ
ಕೇಳಿಯ ವನಗಳಿದ್ದವು ಪುರ ಲಕ್ಷ್ಮಿಯ
ತಾಳಿಯ ಮರಕತದಂತೆ ॥೩॥

ದಾಳಿಂಬ, ಖರ್ಜೂರ, ದ್ರಾಕ್ಷಿ, ಸುವಾಸನಾಯುಕ್ತ ಹೂದೋಟ, ತೆಂಗಿನ ತೋಟಗಳಿದ್ದವು – ಪುರಲಕ್ಷ್ಮಿಯ ತಾಳಿಯ ಮರಕತ (ಪಚ್ಚೆ)ದಂತೆ.

ಪಲಸು ನೇರಿಲು ಚೂತ ಪಿಚುಮಂದ ನ್ಯಗ್ರೋಧ
ಚಲಪತ್ರ ಬಿಲ್ವಾಮಲಕ
ಲಲಿತಾಶೋಕ ಪುನ್ನಾಗ ಪಾದರಿ ಸಲೆ ಕೋ
ಮಲ ಸಾಲುಮರಗಳೊಪ್ಪಿದವು ॥೪॥

ಹಲಸು, ನೇರಿಲೆ, ಮಾವು, ಬೇವು, ಆಲ, ಅರಳಿ, ಬಿಲ್ವ, ನೆಲ್ಲಿ, ಅಶೋಕ, ಸುರಹೊನ್ನೆ, ಪಾದರಿ ಮೊದಲಾದ ಸಾಲು ಮರಗಳು ಕಂಗೊಳಿಸಿದವು.

ಹೊಕ್ಕರಣೆ ಹೊಂಗಳಸ ದೇಗುಲದ ಭೇ
ದಕ್ಕರಿಗರ ಜಪಶಾಲೆ
ಸೊಕ್ಕಾನೆ ಕುದುರೆಯ ವೈಹಾಳಿಯಂಕಣ
ದಿಕ್ಕೆ ಕಣ್ಮನರೆ ರಂಜಿಸಿತು ॥೫॥

ಪುಷ್ಕರಣಿ(ಕೊಳ), ಹೊಂಗಳಸದ ದೇಗುಲಗಳ ಸಾಲು, ಭೇದವಾದಿ ಪಂಡಿತರ ಜಪಶಾಲೆ, ಮದಿಸಿದ ಆನೆ ಕುದುರೆಗಳ ವೈಹಾಳಿಯಂಕಣ(ಸವಾರಿಯ ಪ್ರದೇಶ) ಕಣ್ಮನಕೆ ರಂಜಿಸಿತು.

ಶ್ರುತಿ ಶಾಸ್ತ್ರಾಗಮ ಮುಪನಿಷತ್ಪೌರಾಣ
ಸ್ತುತಿವೆತ್ತು ಹರಿಯ ನಿಟ್ಟಿಸಲು
ಅತಿ ಬಕುತಿಯಲಿ ಬಂದಂತೆ ರಂಜಿಸಿತು ಗೋ
ಮತಿ ನದಿ ದ್ವಾರಕಾ ಪುರದಿ ॥೬॥

ವೇದ ಶಾಸ್ತ್ರಾಗಮ ಉಪನಿಷತ್ತು ಪುರಾಣ ಸ್ತುತಿಸುತ್ತ ಶ್ರೀಹರಿಯನ್ನು ನಿಟ್ಟಿಸಲು(ನೋಡಲು) ಅತಿ ಭಕ್ತಿಯಿಂದ ಬಂದಂತೆ ದ್ವಾರಕಾಪುರದಲ್ಲಿ ಗೋಮತಿ ನದಿ ರಂಜಿಸಿತು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆವೆತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೫೭

'ವರ ಮೋಹನ ತರಂಗಿಣಿ' ಎಂಬ ಈ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಲಕ್ಷ್ಮೀಕಾಂತ ಬಿಡದೆ ಸೂರ್ಯ ಚಂದ್ರರಿರುವ ತನಕ ಸತ್‌ಕೃಪೆಯಿಂದ ರಕ್ಷಿಸುವನು.

## ೩. ದ್ವಾರಕಾಪುರ ವರ್ಣನೆ

ಮಾಣದರಸುವಂತೆ ಮಾಡದಿರಧಿಕ ಸು
ಜಾಣರ ಜ್ಞಾನ ಲೋಚನಕೆ
ಕಾಣಬರ್ಪಂತೆ ಕನ್ನಡದಲಿ ನಾರಾ
ಯಣನ ಸತ್ಕೃಪೆಯ ವಿಸ್ತರಿಸು ೧

ಬಿಡದೆ ಹುಡುಕುವಂತೆ ಮಾಡದಿರು; ಜಾಣರ ಜ್ಞಾನ ಲೋಚನಕೆ ಕಾಣುವಂತೆ ಕನ್ನಡದಲ್ಲಿ ನಾರಾಯಣನ ಸತ್ಕೃಪೆಯ ವಿಸ್ತರಿಸು.

ಸುಮನಸದಿಂದೆ ಕೇಳಾದೊಡೆ ಸುಜ್ಞಾನ
ಪ್ರಮದೆ ನಿನ್ನಯ ಕರ್ಣಗಳಿಗೆ
ಅಮರಿದ ಮಣಿತಾಟಂಕವೆನಲು ಪೇಳುವೆ
ರಮಣೀಯವಾದ ಮೆಲ್ಲತೆಯ ೨

ಸುಜ್ಞಾನ ಪ್ರಮದೆ, ಸುಮನಸ್ಸಿನಿಂದ ಕೇಳು, ನಿನ್ನ ಕಿವಿಗಳಿಗೆ ಅಮರಿಕೊಂಡ ಮಣಿತಾಟಂಕ(ರತ್ನದ ಕರ್ಣಾಭರಣ)ದಂತೆ ಹೇಳುವೆನು, ಸುಂದರವಾದ ಶ್ರೇಷ್ಠ ಕಥೆಯನ್ನು

ದ್ವಾರಾವತಿಯ ಪಟ್ಟಣದ ಸಂಪೂರ್ಣ ಶೃಂ
ಗಾರವ ಪೇಳ್ವನೆಂದೆನಲು
ನೀರಜಭವಗರಿದಾನೇನು ಗಹನ ವಿ
ಸ್ತಾರದಿ ಪೇಳ್ವೆ ಬಲ್ಲನಿತ ೩

ದ್ವಾರಾವತಿ ಪಟ್ಟಣದ ಸಂಪೂರ್ಣ ಶೃಂಗಾರವನ್ನು ವರ್ಣಿಸಲು ಬ್ರಹ್ಮನಿಗೆ ಅಸಾಧ್ಯ. ನಾನೇನು ಗಹನ? ತಿಳಿದಷ್ಟನ್ನು ವಿವರವಾಗಿ ಹೇಳುವೆನು.

ಜಲಗ್ಯೆಯ ಶರಭ ಶಾರ್ದೂಲ ಕಂಠೀರವ
ನೆಲಜೇಷ್ಠ ನಹುಸಿಯ ಭೂತ

ಕೆಲ ಮೃಗ ಪಕ್ಷಿಯಿಂದೆಸೆದಿತ್ತು ರೈವತಾ
ಚಲ ದ್ವಾರಕಿಯ ಬಾಹ್ಯದಲಿ ೪

ಬಾತುಕೋಳಿ, ಶರಭ, ಹುಲಿ, ಸಿಂಹ, ನೆಲಜೇಷ್ಠ, ನಹುಸಿಯಭೂತ ಮೊದಲಾದ ಮೃಗಪಕ್ಷಿಗಳಿಂದ ದ್ವಾರಕಿಯ ಹೊರಗಿರುವ ರೈವತ ಪರ್ವತ ರಂಜಿಸಿತು.

ಮಗಳ ಗಂಡನ ಕೂಡೆ ಮಹದಾದಿ ದೈತ್ಯರು
ಜಗಳಕೆ ಬಪ್ಪರೆಂದೆನುತ
ನೆಗಳಾನೆ ಮೀನ್ಗಳನೊಳಗೊಂಡು ಬಂದು ಪೇ
ರಗಳಾದುದಬ್ಧಿ ದ್ವಾರಕೆಗೆ ೫

ಮಗಳ ಗಂಡನ(ಲಕ್ಷ್ಮೀಶನ)ಜೊತೆ ರಾಕ್ಷಸರು ಕದನಕ್ಕೆ ಬರುವರೆಂದು ಮೊಸಳೆ, ಆನೆ, ಮೀನುಗಳನ್ನು ಒಳಗೊಂಡು ಬಂದು ಸಮುದ್ರ ದ್ವಾರಕಿಗೆ ಪೇರಗಳು (ದೊಡ್ಡ ಕಂದಕ) ಆಯಿತು.

ಸುತ್ತಣ ಮಣಿಗಲ್ಲ ಹೊಂಗೋಂಟೆ ನೋಡಲು
ತತ್ತಳಗೈವುವಕ್ಷಿಗಳು
ಕೊತ್ತಳ ನಿಚಯವು ಕೊಳದ ಪರಿಖೆಯರಿಗಳ
ಹೆತ್ತಳ ಗಂಡನಂತಿಹುದು ೬

ಸುತ್ತಲಿನ ರತ್ನಗಲ್ಲಿನ ಹೊಂಗೋಂಟೆ ನೋಡಲು ಅಕ್ಷಿಗಳು ಚಡಪಡಿಸುವುವು. ಕೊತ್ತಳದ (ಕೋಟೆಯ ಬುರುಜು) ಸಮೂಹ, ಕೊಳದ ಕಂದಕ ಶತ್ರುಗಳನ್ನು ಹೆತ್ತವಳ ಗಂಡನಂತಿರುವುದು.

ಮೊನೆಗಾರ ಖಳರ ಖಂಡಿಸಲೆಂದು ವಸುದೇವ
ತನಯ ಚಕ್ರಕೆ ವಿಶ್ವರೂಪ
ವಿನಯದಿ ಕೊಟ್ಟನೆಂಬಂದದಿ ಕೋಟೆಯ
ತೆನೆಗಳಿದ್ದುವು ಸುತ್ತಬಳಸಿ ೭

ದುಷ್ಟ ಸೈನಿಕರನ್ನು ತುಂಡರಿಸಲೆಂದು ಕೃಷ್ಣ ತನ್ನ ಚಕ್ರಕ್ಕೆ ವಿಶ್ವರೂಪ ಕೊಟ್ಟನೆಂಬಂತೆ ಕೋಟೆಯ ತೆನೆ(ಮೇಲ್ಭಾಗ) ಗಳಿದ್ದವು ಸುತ್ತ ಬಳಸಿ.

ದೇಶಾಧಿಪ ಕೃಷ್ಣರಾಯಂಗೆ ಖಳರಿಂದ
ಮೋಸವ ಬರಗೊಡೆನೆನ್ನುತ
ಶೇಷ ಮಂಡಳಿಸಿದಂದದಿ ವಜ್ರದಾಳ್ವೇರಿ
ಲೇಸಾದುದೇವಣ್ಣಿಸುವೆನು ೮

ದೇಶದೊಡೆಯ ಕೃಷ್ಣರಾಯನಿಗೆ ದುಷ್ಟರಿಂದ ಮೋಸವಾಗಬಾರದೆಂದು ಹಾವು ವರ್ತುಲವಾಗಿ ಮಂಡಲ ಹುಯ್ದು ಮಲಗುವಂತೆ ಸುತ್ತಲೂ ಕಂದಕವಿರುವ ವಜ್ರದ ರಕ್ಷಣಾ ಗೋಡೆ ಲೇಸಿನ ಪ್ರತಿರೂಪದಂತಿರುವುದನ್ನು ಹೇಗೆ ವರ್ಣಿಸಲಿ?

ಬಲಿನಂದನ ಮುಖ್ಯ ಖಳರೆಂಬ ಮೃಗಕುಲ
ಚಲಿಸಿ ತನ್ನಿದಿರ್ವರೆ ಪಿಡಿದು
ಛಲದಿ ಹೊಯ್ವೆನೆಂಬ ರೌದ್ರದಿಂ ಕೋಟೆಯ
ಹುಲಿಮೊಗ ಕಣ್ಗೆ ರಂಜಿಸಿತು ೯

ಬಲಿನಂದನ(ಬಾಣಾಸುರ) ಮೊದಲಾದ ದುಷ್ಟಮೃಗಗಳು ತನ್ನ ಎದುರು ಬಂದರೆ ಅವುಗಳನ್ನು ಬಗ್ಗುಬಡಿಯುವೆನೆಂದು ಕೋಟೆ ಹೆಬ್ಬಾಗಿಲ ಭಯಾನಕ ಹುಲಿಮೊಗ ಕಣ್ಣಿಗೆ ರಾಚುವಂತಿತ್ತು.

ಮೀಟಾದ ರಮ್ಯರತ್ನಂಗಳ ಸೊನ್ನಾರ
ಮಾಟದ ಬಗೆಬಗೆ ಬಂಧಗಳ
ಕೂಟಸ್ಥವಾದ ಹೊನ್ನಗಸೆಯ ತಳಿತ ಕ
ವಾಟಗಳಿರ್ದುವೇನೆಂಬೆ ೧೦

ಉತ್ತಮವಾದ ಸುಂದರ ರತ್ನಗಳ, ಚಿನ್ನದ ಗೀಲೀಟಿನ ನಾನಾ ಬಗೆಯ ಬಂಧಗಳ ಚಿನ್ನದ ಹೆಬ್ಬಾಗಿಲ ಕದಗಳಿದ್ದವು.

ಸೋಮಸೂರಿಯ ವೀಧಿಗಳಿಕ್ಕೆಲದಲ್ಲಿ
ಹೇಮನಿರ್ಮಿತ ಸೌಧದೋಳಿ
ರಾಮಣೀಯಕ ರತ್ನಕಳಸದಂಗಡಿಯಿರ್ದು
ವಾ ಮಹಾ ದ್ವಾರಕಾಪುರದಿ ೧೧

ಚಂದ್ರ ಬೀದಿ ಸೂರ್ಯ ಬೀದಿಗಳ ಎರಡೂ ಕಡೆ ಚಿನ್ನದಿಂದ ನಿರ್ಮಿತವಾದ ಸೌಧಗಳ ಸಮೂಹ ಇದ್ದ ಹಾಗೆ ರಮಣೀಯವಾದ ರತ್ನಕಳಸದಂಗಡಿಗಳು ಇದ್ದವು, ಆ ಮಹಾ ದ್ವಾರಕಾಪುರದಲ್ಲಿ.

ರಾಗರಸದೋಳನವರತ ಕಾದಲರ ಸಂ
ಭೋಗಕ್ಕೆ ಸಮವಾಗಲೆನುತ
ಆಗಮಜ್ಞರು ಹಂಚಿಕೊಟ್ಟಂತೆ ಪೋಡಿಯ
ಪೂಗದಂಗಡಿಗಳೊಪ್ಪಿದವು ೧೨

ಪ್ರೀತಿ ಪ್ರೇಮದ ರಸದೋಕುಳಿಯಲ್ಲಿ ಸದಾ ಪ್ರಿಯಪ್ರೇಯಸಿಯರು ಸಂಭೋಗನಿರತರಾಗಲೆನುತ ಶಾಸ್ತ್ರಜ್ಞರು ಹಂಚಿ ಕೊಟ್ಟಂತೆ ಪೋಡಿಯಡಕೆಯ ಅಂಗಡಿಗಳಿದ್ದವು.

ಕಲೆಯರಿದಮಲ ಭಾವಜ್ಞರು ತಮ್ಮ ಕಾ
ದಲೆಯರ ಕರೆವ ಸನ್ನೆಯನು
ಸಲೆ ಪರಿಗ್ರಹಿಸಿ ಶೋಭಿಸುತಿರ್ಪ ಲಲಿತ ಬೆ
ಳ್ದೆಲೆಯಂಗಡಿಗಳೊಪ್ಪಿದವು ೧೩

ಕಲೆಯನ್ನು ಅರಿತ ನಿರ್ಮಲ ಭಾವಜ್ಞರು ತಮ್ಮ ಪ್ರೇಯಸಿಯರನ್ನು ಕರೆವ ಸನ್ನೆಯನ್ನು ಗ್ರಹಿಸಿ ಶೋಭಿಸುತ್ತಿರುವ ಬಿಳಿಎಲೆ ಅಂಗಡಿಗಳೊಪ್ಪಿದವು.

ಸಡಿಲಿದ ಮುಡಿ ಬೆಮರ್ವನಿಗಳು ತೀವಿ ತೊ
ಟ್ಟಿಡುವಾಸ್ಯ ಅಲುಗುವ ಕುಚದಿ
ಕಡು ಸೊಬಗಾಂತು ಗಂಧವ ಮಗಳ್ಚುವ ಹೆಂಗ
ಳಡಸಿದಂಗಡಿಗಳೊಪ್ಪಿದುವು ೧೪

ಸಡಿಲಗೊಂಡ ಮುಡಿ, ಬೆವರುಹನಿ ತುಂಬಿ ತೊಟ್ಟಿಕ್ಕುವ ಮುಖ, ಅಲುಗಾಡುವ ಮೊಲೆಗಳಿಂದ ಹೆಚ್ಚು ಸೊಬಗನ್ನು ಹೊಂದಿದ ಗಂಧವನ್ನು ತೇಯುವ ಹೆಣ್ಣುಗಳಿಂದ ಅಂಗಡಿಗಳು ಒಪ್ಪಿದವು.

ಸುರಗಿ ಸೇವಂತಿಗೆ ಕುಂದ ಮಂದಾರ ಪಾ
ದರಿ ಕಂಚಿ ಕಣಗಿಲೆ ದವನ
ಬಿರಿದ ಕೆಂಜಾಜಿ ನಾನಾ ಪುಷ್ಪದಂಗಡಿ
ಪರುಠವಿಸಿರ್ದುದೇನೆಂಬೆ ೧೫

ಸುರಹೊನ್ನೆ, ಸೇವಂತಿಗೆ ಕುಂದ, (ಕೋಲುಮಲ್ಲಿಗೆ), ಮಂದಾರ, ವಾದರಿ, ಕಂಚಿ, ಕಣಗಿಲೆ, ದವನ, ಕೆಂಜಾಜಿ ಮೊದಲಾದ ನಾನಾ ಪುಷ್ಪಗಳಂಗಡಿಗಳು ಹರಡಿದ್ದವು.

ಇಡಿಕಿರಿದಿಹ ಪುಷ್ಪದೊಳು ಗಂಧವಿರಲಾ
ರಡಿ ತುಡುಕುವುದೆಂದು ನೆಲದಿ
ನಿಡುವೇರಿನೊಳು ಪರಿಮಳವಾಂತು ರಂಜಿಪ
ಮುಡಿವಾಳವಸರವೊಪ್ಪಿದುವು ೧೬

ತುಂಬಿರುವ ಪುಷ್ಪಗಳಲ್ಲಿ ಗಂಧವಿರಲು ಆರಡಿ(ದುಂಬಿ) ತುಡುಕುವುದೆಂದು ನೆಲದೊಳಗೆ ನಿಡಿದಾದ ಬೇರಿನಲ್ಲಿ ಪರಿಮಳ ಹೊಂದಿ ರಂಜಿಸುವ ಮುಡಿವಾಳ ದಂಗಡಿಗಳು ಒಪ್ಪಿದವು.

ಮಲ್ಲಿಗೆಯಲರ್ದಂಡೆವಿಡಿದು ಬಂದೆರಗುವ
ಜಲ್ಲಿದುಂಬಿಗೆ ಬೆರ್ಚಿನಿಂದು
ಸೊಲ್ಲಿಪ ಪೂಮಾಲೆಗಾರ್ತಿ ಕಾವನ ಕಬ್ಬು
ವಿಲ್ಲಿನಂತಿರ್ದಳೇನೆಂಬೆ ೧೭

ಮಲ್ಲಿಗೆ ಹೂವಿನ ದಂಡೆ ಹಿಡಿದಾಗ ಬಂದೆರಗುವ ಹಿಂಡುದುಂಬಿಗಳಿಗೆ ಬೆಚ್ಚಿನಿಂದು, ಸೊಲ್ಲೆತ್ತುವ ಹೂಮಾಲೆಗಾರ್ತಿ ಕಾಮನ ಕೈಯ ಕಬ್ಬುವಿಲ್ಲಿನಂತಿದ್ದಳು.

ಭೋಜಿಪ ಕರ್ಪೂರ ಕಸ್ತೂರಿ ಚೂರ್ಣ ಜ
ವಾಜಿ ಪುನುಗು ಬಹು ತೈಲ
ಸೋಜಿಗವಡೆದ ಸುಗಂಧದಂಗಡಿಗಳು
ರಾಜಿಸುತಿರ್ದುವಿಕ್ಕೆಲದಿ ೧೮

ಭೋಗಿಸುವ ಕರ್ಪೂರ, ಕಸ್ತೂರಿ, ಚೂರ್ಣ, ಜವಾಜಿ, ಪುನುಗು ನಾನಾ ತೈಲ ಮೊದಲಾದ ಸೋಜಿಗಗೊಳಿಸುವ ಸುಗಂಧದಂಗಡಿಗಳು ಎರಡೂ ಕಡೆ ರಾಜಿಸುತ್ತಿದ್ದವು.

ಹೆಸರುವಡೆದ ದಿವ್ಯಮೂಲಿಕೆ ಪಾಷಾಣ
ರಸದ್ರವ್ಯ ಸಕಲ ಸಂಭರವ
ಬೆಸಗೊಂಡು ಪಡೆಯಲು ತೂಗುವ ಗಂದಿಗೆ
ವಸರಗಳಿರ್ದುವಿಕ್ಕೆಲದಿ ೧೯

ಹೆಸರುವಾಸಿಯಾದ ದಿವ್ಯಮೂಲಿಕೆ, ಪಾಷಾಣ ರಸದ್ರವ್ಯ, ಸಕಲ ಸಾಮಗ್ರಿಗಳನ್ನು ವಿಚಾರಿಸಿ ಪಡೆಯಲು ಗಂದಿಗೆ ಅಂಗಡಿಗಳಿದ್ದವು.

ಉತ್ತುತ್ತೆ ಖರ್ಜೂರ ದ್ರಾಕ್ಷಿ ಸಕ್ಕರೆ ಬೆಲ್ಲ
ಮೆತ್ತೈಸಿದ ಕಾಯಭಾಗ
ಬತ್ತದೆ ಕಳಿತ ಸಮಸ್ತ ಪಣ್ಣಸರಂಗ
ಳಿತ್ತೆರದಲಿ ರಾಜಿಸುತಿಹವು ೨೦

ಉತ್ತುತ್ತೆ, ಖರ್ಜೂರ, ದ್ರಾಕ್ಷಿ, ಸಕ್ಕರೆ, ಬೆಲ್ಲ, ಮೆದುಗೊಳಿಸಿದ ಕಾಯಭಾಗ, ಬತ್ತದ ಕಳಿತ ಹಣ್ಣಿನಂಗಡಿಗಳು ಎರಡೂ ಕಡೆ ರಾಜಿಸುತ್ತಿದ್ದವು.

ಅಂಗಡಿಯೊಳು ಗೋದಿ ಕಡಲೆ ನಾನಾ ಧಾ
ನ್ಯಂಗಳ ರಾಶಿರಾಶಿಗಳು
ಮುಂಗಡೆಯಲ್ಲಿ ಚಿಪ್ಪಿಗ ಚಿತ್ರಗೆಲಸಿ
ಯಂಗಡಿಸಾಲ್ಗಳೊಪ್ಪಿದುವು ೨೧

ಒಂದು ಕಡೆ ಗೋದಿ ಕಡಲೆ ನಾನಾ ಧಾನ್ಯಗಳ ರಾಶಿರಾಶಿ ಅಂಗಡಿಗಳಿದ್ದರೆ, ಮುಂದುಗಡೆ ಚಿತ್ರಕಾರರ, ಚಿಪ್ಪಿಗರ (ಸಿಂಪಿಗ=ದರ್ಜಿ) ಅಂಗಡಿ ಸಾಲುಗಳು ಇದ್ದವು.

ಕಂಚುಗಾರರು ಕೈದುಗಾರರು ಹೊಳೆವ ಹೊ
ಮ್ಮಂಚಗಾರರು ಶಿಲ್ಪಿಗರು
ಸಂಚಿಗಾರರು ಸದ್ವಿದ್ಯಾಧಿಕರಾದ
ಪಂಚಾಳರಿರ್ದರಿಕ್ಕೆಲದಿ ೨೨

ಕಂಚುಗಾರರು, ಕೈದು(ಆಯುಧ)ಗಾರರು, ಹೊಮ್ಮಂಚಗಾರರು, ಶಿಲ್ಪಿಗಳು, ಸಂಚಿ(ಚೀಲ)ಗಾರರು, ಸದ್ವಿದ್ಯ ಶ್ರೇಷ್ಠರಾದ ಪಾಂಚಾಳರಿದ್ದರು, ಎರಡೂ ಕಡೆಯಲ್ಲಿ.

ಕಳೆವೆತ್ತ ವಾರನಾರಿಯರ ಕನ್ನಿಕೆಯರ
ಮೊಳೆಮೊಲೆಗಳ ನೋಡಿ ನಗುತ
ಎಳೆವೆರಲ್ಗಳ ಚಿಟುಕೊತ್ತಿ ಬಳೆದೊಡಿಸುವ
ಬಳೆಗಾರರಿರ್ದರಿಕ್ಕೆಲದಿ ೨೩

ವೇಶ್ಯಯರ ಕಾಂತಿಯುಕ್ತ ಕನ್ಯೆಯರ ಮೊಳೆ (ಚಿಗುರು) ಮೊಲೆಗಳನ್ನು ನೋಡಿ ನಗುನಗುತ್ತಾ ಎಳೆಬೆರಳುಗಳ ಚಿಟುಕು ತೆಗೆದು ಬಳೆ ತೊಡಿಸುವ ಬಳೆಗಾರರಿದ್ದರು.

ಹೊಳೆವ ದೀಪ್ತಿಯ ಪಟ್ಟೆ ಝಲ್ಲಿ ಬಹುವರ್ಣ

ತಳೆದ ಚಿತ್ರಾಂಬರನಿಚಯ
ಸೆಳೆವ ದೇವಾಂಗವಸ್ತ್ರದೊಟ್ಟಿಲ ಸಾಲು
ಮಳಿಗೆಗಳಿರ್ದುವಿಕ್ಕೆಲದಿ ೨೪

ಹೊಳೆವಕಾಂತಿಯ ರೇಶ್ಮೆ ಕುಚ್ಚು, ಹಲವು ಬಣ್ಣದ ಚಿತ್ರಗಳುಳ್ಳ ಬಟ್ಟೆಯ ಸಮೂಹ, ಕಣ್‌ಸೆಳೆವ ನೇಕಾರರ ವಸ್ತ್ರರಾಶಿಯ ಸಾಲು ಮಳಿಗೆಗಳಿದ್ದವು ಎರಡೂ ಕಡೆ.

ತೋರಮಾಣಿಕ ಪಚ್ಚೆ ವಜ್ರ ವೈಢೂರ್ಯ
ನೇರಾಣಿ ಮೌಕ್ತಿಕ ನೀಲ
ರಾರಾಜಿಪ ರತ್ನಭೂಷಣಂಗೆಯ್ವ ಸೊ
ನ್ನಾರರಂಗಡಿಗಳೊಪ್ಪಿದವು ೨೫

ದಪ್ಪಗಿನ ರತ್ನ, ಪಚ್ಚೆ, ವಜ್ರ, ವೈಢೂರ್ಯ, ನೇರಾಣಿ(ಬಂಗಾರ), ಮುತ್ತು, ನೀಲ–ಬಗೆಬಗೆಯ ರತ್ನ ಭೂಷಣಗಳನ್ನು ಮಾಡುವ ಸೊನ್ನಾರರ(ಅಕ್ಕಸಾಲಿಗರ) ಅಂಗಡಿಗಳು ಒಪ್ಪಿದವು.

ಸಾಣೆಯ ಮೇಲೆ ರನ್ನಗಳಿಟ್ಟು ಮಸೆದೊಪ್ಪ
ಗಾಣಿಸಿ ಕೊಡುವ ತೆಂಟಿಗರು
ಆಣಿ ಮುತ್ತಿಗೆ ವೆಗ್ಗಳ ಬೆಲ್ಲೆಗಟ್ಟುವ
ವಾಣಿಜರಿರ್ದರಿಕ್ಕೆಲದಿ ೨೬

ಸಾಣಿ ಕಲ್ಲಿನ ಮೇಲೆ ರತ್ನಗಳನ್ನಿಟ್ಟು ಮಸೆದು ಒಪ್ಪವಿಡುವ ತೆಂಟಿಗರು (ಒಪ್ಪವಿಡುವವರು) ಹಾಗೂ ಶ್ರೇಷ್ಠ ಮುತ್ತಿಗೆ ಅಧಿಕ ಬೆಲೆಗಟ್ಟುವ ವಾಣಿಜರು(ಬಣಜಿಗರು) ಇಕ್ಕೆಲದಲ್ಲಿ ಇದ್ದರು.

ಚಪ್ಪನ್ನದೇಶದ ನಾಣೆಯಂಗಳ ನೋಟ
ತಪ್ಪದ ಚಪಲ ಸೆಟ್ಟಿಗಳು
ಒಪ್ಪವಡೆದು ಕುಳಿತಿರ್ದರು ಹಣಹೊನ್ನ
ಕುಪ್ಪೆಯ ಮುಂದಿಟ್ಟುಕೊಂಡು ೨೭

ಚಪ್ಪನ್ನ (ಐವತ್ತಾರು)ದೇಶದ ನಾಣ್ಯಗಳ ಮೇಲೆ ನಿಗ ಇಟ್ಟು ಕುಳಿತ ಚಪಲ ಸೆಟ್ಟಿಗಳು ಹಣಹೊನ್ನಿನ ಕುಪ್ಪೆ(ಗುಡ್ಡೆ, ರಾಶಿ)ಯನ್ನು ಮುಂದಿಟ್ಟುಕೊಂಡು ಒಪ್ಪವಾಗಿ ಕುಳಿತಿದ್ದರು.

ಒರೆಗಲ್ಲ ರಜವ ಮೇಣದೊಳೊತ್ತಿ ತೆಗೆದದ

ಕರಗಿಸಿ ಸುವರ್ಣ ಕಂಡುಗಳ
ನೆರೆದ ಯಾಚಕರಿಗೆ ಹಂಚಿ ಕುಡುವ ಚಿನ್ನ
ವರದರೊಪ್ಪಿದರು ಕಟ್ಟೆಯಲಿ ೨೮

ಒರೆ ಇಟ್ಟಾಗ ಕೆಳಗೆ ಉದುರುವ ರಜವನ್ನು ಮೇಣದಲ್ಲಿ ಒತ್ತಿ, ಅದನ್ನು ಕರಗಿಸಿ ಚಿನ್ನದ ಕಂಡುಗಳ (ತುಂಡುಗಳ)ನ್ನು ನೆರೆದ ಯಾಚಕರಿಗೆ ಹಂಚಿ ಕೊಡುವ ಚಿನ್ನವರದರು (ಚಿನ್ನದ ವ್ಯಾಪಾರಿಗಳು)ಕಟ್ಟೆಯಲ್ಲಿ ಬೀಡು ಬಿಟ್ಟಿದ್ದರು.

ಓರಂತೆ ಚದುರ ಹರದರು ಹಡಗಿನ ವ್ಯವ
ಹಾರದಲಿ ಗಳಿಸಿದ ಹಣವ
ಭಾರಿ ಸಂಖ್ಯೆಯಲಿ ತೂಗುವರು ಕೇಳ್ದರೆ ಕು
ಬೇರಂಗೆ ಕಡವ ಕೊಡುವರು ೨೯

ಚತುರ ಹರದರು(ಪರದರು=ವ್ಯಾಪಾರಿಗಳು) ಹಡಗಿನ ವ್ಯವಹಾರದಲ್ಲಿ ಗಳಿಸಿದ ಹಣವನ್ನು ಭಾರಿ ಸಂಖ್ಯೆಯಲ್ಲಿ ತೂಗುವರು, ಕೇಳಿದರೆ ಕುಬೇರನಿಗೆ ಕಡ(ಸಾಲ) ಕೊಡುವರು.

ತೋಟ ಕಾಡಾರಂಬ ಕರ್ಬುಗರ್ದೆಗಳೆಡೆ
ಯಾಟದ ವ್ಯವಸಾಯಗಾರರು
ಘೋಟಕ ರಥ ಹಸ್ತಿ ಪದಚರಾದಿಗಳ ಮಾ
ರಾಟಗಾರರುಗಳೊಪ್ಪಿದರು ೩೦

ಕಾಡಾರಂಬ(ಕೃಷಿ), ತೋಟ, ಕಬ್ಬುಗದ್ದೆಗಳ ವ್ಯವಸಾಯಗಾರರು, ಕುದುರೆ, ರಥ, ಆನೆ, ಪದಚರ(ಕಾಲ್ನಡೆ) ಗಳ ಮಾರಾಟಗಾರರು ವಿರಾಜಿಸಿದರು.

ತಾಳಮದ್ದಳೆ ಆವುಜ ಶ್ರುತಿ ಮುಖವೀಣೆ
ಸಾಳಂಗ ಶುದ್ಧ ಗಾನೆಯರ
ಮೇಳ ನಟ್ಟುವ ನಾನಾ ವಿದ್ಯಗಳ ಗಟ್ಟಿ
ವಾಳರ ಮನೆಗಳೊಪ್ಪಿದವು ೩೧

ತಾಳಮದ್ದಳೆ, ಆವುಜ(ಚರ್ಮವಾದ್ಯ)ಶ್ರುತಿ, ಮುಖವೀಣೆ, ಸಾಳಂಗ(ಮಿಶ್ರರಾಗ)ದ ಶುದ್ಧಗಾನೆಯರು ಇದ್ದ ಹಾಗೆಯೇ ನಟರ ನಾನಾ ವಿದ್ಯೆಗಳ ಗಟ್ಟಿವಾಳರ (ಗಂಧ ತೇಯುವವರ) ಮನೆಗಳು ಇದ್ದವು.

ರಾರಾಜಿಸುತಿಪ್ಪ ವನಿತೆಯರುಗಳ ಶ್ಯಂ
ಗಾರವ ಜರೆದು ಜಾಲಿಸುವ
ವಾರಾಂಗನೆಯರ ಮನೆಗಳೊಪ್ಪಿರ್ದುವಾ
ದ್ವಾರಾವತಿಯ ಬೀದಿಯಲಿ ೩೨

ರಾರಾಜಿಸುವ ವನಿತೆಯರ ಶೃಂಗಾರವನ್ನು ಜರೆದು ಜಾಲಾಡುವ ವೇಶ್ಯೆಯರ ಮನೆಗಳು ದ್ವಾರಾವತಿಯ ಬೀದಿಯಲ್ಲಿ ಇದ್ದವು.

ತೋರಿಯ ಭುಜವೆತ್ತ ಜಗಜಟ್ಟಿ ಮಸೆದ ಕ
ಠಾರಿ ಖಂಡೆಯದ ಮಾಸಾಳು
ಭೂರಿ ಭೂಪೋತ್ತಮರಾಲಯ ಬ್ರಾಹ್ಮಣ
ಗೇರಿ ಕಣ್ಮನಕೆ ರಂಜಿಸಿತು ೩೩

ದಪ್ಪಭುಜವುಳ್ಳ ಜಗಜಟ್ಟಿ ಮಸೆದ ಕಠಾರಿ ಕತ್ತಿಯ ಶೂರರು ದೊಡ್ಡ ಭೂಪೋತ್ತಮರ ಆಲಯಗಳು, ಹಾಗೂ ಬ್ರಾಹ್ಮಣ ಬೀದಿ ರಂಜಿಸಿತು.

ಹೊಂದಗಡಿನ ಹೊದಕೆಯ ಮನೆ ಬಹಳ ನೇ
ರಂದವಡೆದ ಪಡಸಾಲೆ
ಮುಂದೆಸೆಯಲಿ ತುಳಸಿಯ ಮಂಟಪದಿ ಗೋ
ವಿಂದನ ಕೀರ್ತಿಸುತ್ತಿಹದು ೩೪

ಹೊಂಬಣ್ಣದ ತಗಡಿನ ಹೊದಿಕೆಯುಳ್ಳ ಮನೆ, ನೇರಂದ(ನೈಜ ಅಂದ)ದ ಪಡಸಾಲೆ, ಮುಂದುಗಡೆ ತುಳಸಿಯ ಮಂಟಪದಲ್ಲಿ ಕುಳಿತು ಗೋವಿಂದನ ಕೊಂಡಾಡುವರು.

ಕೇಣವಿಲ್ಲದ ಕೇವಲ ಸಾತ್ವಿಕ ಪೌ
ರಾಣ ಶಾಸ್ತ್ರಾರ್ಥ ಗೋಷ್ಠಿಗಳು
ಗಾಣದಂಡಿಗೆಯ ಭಾಗವತ ಸಂಕೀರ್ತನೆ
ಮಾಣದೆ ಮಾಡುವರ್ಮುದದಿ ೩೫

ಕೇಣ(ಅಸೂಯೆ) ವಿಲ್ಲದೆ ಸಾತ್ವಿಕ ಪೌರಾಣ ಶಾಸ್ತ್ರಾರ್ಥ ಗೋಷ್ಠಿಗಳನ್ನು ಹಾಗೂ ದಂಡಿಗೆ ವಾದ್ಯ ನುಡಿಸುತ್ತ ಭಾಗವತ ಸಂಕೀರ್ತನೆಯ ಗಾಯನವನ್ನು ತಪ್ಪದೆ ಮಾಡುವರು ಹರ್ಷದಿಂದ.

ರಾಮಾನುಜ ವ್ಯಾಖ್ಯಾನ ಸುತತ್ವಗಳ
ಭೂಮಿ ಸುರರು ಸಂದಣಿಸಿ
ಸಾಮಾಮ್ನಾಯ ಘೋಷಣೆ ವಿಷ್ಣು ಪ್ರೀತ್ಯರ್ಥ
ಹೋಮವ ಮಾಳ್ಪರುತ್ಸವದಿ ೩೬

ರಾಮಾನುಜರು ವ್ಯಾಖ್ಯಾನಿಸಿರುವ ತತ್ತ್ವಗಳನ್ನು ಬ್ರಾಹ್ಮಣರು ಒಟ್ಟಿಗೆ ಸೇರಿ ಸಾಮವೇದ ಘೋಷಣೆಯೊಂದಿಗೆ, ವಿಷ್ಣು ಪ್ರೀತ್ಯರ್ಥವಾಗಿ, ಉತ್ಸವದಿಂದ ಹೋಮ ಮಾಡುವರು.

ಕೇಳುವ ಕೆಲವು ವಿದ್ಯಾರ್ಥಿಗಳಿಗೆ ವಸ್ತ್ರ
ಕೂಳು ವಿದ್ಯೆಯಿತ್ತು ಮುದದಿ
ಆಳುಗೊಳಿಸಿ ಪ್ರತಿದಿವಸದಿ ತರ್ವಾಯ
ಹೇಳುವ ವಿಬುಧರೊಪ್ಪಿದರು ೩೭

ಕೇಳುವ ಕೆಲವು ವಿದ್ಯಾರ್ಥಿಗಳಿಗೆ ಬಟ್ಟೆ, ಅನ್ನ, ವಿದ್ಯೆಗಳನ್ನು ನೀಡಿ, ರಕ್ಷಿಸಿ, ತರುವಾಯ ಪ್ರತಿದಿವಸ ಹೇಳುವ ವಿದ್ವಾಂಸರು ಒಪ್ಪಿದರು.

ಯಜನ ಯಾಜನವಧ್ಯಯನಾಧ್ಯಾಪನ
ನಿಜದಾನ ಪ್ರತಿಗ್ರಹಂಗಳನು
ಭುಜಚತುಷ್ಟಯನ ಪ್ರೀತಿಯಲಿ ಮಾಡುವ ಚೊಕ್ಕ
ದ್ವಿಜ ಮಹಾರಾಜರೊಪ್ಪಿದರು ೩೮

ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳನ್ನು ಶ್ರೀಹರಿಯ ಮೇಲಿನ ಪ್ರೀತಿಯಿಂದ ಮಾಡುವ 'ದ್ವಿಜಮಹಾರಾಜರು' ಒಪ್ಪಿದರು.

ಕರ್ಮಕಾಂಡವ ತಿರಸ್ಕರಿಸಿ ತತ್ವಾರ್ಥದ
ಮರ್ಮವನರಿದ ಪ್ರಾಜ್ಞೆಯರು
ಧರ್ಮಾರ್ಥ ಕಾಮಮೋಕ್ಷಂಗಳ ಪಡೆದರು
ಭರ್ಮಾಂಬರನ ಭಕ್ತಿಯಲಿ ೩೯

ಕರ್ಮಕಾಂಡವನ್ನು ತಿರಸ್ಕರಿಸಿ, ತತ್ತ್ವಾರ್ಥದ ಮರ್ಮವರಿತ ಪ್ರಾಜ್ಞೆಯರು ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಪೀತಾಂಬರನ (ಶ್ರೀಹರಿಯ) ಭಕ್ತಿಯಲ್ಲಿ ಪಡೆದರು.

ರವಿಸಿದ್ಧಾಂತ ಪಾಠಕರಷ್ಟ ಭಾಷಾ
ಕವಿ ಗಮಕಿಗಳು ತಾರ್ಕಿಕರು
ವಿವಿಧ ವಿದ್ವತ್ಸಭೆ ನೆರೆದುದು ಲಲಿತ ಭಾ
ರ್ಗವಿಯ ಕಾಂತನ ಪುರದೊಳಗೆ ೪೦

ಜ್ಯೋತಿಶಾಸ್ತ್ರ ಪಾಠಕರ, ಅಷ್ಟಭಾಷಾ ಕವಿ ಗಮಕಿಗಳ, ತಾರ್ಕಿಕರ ಬಗೆಬಗೆಯ ವಿದ್ವತ್ಸಭೆಗಳು ಲಕ್ಷ್ಮೀಕಾಂತನ ಪುರದೊಳಗೆ ನಡೆದವು.

ಸಣ್ಣವರುಗಳನೋದಿಸುತಿರ್ಪ ಕಸೆಯ ಕೋ
ಲಣ್ಣಗಳು ಚೌಪದ ಕವಿತೆ
ಬಣ್ಣಗಂಬಿಯ ಪುಸ್ತಕ ಲಿಖಿತಜ್ಞರು
ಕನ್ನಡಕವ ತಾಳ್ದಿಹರು ೪೧

ಸಣ್ಣ ಮಕ್ಕಳನ್ನು ಓದಿಸುವ ಕೆಂಪಚಿನ ಪಂಚೆಯ ಕಸೆಯ ಕೋಲಣ್ಣರು(ಕಸೆ ಅಂಗಿ ತೊಟ್ಟು ಬೆತ್ತ ಹಿಡಿದ ಅಧ್ಯಾಪಕರು)ಚೌಪದ ಕವಿತೆಯ ಪುಸ್ತಕ ಲಿಖಿತಜ್ಞರು ಕನ್ನಡಕವನ್ನು ಧರಿಸಿರುವರು.

ಏನ ಬಣ್ಣಿಸಬಪ್ಪುದು ಚಂದ್ರಕಾಂತ ಸೋ
ಪಾನ ಪುಷ್ಕರಿಣಿಗಳೊಳಗೆ
ನಾನಾ ದೇಶ ಭಾಷೆಗಳ ಬುಧರುಗಳನು
ಷ್ಠಾನವ ಮಾಳ್ಪ ಸಂಭ್ರಮವ ೪೨

ಚಂದ್ರಕಾಂತ ಶಿಲೆಯ ಮೆಟ್ಟಿಲುಗಳುಳ್ಳ ಪುಷ್ಕರಿಣಿಗಳೊಳಗೆ ನಾನಾ ದೇಶಭಾಷೆಗಳ ವಿದ್ವಾಂಸರು ಅನುಷ್ಠಾನ ಮಾಡುವ ಸಂಭ್ರಮವನ್ನು ಏನೆಂದು ವರ್ಣಿಸಲಿ?

ಹಚ್ಚಡ ಚಿಂದಿ ಕುಪ್ಪಸಗಳನಿಂಬಿಟ್ಟು
ಸ್ವಚ್ಛದ ಬೈರಾಸದೊಡನೆ
ಬೆಚ್ಚದೆ ಮಿಂದರು ಕೃಷ್ಣ ಗೋವಿಂದ ಸಿರಿ
ವಚ್ಚ ಲಾಂಛನ ಶರಣೆನುತೆ ೪೩

ಹಚ್ಚಡ, ತುಂಡುಬಟ್ಟೆ, ಕವಚಗಳನ್ನು ಇಟ್ಟು, ಬೈರಾಸ(ಉತ್ತರೀಯ)ದೊಡನೆ ಬೆಚ್ಚದೆ ಮಿಂದರು"ಕೃಷ್ಣ, ಗೋವಿಂದ, ಶ್ರೀವಚ್ಚ(ವತ್ಸ) ಲಾಂಛನ" ಎಂದು ಸ್ತುತಿಸಿದರು.

ಮುಳುಗಿದರಲಸದೆ ಪೊರಮಟ್ಟು ಪಟ್ಟಾ
ವಳಿದೋತ್ರ ಬೈರಾಸ ತಳೆದು
ತಳಿರುಗಾವಿಯನುಟ್ಟು ಜಪದ ಮಂಟಪದಿ
ಕುಳಿತರು ಬುಧರು ಸಂದಣಿಸಿ ೪೪

ಮುಳುಗಿದವರು ಆಲಸ್ಯ ಪಡದೆ ಲವಲವಿಕೆಯಿಂದ ಹೊರಬಂದು ರೇಷ್ಮೆಯ ಧೋತ್ರ, ಉತ್ತರೀಯ ಧರಿಸಿ, ತಳಿರುಬಣ್ಣದ ಕಾವಿವಸ್ತ್ರವನ್ನುಟ್ಟು, ವಿದ್ವಾಂಸರೆಲ್ಲ ಜಪದ ಮಂಟಪದಲ್ಲಿ ಕುಳಿತರು.

ಘನಪಟ್ಟೆನಾಮದೊಳು ತಿರುಚೂರ್ಣ ಗೋಪಿಚಂ
ದನ ಪಂಚಮುದ್ರೆಗಳೊಡನೆ
ಮನಗೊಂಬ ಭಸಿತ ಗಂಧಾಕ್ಷತೆಗಳ ಲಾಂ
ಛನ ಧರಿಸಿದರವನಿ ಸುರರು ೪೫

ಬ್ರಾಹ್ಮಣರು ಪಟ್ಟೆನಾಮ, ತಿರುಚೂರ್ಣ, ಗೋಪಿಚಂದನ, ಪಂಚಮುದ್ರೆ ಹಾಗೂ ಭಸಿತ ಗಂಧಾಕ್ಷತೆಗಳ ಲಾಂಛನ ಧರಿಸಿದರು.

ಚೇತನದಿ ವಿಷ್ಣುನಾಮ ಚಿಂತನೆಯಿಂ ಶುಚಿ
ರ್ಭೂತರಾದವನೀಸುರರು
ಗೀತಾರ್ಥವ ಪಠಿಸುತ್ತ ಬಂದರು ಬಹು ಪ್ರ
ಖ್ಯಾತ ಸತ್ರದ ಮನೆಗಳಿಗೆ ೪೬

ವಿಷ್ಣನಾಮ ಚಿಂತನೆಯಿಂದ ಶುಚಿರ್ಭೂತರಾದ ಬ್ರಾಹ್ಮಣರು ಗೀತಾರ್ಥವನ್ನು ಪಠಿಸುತ್ತ ಬಹು ಪ್ರಖ್ಯಾತವಾದ ಸತ್ರದ ಮನೆಗಳಿಗೆ ಬಂದರು.

ಹೇಮಸಂಪುಟದಿ ವಿಷ್ಣು ವಿಗ್ರಹ ಸಾಲಿ
ಗ್ರಾಮದೇವರ ಪೂಜೆಗೆಯ್ದು
ಪ್ರೇಮದಿ ನಿಖಿಲೋಪಚಾರವನರ್ಪಿಸಿ
ನೇಮವ ನಿರ್ವಹಿಸಿದರು ೪೭

ಚಿನ್ನದ ಭರಣಿಯಲ್ಲಿರುವ ವಿಷ್ಣುವಿಗ್ರಹ ಸಾಲಿಗ್ರಾಮ ದೇವರನ್ನು ಪೂಜಿಸಿ, ಪ್ರೀತಿಯಿಂದ ಸಕಲೋಪಚಾರವನ್ನು ಅರ್ಪಿಸಿ, ನೇಮವನ್ನು ನಿರ್ವಹಿಸಿದರು.

ಅದ್ಧಿಕದವರಾಜ್ಞೆಯಲಿ ಸಂಕಲ್ಪವ
ತಿದ್ದಿಕೊಂಡು ಒಳಪುಗುವುದಕೆ
ಗುದ್ದಾಡಿದರು ಬಾಗಿಲು ಹಿಡಿಯದೆ ಪೊಕ್ಕು
ಗದ್ದುಗೆವಿಡಿದರಿಕ್ಕೆಲದಿ ೪೮

ಉಸ್ತುವಾರಿ ಅಧಿಕಾರಿಗಳ ಅಪ್ಪಣೆಯ ಮೇರೆಗೆ ವಿಧಿವಿಧಾನಗಳನ್ನು ಸರಿಪಡಿಸಿಕೊಂಡು ಒಳಗೆ ಹೋಗುವುದಕ್ಕೆ ಗುದ್ದಾಡಿದರು; ಬಾಗಿಲು ಹಿಡಿಯದೆ ಒಳಹೊಕ್ಕು ಗದ್ದುಗೆ ಹಿಡಿದರು.

ಚಿಂದಿ ಹಚ್ಚಡ ಕುಪ್ಪಸಗಳನಿಂಬಿಟ್ಟು
ಚಂದದ ಬೈರಾಸ ತಳೆದು
ಬಂದಿಸಿದಮಳ ಪಟ್ಟೆಯ ಪಾರಿಯ ಬ್ರಹ್ಮ
ರೊಂದಿಗೆ ಕುಳಿತರು ಪಂಕ್ತಿಯಲಿ ೪೯

ವಲ್ಲಿ, ದುಪ್ಪಟಿ, ಕವಚಗಳನ್ನು ಕೆಳಗಿಟ್ಟು, ಚೆಂದದ ಉತ್ತರೀಯ ಹೊದ್ದು, ವಂದಿಸಿದ ನಿರ್ಮಲ ರೇಷ್ಮೆ ವಸ್ತ್ರದ, ಬಣ್ಣದ ಬಟ್ಟೆಯ ಬ್ರಾಹ್ಮಣರೊಂದಿಗೆ ಪಂಕ್ತಿಯಲ್ಲಿ ಕುಳಿತರು.

ಹೊಂದಟ್ಟೆಯಲ್ಲಿ ಕುಂಕುಮ ರಸಪೂರಿತ
ಗಂಧಾಕ್ಷತೆಗಳನು ಕೊಟ್ಟು
ಅಂದವಡೆದ ಕದಳಿಯ ಪರ್ಣದೊನ್ನೆಯನು
ತಂದಿರಿಸಿದರೆಲ್ಲರಿಗೆ ೫೦

ಚಿನ್ನದ ತಟ್ಟೆಯಲ್ಲಿ ಗಂಧಾಕ್ಷತೆಗಳನ್ನು ಕೊಟ್ಟು, ಎಲ್ಲರ ಮುಂದೆ ಚೆನ್ನಾಗಿರುವ ಬಾಳೆಯ ಎಲೆ ಹಾಗೂ ದೊನ್ನೆಗಳನ್ನು ತಂದಿರಿಸಿದರು.

ಪರಮ ಸುಖವನಾಂತ ತಿಗಳರು ಪತ್ರಾಭಿ
ಗರ ಪರಮಾನ್ನ ಮುಂತಾದ
ವರ ಸಣ್ಣಕ್ಕಿಯೋಗರ ತೊವ್ವೆ ಪಳದೆಯ
ತರತರವಾಗಿ ಬಡಿಸಿದರು ೫೧

ಪರಮ ಸುಖಿಗಳಾದ ತಿಗುಳರು ಪತ್ರಾಭಿಗರ (ಪಂಕ್ತಿಯಲ್ಲಿ ಎಲೆಯ ಮೇಲೆ ಬಡಿಸುವ ತುಪ್ಪ), ಪರಮಾನ್ನ, ಸಣ್ಣಕ್ಕಿಯನ್ನ, ತೊವ್ವೆ, ಮೊಸರಹುಳಿಗಳನ್ನು ಬಡಿಸಿದರು.

ಜೇನು ಸಕ್ಕರೆ ಕ್ಷೀರರಸವಪ್ಪ ಫೇಣಿ ಸು
ಕ್ಕಿನುಂಡೆ ವಡೆ ಗಾರಿಗೆಯನು
ನಾನಾ ಭಕ್ಷ್ಯ ಭೋಜ್ಯಂಗಳ ಪರಮ ಸು
ಮ್ಮಾನದೆ ಬಡಿಸಿದರೊಲಿದು ೫೨

ಜೇನು, ಸಕ್ಕರೆ, ಹಾಲುಖೋವ, ಸುಕ್ಕಿನುಂಡೆ(ಒಂದು ಬಗೆಯ ಸಿಹಿಭಕ್ಷ್ಯ),ವಡೆ, ಗಾರಿಗೆ(ಒಂದು ಬಗೆಯ ಸಿಹಿ ಭಕ್ಷ್ಯ) ಮೊದಲಾದ ಭಕ್ಷ್ಯಭೋಜ್ಯಗಳನ್ನು ಪರಮ ಸಂತೋಷದಿಂದ ಬಡಿಸಿದರು.

ಹುಳಿದಾಳಿದ ಸಾರು ಸೀಕರಣೆ ಬಹುಕೂಟ
ತಳೆದ ನಿಂಬೆಯ ರಸ ಸವಿದು
ಗಳಿಲನೆ ಬರುವ ಒಗ್ಗರಣೆಯಿಂಗಿನ ಕಂಪು
ಸುಳಿದುದಚ್ಚರಿಯೆನೆ ನಭಕೆ ೫೩

ಹುಳಿಸಾರು, ಸೀಕರಣೆ(ಮಾವಿನ ಹಣ್ಣಿನಿಂದ ಮಾಡಿದ ಸಿಹಿ ಭಕ್ಷ್ಯ), ನಿಂಬೆಯ ರಸ ಸವಿದು, ಸರಕ್ಕನೆ ಬರುವ ಒಗ್ಗರಣೆ ಇಂಗಿನ ಕಂಪು ಅಚ್ಚರಿಯಾಗುವಂತೆ ನಭಕಡರಿತು.

ಘನ ನವಘೃತವ ತಂದೆರೆದರು ಪತ್ರ ಭಾ
ಜನ ತುಂಬಿ ಕಡೆಗೋಡಿವರಿಯೆ
ಅನಲಾಕೃತಿಯ ಬ್ರಾಹ್ಮರು ಮುದದಿಂದಾಪೋ
ಶನವ ಕೊಂಡರು ಮಹೋತ್ಸವದಿ ೫೪

ಎಲೆಯ ಪಾತ್ರೆಯಿಂದ ಕೋಡಿವರಿವಂತೆ ತುಪ್ಪವನ್ನು ತಂದು ಬಡಿಸಿದರು. ಸಿಕ್ಕಿದ್ದನ್ನು ಬುಕ್ಕುವ, ಬುಕ್ಕಿ ದಕ್ಷಿಸಿಕೊಳ್ಳುವ ಅಗ್ನಿಯವತಾರದ ಬ್ರಾಹ್ಮಣರು ಹರ್ಷದಿಂದ ಆಪೋಷನ (ಊಟಕ್ಕೆ ಮೊದಲು ಅಂಗೈಗೆ ನೀರನ್ನು ಬಿಟ್ಟುಕೊಂಡು ಕುಡಿಯುವುದು) ತೆಗೆದುಕೊಂಡರು.

ಸಿತರಾಜಾನ್ನ ಸದ್ಘೃತ ತೊವ್ವೆಗೂಡಿ ನಿ
ರ್ಮಿತವಾದ ತೋರದುತ್ತುಗಳ
ಜತನದಪ್ಪದೆ ಕೈಕೊಂಡರು ಕೃಷ್ಣಾ
ರ್ಪಿತವೆಂದು ಸಂತೋಷವಡೆದು ೫೫

ಬಿಳಿ ಅನ್ನ, ಒಳ್ಳೆ ತುಪ್ಪ, ತೊವ್ವೆಯೊಡನೆ ನಿರ್ಮಿತವಾದ ದಪ್ಪನೆಯ ತುತ್ತುಗಳನ್ನು ಎಚ್ಚರದಪ್ಪದೆ ಕೃಷ್ಣಾರ್ಪಿತವೆಂದು ಸ್ವೀಕರಿಸಿದರು.

ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸ
ರಲ್ಲಿ ಕಲಸಿದುಪ್ಪುಗಾಯಿ
ಗಲ್ಲಿಸಿ ಉಂಡೆಗಟ್ಟಿ ನುಂಗಿದರ್ಪಿರಿಯರು
ಉಲ್ಲಸದಿ ಗಲ್ಲೆ ಸವರುತ ೫೬

ಮಲ್ಲಿಗೆ ಹುವ್ವಿನಂಥ ಉದರನ್ನ, ಮೊಸರಲ್ಲಿ ಕಲಸಿದ ಉಪ್ಪಿನಕಾಯಿ ಜೊತೆ ಉಂಡೆಗಟ್ಟಿ ಹಿರಿಯರು ಗಲ್ಲೆ(ಹಣದ ಪೆಟ್ಟಿಗೆ, ಅರ್ಥಾತ್ ಹೊಟ್ಟೆ) ಸವರುತ್ತ ನುಂಗತೊಡಗಿದರು.

ರಸರಸಾಯನವ ಚಪ್ಪರಿಸಿ ನೀರ್ಮಜ್ಜಿಗೆ
ಹಸಗೆಯ್ದಿರಲೀಂಟಿದರು
ಪೊಸ ವಿಘ್ನರಾಜನ ಬಳಗದಂತೆದ್ದರ
ವಶದಿಂದ ದಟ್ಟಡಿಯಿಟ್ಟು ೫೭

ರಸ ರಸಾಯನವನ್ನು ಚಪ್ಪರಿಸಿ, ಹಸನಾದ ನೀರ್ಮಜ್ಜಿಗೆಯನ್ನು ಕುಡಿದು ಹೊಸ ವಿಘ್ನೇಶ್ವರನ ಬಳಗದಂತೆ ಅವಶ (ಹತೋಟಿ ತಪ್ಪಿ)ರಾಗಿ ಮೇಲೆದ್ದರು, ತಟ್ಟಾಡುತ್ತಾ ದಟ್ಟಡಿಯಿಟ್ಟು.

ಭೂಲೋಕದ ಬುಧರು ಸತ್ರದೊತ್ತಿನ ಮುಂ
ಗಾಲುವೆಯೊಳು ಕೈಯ ತೊಳೆದು
ಚೇಲಾಲಂಕೃತರಾಗಿ ಕರ್ಪೂರ ಮಿಶ್ರ ತಾಂ
ಬೂಲವ ಕೊಂಡರುತ್ಸವದಿ ೫೮

ಭೂದೇವರುಗಳು ಸತ್ರದ ಸಮೀಪದ ಮುಂಗಾಲುವೆ ನೀರಲ್ಲಿ ಕೈತೊಳೆದು ಉತ್ತರೀಯದಿಂದ ಅಲಂಕೃತರಾಗಿ ಕರ್ಪೂರ ಮಿಶ್ರ ತಾಂಬೂಲವನ್ನು ಸವಿದರು.

ಕಮ್ಮನೆ ತುಪ್ಪ ಕಜ್ಜಾಯ ಪಾಯಸದಿಂದೆ
ದಮ್ಮನೆ ತಣಿದೆವೆಂದೆನುತ
ಬೊಮ್ಮರ ಸಂತತಿ ನುಡಿಯುಂತೆ ಮುನ್ ಸಾರ್ದರು
ನಿಮ್ಮಳ ಶಯನ ಸ್ಥಾನಕ್ಕೆ ೫೯

ರುಚಿಕರವಾದ ಸುವಾಸನಾಯುಕ್ತ ತುಪ್ಪ, ಕಜ್ಜಾಯ, ಪಾಯಸದಿಂದ ಪೂರ್ಣ ತೃಪ್ತಿಗೊಂಡೆವೆಂದು ಬ್ರಾಹ್ಮಣರು ಹೇಳುತ್ತಾ ಮುಂದಕ್ಕೆ ನಡೆದರು, ನಿರ್ಮಲವಾದ ಮಲಗುವ ಮನೆಗೆ.

ಸಾಸಿರ ಲಕ್ಷ ಕೋಟಾನುಕೋಟಿ ಸಂ
ನ್ಯಾಸಿಗಳು ಮಠಮಠದಲ್ಲಿ
ಗ್ರಾಸಿಗಳಾಗಿ ಸಂತಸವೆತ್ತು ನಿಖಿಳ ಪರ
ದೇಶಿಗಳಿರ್ದರೊರೊಳಗೆ ೬೦

ಲಕ್ಷಾನುಲಕ್ಷ ಕೋಟಾನುಕೋಟಿ ಸಂನ್ಯಾಸಿಗಳು ಮಠಮಠದಲ್ಲಿದ್ದ ಹಾಗೆ, ಭೋಜನ ಮಾಡಲೋಸುಗವೇ ಅಧಿಕ ಪರದೇಶಿಗಳು(ಅನ್ಯದೇಶದವರು) ಊರೊಳಗಿದ್ದರು.

ತಂಡತಂಡದಿ ಕೃಷ್ಣನಗರಿಯೊಳು ಚಲಿಸುವ
ಮಂಡಳಿಕರ ಕಾಲ ಕಡೆಯ
ಪೆಂಡೆಯ ತಾಟಾಡಿ ಸಿಡಿದ ರತ್ನಗಳ ಕೈ
ದಂಡೆಯೊಳು ಸಿಕ್ಕಿ ಬಾಚುವರು ೬೧

ಕೃಷ್ಣನಗರಿಯಲ್ಲಿ ತಂಡತಂಡದಲ್ಲಿ ಚಲಿಸುವ ಮಾಂಡಲಿಕರ 'ಕಾಲಕಡೆಯ'(ಕಾಲ್ಕಡಗ) ಪೆಂಡೆಯ(ಕಾಲಂದುಗೆ) ಪರಸ್ಪರ ತಾಟಾಡಿ ಸಿಡಿದ ರತ್ನಗಳು ಜನರ ಕೈಗೆ ಸನಿಹದಲ್ಲಿ ಸಿಕ್ಕಿ ಬಾಚಿಕೊಳ್ಳುವರು.

ಶರಧಿಯೊಳೊಗೆದ ಹೊಂದಾವರೆಯಂತಿರ್ಪ
ಪುರ ಮಧ್ಯದಲಿ ಕೃಷ್ಣರಾಯ
ನರಮನೆ ಕನ್ನಿಕೆಯೆಂಬಂತೆ ಜನ ಮೋ
ಹರಿಸಲು ಕಣ್ಗೆ ರಂಜಿಸಿತು ೬೨

ಸಮುದ್ರದಲ್ಲಿ ಮೂಡಿದ ಹೊಂದಾವರೆಯಂತಿರುವ ಪುರಮಧ್ಯದಲ್ಲಿ ಕೃಷ್ಣರಾಯನ ಅರಮನೆ ಕನ್ನಿಕೆಯಂತೆ ಕಣ್ ಸೆಳೆಯುವುದರಿಂದ ನೋಡಲು ಜನ ಮುಗಿಬೀಳುವುದು ಕಣ್ಣಿಗೆ ಹಬ್ಬವಾಯಿತು.

ಮುಗಿಲನಳ್ಳಿರಿವಂತೆ ಮಂಡಳಿಸಿದ ಹೊ
ನ್ನಗಿಲು ಪುರದ್ವಾರಕಡರ್ದು
ಜಗಜಗಿಸುವ ರತ್ನಾಕಾಂತಿಯ ಮುಕ್ಕುಳಿಸಿ
ಉಗಿವುದನೇನ ಬಣ್ಣಿಸುವೆ ೬೩

ಮುಗಿಲುಮುಟ್ಟುವಂತೆ ಸುತ್ತುವರಿದ ಹೊನ್ನಗಿಲು(ಸುವರ್ಣ ಸುಗಂಧ ವೃಕ್ಷ) ಪುರದ ಹೆಬ್ಬಾಗಿಲಿಗೆ ಅಡರಿ, ಜಗಜಗಿಸುವ ರತ್ನಕಾಂತಿಯನ್ನು ಮುಕ್ಕುಳಿಸಿ ಉಗಿಯುವ ಪರಿಯನ್ನು ಬಣ್ಣಿಸುವುದು ಹೇಗೆ?

ಹರಬ್ರಹ್ಮಾದಿದೇವತೆಗಳ ರಾಜ ಮಂ
ದಿರವ ಕೀಳ್ಪಡಿಸಿ ಶೋಭಿಸುವ
ಪರಮೈಶ್ವರ್ಯ ಸಂಮೋಹದಿ ಶ್ರೀಕೃಷ್ಣ
ನರಮನೆ ಕಣ್ಗೆ ಕಾಣಿಸಿತು ೬೪

ಹರ ಬ್ರಹ್ಮಾದಿ ದೇವತೆಗಳ ರಾಜಮಂದಿರಗಳನ್ನು ಕೀಳಾಗಿಸಿ ಶೋಭಿಸುವ ಪರಮೈಶ್ವರ್ಯ ಸಂಮೋಹದ ಶ್ರೀಕೃಷ್ಣನರಮನೆ ಕಂಗೊಳಿಸಿತು.

ಮಕರ ತೋರಣ ಮಣಿಮುಕುರ ಹೊಂಗುಬ್ಬಿಯ
ನಿಕರ ಸೀಗುರಿಗಳಿಂದೆಸೆವ
ಅಕಳಂಕ ಮುತ್ತಿನ ಚಾವಡಿ ಕಣ್ಗೆ ಕೌ
ತುಕವ ಬೀರಿತು ನೋಟಕರ ೬೫

ಮಕರತೋರಣ, ರತ್ನಗನ್ನಡಿ, ಹೊಂಗುಬ್ಬಿ(ಚಿನ್ನದ ಆಭರಣ ವಿಶೇಷ) ಚಾಮರಗಳಿಂದ ರಾಜಿಸುವ ಮುತ್ತಿನ ಚಾವಡಿ(ಸಭಾಮಂಟಪ) ನೋಡುಗರ ಕಣ್ಣಿಗೆ ಕೌತುಕವನ್ನು ಬೀರಿತು.

ಪ್ರಕಟಿತ ರಜಸ್ತಮೋಗುಣವ ತೀರ್ಕಣಿಸಿ ಸಾ
ತ್ವಿಕ ಫಲ ರೂಪಾದುದೆನುತ
ಅಕಳಂಕ ಸಿತಹರ್ಮ್ಯವೆಸೆದುದಮರ ನಾ
ಯಕ ಕೃಷ್ಣನರಮನೆಯೊಳಗೆ ೬೬

ರಜೋಗುಣ ತಮೋಗುಣಗಳನ್ನು ಕೊನೆಗಾಣಿಸಿ ಸಾತ್ವಿಕಗುಣ ಮೊನೆಗೊಂಡಿತೆಂಬಂತೆ ಶ್ವೇತಸೌಧ ಕಂಗೊಳಿಸಿತು ಕೃಷ್ಣನರಮನೆಯಲ್ಲಿ

ರಜಸ್ತಮೋಗುಣವನಿರ್ಕಡಿಗೆಯ್ದು ಸತ್ವ
ನಿಜ ವಿಶ್ವರೂಪಾದುದೆನಲು
ದ್ವಿಜರಾಜಗಮನ ಮಂದಿರದೊಳು ಸಿತಹರ್ಮ್ಯ
ವ್ರಜ ಹೇಮ ಕಲಶವೊಪ್ಪಿದುವು ೬೭

ರಜಸ್ತಮೋ ಗುಣಗಳನ್ನು ಎರಡು ತುಂಡು ಮಾಡಿ ಸತ್ವ ವಿಶ್ವರೂಪ ತಾಳಿತೆಂಬಂತೆ ದ್ವಿಜರಾಜಗಮನ (ಗರುಡವಾಹನ ಕೃಷ್ಣನ) ಮಂದಿರದಲ್ಲಿ ಶ್ವೇತ ಸೌಧ ಸಮೂಹ, ಬಂಗಾರ ಕಳಶಗಳೊಪ್ಪಿದವು.

ರಾರಾಜಿಸುತಿಪ್ಪ ವನಿತೆಯರುಗಳ ಶೃಂ
ಗಾರವ ಜರಿದು ಶೋಭಿಸುವ
ವಾರನಾರಿಯರು ಸಂಚರಿಸುತಿರ್ದರು ಕೇಳು
ದ್ವಾರಾವತಿಯ ವೀಧಿಯಲಿ ೬೮

ರಾರಾಜಿಸುವ ಸ್ತ್ರೀಯರ ಶೃಂಗಾರವನ್ನು ಹೀಗಳೆದು ಶೋಭಿಸುವ ವಾರಾಂಗನೆಯರು ದ್ವಾರಾವತಿಯ ಬೀದಿಯಲ್ಲಿ ಸಂಚರಿಸುತ್ತಿದ್ದರು.

ಪಿಂತಣ ಸುರಲೋಕದ ನಳಕೂಬರ ಜ
ಯಂತಾದಿಗಳ ಕೀಳ್ಪಡಿಸಿ
ಸಂತತ ವಾರನಾರಿಯರೊಳು ವೇಶ್ಯಾ
ಕಾಂತರು ಸುಳಿದಾಡುತಿಹರು ೬೯

ಹಿಂದೆ ದೇವಲೋಕದ ನಳಕೂಬರ(ಕುಬೇರನ ಕಿರಿಯ ಮಗ) ಜಯಂತ (ಇಂದ್ರನ ಮಗ) ಮೊದಲಾದವರನ್ನು ಮೀರಿಸಿ ಸತತವಾಗಿ ವಾರನಾರಿಯರೊಡನೆ ವೇಶ್ಯಾಕಾಂತರು ಸುಳಿದಾಡುತ್ತಿರುವರು.

ಅಂತಃಪುರ ಶಿಖಾಮಣಿಯೆನಲೊಪ್ಪುವ
ಜಂತದ ಚಾವಡಿಯೊಳಗಡೆ
ಸಂತತ ಸಿಂಹವಿಷ್ಟರದಲ್ಲಿ ಲಕ್ಷ್ಮೀ
ಕಾಂತನೊಲಿದು ಕುಳಿತಿರ್ದ ೭೦

ಅಂತಃಪುರ ಶಿಖಾಮಣಿ (ಶಿರೋಭೂಷಣ) ಎನ್ನಲರ್ಹವಾದ ದಂತದ ಚಾವಡಿಯೊಳಗೆ (ಆಸ್ಥಾನದೊಳಗೆ) ಸಿಂಹಾಸನದಲ್ಲಿ ಲಕ್ಷ್ಮೀಕಾಂತ ಸತತವಾಗಿ ಕುಳಿತಿದ್ದ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೭೧

'ವರ ಮೋಹನ ತರಂಗಿಣಿ' ಎಂಬ ಈ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ಕೃಪೆಯಿಂದ ಬಿಡದೆ ರಕ್ಷಿಸುವನು

# ೪. ಕಂದರ್ಪ ಜನನ

ಸಿತನಾಗನಾಳ್ದನರ್ಧಾಂಗಿಗೋಸುಗ ತನ್ನ
ವ್ರತಗೆಟ್ಟ ನೃಪಗೆ ಸಿಲ್ಕಿದನ
ಪಿತನ ಮುಂದಿಹನ ತಮ್ಮನ ತರಿದಾತಗಾ
ನತನಾಗಿ ಪೇಳು ಮೇಲ್ಗತೆಯ ೧

ಈ ಸಾಂಗತ್ಯಪದ್ಯ ಮುಂಡಿಗೆಯಂತಿದೆ. ಆದ್ದರಿಂದ ಶಬ್ದಾರ್ಥ ಸಹಿತ ಸಂಬಂಧಗಳ ಜಾಡು ಹಿಡಿದು ಗದ್ಯಾನುವಾದ ಮಾಡಬೇಕಾಗಿದೆ. ಸಿತನಾಗ=ಬಿಳಿಯ ಆನೆ(ಐರಾವತ), ಆಳ್ದನ=ಆಳಿದ ಇಂದ್ರನ, ಅರ್ಧಾಂಗಿಗೋಸುಗ=ಪತ್ನಿಯಾದ ಶಚಿದೇವಿಗೋಸ್ಕರ, ತನ್ನ ವ್ರತಗೆಟ್ಟ= ತನ್ನ ನೀತಿ ನಿಲುವು ಕೆಟ್ಟ, ನೃಪಗೆ=ಯಯಾತಿಯ ತಂದೆಯಾದ ನಹುಷನು ಇಂದ್ರಪತ್ನಿಯಾದ ಶಚಿಗೆ ಮೋಹಗೊಂಡು, ಆಕೆಯ ಶರತ್ತಿನಂತೆ ಪಲ್ಲಕ್ಕಿಯಲ್ಲಿ ಕುಳಿತು, ಅದನ್ನು ಸಪ್ತರ್ಷಿಗಳಿಂದ ಹೊರಿಸಿಕೊಂಡು ಆಕೆಯ ಮನೆ ತಲುಪಲು ಆತುರ ಪಟ್ಟು 'ಸರ್ಪ, ಸರ್ಪ' (ಬೇಗ ನಡೆ ಬೇಗನಡೆ)ಎಂದು ಅಗ್ರಸ್ಯನನ್ನು ತನ್ನ ಕಾಲಿನಿಂದ ತುಳಿದಾಗ ಆ ಋಷಿ 'ಸರ್ಪೋಭವ'(ಸರ್ಪವಾಗು) ಎಂದು ಶಾಪಕೊಟ್ಟಿದ್ದರಿಂದ ಭೂಲೋಕದಲ್ಲಿ ಸರ್ಪವಾಗಿದ್ದವನ ಹಿಡಿತಕ್ಕೆ ಸಿಲ್ಕಿದನ=ಸಿಕ್ಕಿದ ಭೀಮನ, ತಂದೆಯ=ಭೀಮನ ತಂದೆಯಾದ ವಾಯುವಿನ, ಮುಂದಿನ=ಮುಂದಿರುವ ಉತ್ತರ ದಿಕ್ಕಿನ ಒಡೆಯನಾದ ಕುಬೇರನ, ತಮ್ಮನ=ತನ್ನ ಮಲತಾಯಿ ಮಗನಾದ ರಾವಣನ, ತರಿದಾತಗೆ=ಶ್ರೀರಾಮನಿಗೆ ಆನತನಾಗಿ=ಶರಣಾಗತನಾಗಿ, ಪೇಳು ಮೇಲ್ಗತೆಯ= ಉತ್ತಮ ಕಥೆಯನ್ನು ಹೇಳು(ಬಿಳಿಯಾನೆ ಐರಾವತದ ಒಡೆಯನಾದ ಇಂದ್ರನ ಪತ್ನಿ ಶಚಿದೇವಿಗೆ ಮೋಹಗೊಂಡು ಅಗಸ್ತ್ಯನಿಂದ ಶಾಪಕ್ಕೊಳಗಾಗಿ ಸರ್ಪವಾದ ನಹುಶನಿಗೆ ಸಿಕ್ಕಿದ ಭೀಮನ, ತಂದೆಯಾದ ವಾಯುವಿನ, ಮುಂದಿರುವ ಉತ್ತರದಿಕ್ಕಿನ ಒಡೆಯನಾದ ಕುಬೇರನ, ತಮ್ಮನಾದ ರಾವಣನನ್ನು ಸಂಹರಿಸಿದ ರಾಮನಿಗೆ ವಂದಿಸಿ, ಉತ್ತಮಕಥೆ ಹೇಳು ಎಂದು ಸುಜ್ಞಾನವಧೂಟಿ ತನ್ನ ಪ್ರಿಯ ತಮ್ಮ ಕನಕನನ್ನು ಆಗ್ರಹಿಸುತ್ತಾಳೆ.

ಕಣ್ಣು ಮನವನಿರ್ಕುಳಿಗೊಳ್ವ ಕಡುಜಾಣ
ವೆಣ್ಣುಗಳಧಿದೇವಿ ಕೇಳು
ಗೆಣ್ಣುಗೊಂಡ ಬೆಳ್ಗಬ್ಬಿನ ರಸದಂತೆ ಸತಿ
ಬಣ್ಣಿಸುವೆನು ಕಥಾಮೃತವ ೨

ಕಣ್ಣು ಮನಗಳನ್ನು ಸೂರೆಗೊಳ್ಳುವ ಜಾಣ ಹೆಣ್ಣುಗಳ ಅಧಿದೇವಿ ಕೇಳು, ಗೆಣ್ಣಿಕ್ಕಿದ ಬಿಳಿಕಬ್ಬಿನ ರಸದಂತೆ ಕಥಾಮೃತವನ್ನು ಉಣಬಡಿಸುವೆನು.

ಗಣಿಸಲೀರೆಂಟು ಸಾಸಿರ ಹೆಂಗಳೊಳು ರು
ಕ್ಮಿಣಿ ಸತ್ಯಭಾಮಿನಿಯರ್ಗಳು
ಫಣಿತಲ್ಪ ಕೃಷ್ಣರಾಯನ ಭುಜಕೀರ್ತಿಯ
ಮಣಿಗಳಂತಿರ್ದರಿಕ್ಕೆಲದಿ ೩

ಈರೆಂಟು (ಹದಿನಾರು) ಸಾಸಿರ ಹೆಣ್ಣುಗಳಲ್ಲಿ ರುಕ್ಮಿಣಿ ಸತ್ಯಭಾಮೆಯರು ಶೇಷಶಾಯಿ ಕೃಷ್ಣರಾಯನ ಭುಜಕೀರ್ತಿಯ ರತ್ನಗಳಂತೆ ಎರಡೂ ಪಕ್ಕದಲ್ಲಿದ್ದರು.

ಭಾವಿಸಲಧಿಕ ಪೊಂಬುತ್ತಳಿಯೆಂಬಂತೆ
ಕೋವಿದ ಕೋಮಲಾಂಗಿಯರು
ದೇವಕಿಯಾತ್ಮಸಂಭವನೆಡಬಲದಲಿ
ತೀವಿರ್ದುದೇನ ಬಣ್ಣಿಪೆನು ೪

ಕೃಷ್ಣನ ಎಡಬಲದಲ್ಲಿ ಉತ್ತಮ ಬಂಗಾರದ ಬೊಂಬೆಗಳಂತೆ ಕೋಮಲಾಂಗಿಯರು ತುಂಬಿರುವುದನ್ನು ಏನೆಂದು ಬಣ್ಣಿಸಲಿ?

ಜಲರುಹದಳ ಲೋಚನನ ಮಮಕಾರದ
ಲಲನೆಯರುಗಳ ಸಾಲ್ಗೊಳಿಸಿ
ಗಲಭೆಯ ನಿಲ್ಲಿಸುವ ಕಟ್ಟಿಗೆಗಾರ್ತಿಯರ
ಉಲುಹು ಎಸೆದುದು ಸಭೆಯೊಳಗೆ ೫

ಕಮಲಾಕ್ಷ ಕೃಷ್ಣನ ಮೋಹನ ಮಡದಿಯರನ್ನು ಸಾಲಾಗಿ ನಿಲ್ಲಿಸಿ ಗಲಭೆಯನ್ನು ನಿಲ್ಲಿಸುವ ಕೋಲುಗಾತಿಯರ ಧ್ವನಿ ಸಭೆಯೊಳಗೆ ಮೊಳಗಿತು.

ಜೀಯ ಹಸಾದ ಪಾಯವಧಾರು ಸಮರ ವಿ
ಜೇಯ ಮೋಹನ ಕಾಯ ಕೃಷ್ಣ
ರಾಯ ಪರಾಕೆಂದು ಕೈವಾರಿಪ ತೊಂಡೆ
ವಾಯ ಪಾಠಕಿಯರೊಪ್ಪಿದರು ೬

ಯುದ್ಧ ವಿಜೇತನೂ, ಮೋಹಕ ಗಾತ್ರನೂ ಆದ ಕೃಷ್ಣ ತಮ್ಮ ಪಾದ ಎಚ್ಚರಿಕೆ, ತಮ್ಮ ದೇಹ ಎಚ್ಚರಿಕೆ(ಪರಾಕು) ಎಂದು ಕೊಂಡಾಡುವ ತೊಂಡೆವಣ್ ಬಾಯಿಯ ಸ್ತುತಿ ಪಾಠಕಿಯರು ಒಪ್ಪಿದರು.

ಧವಳ ಸರೋಜಾಕ್ಷ ತಾನಲ್ಲದನ್ಯರೊಳು
ಜವಳಾಗದ ತೆರ ವೈಸಿಕದಿ
ಕವಳವ ಕುಡುವಂತೆ ರತ್ನಸಂಬಳಿಗೆದಾ
ಳ್ದವಳಿರ್ದಳತಿ ಹರುಷದಲಿ ೭

ಕಮಲಾಕ್ಷನಾದ ಕೃಷ್ಣ ತಾನಲ್ಲದೆ ಅನ್ಯರಿಗೆ ಜೋಡಿಯಾಗದಂತೆ ಸೋಗಿನಲ್ಲಿ ಕವಳವನ್ನು (ತಾಂಬೂಲವನ್ನು) ಕೊಡುವಂತೆ ರತ್ನ ಸಂಪುಟ ಹಿಡಿದ ಹೆಣ್ಣು ನೋಡಿಕೊಳ್ಳುತ್ತಿದ್ದಳು

ಅಡಹಾಯಿದಂಗನೆಯರ ಸಂದುಕಟ್ಟಿನೊಳ್
ಬಿಡದೆ ಚುಂಬಿಸಿದಧರವನು
ತೊಡೆದಲ್ಲದೆ ತಕ್ಕುದಲ್ಲೆಂದು ಮೊಗ ಪಾ
ವುಡವಿಡಿದಿರ್ದಳೊತ್ತಿನಲಿ ೮

ಅಡ್ಡ ನುಗ್ಗಿದಂಗನೆಯರು ಸಂದಿಯಲಿ ಬಿಡದೆ ಮುತ್ತಿಕ್ಕಿದ ತುಟಿಯನ್ನು ಒರಸದಿದ್ದರೆ ತಕ್ಕುದಲ್ಲವೆಂದು ಪಾವುಡ(ತೆಳುವಾದ ವಸ್ತ್ರ) ಹಿಡಿದು ಸನಿಹದಲ್ಲೇ ಒಬ್ಬಳು ನಿಂತಿದ್ದಳು.

ದಾಯಕಾತಿಯರೊಳು ತನ್ನ ಮೇಲಣ ಭ್ರಾಂತ
ಬಾಯಾರಗೊಡೆನೆಂದು ಲಲಿತ
ಕಾಯಕಾಂತಿಯ ರಸಭರಿತ ಗಿಂಡಿಯ ಹಿಡಿದ
ದಾಯಕಳಿರ್ದಳೊತ್ತಿನಲಿ ೯

ತನ್ನ ಮೇಲಣ ಭ್ರಾಂತಿನಲ್ಲಿ ದಾಯಕಾತಿಯರ ಪೈಪೋಟಿಯಲ್ಲಿ

ಬಾಯಾರಲು ಬಿಡುವುದಿಲ್ಲವೆಂದು ರಸತುಂಬಿದ ಗಿಂಡಿ ಹಿಡಿದ ಸೊಬಗಿನ ದಾನಿ ಇದ್ದಳು ಹತ್ತಿರದಲ್ಲೇ.

ರಂಜಿಪ ರತಿಯೊಳು ಗುಟುಕುತಂಬುಲದ ರುಚಿ
ಸಂಜೀವನವೆಂದು ತಿಳಿದು
ಭುಂಜಿಸಲಾರಿಗೂ ಕುಡೆನೆಂದು ಹೊಂಗಾ
ಳಾಂಜಿಯ ಪಿಡಿದೊರ್ವಳಿಹಳು ೧೦

ರಂಜನೆಯ ರತಿಕ್ರೀಡೆಯಲ್ಲಿ ಗುಟುಕು ತಾಂಬೂಲದ ರುಚಿ ಸಂಜೀವನ ಸದೃಶವೆಂದು ತಿಳಿದು, ತಿನ್ನಲು ಯಾರಿಗೂ ಕೊಡುವುದಿಲ್ಲವೆಂದು ಚಿನ್ನದ ಕಾಳಾಂಜಿ (ಪೀಕದಾನಿ) ಹಿಡಿದು ಒಬ್ಬಳು ನಿಂತಿರುವಳು.

ಗಿಣಿನುಡಿಯಬಲೆಯರ ಕೂಟದಲಿ ಮುತ್ತಿನ
ಮಣಿಯಂತೆ ಬೆಮರಾಂತಿಹನ
ದಣಿವ ನಿವಾರಿಸಬೇಕೆಂದು ಹೊಂಬೀ
ಸಣಿಗೆಯ ಹಿಡಿದೊರ್ವಳಿಹಳು ೧೧

ಗಿಣಿಯಂತೆ ಮಾತಾಡುವ ಸ್ತ್ರೀಯರ ಸಂಗದಿಂದ ಮಾತಿನ ಮಣಿಗಳಂತೆ ಬೆವರು ಹೊಂದಿರುವ ಕೃಷ್ಣನ ದಣಿವನ್ನು ನಿವಾರಿಸಬೇಕೆಂದು ಚಿನ್ನದ ಬೀಸಣಿಗೆಯನ್ನು ಹಿಡಿದು ಒಬ್ಬಳು ನಿಂತಿರುವಳು.

ಅವರಿವರುಗಳ ಮೇಲೆರಗುವ ಮಕ್ಷಿಕ
ವಿವರವನರಿಯದೆಯೆ ಬಂದು
ಭವರೋಗ ವೈದ್ಯ ಕೃಷ್ಣನ ಸೋಂಕುವುವೆಂದು
ಚವರವ ಡಾಳಿಸುತಿಹಳು ೧೨

ಅವರಿವರ ಮೇಲೆ ಎರಗುವ ನೊಣಗಳು ಭವರೋಗ ವೈದ್ಯನಾದ ಕೃಷ್ಣನನ್ನು ಸೋಂಕುತ್ತವೆ ಎಂದು ಚಾಮರ ಬೀಸುವವಳೊಬ್ಬಳು ಇರುವಳು.

ತೋರಿಯ ಮೊಲೆವೆಣ್ಣು ತಾನಲ್ಲದೆ ಮಿಕ್ಕ
ನಾರಿಯಗೊರ್ಲಿಯನೆನ್ನುತ
ಕೋರಿದ ಕೃಷ್ಣನಂಕಿತ ಗೈವ ತೆರದಿ ಕ
ಠಾರಿಯ ಪಿಡಿದೊರ್ವಳಿಹಳು ೧೩

ಮೊಗೆಮೊಲೆಯ ತನ್ನನ್ನಲ್ಲದೆ ಉಳಿದವರನ್ನು ಒಲಿಯನು ಎನ್ನುತ್ತ, ಅವರು ಬಯಸಿದ ಕೃಷ್ಣನ ಅಂಕಿತವನ್ನು ಹಾಕಲು ತಯಾರಿರುವಂತೆ ಕಠಾರಿ ಹಿಡಿದುಕೊಂಡು ಒಬ್ಬಳಿರುವಳು.

ಚೊನ್ನಡಲನ ಕಲೆಗಳ ತಿರಸ್ಕರಿಸುವ
ಕನ್ನೈದಿಲ ಕಣ್ಣಕಾಂತೆ
ತನ್ನ ನುಣ್ಗಲ್ಲಕೆ ಸರಿಯೆಂದು ಮಾಣಿಕ
ಗನ್ನಡಿವಿಡಿದೊರ್ವಳಿಹಳು ೧೪

ಚಂದ್ರನ ಕಲೆಗಳನ್ನು ಲೆಕ್ಕಿಸದ ಕನ್ನೈದಿಲ ಕಣ್ಣಿನ ಕಾಂತೆಯೊಬ್ಬಳು ತನ್ನ ನುಣ್ಣನೆಯ ಗಲ್ಲಕೆ ಸಾಟಿಯೆಂದು ರತ್ನಗನ್ನಡಿ ಹಿಡಿದು ಒಬ್ಬಳಿರುವಳು.

ತಿಣ್ಣ ಜವ್ವನೆಯರ ಮಂದಿರದ ಮುಂದಣ
ಮಣ್ಣ ಮೆಟ್ಟಿಸಗೊಡೆನೆನುತ
ಬಣ್ಣದಳೆದ ರನ್ನವಾವುಗೆವಿಡಿದ ಎಸ
ಳ್ಗಣ್ಣವಳಿರ್ದಳೊತ್ತನಲಿ ೧೫

ಕಟ್ಟರೆಯದ ಯುವತಿಯರ ಮನೆಯ ಮುಂದಿನ ಮಣ್ಣನ್ನು ಮೆಟ್ಟಿಸಗೊಡೆನೆನ್ನುತ್ತ ಬಣ್ಣ ತಾಳಿದ ರತ್ನ ಪಾದುಕೆಯನ್ನು ಹಿಡಿದ ಎಸಳುಗಣ್ಣಿನ ಹೆಣ್ಣೊಬ್ಬಳು ಪಕ್ಕದಲ್ಲಿಯೇ ಇದ್ದಳು.

ವೀಣಾವಾದ್ಯಕೆ ತಂತ್ರಿಯ ಚರ್ಮವಾದ್ಯಕೆ
ವೇಣಾಸ್ಪದ ಕೊಳಲುವಿಡಿದ
ಗಾಣ ಪಂಚಮಸ್ವರದ ಚೌಷಷ್ಟಿ ವಿದ್ಯಾಪ್ರ
ವೀಣಾಂಗನೆಯರೊಪ್ಪಿದರು ೧೬

ತಂತಿಯ ವೀಣಾವಾದ್ಯಕ್ಕೆ, ಚರ್ಮವಾದ್ಯಕ್ಕೆ ಬಿದಿರುಮೂಲದ (ವೇಣಾಸ್ವದ) ಕೊಳಲನ್ನು ಹಿಡಿದು, ಗಾನ ಪಂಚಮಸ್ವರದ ಆರುವತ್ತನಾಲ್ಕು(ಚೌಷಷ್ಟಿ) ವಿದ್ಯಾಪ್ರವೀಣಾಂಗನೆಯರು ಒಪ್ಪಿದರು.

ವನಿತೆಯರುಗಳೆಡಬಲದಲಿ ಬಾಹತ್ತರ
ವಿನಿಯೋಗ ಎಯ್ದು ನಿಂದಿರಲು

ಅನಿಬರ ಮುಖಚೇಷ್ಟೆಯ ನೋಡಿ ಶ್ರೀಕೃಷ್ಣ
ದನಿದೋರದೆ ನಕ್ಕ ಮುದದಿ ೧೭

ಹೆಂಗಸರ ಎಡಬಲದಲ್ಲಿ ಎಪ್ಪತ್ತೆರಡು (ಬಾಹತ್ತರ) ಆಜ್ಞಾಧಾರಿಗಳು ಬಂದು ನಿಂತಿರಲು, ಅಷ್ಟೂ ಜನರ ಮುಖ ಭಾವವನ್ನು ನೋಡಿ ಶ್ರೀಕೃಷ್ಣ ದನಿ ಎತ್ತದೆ ಮುಗಳು ನಕ್ಕನು.

ನಾಡೊಳಗುಳ್ಳ ನಾನಾ ವಿದ್ಯದೇಳ್ಗೆಯ
ನೋಡಿ ಚಿತ್ತೈಸಿದ ಬಳಿಕ
ಕ್ಷ್ವೇಡಾಶ ಗಮನನಾಕ್ಷಣದಿ ತರಿಸಿದ
ಕ್ರೀಡಾ ವಿಹಗ ಸಂತತಿಯ ೧೮

ನಾಡಲ್ಲಿರುವ ನಾನಾ ವಿದ್ಯೆಗಳನ್ನು ನೋಡಿ ಸಂತಸಪಟ್ಟ ನಂತರ ಗರುಡಗಮನ(ಕ್ಷ್ವೇಡಾಶಗಮನ)ನಾದ ಕೃಷ್ಣ ಆ ಕ್ಷಣದಲ್ಲಿ ಕ್ರೀಡಾ ಪಕ್ಷಿಗಳನ್ನು ತರಿಸಿದನು.

ತಂಗಡಲೆಯ ಮೇಯಿಸಿ ನೀರೂಡಿಸಲು ವಿ
ಹಂಗ ಬಗೆದಾರೆ ತನ್ನ
ಮುಂಗಟ್ಟಿನ ಮುದ್ದುಮರಿಗಳ್ಗೆ ಗುಟುಕೀಯೆ
ಕಂಗಳರಳಿದವು ರುಕ್ಮಿಣಿಯ ೧೯

ತಣ್ಣನೆಯ ಕಡಲೆಯನ್ನು ಮೇಯಿಸಿ, ನೀರನ್ನು ಕುಡಿಯಲು ಅನುವು ಮಾಡಿಕೊಟ್ಟಾಗ ಪಕ್ಷಿ ತನ್ನ ಮರಿಗಳಿಗೆ ಗುಟುಕು ನೀಡಲು ರುಕ್ಮಿಣಿಯ ಕಣ್ಣು ಅರಳಿದವು.

ಶಿಶುವಾತ್ಸಲ್ಯಮಿನ್ನೆಂತುಟೊ ಬಹುಮುಗ್ಧ
ಪಶುಪಕ್ಷಿಗಳದಿನಿತಾಯ್ತು
ವಸುದೇವ ವಂಶಾಬ್ಧಿ ಚಂದ್ರ ಸಂತಾನ ಶೋ
ಭಿಸುವುದು ಪುಣ್ಯಾಧಿಕರಿಗೆ ೨೦

ಮುಗ್ಧ ಪಶುಪಕ್ಷಿಗಳ ಶಿಶುವಾತ್ಸಲ್ಯ ಇಷ್ಟಾಯಿತು. ವಸುದೇವನ ವಂಶದ ಸಂತಾನ ಪುಣ್ಯಾಧಿಕರಿಗೆ ದೊರಕುವುದು.

ನಾ ಪುತ್ರಸ್ಯ ಲೋಕೋ ನಾಸ್ತಿಯೆಂಬ ಶಾ
ಸ್ತ್ರೋಪದೇಶವ ಕೇಳ್ದೆ ಜೀಯ
ನೀ ಪಾಲಿಸಬೇಕು ನನಗೊರ್ವ ಕಂದರ್ಪ
ರೂಪಾಂತ ವರ ಕುಮಾರಕನ ೨೧

ಪುತ್ತನಿಲ್ಲದಿದ್ದರೆ ಸದ್ಗತಿಯಿಲ್ಲ ಎಂಬ ಶಾಸ್ತ್ರೋಕ್ತಿಯನ್ನು ಕೇಳಿದ್ದೇನೆ. ದಯವಿಟ್ಟು ನನಗೊಬ್ಬ ಮನ್ಮಥನ ರೂಪಾಂತ ಕುಮಾರನನ್ನು ಕರುಣಿಸುವುದೆಂದು ರುಕ್ಮಿಣಿ ಕೃಷ್ಣನಲ್ಲಿ ಬಯಕೆ ತೋಡಿಕೊಂಡಳು.

ನಕ್ಕನು ಕೃಷ್ಣ ನಲ್ಲೆಯ ಮಾತ ಕೇಳ್ದು ನೀ
ಮಕ್ಕಳ ಪಡೆದ ಮಾತ್ರದಲಿ
ಕಕ್ಕಸಮೊಲೆ ಜರಿದಪುದೆಂದು ಕಟಕಿಯ
ನೊಕ್ಕಣಿಸಿದನು ವಲ್ಲಭೆಗೆ ೨೨

ಪ್ರಿಯತಮೆಯ ಮಾತನ್ನು ಕೇಳಿ ಕೃಷ್ಣ ನಕ್ಕನು. ನೀನು ಮಕ್ಕಳನ್ನು ಪಡೆದರೆ ನಿನ್ನ ಬಿರುಮೊಲೆಗಳು ಜರಿದು ಜೋಲು ಬೀಳುತ್ತವೆ ಎಂದು ಕಟಕಿಯಾಡಿದನು.

ಮಗುವುಂಡು ಬಲ್ಮೊಲೆ ತೊರೆದರೆ ಮತ್ತಿಷ್ಟು
ಬಿಗುಹುದೋರುವುದುರಸ್ಥಳದಿ
ಲಗುಗೆಯ್ಯದೆನ್ನ ಬಿನ್ನಪವ ಲಾಲಿಪುದೆಂದು
ಸುಗುಣಂಗೆ ಬಿನ್ನಯಿಸಿದಳು ೨೩

ಮಗು ಹಾಲು ಕುಡಿಯ ತೊಡಗಿದರೆ ಸೊರಬಿಟ್ಟ(ಹಾಲುತುಂಬಿದ ಮೊಲೆಗಳು) ಮೊಲೆಗಳು ಇನ್ನೂ ಬಿರುಗೊಂಡು ದುಂಡಗೆ ಆಕರ್ಷಿಸುವುವು ಎಂದು ಹೇಳಿ, ನನ್ನ ಬಿನ್ನಹವನ್ನು ಲಘುವಾಗಿ ಪರಿಗಣಿಸದೆ ಗಂಭೀರವಾಗಿ ತೆಗೆದುಕೊಳ್ಳಬೇಕೆಂದು ವಿನಂತಿಸಿದಳು.

ದರ್ಪಕ ಹರನಿಂದ ತನುದಗ್ಧವಾದ ಕಂ
ದರ್ಪ ನಿನ್ನಯ ಬಸಿರೊಳಗೆ
ಬರ್ಪನು ನಾ ಕೊಟ್ಟ ವರದೊಳು ತುಸಮಾತ್ರ
ತಪ್ಪದು ಕೇಳಾಯತಾಕ್ಷಿ ೨೪

ಶಿವನಿಂದ ದಗ್ಧನಾದ ಮನ್ಮಥ ನಿನ್ನ ಬಸಿರಲ್ಲಿ ಮತ್ತೆ ಹುಟ್ಟಿ ಬರುವನು. ನನ್ನ ವರ ಹುಸಿಯಾಗದು ಕೇಳು ವಿಶಾಲಾಕ್ಷಿ.

ಪರಿತೋಷವಡೆದು ಪ್ರಾಣೇಶನಂಘ್ರಿಗೆ ನಮ
ಸ್ಕರಿಸಿ ಮೌನದಿ ನಿಂದಿರಲು
ದರುಶನಗೆಯ್ದು ಪ್ರೀತಿಯನಾಂತು ಬಿಡದುಪ
ಚರಿಸಿದ ತನ್ನ ಮಾನಿನಿಯ ೨೫

ಸಂತೋಷಗೊಂಡು ಪ್ರಾಣೇಶನ ಪಾದಕ್ಕೆ ನಮಸ್ಕರಿಸಿ ಮೌನದಿಂದ ನಿಂತಿರಲು ಕೃಷ್ಣನ ಪ್ರೀತಿಯಿಂದ ತನ್ನ ಪ್ರಿಯತಮೆಯನ್ನು ಉಪಚರಿಸಿದನು.

ಚಿತ್ರಾಂಬರ ಭೂಷಣವಿತ್ತು ಪಂಕಜ
ಪತ್ರಾಂಬಕಿಯ ಬೀಳ್ಕೊಟ್ಟು
ಸತ್ರಾಜಿತ ಕುವರಿಯೊಡನಾಗ ಸುಖಿಸಿದ
ಮಿತ್ರಾಪಜಯದ ಸಮಯದಿ ೨೬

ಬಣ್ಣ ಬಣ್ಣದ ವಸ್ತ್ರ ಹಾಗೂ ಒಡವೆಗಳನ್ನು ಕೊಟ್ಟು, ಕಮಲದಳ ನೇತ್ರೆಯಾದ ರುಕ್ಮಿಣಿಯನ್ನು ಬೀಳ್ಕೊಟ್ಟು, ಮಿತ್ರಾಪಜಯದ (ಸೂರ್ಯಾಸ್ತದ, ಮಿತ್ರ=ಸೂರ್ಯ, ಅಪಜಯ=ಸೋಲು, ಮುಳುಗುವಿಕೆ) ಸಮಯದಲ್ಲಿ ಸತ್ರಾಜಿತ ಕುಮಾರಿಯಾದ ಸತ್ಯಭಾಮೆಯೊಡನೆ ಸುಖಿಸಿದನು.

ಸುಖಪಡೆದಿರಲಿತ್ತಲಚ್ಯುತನತ್ತ ಭೀ
ಷ್ಮಕರಾಯನಾತ್ಮಸಂಜಾತೆ
ನಖಬಣ್ಣವ ಕಂಡು ನಾಲ್ದಿನ ಕಳೆದು ವೈ
ಶಾಖದಲಿ ಮಿಂದಳುತ್ಸವದಿ ೨೭

ಇತ್ತ ಶ್ರೀಕೃಷ್ಣ ಸುಖಪಡುವಾಗ, ಅತ್ತ ಭೀಷ್ಮಕರಾಯನ ಮಗಳಾದ ರುಕ್ಮಿಣಿ ಉಗುರು ಬಣ್ಣವನ್ನು ಕಂಡು, ನಾಲ್ಕು ದಿನ ಕಳೆದು ವೈಶಾಖದಲ್ಲಿ ಸಂತೋಷದಿಂದ ಸ್ನಾನ ಮಾಡಿದಳು.

ಉಣಲುದ್ಯೋಗಿಸಿದಳು ಮೇಲೆ ವಸ್ತ್ರ ಭೂ
ಷಣ ಮಾಲ್ಯಾನುಲೇಪನದಿ

ಗುಣಯುತೆ ಶೃಂಗಾರವಾಂತಿರೆ ನಾರಾ
ಯಣ ಬಂದನತಿ ಹರುಷದಲಿ ೨೮

ಉಡುಗೆ ತೊಡುಗೆ ಹೂವಾಲೆ ಸುಗಂಧಾನುಲೇಪನದಿಂದ ಶೃಂಗಾರಗೊಂಡು, ಬಯಕೆಯ ಆಹಾರಪಾನಾದಿಗಳನ್ನು ಸೇವಿಸುವಾಗ ನಾರಾಯಣ ಅತಿ ಹರುಷದಿಂದ ಬಂದನು.

ಮೂಜಗದೆರೆಯನ ಕಾಲ್ತೊಳೆದಳು ಹೊನ್ನ
ಭಾಜನ ಗಂಧವಾರಿಯಲಿ
ತೇಜೋಮೂರ್ತಿ ತನ್ನ ಸತಿಗೂಡಿ ಕುಳಿತ ಸ
ರೋಜಾಕ್ಷ ಮಣಿಮಂಚದಲ್ಲಿ ೨೯

ಚಿನ್ನದ ಪಾತ್ರೆಯಲ್ಲಿದ್ದ ಪರಿಮಳಯುಕ್ತ ನೀರಿನಿಂದ ಮೂಜಗದೊಡೆಯನ ಕಾಲು ತೊಳೆಯಲು, ತೇಜಸ್ವಿ ಕಮಲಾಕ್ಷ ತನ್ನ ಸತಿಜೊತೆ ಮಣಿಮಂಚದಲ್ಲಿ ಕುಳಿತ.

ನೋಟಕಚ್ಚರಿಯಾದ ಪರಮಸುಂದರಿಯ ಕೈ
ಮಾಟದಿಂದುಪಚಾರವಡೆದು
ಕೂಟಸ್ಥಿತಿಯಲ್ಲಿ ಸುಖವಡಿಸುತ ನರ
ನಾಟಕವನುರೆ ಬಿತ್ತಿದನು ೩೦

ನೋಟಕ್ಕೆ ಆಶ್ಚರ್ಯವೆನಿಸುವ ಪರಮಸುಂದರಿಯ ಕೈಮಾಟದಿಂದ ಉಪಚಾರ ಪಡೆದು ಸಂಭೋಗದಲ್ಲಿ ಸುಖಪಡಿಸುವ ನರನಾಟಕವನ್ನು ಬಿತ್ತಿದನು.

ಅತುಳ ಬಲಾಢ್ಯ ಭೀಷ್ಮಕರಾಯ ಸತ್ರಾ
ಜಿತ ಕುವರಿಯರ ರಮ್ಯ ಮೋಹ
ಉತುಪತ್ತಿಯಾಗಿ ಪ್ರಜ್ವಲಿಸುವ ತೆರದಿ ಶ್ರೀ
ಪತಿ ಕೃಷ್ಣನಪ್ಪಿದ ಮುದದಿ ೩೧

ಬಹಳ ಬಲಾಢ್ಯರಾದ ಭೀಷ್ಮಕರಾಯ ಮತ್ತು ಸತ್ರಾಜಿತ ಕುವರಿಯರ ರಮ್ಯ ಮೋಹ ಹುಟ್ಟುವಳಿಯಾಗಿ ಪ್ರಜ್ವಲಿಸುವಂತೆ ಶ್ರೀಕೃಷ್ಣ ಮುದದಿಂದ ಅಪ್ಪಿದನು.

ಇಂದುವದನೆ ರುಕ್ಮಿಣಿದೇವಿಗೆ ಗರ್ಭ
ನಿಂದು ಗರ್ಭಿಣಿಯಾಗಲೊಡನೆ
ಮುಂದುವರೆದು ಮೇಘ ಗರ್ಜಿಸಿದುವು ದೇವ
ದುಂದುಭಿಗಳು ಮೊಳಗಿದಂತೆ ೩೨

ಚಂದ್ರಮುಖಿ ರುಕ್ಮಣಿಗೆ ಗರ್ಭನಿಂತು ಗರ್ಭಿಣಿಯಾಗಲೊಡನೆ ದೇವದುಂದುಭಿಗಳಂತೆ ಮೇಘ ಮೊಳಗಿದವು.

ಇಂಚರದಮರಿಯರೊಡನಾಡುವ ನೇತ್ರ
ಲಾಂಛನಗುರೆ ಮೇಘವೆಣ್ಣು
ಸಂಚಲ ದೃಗುಸನ್ನೆಯ ಮಾಡಿದಂದದಿ
ಮಿಂಚಡರಿತು ನಭ ಸ್ಥಲದಿ ೩೩

ಮಧುರಸ್ವರದ ಸುರಸುಂದರಿಯರೊಡನಾಡುವ ನೇತ್ರಲಾಂಛನ (ಕಡಗೋಲು ಹಗ್ಗದ ಚಿಹ್ನೆ) ನಾದ ಕೃಷ್ಣನಿಗೆ ಮುಗಿಲವೆಣ್ಣು ಕಣ್‌ಸನ್ನೆ ಮಾಡಿದಂತೆ ಆಕಾಶದಲ್ಲಿ ಮಿಂಚು ಫಳಾರಿಸಿತು.

ಕಡುಗೋಪಿ ದನುಜವಿದಾರಣ ನರಸಿಂಹ
ನಡುವಜ್ರಗಂಬವನೊಡೆದು
ಘುಡಿಘುಡಿಸುತ ಪೊರಮಟ್ಟಂತೆ ಮಹದಾದಿ
ಸಿಡಿಲೆರಗಿದುವು ಖೇಚರದಿ ೩೪

ಮಹಾಕೋಪಿಯೂ, ರಾಕ್ಷಸ ವಿಧ್ವಂಸಕನೂ ಆದ ನರಸಿಂಹ ವಜ್ರಗಂಬವನ್ನು ಒಡೆದು ಘುಡುಘುಡಿಸುತ್ತಾ ಹೊರನುಗ್ಗಿದಂತೆ, ಆಕಾಶದಲ್ಲಿ ಸಿಡಿಲು ಗರ್ಭಸೀಳುವಂತೆ ಗರ್ಜಿಸಿದವು.

ಜಂಭಾರಿ ತನ್ನೈರಾವತ ನೀರಾಟ
ಗೊಂಬುದ ನೋಡಬೇಕೆಂದು
ಪೊಂಬಳ್ಳಿಗಂಟೆಯ ಬಿಗಿದಂತೆ ಸುರಚಾಪ
ಸಂಭ್ರಮವಾಯ್ತು ಕಣ್ಮನಕೆ ೩೫

ಇಂದ್ರ ತನ್ನ ಐರಾವತ ನೀರಾಟವಾಡುವುದನ್ನು ನೋಡಬೇಕೆಂದು ಹೊಂಬಳ್ಳಿ ಹಾರವನ್ನು ಹಾಕಿದಂತೆ ಕಾಮನಬಿಲ್ಲು ಕಣ್ಮನಕ್ಕೆ ಹಬ್ಬವನ್ನುಂಟುಮಾಡಿತು.

ತಾಪಸಸೂರ್ಯ ತನ್ನಯ ವಂಶೋತ್ಪನ್ನ
ಭೂಪಾಲಕರಿಗೆ ಕೂರ್ತು
ರೂಪಾಂತು ಕೆಂಬರಳ್ಗರೆದ ಬಗೆಯೊಳಿಂದ್ರ
ಗೋಪದ ಪುಳು ಉದುರಿದುವು ೩೬

ಸೂರ್ಯ ತನ್ನ ವಂಶದ ರಾಜರಿಗೆ ಪ್ರೀತಿಯಿಂದ ಕೆಂಪು ಹರಳುಗಳನ್ನು ಕರೆದ ಎಂಬಂತೆ ಇಂದ್ರಗೋಪ(ಮಿಂಚುಹುಳ) ಹುಳುಗಳು ಉದುರಿದವು.

ತುರುಗಿದ ಕಾಯಿಪಣ್ಗಳ ಸಾಲು ವೃಕ್ಷವ
ಮುರಿದು ಧೂಳಿಯ ಚೆಲ್ಲುತ್ತ
ಸುರಿವ ಸೊಂಡಿಲ ನೀರ್ಗರೆಯುತ ಬಂದುದು
ಬಿರುಗಾಳಿ ಮದಗಜದಂತೆ ೩೭

ಗಿಟಿಕರಿವ ಕಾಯಿಹಣ್ಣುಗಳ ಮರಗಳನ್ನು ಮುರಿದು, ಧೂಳೀಪಟ ಮಾಡುತ್ತಾ, ಸೊಂಡಿಲೊಳಗೆ ನೀರನ್ನು ಸುರಿಸುತ್ತಾ ಬಿರುಗಾಳಿ ಮದಿಸಿದ ಆನೆಯಂತೆ ಬಂದಿತು.

ನರ್ತಿಪ ನವಿಲ ನಾಂಟ್ಯಕೆ ಮೆಚ್ಚಿ ಪುರುಹೂತ
ತೆತ್ತೀಸ ಕೋಟಿ ನಿರ್ಜರರು
ಮುತ್ತಿನ ತ್ಯಾಗವ ಕೊಟ್ಟಂತೆ ಆಲಿಕಲ್
ಬಿತ್ತುದುರಿದವು ಉರ್ವಿಯಲಿ ೩೮

ನರ್ತಿಸುವ ನವಿಲ ನಾಟ್ಯಕ್ಕೆ ಮೆಚ್ಚಿ ಇಂದ್ರ ಹಾಗೂ ಮೂವತ್ತುಮೂರು ಕೋಟಿ ದೇವತೆಗಳು ಮುತ್ತುಗಳ ದಾನ ನೀಡಿದಂತೆ ಆಲಿಕಲ್ಲು ಬಿತ್ತಬೀಜ ಭೂಮಿಗೆ ಉದುರಿದವು.

ಬರಿವನಿಗಳಿದಿರ್ವನಿಗಳು ಮಸ್ತಕವನಿ
ತೊರೆವನಿಗಳನಾಂತು ಬಿಡದೆ
ನೆರೆವಿಶ್ವರೂಪಾದಂತೆ ಸಂತತ ಧಾರೆ
ಸುರಿದುದೀಗಳಿಳೆಯೊಳಗೆ ೩೯

ಪಕ್ಕದ ಹನಿ, ಎದುರು ಹನಿ, ನೆತ್ತಿಹನಿ, ಜಿನುಗುಹನಿಗಳ ಸತತ ವರ್ಷಧಾರೆ ವಿಶ್ವರೂಪ ತಾಳಿದಂತೆ ಭೂಮಿಗೆ ಸುರಿಯತೊಡಗಿತು.

ಕ್ಷಿತಿಯೊಳು ಮಹದಾದಿ ಕೆರೆ ತೊರೆ ತುಂಬಿ ಗೋ
ಮತಿ ಬಂದುದೂರ ಬಾಗಿಲಿಗೆ
ಸತಿಯರೊಂದಾಗಿ ಹರ್ಮ್ಯವನೇರೆ ಶ್ರೀಕೃಷ್ಣ
ನತಿ ಹರ್ಷದಿ ನೋಡುತಿರ್ದ ೪೦

ನಾಡಲ್ಲಿ ಕೆರೆತೊರೆ ತುಂಬಿ ಗೋಮತಿ ನದಿಯ ನೆರೆ ಊರ ಬಾಗಿಲಿಗೆ ಬರತೊಡಗಿದಾಗ ಪತ್ನಿಯರು ಸೌಧವನ್ನು ಹೇರುವ ದೃಶ್ಯವನ್ನು ಶ್ರೀಕೃಷ್ಣ ಸಂತಸದಿಂದ ನೋಡುತ್ತಿದ್ದನು.

ಕೊಡೆ ಮೋಹಿಗಪ್ಪಡ ಗೊಂಗಡಿ ಬಹುರಮ್ಯ
ವಡೆದಿರ್ದ ಸಕಲಾತಿದಳೆದು
ಬಿಡೆಯವಿಲ್ಲದೆ ಪುರದೊಳು ನೀರ್ಮನುಜರಂ
ತೆಡೆಯಾಡುತಿರ್ದರೂರುಗರು ೪೧

ಕೊಡೆ, ಮೇಣಗಪ್ಪಡ, ಗೊಂಗಡಿ(ಕಂಬಳಿ), ಸುಂದರ ಸಕಾಲಾತಿ(ನಕ್ಕಿ ಮಾಡಿದ ವಸ್ತ್ರ) ಗಳನ್ನು ಹೊದ್ದು ಸಂಕೋಚವಿಲ್ಲದೆ ಊರಿನವರು ನೀರ್ಮನುಜರಂತೆ ಅಡ್ಡಾಡುತ್ತಿದ್ದರು.

ಬೀತುದು ಮಳೆಗಾಲ ಜಲ ನೆಲೆಗೊಂಡುದು
ಶ್ವೇತಾರುಣಾಬ್ಜ ಕೊಬ್ಬಿದುವು
ಪೂತುದು ಕುರವಕ ಫಲಪಣ್ಣು ಬರಲು ಮೆ
ಯ್ಯಾತುದು ಮಾಗಿ ಮರ್ತ್ಯರಿಗೆ ೪೨

ಮಳೆಗಾಲ ಕಳೆಯಿತು. ಜಲ ನೆಲೆಗೊಂಡಿತು. ಬಿಳಿ ಕೆಂಪು ಕಮಲಗಳು ಹುಲಸಾಗಿ ಬೆಳೆದು ತಲೆದೂಗತೊಡಗಿದವು. ಕೆಂಪು ಹೂವಿನ ಗೋರಂಟಿ ಗಿಡ (ಕುರುವಕ)ಹೂ ಬಿಟ್ಟಿತು; ಹಣ್ಣು ಹಂಪಲು ಬರಲು ಮರ್ತ್ಯವನ್ನು ಮಾಗಿ ಹಿಡಿಯಿತು.

ನೀರೆ ಕೇಳು ಬನದೊಳು ಹಿಮನೆಂಬ ಚೋರ ಮೈ
ದೋರೆ ಪಾದಪ ಲಕ್ಷ್ಮಿ ಬೆದರಿ
ಸೂರೆಗೊಟ್ಟಂದದಿ ಪರಳ್ಗಾಯಿ ಮೊದಲ್ಗೊಂಡು
ತಾರೆಲೆಯ ನೆಲಕುದುರಿಸದಳು ೪೩

ಬನದಲ್ಲಿ ಚಳಿಯೆಂಬ ಚೋರ ಸುಳಿದದ್ದೇ ತಡ ವೃಕ್ಷಲಕ್ಷ್ಮಿ ಹೆದರಿಕೊಂಡು ಕೊಳ್ಳೆಗೆ ತಾನೇ ಕೈಜೋಡಿಸುವಂತೆ ಪರಳ್ಗಾಯಿ (ಹೀಚುಗಾಯಿ) ಮೊದಲುಗೊಂಡು ತರಗೆಲೆಗಳ ನೆಲಕುದುರಿಸಿದಳು.

ಎಡೆವಿಡದೆ ಎಲ್ಲ ಕೆರೆತೊರೆ ಭಾವಿಯೊಳಗೆ
ತಡಿಗರ್ಚಿದುವು ನೀರ್ವಕ್ಕಿ
ತಡೆಯದೆ ಬಹುಮೃಗ ಪೊಸತುಪ್ಪುಳಾಂತ ಮೈ
ನಡುಗಲ್ಕೆ ನರರಳಲಿದರು ೪೪

ಚಳಿಯಿಂದ ಕೊರೆಯುವ ನೀರಿನಲ್ಲಿರಲಾಗದೆ ನೀರಹಕ್ಕಿಗಳು ಕೆರೆತೊರೆ ಬಾವಿಗಳಲ್ಲಿ ದಡಕ್ಕೆ ಕಚ್ಚಿಕೊಂಡಿದ್ದರೆ ಹಲವು ಪ್ರಾಣಿಪಕ್ಷಿಗಳ ತುಪ್ಪಳ(ಪುಕ್ಕ ಉಣ್ಣೆ) ವನ್ನು ಧರಿಸಿದ ನರರ ಮೈ ನಡುಗಲು ಅಳತೊಡಗಿದರು.

ಕುಟಿಲಾಳಕಿಯರ ನುಣ್ಣಲ್ಲ ತೊಂಡೆವ
ಣ್ದುಟಿಯ ಕರ್ದುಕಿ ಮೆಯ್ನವಿರ
ಸುಟಿಯಿಂದ ಗುಡಿಗಟ್ಟಿಸುವ ಮಾಗಿಯ ಹಿಮ
ವಿಟನಂತೆ ಕಣ್ಗೆ ರಂಜಿಸಿತು ೪೫

ಗುಂಗುರುಕೂದಲ ಕೋಮಲೆಯರ ನುಣ್ಣನೆಯ ಗಲ್ಲ, ತೊಂಡೆಹಣ್ಣಿನ ತುಟಿಯ ಕಚ್ಚಿ ಮೈನವಿರೇಳಿಸುವ ಮಾಗಿಯ ಚಳಿ ವಿಟನಂತೆ ಕಣ್ಣಿಗೆ ಕಂಡಿತು.

ಪಗಲಾಣ್ಮ ನಡನಡುಗಿದ ಹುತಾಶನ ಬೇರೆ
ನೆಗಳಿದ ಪಡಿಗಿಚ್ಚ ತನಗೆ
ಮಗಳಕೊಟ್ಟವನ ಭಂಗಿಸಿ ರುದ್ರ ಹಳೆಯಾನೆ
ದೊಗಲುಟ್ಟ ಹಿಮದುಪಟಳಕೆ ೪೬

ಹಿಮ(ಚಳಿಯ)ದ ಕಾಲಕ್ಕೆ ಹಗಲೊಡೆಯನಾದ ಸೂರ್ಯ ಗಡಗಡ ನಡುಗಿದ, ಅಗ್ನಿ ಕೈಮೈ ಕಾಯಿಸಿಕೊಳ್ಳಲು ಕಿಚ್ಚೊಂದನ್ನು ಪಡಿಮೂಡಿಸಿದ, ಮಗಳ ಕೊಟ್ಟ ಮಾವನನ್ನು (ಹಿಮವತ್ ಪರ್ವತ) ಭಂಗಿಸಿ, ಶಿವರುದ್ರ ಹಳೆಯಾನೆ ಚರ್ಮವನ್ನು ಉಟ್ಟ ತೊಟ್ಟ.

ಮಲಯಜಧೂಳಿ ಲೇಪಿಸಿದ ಜವಾಜಿ ಬೆ
ಳ್ಳೆಲೆ ಪೂಗ ಚೂರ್ಣದಂಬುಲದಿ
ಕಲೆವಂತರಪಹರಿಸಿದರು ಮಾಗಿಯ ಬಟ್ಟ
ಮೊಲೆವೆಣ್ಗಳ ತೆಕ್ಕೆವಡೆದು ೪೭

ಶ್ರೀಗಂಧ ಧೂಳಿ ಲೇಪಿತ ಜವಾಜಿ, ಬಿಳಿಯೆಲೆ, ಕಳಿಯಡಕೆ, ಕೆನೆಸುಣ್ಣ ಸಂಮಿಶ್ರಿತ ತಾಂಬೂಲ ಸೇವನೆಯಿಂದ ಹಾಗೂ ದುಂಡಮೊಲೆ ಹೆಣ್ಣುಗಳ ಚುಂಬನಾಲಿಂಗನದಿಂದ ಕಲಾವಂತ ರಸಿಕರು ಮಾಗಿಯನ್ನು ಮೂಲೆ ಹಿಡಿಯುವಂತೆ ಮಾಡಿದರು

ಜಾರಿತು ಮಹದಾದಿ ಶೀತ ಬೇಸಗೆ ಮೆ
ಯ್ದೋರಿತು ನಸು ಶೈತ್ಯವನು
ಬೀರಿತು ತಂಗಾಳಿ ಮಾಂದಳಿರೆಸರೀಂಟಿ
ಚೀರಿತು ಕಲಕಂಠ ನಿಚಯ ೪೮

ಚಳಿಗಾಲ ಜಾರಿತು, ಬೇಸಿಗೆಕಾಲ ಮುಖ ತೋರಿತು, ತುಸು ತಂಪನ್ನು ತಂಗಾಳಿ ಬೀರಿತು, ಮಾವಿನ ಚಿಗುರಿನ ರಸವನ್ನು ಹೀರಿ ಕೋಗಿಲೆ ಚೀರಿತು.

ಚೆಂಬಣ್ಣ ಮಾಂದಳಿರಸುಗೆ ಪುನ್ನಾಗ ದಾ
ಳಿಂಬ ತ್ರಿವರ್ಣ ಪುಷ್ಪಗಳು
ಮುಂಭಾಗದಲಿ ತೋರುವ ವಸಂತನನಿದಿ
ರ್ಗೊಂಬಂತೆ ಬನದಿ ಮೆರೆದವು ೪೯

ಕೆಂಬಣ್ಣದ ಮಾವಿನ ಚಿಗುರು, ಅಶೋಕ, ಸುರಹೊನ್ನೆ, ದಾಳಿಂಬೆ ತ್ರಿವರ್ಣ ಪುಷ್ಪಗಳು ಎದುರಾದ ವಸಂತ ಋತುವನ್ನು ಎದುರುಗೊಳ್ಳುವಂತೆ ವನದಲ್ಲಿ ಮೆರೆದವು.

ಭೃಂಗ ಕೈದುಡುಕದ ಸೌರಭ್ಯವಾಂತ ಪು
ಷ್ಪಗಳ ತೋರ ಮೊಲ್ಲೆಗಳ
ಕಂಗೊಳಿಸುವ ಮಾದಳವಣ್ಣ ತಂದಿತ್ತು
ರಂಗನ ಕಂಡ ತೋಟಿಗನು ೫೦

ದುಂಬಿಗಳು ಎಂಜಲು ಮಾಡದ ಪರಿಮಳಯುಕ್ತ ಪುಷ್ಪಗಳನ್ನು ದೊಡ್ಡ

ಮೊಲ್ಲೆ ಹೂಗಳನ್ನು ಹಾಗೆಯೇ ಮಾದಲ ವೃಕ್ಷದ ಹಣ್ಣುಗಳನ್ನು ತೋಟಿಗನು ತಂದುಕೊಟ್ಟ ಕೃಷ್ಣನನ್ನು ನೋಡಿದನು.

ಬನದೊಳು ನಿಖಿಳ ಪಾದಪ ಲತಾಳಿ ಹಬ್ಬಿ
ಕೊನರಿತು ಪೂತು ಕಾತಿರಲು
ಜನನಾಥ ನೋಡ ಚಿತ್ತೈಸಬೇಕೆಂದು ತ
ದ್ವನಪಾಲ ಬಿನ್ನೈಸಿದನು ॥೧

ವನದಲ್ಲಿ ಎಲ್ಲಾ ವೃಕ್ಷಗಳು, ಬಳ್ಳಿಗಳು ಹಬ್ಬಿ ಚಿಗುರಿದವು, ಹೂಬಿಟ್ಟವು, ಕಾಯಾದವು, ನೀನು ಬಂದು ಆ ಐಸಿರಿಯನ್ನು ನೋಡಬೇಕೆಂದು ವನಪಾಲ ಕೃಷ್ಣನಿಗೆ ವಿನಂತಿಸಿದನು.

ಪ್ರೀತಿಯಿಂದವನ ಮನ್ನಿಸಿಯಾಕ್ಷಣ ಗಾಡಿ
ಕಾತಿಯರೊಡನೆ ಶ್ರೀಕೃಷ್ಣ
ನೀತಿದಪ್ಪದೆ ಬನವ ಪೊಕ್ಕ ಲೀಲಾ ವಿ
ಖ್ಯಾತಿಯನೇನ ಬಣ್ಣಿಪೆನು ॥೨

ಪ್ರೀತಿಯಿಂದ ಆ ವನಪಾಲಕನ ಕರೆಯನ್ನು ಮನ್ನಿಸಿ, ಆ ಕ್ಷಣವೇ ಗಾಡಿಕಾತಿ(ಸುಂದರಿ)ಯರೊಡನೆ ನೀತಿ ತಪ್ಪದೆ ವನ ಪ್ರವೇಶಿಸಿದ ಕೃಷ್ಣನ ಲೀಲೆಯನ್ನೇನು ಬಣ್ಣಿಸಲಿ?

ಬೆಂಬಿತ್ತಿಲ ತೋಟ ಹಳುವಾದುದೆಂಬ ನಿ
ತಂಬಿನಿಯರ ಗುಂಪಿನಲಿ
ಗಂಭೀರವಡೆದ ರುಕ್ಮಿಣಿದೇವಿ ವಿಶ್ವಕು
ಟುಂಬಿಗೆ ಬಿನ್ನಯಿಸಿದಳು ॥೩

ಬೆನ್ನ ಹಿಂದಿನ ಹಿತ್ತಿಲ ತೋಟ ಕಾಡಾದುದೆಂಬ ಲಘುಮಾತಿನ ಲಲನೆಯರ ಗುಂಪಿನಲ್ಲಿ ಗಾಂಭೀರ್ಯದ ರುಕ್ಮಿಣಿದೇವಿ ವಿಶ್ವಕುಟುಂಬಿಯಾದ ಕೃಷ್ಣನಿಗೆ ನಮಿಸಿ ಪ್ರಾರ್ಥಿಸಿದಳು.

ಕನ್ನೈದಿಲೆ ತಾವರೆಗೊಳ ಲಾಮಂಚ
ಮುನ್ನೆಗಳ್ಚಿದ ಪರ್ಣಶಾಲೆ

ಚೆನ್ನೆಯರು ಪಾರುಗುಪ್ಪೆಯನಾಡುವ ಮಣ
ಲ್ದಿನ್ನೆಯ ನೋಡಿ ಹಿಗ್ಗಿದನು ೫೪

ಕನ್ನೈದಿಲೆ, ತಾವರೆಗೊಳ ಲಾಮಂಚ(ಪರಿಮಳಯುಕ್ತ ಮೂಲಿಕೆ)ದಿಂದ ನಿರ್ಮಿಸಿದ ಪರ್ಣಶಾಲೆ ಹಾಗೂ ಮಳಲದಿಣ್ಣೆಯ ಮೇಲೆ 'ಪಾರುಗುಪ್ಪೆ'ಯನಾಡುವ ಬೆಡಗಿಯರನ್ನು ಕಂಡು ಹಿಗ್ಗಿದನು.

ಲವಣಾಬ್ಧೀಶನ ಬೀಳ್ಕೊಂಡು ಸುರಗಂಗೆ
ತವರೂರಿಗೆ ಬಂದಳೆನಿಸಿ
ದ್ರವಗಲ್ಲ ಸೋಪಾನದ ಸರೋವರ ಕೇ
ಶವನ ಕಣ್ಮನಕೆ ರಂಜಿಸಿತು ೫೫

ಉಪ್ಪುಕಡಲೊಡೆಯನನ್ನು ಬೀಳ್ಕೊಂಡು ಸುರಗಂಗೆ ತವರುಮನೆಗೆ ಬಂದಳೆಂಬಂತೆ ಚಂದ್ರಕಾಂತ ಶಿಲೆಯ ಸೋಪಾನದ ಸರೋವರ ಕೇಶವನ ಕಣ್ಮನಕೆ ಮುದ ನೀಡಿತು.

ನೇಸರ ಪ್ರಭೆಯಂತೆ ಹೊಳೆವ ಮಾಣಿಕ್ಯ ಸಿಂ
ಹಾಸನದೊಳು ಕೃಷ್ಣ ಕುಳಿತು
ಪೂಸರ ಗರ್ಭಿಣಿ ಮಾದಲಾದ ರಾಣೀ
ವಾಸಕೆ ವನವನೊಪ್ಪಿಸಿದ ೫೬

ಸೂರ್ಯಪ್ರಭೆಯಂತೆ ಹೊಳೆಯುವ ರತ್ನ ಸಿಂಹಾಸನದಲ್ಲಿ ಕೃಷ್ಣ ಕುಳಿತು, ಬಸುರಿ ರುಕ್ಮಿಣಿ ಮೊದಲಾದ ರಾಣೀವಾಸಕೆ ವನವನ್ನು ಒಪ್ಪಿಸಿದ.

ಚಂದನಗಂಧಿ ರುಕ್ಮಿಣಿ ಸತ್ಯಭಾಮೆಯರು
ನಂದನದೊಳು ಪೊಕ್ಕುಸುಳಿಯೆ
ಸಂದಣಿಸಿದ ವೃತ್ತಕುಚೆಯರ ಮೈಗಂಪು ಶ್ರೀ
ಗಂಧಕಂಪ ಕೀಳ್ಪಡಿಸಿದುವು ೫೭

ಶ್ರೀಗಂಧ ಸುವಾಸನೆಯ ರುಕ್ಮಿಣಿ ಸತ್ಯಭಾಮೆಯರು ನಂದನವನ್ನು ಹೊಕ್ಕಾಗ ಅವರನ್ನು ಹಿಂಬಾಲಿಸಿದ ವೃತ್ತಕುಚೆಯರ ಮೈಗಂಪು ಶ್ರೀಗಂಧದ ಕಂಪನ್ನು ಕೀಳ್ಪಡಿಸಿತು.

ಮಳಲೊಟ್ಟಿಲನೇರಿ ಪಾರುಗುಪ್ಪೆಯನಾಡಿ
ಬಳಲ್ದವಯವದ ಬೆಮರಾಂತ
ಕೆಳದಿಯರ ಕೈಸೋಕಲು ಸೌರಭ್ಯವನು
ತಳೆದುವನೇಕ ಪುಷ್ಪಗಳು ೫೮

ಮಳಲರಾಶಿಯನ್ನು ಹತ್ತಿ ಪಾರುಗುಪ್ಪೆಯಾಟವಾಡಿ ಬಳಲಿದ ಅವಯವದಿಂದ ಬೆವರು ಸುರಿಯುವ ಕೆಳದಿಯರ ಕೈಸೋಕಲು ಬಹುಪಾಲು ಪುಷ್ಪಗಳು ಪರಿಮಳವನ್ನು ಪಡೆದವು.

ಕಯ್ದಣಿವನಕ ನಾನಾ ಬಗೆಯ ಸುಮಗಳ
ಕೊಯ್ದು ಪೊಟ್ಟಣವ ಕಟ್ಟಿದರು
ತೊಯ್ದರು ನೀರಾಟವನಾಡಿ ಸೊಬಗಾಂತ
ರಯ್ದೆಯರುಗಳು ಸಂತಸದಿ ೫೯

ಕೈದಣಿವ ತನಕ ನಾನಾ ಬಗೆಯ ಹೂಗಳನ್ನು ಕೊಯ್ದು ಪೊಟ್ಟಣ ಕಟ್ಟಿದರು. ಆಯಾಸಗೊಂಡು ಬೆವರಿನಿಂದ ತೊಯ್ದರು. ನೀರಾಟವಾಡಿ ಮುತ್ತೈದೆಯರು ಸೊಬಗಾಂತು ಸಂತಸಪಟ್ಟರು.

ಅಂಬು ಹಳದಿ ಕಾರ್ಗೆಣಸು ನೀರುಳ್ಳಿ ಕೊ
ತ್ತುಂಬರಿ ಕರಿಬೇವು ಸಹಿತ
ಸಿಂಬೆ ಕೂಗಲಿ ಪಿಪ್ಪಲಿ ಕಾಯ ಕೊಯ್ದರು
ನಿಂಬೆಯ ಕಳಿವಣ್ಗಳೊಡನೆ ೬೦

ಅಂಬು(ಮಡಿವಾಳ), ಹಳದಿ(ಅರಿಶಿನದ ಕೊಂಬು)ಕಾರ್ಗೆಣಸು, ಈರುಳ್ಳಿ, ಕೊತ್ತಂಬರಿ, ಕರಿಬೇವು, ಸಿಂಬೆ(ಸೀಬೆ), ನಿಂಬೆ, ಕೂಗಲಿ, ಪಿಪ್ಪಲಿ ಕಾಯಿಗಳನ್ನು ಕಿತ್ತು ಮಡಿಲಲ್ಲಿ ತುಂಬಿಕೊಂಡರು.

ಕಸ್ತೂರಿಗಂಧಿಯರು ಬನದೊಳು ಬಹುವಿಧ
ವಸ್ತುಗಳ ಸಂಗ್ರಹಿಸಿಕೊಂಡು
ಮುಸ್ತೈದೆಯರಾಗಿ ಬಂದರು ಪರಮ ಪ
ದಸ್ಥ ಶ್ರೀಕೃಷ್ಣನಿದ್ದೆಡೆಗೆ ೬೧

ಹೀಗೆ ಕಸ್ತೂರಿಗಂಧಿಯರು ಬನದಲ್ಲಿ ನಾನಾ ಬಗೆಯ ವಸ್ತುಗಳನ್ನು

ಸಂಗ್ರಹಿಸಿಕೊಂಡು ಮುಸ್ತೈದೆ(ಮುಸ್ತೈದು=ಸಾಮಾನು ಸರಂಜಾಮು)ಯರಾಗಿ ಪರಮಪದಸ್ಥ ಶ್ರೀಕೃಷ್ಣ ಇರುವಲ್ಲಿಗೆ ಬಂದರು.

ತೆಂಗಾಯಿ ಪಲಸು ಕಿತ್ತಳೆ ಮಾವು ಮಾದಲ
ಶೃಂಗಾಟಕವಣ್ಗಳು ಸಹಿತ
ಹಿಂಗದೆ ಬಹುಫಲಾದಿಗಳ ತೋಂಟಿಗರು ಸಾ
ರಂಗಪಾಣಿಗೊಪ್ಪಿಸಿದರು ೬೨

ತೆಂಗಾಯಿ,ಹಲಸು,ಕಿತ್ತಳೆ, ಮಾವು, ಮಾದಲ, ಶೃಂಗಾಟಕ,(ಕಾರೆ, ಮಿಲ್ಡಿ ಹಣ್ಣಿನಂಥವು) ಹಣ್ಣುಗಳ ಸಮೇತ ತೋಟಗಾರರು ಸಾರಂಗ ಪಾಣಿಗೆ (ಬಣ್ಣ ಬಣ್ಣದ ಹಸ್ತದ ಕೃಷ್ಣನಿಗೆ) ಅರ್ಪಿಸಿದರು.

ಕಟ್ಟಳೆ ಕಡೆಮೊದಲಿಲ್ಲ ನೋಡಿದರೆ ಪೊಂ
ಬೆಟ್ಟದಂತಿರ್ದ ಫಣ್ಫಲವ
ಬಟ್ಟಜವ್ವನೆ ರುಕ್ಮಿಣಿ ಸತ್ಯಭಾಮೆಗೆ
ಕೊಟ್ಟ ಮಿಕ್ಕುದನುಳಿದರ್ಗೆ ೬೩

ಕಟ್ಟಳೆಗೆ ಮೊದಲು ಕೊನೆಯಿಲ್ಲ, ಬೆಟ್ಟದಷ್ಟಿದ್ದ ಹಣ್ಣು ಹಂಪಲವನ್ನು ಬಟ್ಟ ಯೌವನಸ್ಥೆಯರಾದ ರುಕ್ಮಿಣಿ ಸತ್ಯಭಾಮೆಯರಿಗೆ ಕೊಟ್ಟು, ಉಳಿದುದನ್ನು ಮಿಕ್ಕವರಿಗೆ ಕೊಟ್ಟ.

ಸಂತಸವಡೆದೊರ್ವ ಸಲುಗೆವೆಗ್ಗಡಿತಿ ಕಾ
ರ್ಗುಂತಳೆಯರಿಗೆ ಪೇಳಿದಳು
ಇಂತಪ್ಪ ಸೊರೆಯ ಸೇವಿಸಿ ತೆಳ್ದೇಹ
ಮಂ ತಾಳ್ದಿರೆಂತೆಂದು ನಗುತ ೬೪

ಹಿಗ್ಗಿದ ಸಲುಗೆ ಸದರವುಳ್ಳ ಹೆಗ್ಗಡತಿಯೊಬ್ಬಳು ಇಷ್ಟೆಲ್ಲ ಹಣ್ಣು ಹಂಪಲು ವಸ್ತುಗಳನ್ನು ಸ್ವಾಹಾ ಮಾಡುವ ನೀವು ಅದು ಹೇಗೆ ತೆಳುವಾದ ದೇಹ ಹೊಂದಿದ್ದೀರಿ ಎಂದು ಗೇಲಿ ಮಾಡಿದಳು.

ಪೊಡವಿಗೆ ಸಿರಿವಂತ ಬಲವಂತ ಗುಣವಂತ
ಗಡ ಕೃಷ್ಣ ನಿನ್ನಾಳಿಯರ್ಗೆ

ಬಡತನವಪಜಯ ಮೂಢತ್ವ ತ್ರಿಸ್ಥಾನ
ವೆಡೆಗೊಂಡು ಬಿಡದೆಂದಳವಳು ೬೫

ಇಡೀ ಭೂಮಂಡಲಕ್ಕೆ ಸಿರಿವಂತನೂ, ಬಲವಂತನೂ, ಗುಣವಂತನೂ ಆದ ಕೃಷ್ಣ ಪರಮಾತ್ಮ ನಿನ್ನ ಸೇವಕಿಯರಿಗೆ ಮಾತ್ರ ಬಡತನ, ಸೋಲು, ಮೌಢ್ಯ ಮೈಗಂಟಿದ ಚರ್ಮವಾಗಿದೆ.

ಮೀರಲಾಗದು ಪ್ರಾಪ್ತಿಯನೆಂದವಳಿಗೆ
ಮಾರುತ್ತರಗೊಟ್ಟು ನಗುತ
ನೊರೆಲೆಗಣ್ಣ ರುಕ್ಮಿಣಿಗೊಡರ್ಚಿದ ಹೊಗ
ರೇರುವ ಗರ್ಭೋತ್ಸವವ ೬೬

ವಿಧಿನಿಯಮವನ್ನು ಮೀರಲು ಸಾಧ್ಯವಿಲ್ಲ ಎಂದು ಆಕೆಗೆ ಹೇಳಿ, ನೂರೆಲೆಗಣ್ಣ(ಕಮಲಾಕ್ಷನಾದ ಕೃಷ್ಣ) ರುಕ್ಮಿಣಿಗೆ ಕಾಂತಿವರ್ಧಕ ಪುತ್ರೋತ್ಸವವನ್ನು ಒದಗಿಸಿದನು.

ಪೂರಾಯ ಮುಕ್ತ ನವ್ಯಾಂಬರ ಸೌಗಂಧ
ಸಾರ ಸೋರ್ಮುಡಿಯಲರ್ಮಾಲೆ
ರಾರಾಜಿಪ ರತ್ನಭೂಷಣ ಗರ್ಭೋಪ
ಚಾರವ ಕೈಕೊಳಿಸಿದರು ೬೭

ಮುತ್ತಿನ ಹೊಸ ವಸ್ತ್ರ ವಿಶೇಷ, ತುರುಬಿಗೆ ಪರಿಮಳಯುಕ್ತ ಹೂದಂಡೆ, ರಾಜಿಸುವ ರತ್ನದೊಡವೆಗಳಿಂದ ಗರ್ಭೋಪಚಾರವನ್ನು ಮಾಡಿದರು.

ಸಡಗರದಲಿ ಕೃಷ್ಣ ಸೋಳಸಾಸಿರ ಪೆ
ಣ್ಗಡಣದಿಂ ಪೊಕ್ಕನಾಲಯವ
ಮಡದಿ ರುಕ್ಮಿಣಿ ದೇವಿ ನವಮಾಸವಾಂತು
ಪಡೆದಳು ವರ ಕುಮಾರಕನ ೬೮

ಕೃಷ್ಣ ಹದಿನಾರು ಸಾವಿರ ಸ್ತ್ರೀ ಸಮುದಾಯದೊಂದಿಗೆ ಸಡಗರದಿಂದ ಒಳಗೆ ಪ್ರವೇಶಿಸಿದನು. ಪತ್ನಿ ರುಕ್ಮಿಣಿ ಒಂಭತ್ತು ತಿಂಗಳು ತುಂಬಿ ಕುಮಾರನನ್ನು ಪಡೆದಳು.

ಮಂಗಳಮಯ ಶೋಭನಕಾರ್ಯ ಜಾತ ಕ
ರ್ಮಂಗಳ ಬುಧ ತತಿಯಿಂದ
ಸಂಗತವಡಿಸಿ ಪ್ರದ್ಯುಮ್ನಾಖ್ಯಾತಿಯ
ತುಂಗನಾಮವನಿಟ್ಟರು ೬೯

ಶುಭಕಾರ್ಯದ ಜನನಕರ್ಮಗಳನ್ನು ವಿದ್ವಾಂಸ ಸಮೂಹದಿಂದ ನೆರವೇರಿಸಿ ಪ್ರಸಿದ್ಧವಾದ ಪ್ರದ್ಯುಮ್ನ ಎಂಬ ಉನ್ನತ ಹೆಸರಿನ್ನಿಟ್ಟರು.

ಜಗದೊಳು ಶ್ರೀಕೃಷ್ಣದೇವರಾಯಗೆ ಗಂಡು
ಮಗನಾದ ಪರಮಸಂಭ್ರಮದಿ
ಅಗಣಿತ ವಿದ್ಯಾಧಿಕರು ಬಂದು ಹರುಷದಿ
ಹೊಗಳಿದರಬುಜಾಂಬಕನ ೭೦

ಶ್ರೀಕೃಷ್ಣ ದೇವರಾಯನಿಗೆ ಗಂಡು ಮಗನಾದ ಸುದ್ದಿಯನ್ನು ಕೇಳಿ ಅಸಂಖ್ಯ ವಿದ್ವಾಂಸರು ಬಂದು ಸಂತಸದಿಂದ ಕಮಲಾಕ್ಷನನ್ನು ಹೊಗಳಿದರು.

ಉಪಮಿಸಲರಿದು ಕೃಷ್ಣನ ಹಸ್ತ ಸುರಪಾ
ದಪ ಗುರುವೆನಿಸಿ ಬೇಡಿದುದ
ಅಪರಿಮಿತಾಶ್ರಿತಜನರಿಂಗೆ ಕೊಟ್ಟು ಶ್ರೀ
ಕೃಪೆಯಿಂದ ಸತ್ಕರಿಸಿದನು ೭೧

ಹೋಲಿಸಲು ಅಸಾಧ್ಯವಾದ ಕೃಷ್ಣನ ಹಸ್ತ ಕಲ್ಪವೃಕ್ಷ ಕಾಮಧೇನುಗಳಿಗೆ ಗುರುವೆನ್ನಿಸಿ ಬೇಡಿದ್ದನ್ನು ಅಸಂಖ್ಯ ಆಶ್ರಿತ ಜನರಿಗೆ ಕೊಟ್ಟು ಲಕ್ಷ್ಮೀಕೃಪೆಯಿಂದ ಸತ್ಕರಿಸಿದನು.

ನಂದನ ತನಗಾದನೆಂದು ರುಕ್ಮಿಣಿ ನಲ
ವಿಂದ ಗೇಹದೊಳಿರಲಿತ್ತ
ಮುಂದೊರ್ವ ಖಳನೊಯ್ವನೆಂದೆನುತ ಭಾನು
ಸಂದನು ಪಡುಗಡಲೊಳಗೆ ೭೨

ಪುತ್ರನನ್ನು ಹೆತ್ತಿದ್ದಕ್ಕೆ ರುಕ್ಮಿಣಿ ಸಂತಸದಿಂದ ಆಲಯದಲ್ಲಿ ಆರಾಮದಿಂದಿರುವಾಗ ಮುಂದೆ ಒಬ್ಬ ದುಷ್ಟ ಮಗುವನ್ನು ಕದ್ದೊಯ್ಯುವನು ಎಂಬಂತೆ ಪಡುವಣ ದಿಕ್ಕಿನಲ್ಲಿ ಸೂರ್ಯ ಮುಳುಗಿದನು.

ಆ ಸಮಯದಿ ಸೊಡರ್ಗಳನೆತ್ತಿದರು ಸುಪ್ರ
ಕಾಶಮಂದಿರದೊಳೊತ್ತರಿಸಿ
ಲೇಸಪ್ಪ ಮಣಿಮಂಚದ ಮೇಲೆ ಶಿಶುವೆಳ
ನೇಸರಂತೊರಗಿರ್ದನೊಲಿದು ೭೩

ಆ ಸಮಯದಲ್ಲಿ ಪ್ರಕಾಶಮಾನವಾದ ಆ ಮಂದಿರದಲ್ಲಿ ದೀಪಗಳನ್ನು ಹಚ್ಚಿದರು. ರತ್ನಮಂಚದ ಮೇಲೆ ಮಗು ಬಾಲಸೂರ್ಯನಂತೆ ಹೊಳೆಯುತ್ತಿದ್ದನು.

ಎಣ್ಣೆಯನೂಡಿ ನೀರೆರೆದು ತೂಪಿರಿದು
ಕಣ್ಣಿಗೆ ಕಜ್ಜಳವನಿಕ್ಕಿ
ಬಣ್ಣದ ಸೊಡರ್ವಟ್ಟನಿಟ್ಟು ಪಾಲೆರೆದೋವಿ
ಚಿಣ್ಣನ ಪಕ್ಕೆಗೆಯ್ದಿದಳು ೭೪

ಎಣ್ಣೆ ತಿಕ್ಕಿ, ಸ್ನಾನ ಮಾಡಿಸಿ, ದೃಷ್ಟಿದೋಷವಾಗದಿರಲೆಂದು ನೀವಳಿಸಿ, ಕಣ್ಣುಗಳಿಗೆ ಕಾಡಿಗೆಯನ್ನಿಕ್ಕಿ, ಬಣ್ಣದ ದೀಪದ ಕುಡಿಯಂಥ ಬೊಟ್ಟನ್ನು ಇಟ್ಟು, ಹಾಲು ಕುಡಿಸಿ ಮುದ್ದಾಡಿ ಮಗುವನ್ನು ಮಗ್ಗುಲಿಗೆ ಮಲಗಿಸಿದಳು.

ಸಿಸುವಿನ ಭಾಳಾಂತರದೊಳಿಟ್ಟಳು ಮಂ
ತ್ರಿಸಿದ ವಿಭೂತಿಯ ಬೊಟ್ಟ
ಮಿಸುನಿಯಂತ್ರದ ಮಣಿ ಮಾಲೆಯ ತೋಳ್ಗೆ ಬಂ
ಧಿಸಿದಳತ್ಯಂತ ಭಕ್ತಿಯಲಿ ೭೫

ಮಗುವಿನ ಹಣೆಯ ಮೇಲೆ ಮಂತ್ರಿಸಿದ ವಿಭೂತಿಯ ಬೊಟ್ಟನ್ನು ಇಟ್ಟಿದ್ದೇ ಅಲ್ಲದೆ ಚಿನ್ನದ ಯಂತ್ರದ ರತ್ನಮಾಲೆಯನ್ನು ತೋಳಿಗೆ ಕಟ್ಟಿದಳು.

ಸ್ತನಪಾನ ಕೊಡುವ ಹೆಂಗಳಿಗೆ ಪೇಳ್ದಳು ಹತ್ತು
ದಿನಗಳೆಡೆಸಂದಿನಿರುಳು
ಘನ ಜೋಪಾನದೊಳಿರಬೇಕೆಂದು ಸನ್ನುತ
ವನಜಾಕ್ಷಿ ಮಗ್ಗುಲಾದಳು ೭೬

ಎದೆ ಹಾಲು ಕುಡಿಸುವ ಹೆಣ್ಣುಗಳಿಗೆ ಹತ್ತು ದಿನಗಳ ಸಂದಿನ ಇರುಳಲ್ಲಿ ತುಂಬ ಜೋಪಾನವಾಗಿರಬೇಕೆಂದು ಹೇಳಿ ಕಮಲಾಕ್ಷಿ ಮಗ್ಗುಲಾದಳು.

ವಿಲಸಿತ ಮಣಿಮಂಚದ ಮೊಲೆ ಶಿಶುಗೂಡಿ
ಮಲಗಿದ್ದು ಸ್ವಪ್ನವ ಕಂಡು
ನಿಲಲಾರದೆದ್ದು ನಂದನನ ನಿಟ್ಟಿಸಿ ಕಾಣ
ದಳವಳಿದಳು ದುಃಖವೆರಸಿ ೭೭

ವೈಭವೋಪೇತ ರತ್ನಮಂಚದ ಮೇಲೆ ಮಗುವಿನೊಡನೆ ಮಲಗಿದ್ದ ರುಕ್ಮಿಣಿ, ಕನಸನ್ನು ಕಂಡು, ಧಿಡೀರನೆದ್ದು ಕಂದನನ್ನು ನಿಟ್ಟಿಸಿ ನೋಡಿ, ಕಾಣದೆ ತಳಮಳಸಿ ದುಃಖದಿಂದ ನೊಂದಳು.

ಮಾಣದೆ ಮಣಿದೀಪ್ತಿಯ ಪಿಡಿದಾವಾವ
ತಾಣದೊಳರಸಿ ನಂದನನ
ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆ
ಬಾಣ ತಾಗಿದ ಹುಲ್ಲೆಯಂತೆ ೭೮

ರತ್ನ ರಶ್ಮಿಯ ಬೆಳಕಲ್ಲಿ ಎಲ್ಲ ಮೂಲೆ ಮುಡುಕುಗಳಲ್ಲಿ ಹುಡುಕಿದರೂ ಕಾಣದೆ ಕಂಗೆಟ್ಟು ಮುಮ್ಮೊನೆ ಬಾಣ ತಾಕಿದ ಹುಲ್ಲೆ(ಜಿಂಕೆ)ಯಂತೆ ಒದ್ದಾಡಿದಳು.

ಎಣ್ಣೆಯ ತಲೆಗೂಡಿದುದಿಲ್ಲ ನೊರೆವಾಲು
ಬೆಣ್ಣೆಯನು ಮೆಲಿಸಿದುದಿಲ್ಲ
ಕಣ್ಣೆವೆ ಹಳಚಿ ನೋಡಿದುದಿಲ್ಲ ಮಗನ ಲಾ
ವಣ್ಯವನೆಂದಳಲಿದಳು ೭೯

ಎಣ್ಣೆಯನ್ನು ತಲೆಗೆ ಊಡಿದುದಿಲ್ಲ, ನೊರೆಹಾಲು ಬೆಣ್ಣೆಯನ್ನು ಮೆಲ್ಲಿಸಿದ್ದಿಲ್ಲ, ಕಣ್ಣೊಳಗೆ ಕಣ್ಣಿಟ್ಟು ನೋಡಿದುದಿಲ್ಲ ಎಂದು ಅಳಲಿದಳು.

ಮೊಲೆವಾಲು ತೊರೆದುಗುತಿದೆಕೊ ಲೋಚನವಾರಿ
ಸಲೆ ಹಾಯ್ದೊರ ಹೊಗುತಿದೆಕೊ
ನೆಲೆಗೊಳ್ಳದು ಚಿತ್ತ ಮಗನೆ ನೀನಿದಿರ್ವಂದು
ತಲೆದೋರೆಂದಳಲಿದಳು ೮೦

ಮೊಲೆಯ ಹಾಲು ಜಿನುಗಿ ಹೊರಚೆಲ್ಲುತಿದೆ ನೋಡು, ಕಣ್ಣೀರು ಕಣ್ಣ ಕುಣಿಕೆ ದಾಟಿ ಹೊರಸುರಿಯುತ್ತಿದೆ ನೋಡು, ಮನಸು ಒಂದು ಕಡೆ ನಿಲ್ಲದು, ಮಗನೆ ನನ್ನೆದುರು ಬಂದು ಕಾಣಿಸಿಕೊ ಎಂದು ಅಳಲಿದಳು.

ಕರೆದೊಡೋ ಎನ್ನಬಾರದೆ ಕಂದ ನಿನ್ನಯ
ಸಿರಿಮೊಗಗಾಣದೆಂತಿರಲೊ
ಪರಿತಾಪವ ಪುಟ್ಟಿಸಿ ಪೋಗ ಬಂದೆಯ
ಹರಿಕೊಟ್ಟ ವರ ಬಯಲಾಯ್ತೆ ೮೧

ಕರೆದರೆ ಓ ಎಂದು ನೀನು ಮರುತ್ತರ ಕೊಡಬಾರದೆ? ನಿನ್ನ ಸಿರಿಮೊಗವನ್ನು ಕಾಣದೆ ನಾನು ಹೇಗಿರಲಿ? ಸಂಕಟವನ್ನು ಉಂಟುಮಾಡಿ ಹೋಗಲು ಬಂದೆಯ? ಹರಿ ಕೊಟ್ಟ ವರ ಹುಸಿಯಾಯ್ತೆ? ಎಂದು ರುಕ್ಮಿಣಿ ಹಲುಬಿದಳು.

ಹಾಲಿಗೆ ಹಂಬಲಿಸುವನಲ್ಲ ಬಿಡದಂಬೆ
ಗಾಲಿಕ್ಕಿ ತೆರಳುವನಲ್ಲ
ಕಾಲು ಬಲಿದು ದಟ್ಟಡಿಯಿಡುವನಲ್ಲ
ಬಾಲನೆಲ್ಲಿಗೆ ಹೋದನವ್ವ ೮೨

ಹಾಲಿಗೆ ಹಂಬಲಿಸುವನಲ್ಲ, ಅಂಬೆಗಾಲಿಕ್ಕಿ ತೆವಳುವನಲ್ಲ, ಕಾಲು ಬಲಿತು ದಟ್ಟಡಿ ಇಡುವನಲ್ಲ, ಅಂಥ ಬಾಲನು ಎಲ್ಲಿಗೆ ಹೋದನವ್ವ?

ಎರಡೇಳು ಲೋಕವ ಸೃಜಿಸುವ ವಿಧಿ ತನ್ನ
ವರ ಸಹೋದರ ನಿಟಿಲದಲಿ
ಬರೆದನೆ ಪುಟ್ಟಿದಾಕ್ಷಣ ಪೋಪುದೆಂದು ಪ
ಲ್ಮೊರೆದಳು ಕಡು ದುಗುಡದಲಿ ೮೩

ಹದಿನಾಲ್ಕು ಲೋಕಗಳನ್ನು ಸೃಷ್ಟಿಸುವ ವಿಧಿ(ಬ್ರಹ್ಮ) ತನ್ನ ಸಹೋದರನ ಹಣೆಯಲ್ಲಿ ಹುಟ್ಟಿದಾಕ್ಷಣ ಹೋಗುವುದೆಂದು ಬರೆದನೆ? ಎಂದು ರುಕ್ಮಿಣಿ ಹಲ್ಲನ್ನು ನೊರನೊರಗುಟ್ಟಿಸಿದಳು.

ರೋದನಮಯವಾಗಿದೆ ರುಕ್ಮಿಣಿಗೇ
ನಾದುದು ಕೇಳು ಕೇಳೆನಲು
ಮಾಧವನೊಡನೆ ಪೇಳಿದರಾ ಕಂದ ಬಯ
ಲಾದ ಸೋಜಿಗದ ಸುದ್ದಿಯನು ೮೪

ರುಕ್ಮಿಣಿಯ ವಾಸದ ಮನೆ ರೋದನಮಯವಾಗಿದೆ ಏನು ಕಾರಣ ಕೇಳು ಕೇಳು ಎನ್ನಲು, ಸೇವಕರು ಕಂದ ಬಯಲಾದ ಸೋಜಿಗದ ಸುದ್ದಿಯನ್ನು ಹೇಳಿದರು.

ಉದಿಸಿದ ದಶದಿವಸದಿ ಶಿಶು ಪೋಪಾಗ
ವಿಧಿಬರಹವ ಮೀರಬಹುದೆ
ಕುದಿಗೊಳಬೇಡ ದುಃಖವ ಬಿಸುಡೆಂದು ಪ್ರೇ
ಮದಿ ಪೇಳ್ದನರ್ಧಾಂಗನೆಗೆ ೮೫

ಹುಟ್ಟಿದ ಹತ್ತು ದಿನಗಳಲ್ಲಿ ಶಿಶು ಮಾಯವಾಗುತ್ತಾನೆ ಎಂಬ ವಿಧಿ ಬರೆಹವ ಮೀರಲು ಸಾಧ್ಯವೆ? ಕುದಿಗೊಳ್ಳದೆ ಮನಸ್ಸಿನ ದುಃಖವನ್ನು ಬಿಡು ಎಂದು ಅರ್ಧಾಂಗನೆ ರುಕ್ಮಿಣಿಗೆ ಹೇಳಿದನು.

ಮರುಗುವ ಮಡದಿಯನಮರ್ದಪ್ಪಿ ಮುದ್ದಿಸಿ
ತುರುಗೆವೆಗಣ್ಣ ನೀರಿಂಗೆ
ಹರಿಗೋಲ ಹಾಕಿಸಬೇಡೆಂದು ಪೊಂಬಟ್ಟೆ
ಸೆರಗಿನಿಂ ತೊಡೆದ ಲೋಚನವ ೮೬

ಕಂದನ ಕಳವಿಗಾಗಿ ಮರುಗುವ ಮಡದಿಯನ್ನು ಬಾಚಿ ತಬ್ಬಿಕೊಂಡು, ಮುದ್ದಿಸಿ, ದಟ್ಟ ರೆಪ್ಪೆಗೂದಲಿನ ಕಣ್ಣಿನ ನೀರಿಗೆ ಹರಿಗೋಲ(ದೋಣಿ)ನ್ನು ಹಾಕಿಸಬೇಡೆಂದು ಪೀತಾಂಬರದ ಸೆರಗಿನಿಂದ, ಕಣ್ಣನ್ನು ಒರೆಸಿದನು.

ಅಕ್ಕ ನಿನ್ನಾತ್ಮಸಂಭವ ಮಗ್ಗುಲೊಳಗಿರ್ದು
ಬಕ್ಕಬಯಲಾದ ಬಗೆಯ
ಒಕ್ಕಣಿಸೆನಗೆಂದು ಸುತ್ರಾಜಿತ ಸುತೆ
ದುಕ್ಕವನಾಂತು ಕೇಳಿದಳು ೮೭

ಅಕ್ಕ ನಿನ್ನ ಮಗ್ಗುಲಲ್ಲಿ ಮಲಗಿದ್ದ ಮಗು ಬಟ್ಟಬಯಲಾದ ರೀತಿಯನ್ನು ನನಗೆ ವಿವರಿಸು ಎಂದು ಸತ್ಯಭಾಮೆ ದುಃಖದಿಂದ ಕೇಳಿದಳು.

ಪುಂಡರೀಕಾಕ್ಷಿ ನಿದ್ದೆಯೊಳಾನೊರಗಿರಲು
ಕಂಡೆನೊಂದು ಕೆಟ್ಟಕನಸ
ಚಂಡಾಂಶುವಿನಂತೆ ಹೊಳೆವ ಪುತ್ರನ ದೈತ್ಯ
ಕೊಂಡೊಯ್ಯಲೆಚ್ಚೆತ್ತೆನವ್ವ ೮೮

ಕಮಲಾಕ್ಷಿ ಸತ್ಯಭಾಮೆ ಕೇಳು, ನಿದ್ದೆಯಲ್ಲಿ ನಾನೊಂದು ಕೆಟ್ಟ ಕನಸನ್ನು ಕಂಡೆನು. ಸೂರ್ಯನಂತೆ ಹೊಳೆಯುವ ಪುತ್ರನನ್ನು ರಾಕ್ಷಸ ಕೊಂಡೊಯ್ದಾಗ ಎಚ್ಚೆತ್ತೆನು.

ಕಣ್ಣೊಡೆದಂತೆ ಕಂಗೆಟ್ಟು ನೋಡಲೆನ್ನ
ಚಿಣ್ಣ ಮಗ್ಗುಲೊಳಿರ್ದರಲು
ಸುಣ್ಣಕಲ್ಲುಡಿದುಂಬಿ ಮಡುವಿಗೆ ಬಿದ್ದಂತೆ
ಬಣ್ಣಗುಂದಿದೆ ಕೇಳ್ತಾಯೆ ೮೯

ಕಣ್ಣು ಒಡೆದಂತೆ ಕಂಗೆಟ್ಟು ನೋಡಲು, ಕಂದನು ನನ್ನ ಮಗುಲಲ್ಲಿ ಇಲ್ಲದಿರಲು, ಮಡಿಲಲ್ಲಿ ಸುಣ್ಣಕಲ್ಲು ತುಂಬಿಕೊಂಡು ಮಡುವಿಗೆ ಬಿದ್ದಂತೆ ಆದೆನು.

ಮಕ್ಕಳ ಮಾಣಿಕ್ಯ ಪ್ರದ್ಯುಮ್ನ ನೆರೆದರೆ
ಕಕ್ಕಸ ತಮ್ಮಗಳಿಗೆಂದು
ರಕ್ಕಸರುಗಳು ಮಾಯದೊಳೆಯ್ದರು ದಿಟ
ದುಕ್ಕ ಬೇಡೆಂದು ಪೇಳ್ದಳು ೯೦

ಮಕ್ಕಳ ಮಾಣಿಕ್ಯ ಎನ್ನಿಸಿದ ಪ್ರದ್ಯುಮ್ನ ಬೆಳೆದು ದೊಡ್ಡವನಾದರೆ, ತಮ್ಮಗಳಿಗೆ ಕರ್ಕಶವಾಗುವನೆಂದು ಬಗೆದು ರಕ್ಕಸರು ಮಾಯ ಮಾಟ ಮಾಡಿ ಮಗುವನ್ನು ಕದ್ದೊಯ್ದರು, ದುಃಖಬೇಡವೆಂದು ಸತ್ಯಭಾಮೆ ರುಕ್ಮಿಣಿಗೆ ಹೇಳಿದಳು.

ನಿಲ್ಲದಾಕ್ಷಣ ಕೃಷ್ಣ ಬಿಗಿಯಪ್ಪಿ ನೀ ಪೆತ್ತು
ದಿಲ್ಲವೆಂದೆದೆಯ ಬಲ್ಪಿಡಿದು
ತಲ್ಲಣಿಸದೆ ಎನ್ನ ನೋಡಿ ನೀ ಮರೆಯೆಂದು
ಗಲ್ಲವ ಪಿಡಿದು ಮುದ್ದಿಸಿದ ೯೧

ಕೃಷ್ಣ ಕೂಡಲೇ ರುಕ್ಮಿಣಿಯನ್ನು ಅಪ್ಪಿಕೊಂಡು, ನೀನು ಅವನನ್ನು ಹೆರಲೇ ಇಲ್ಲ ಎಂದು ದೃಢಮನಸ್ಸು ಮಾಡಿ, ತಳಮಳಗೊಳ್ಳದೆ ಎನ್ನ ಮುಖವನ್ನು ನೋಡಿ ಅವನನ್ನು ಮರೆ ಎಂದು ಗಲ್ಲ ಹಿಡಿದು ಮುದ್ದಿಸುತ್ತಾ ಹೇಳಿದ.

ಶಶಿವದನೆಯ ಮನಸ್ತಾಪ ತಂಪಾದುದು
ನಿಶೆ ಬೀತುದುರ್ವೀಸ್ಥಲಕೆ
ಬಿಸಿಗದಿರನು ಪುಟ್ಟಿ ಪೂರ್ವಾಚಲದಿ ರಂ
ಜಿಸಿದನು ಕೇಳಾಯತಾಕ್ಷಿ ೯೨

ಚಂದ್ರವದನೆ ರುಕ್ಮಿಣಿಯ ಮನಸ್ಸಿನ ತಾಪ ತಣ್ಣಗಾಯಿತು, ರಾತ್ರಿ ಕಳೆಯಿತು, ಮೂಡಣದಲ್ಲಿ ಸೂರ್ಯ ಹುಟ್ಟಿ ಭೂಲೋಕವನ್ನು ಬೆಳಗಿದನು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೯೩

"ವರ ಮೋಹನ ತರಂಗಿಣಿ" ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಲಕ್ಷ್ಮೀಕಾಂತನಾದ ಕೃಷ್ಣ ಸೂರ್ಯಚಂದ್ರರಿರುವ ತನಕ ಬಿಡದೆ ರಕ್ಷಿಸುವನು.

## ೫. ಕಾಮನಿಗೆ ದೇವತೆಗಳ ಬೋಧೆ

ವಟಪತ್ರತಲ್ಪನ ವರದಿಂದ ಮತ್ಕರ್ಣ
ಪುಟಕಿನಿದಪ್ಪಂತೆ ಪೇಳು
ಕಟಕಟ ಹುಟ್ಟಿದಾಕ್ಷಣ ಶಿಶು ನೋಡಲ್ಕೆ
ಮಟಮಾಯವಾದುದಾಶ್ಚರ್ಯ ೧

ಆಲದೆಲೆಯ ಮೇಲೆ ಮಲಗಿದ ಕೃಷ್ಣನ ವರದಿಂದ, ಅಕಟಕಟ ಹುಟ್ಟಿದಾಕ್ಷಣ ಶಿಶು ಮಟಾಮಾಯವಾದ ಚೋದ್ಯವನ್ನು ನನ್ನ ಕಿವಿಗೆ ಮಧುರವಾಗುವಂತೆ ಹೇಳು ಎಂದು ಸುಜ್ಞಾನಧೂಟಿ ತನ್ನ ಪ್ರಿಯತಮ ಕನಕನನ್ನು ಆಗ್ರಹಿಸಿದಳು.

ಶತಪತ್ರದಳ ಲೋಚನೆ ಕೇಳು ಹರನಿಂದ
ಹತನಾದ ಕಂತು ರುಕ್ಮಿಣಿಯ
ಸುತನಾಗಿ ಹುಟ್ಟಿ ಮುಂಗೆಲಸಕ್ಕೆ ಬಯಲಾದ
ಕತೆಯ ಬಿತ್ತರಿಪೆ ನಿನ್ನೊಡನೆ ೨

ಕಮಲಾಕ್ಷಿ ಕೇಳು, ಹರನಿಂದ ಹತನಾದ ಮನ್ಮಥ ರುಕ್ಮಿಣಿಯ ಮಗನಾಗಿ ಹುಟ್ಟಿ ಮುಂದಿನ ಕೆಲಸಕ್ಕಾಗಿ ಬಟ್ಟ ಬಯಲಾದ ಕಥೆಯನ್ನು ನಿನಗೆ ವಿಸ್ತರಿಸುವೆನು ಎಂದು ಕನಕ ಭರವಸೆ ನೀಡಿದ.

ಅದು ಹೇಗೆನಲು ತಾರಕನಟ್ಟುಳಿಯನು
ಬಿದಿಯೊಳು ಸುರರು ಬಿನ್ನೈಸೆ
ಪದುಮೋದ್ಭವನೈತಂದು ಪಾಲ್ಗಡಲೊಳು
ಮಧುಸೂದನಂಗೆ ಪೇಳಿದನು ೩

ಅದು ಹೇಗೆಂದರೆ, ತಾರಕನ ಕಾಟವನ್ನು ದೇವತೆಗಳು ಬ್ರಹ್ಮನಿಗೆ ವಿನಂತಿಸಿದಾಗ ಕಮಲೋದ್ಭವನಾದ ಬ್ರಹ್ಮ ಹಾಲ್ಗಡಲಲ್ಲಿದ್ದ ಶ್ರೀಹರಿಗೆ ಅದನ್ನು ಹೇಳಿದನು.

ಇಂಗಡಲೆಡೆಯ ಪೆರ್ನಾಗರ ಹೆಡೆಯ ರ
ತ್ನಂಗಳ ಮೆಯ್ವೆಳಗಿನಲಿ
ಕಂಗೊಳಿಸುವ ವಾಸುದೇವನ ಶ್ರೀಚರ
ಣಂಗಳ ಸನ್ನುತಿಸಿದನು ೪

ಹಾಲ್ಗಡಲ ಎಡೆಯಲ್ಲಿ, ಪೆರ್ನಾಗರ ಹೆಡೆಯ ರತ್ನಗಳ ರಶ್ಮಿಯಲ್ಲಿ ಕಂಗೊಳಿಸುವ ವಾಸುದೇವನಾದ ಶ್ರೀಕೃಷ್ಣನ ಶ್ರೀಚರಣಗಳನ್ನು ಸ್ತುತಿಸಿದನು.

ವೇದತಸ್ಕರ ಮಾನ ಮರ್ದನ ಜಯಜಯ
ಭೂಧರಧರ ಜಯಜಯತು
ಶ್ರೀ ಧರಣೀವರ ಜಯಜಯನಮೊ ಪ್ರ
ಹ್ಲಾದ ವರದ ಜಯಜಯತು ೫

ವೇದಗಳನ್ನು ಕದ್ದೊಯ್ದ ರಾಕ್ಷಸನ ಮಾನವನ್ನು ಮರ್ದಿಸಿದ ಶ್ರೀಹರಿ ನಿನಗೆ ಜಯ ಜಯ, ಗೋವರ್ಧನಗಿರಿಧಾರಿ ಕೃಷ್ಣ ನಿನಗೆ ಜಯಜಯತು, ಭೂದೇವಿಯ ಧವ (ಗಂಡ) ಜಯ ಜಯ, ಪ್ರಹ್ಲಾದನಿಗೆ ವರ ನೀಡಿದ ನಾರಾಯಣ ಜಯಜಯತು.

ಬಲಿ ಮದ ವಿದಳನ ದೈತ್ಯ ಗುರು ಚಕ್ಷು
ಸಲಿಲಜದಳನಾಶ ಜಯತು
ನಲಿನಭವಾಂಡ ಪಾಟಲ ಪಾದಪದ್ಮ ನಿ
ರ್ಮಲಿನ ಗಂಗಾಪಿತ ಜಯತು ೬

ಬಲಿ ಚಕ್ರವರ್ತಿಯ ಮದವಿದಾರಣ, ದೈತ್ಯಗುರು ಶುಕ್ರಾಚಾರ್ಯನ ಅಕ್ಷನಾಶ ನಿನಗೆ ಜಯಜಯತು, ಅಖಿಲ ಬ್ರಹ್ಮಾಂಡ ಪಾಟಲ(ಎಳೆಗೆಂಪು)ಪಾದಪದ್ಮದ ದೆಸೆಯಿಂದ ಉಗಮಗೊಂಡ ಗಂಗೆಯ ಜನಕನೇ ನಿನಗೆ ಜಯಜಯ.

ಘನ ಶೌರ್ಯವೆತ್ತ ಕಾರ್ತವೀರ್ಯನ ಬಾಹು
ವನ ಕುಠಾರಕ ಜಯಜಯತು
ಮನಗೊಂಬ ಪೃಥ್ವೀಪತಿಗಳ ಭಾಗ್ಯವ ಬ್ರಹ್ಮ
ಜನಕೊಡರ್ಚಿದ ರಾಮ ಜಯತು ೭

ಶೌರ್ಯಶಾಲಿ ಕಾರ್ತವೀರ್ಯನ ಬಾಹುಗಳಿಗೆ ಕುಠಾರ(ಕೊಡಲಿ)ಪ್ರಾಯನಾದ, ಕ್ಷತ್ರಿಯರ ಭಾಗ್ಯವನ್ನು ಬ್ರಾಹ್ಮಣರಿಗೆ ವಿತರಿಸಿದ ಪರಶುರಾಮ ಜಯಜಯ.

ರಣಧೀರ ದಶಕಂಠ ಜಿತ ಕೀರ್ತಿಯುತ ವಿಭೀ
ಷಣ ಹಿತ ರಘುರಾಮ ಜಯತು
ಪ್ರಣವ ಗೋಚರ ನಿತ್ಯ ಮದನ ಗೋಪಾಲ ಸ
ದ್ಗುಣಶೀಲ ಶ್ರೀಕೃಷ್ಣ ಜಯತು ೮

ದಶಕಂಠ ರಾವಣನಿಗೆ ಕಂಟಕನಾದವನೂ, ವಿಭೀಷಣನ ಹಿತಕಾರ್ಯ್ದವನೂ ಆದ ರಘುರಾಮ ಜಯತು, ಓಂಕಾರ ಗೋಚರನೂ, ಸದ್ಗುಣಶೀಲನೂ ಆದ ಶ್ರೀಕೃಷ್ಣ ಜಯ ಜಯತು.

ದಿತಿಜ ಕುಲೇಭ ಪಂಚಾನನ ಜಯ ಭಾಗ
ವತ ಜನ ವರದಾಯಕ ಜಯತು
ಶ್ರುತತತಿನುತಿಗತೀತಿ ಮಹಾಮಹಿಮ ಶ್ರೀ
ಪತಿ ಕೃಷ್ಣ ಜಯ ಜಯಜಯತು ೯

ರಾಕ್ಷಸ ವಂಶದ ಆನೆಗೆ ಸಿಂಹಪ್ರಾಯನೂ, ಭಾಗವತ ಜನಕೆ ವರದಾಯಕನೂ ವೇದ ಸ್ತುತಿಗತೀತನಾದ ಮಹಾಮಹಿಮ ಶ್ರೀಕೃಷ್ಣ ನಿನಗೆ ಜಯಜಯತು.

ಪರಮಪತಿವ್ರತೆಯರ ಮಾನಭಂಜನ
ತುರಗವಾಹನ ಪವಿತ್ರಾಂಗ
ಸುರಪತಿ ಮುಖ್ಯ ದೇವೋತ್ತುಂಗ ಜಯತು ಶ್ರೀ
ವರ ತ್ರೈಜಗದಂತರಂಗ ೧೦

ಪರಮ ಪತಿವ್ರತೆಯರ ಮಾನಭಂಜಕನೂ, ಅಶ್ವಾರೋಹಿ ಪವಿತ್ರಾಂಗನೂ, ದೇವತೆಗಳಲ್ಲಿ ಉತ್ತುಂಗನೂ, ತ್ರೈಜಗದಂತರಂಗನೂ ಆದ ಲಕ್ಷ್ಮೀಕಾಂತನೇ ನಿನಗೆ ಜಯತು.

ಮಾಧವ ನಾರಾಯಣ ಕೇಶವ ಮೇಣ್ ಮಧು
ಸೂದನ ಗೋವಿಂದ ವಿಷ್ಣು
ಶ್ರೀಧರ ವಾಮನ ತ್ರಿವಿಕ್ರಮ ನಿಮ್ಮಯ
ಪಾದದ ನೆಲೆಗಾಂಬರಾರು ೧೧

ಮಾಧವ, ನಾರಾಯಣ, ಕೇಶವ ಮಧು ಧ್ವಂಸಕ ಗೋವಿಂದ, ವಿಷ್ಣು, ಶ್ರೀಧರ, ವಾಮನ ತ್ರಿದಿಕ್ರಮ ನಿಮ್ಮ ಪಾದದ ನೆಲೆ ಕಾಣುವರಾರು?

ದಾಮೋದರ ಪದ್ಮನಾಭ ಹೃಷಿಕೇಶ
ತಾಮರಸ ಸಖಪ್ರಕಾಶ
ಹೇಮಾಂಬರ ವಾಸುದೇವ ಸಂಕರ್ಷಣ
ಸಾಮಜವಿಭು ರಕ್ಷ ಜಯತು ೧೨

ದಾಮೋದರ, ಪದ್ಮನಾಭ, ಹೃಷಿಕೇಶ, ಕಮಲಬಾಂಧವ ಪ್ರಕಾಶ, ಪೀತಾಂಬರ, ವಾಸುದೇವ, ಸಂಕರ್ಷಣ, ಸಾಮಜ(ಆನೆ) ರಕ್ಷಕ ನಿನಗೆ ಜಯತು.

ಪುರುಷೋತ್ತಮನೆ ಪ್ರದ್ಯುಮ್ನಾನಿರುದ್ಧನೆ
ನರಸಿಂಹಾಧೋಕ್ಷ ಜಯತು
ವರ ಜನಾರ್ಧನ ಉಪೇಂದ್ರನಚ್ಯುತ ಹರಿ
ಪರಮಾತ್ಮ ಶ್ರೀಕೃಷ್ಣ ಜಯತು ೧೩

ಪುರುಷೋತ್ತಮ, ಪ್ರದ್ಯುಮ್ನ, ಅನಿರುದ್ಧ, ನರಸಿಂಹ, ಅಧೋಕ್ಷ, ಜನಾರ್ಧನ, ಉಪೇಂದ್ರ, ಅಚ್ಯುತ, ಹರಿ, ಶ್ರೀಕೃಷ್ಣ ನಿನಗೆ ಜಯತು.

ಈ ಪರಿಯಲಿ ಕೀರ್ತಿಸಲಾಗಿ ರಮೆಯ ಪ್ರಾ
ಣೋಪ ವಿಧಾತ್ರನೊಳುಸಿರ್ದ
ನೀ ಪರುಠವಿಸು ನಿರ್ಜರರಿಗೆ ಬಂದ ಸಂ
ತಾಪವಿದೇನೆಂದ ನಗುತ ೧೪

ಬ್ರಹ್ಮ ಈ ರೀತಿ ಕೀರ್ತಿಸಿದಾಗ ಲಕ್ಷ್ಮಿಯ ಪ್ರಿಯತಮ ವಿಧಾತನಿಗೆ ಹೀಗೆ ಹೇಳಿದ– ದೇವತೆಗಳಿಗೆ ಬಂದೊದಗಿದ ಸಂಕಟ ಸಂತಾಪಗಳನ್ನು ವಿವರಿಸು ಎಂದು.

ತಾರಕನಿಂದ ನೊಂದಮರರು ತಮ್ಮ ಸಂ
ಸಾರ ದುಃಖವ ತನಗುಸಿರೆ
ತೀರಿಸಲರಿಯದಾನೈತಂದೆ ಶ್ರೀ ವೀರ
ನಾರಾಯಣ ಪೊರೆಯೆಂದ ೧೫

ತಾರಕನ ಉಪಟಳದಿಂದ ನೊಂದ ದೇವತೆಗಳು ತಮ್ಮ ಸಂಸಾರ ದುಃಖವನ್ನು ನನಗೆ ಹೇಳಿದಾಗ, ಅದನ್ನು ತೀರಿಸಲು ನನ್ನ ಕೈಯಲ್ಲಿ ಆಗದ್ದರಿಂದ ನಿನ್ನ ಬಳಿಗೆ ಬಂದೆ ಶ್ರೀವೀರ ನಾರಾಯಣ ರಕ್ಷಿಸು ಎಂದ.

ಎಂದೆನಲಸುರಾರಿ ನುಡಿದ ವಿಧಾತ್ರ ನಿ
ನ್ನಿಂದಲಾ ತಾರಕಾಸುರಗೆ
ಬಂದುದು ವರ ದೂರ್ಜಟಿಯಿಂದಲುದಿಸಿದ
ನಂದನನಿಂದ ಹತನಹನು ೧೬

ಆಗ ಶ್ರೀಕೃಷ್ಣ, ಆ ತಾರಕಾಸುರನಿಗೆ ವರ ದಕ್ಕಿದ್ದು ನಿನ್ನಿಂದ, ಅವನ ಸಂಹಾರ ಶಿವನಲ್ಲಿ ಜನಿಸುವ ಮಗನಿಂದ ಸಾಧ್ಯವಾಗುತ್ತದೆ ಎಂದು ಹೇಳಿದ.

ನಾಗಭೂಷಣಗೆ ಪಾರ್ವತಿಯೊಳು ಪರಮ ಸಂ
ಭೋಗವಾದರೆ ಮಕ್ಕಳಹರು
ಈಗಳಾತಗೆ ತಪವೆಂದು ನಾಲ್ಮೊಗನನು
ರಾಗದಿ ಪೇಳ್ದನಚ್ಯುತಗೆ ೧೭

ಸರ್ಪಭೂಷಣನಾದ ಶಿವ ಪಾರ್ವತಿಯೊಂದಿಗೆ ಸಂಭೋಗಿಸಿದರೆ ಮಗ ಹುಟ್ಟುವನು ಎಂದು ಹೇಳಿದಾಗ, ಚತುರ್ಮುಖನು ಅಚ್ಯುತನಿಗೆ ಹೇಳಿದ – ಶಿವ ಈಗ ತಪಸು ಮಾಡುತ್ತಿದ್ದಾನೆ ಎಂದು.

ಕಿಚ್ಚುಗಣ್ಣನ ತಪವಳಿವುದು ಪೂಗೋಲೊ
ಳೆಚ್ಚಿ ಮನ್ಮಥ ಪೀಡಿಸಲು
ಮೆಚ್ಚುವಡೆದು ಪಾರ್ವತಿಯೊಳು ರಮಿಸಲು
ಸ್ವಚ್ಛದಿ ಸುತನಪ್ಪನೆಂದ ೧೮

ಮನ್ಮಥ ಹೂಬಾಣದಿಂದ ಹೊಡೆದರೆ ಕೆಂಡಗಣ್ಣ ಶಿವನ ತಪಸ್ಸು ಭಗ್ನವಾಗುತ್ತದೆ. ಶಿವ ಪಾರ್ವತಿಯೊಡನೆ ರಮಿಸಿದರೆ ಮಗ ಹುಟ್ಟುತ್ತಾನೆ ಎಂದನು.

ರತಿರಾಜನನು ಬೋಧಿಸುವಂತೆ ವರ ಬೃಹ
ಸ್ಪತಿಗೆ ನೇಮವನಿತು ಸುರರ
ಸ್ಥಿತಿಯ ನೇರ್ಪಡಿಸೆನೆ ಅಬುಜಸಂಭವ ಶ್ರೀ
ಪತಿಯ ಬೀಳ್ಕೊಂಡನುತ್ಸವದಿ ೧೯

ರತಿರಾಜ ಮನ್ಮಥನ ಮನವೊಲಿಸಲು ಬೃಹಸ್ಪತಿಗೆ ನೇಮವನ್ನಿತ್ತು ದೇವತೆಗಳ ಸ್ಥಿತಿಯನ್ನು ಸರಿಪಡಿಸು ಎಂದು ಸೂಚಿಸಿದಾಗ ಬ್ರಹ್ಮ ಶ್ರೀಕೃಷ್ಣನನ್ನು ಬೀಳ್ಕೊಂಡನು.

ತುತ್ತತುದಿ ಹರುಷದಿ ಕಮಲ ಸಂಭವ ತನ್ನ
ಉತ್ತುಂಗಲೋಕಕ್ಕೈದಿ ಸುರರ
ಮೊತ್ತವ ಬೀಳ್ಕೊಟ್ಟು ಸುರಗುರುವಿಗೆ ನೇಮ
ವಿತ್ತ ಮನ್ಮಥಗೆ ಹೇಳೆಂದು ೨೦

ಅಪಾರ ಹರ್ಷದಿಂದ ಬ್ರಹ್ಮ ಮೇಲಿನ ಲೋಕಕ್ಕೆ ಹೋಗಿ, ದೇವತೆಗಳನ್ನು ತಮ್ಮ ತಮ್ಮ ನೆಲೆಗೆ ಹಿಂದಿರುಗಲು ಹೇಳಿ, ಮನ್ಮಥನಿಗೆ ಬುದ್ಧಿವಾದ ಹೇಳಿ ಒಪ್ಪಿಸು ಎಂದು ಸುರಗುರುವಾದ ಬ್ರಹ್ಮಸ್ಪತಿಗೆ ನೇಮವನ್ನಿತ್ತು ಕಳಿಸಿದನು.

ಬಿಸಜಸಂಭವ ನಿರೂಪಿಸಲು ನಾ ನಿಮ್ಮ
ಸಿಸುವೆನುತೆರಗಿ ಬೀಳ್ಕೊಂಡು
ನಸುನಗುತ್ತೈತಂದು ಕಂಡನು ರಂಜಿಪ
ಕುಸುಮಾವತಿಯೆಂಬ ಪೊಳಲ ೨೧

ಕಮಲಸಂಭವನ ಅಪ್ಪಣೆ ಮೇರೆಗೆ ಅವನನ್ನು ಬೀಳ್ಕೊಂಡು ನಗುನಗುತ ಬೃಹಸ್ಪತಿ ಬಂದನು ಕುಸುಮಾವತಿ ಎಂಬ ಪಟ್ಟಣಕ್ಕೆ

ಕೊಂಡಾಡಲರಿದು ಪಚ್ಚೆಯ ಕೋಟೆಯಂತೆ
ಮಂಡಳಿಸಿ ಮಹಾಬನದಲಿ
ತಂಡತಂಡದ ವಿಹಗಾಲಯ ತುಂಬಿಗಳ
ಹಿಂಡುಗಳಿರ್ದವಿಕ್ಕೆಲದಿ ೨೨

ಪಚ್ಚೆಯ ಕೋಟೆಯಂತೆ ಸುತ್ತುವರಿದ ವನದಲ್ಲಿ ತಂಡತಂಡದಲ್ಲಿರುವ ಪಕ್ಷಧಾಮಗಳನ್ನು, ತುಂಬಿಗಳ ಹಿಂಡನ್ನು ಕೊಂಡಾಡಲು ಅಸಾಧ್ಯ.

ಕಳಿತ ರಸಾಲ ನೇರಿಲವಣ್ಗಳ ಪಿಕಾ
ವಳಿ ಚಂಚುಪುಟದಿ ಕರ್ದುಂಕಿ
ತುಳುಕಿದ ಮಧುರಸ ದಡಸೂಸೆ ಪರಿವ ಪೆ
ರ್ಬೊಳೆಯೆಸೆದುದನೀಕ್ಷಿಸಿದ ೨೩

ಮಾಗಿದ ಮಾವಿನಹಣ್ಣು, ನೇರಿಲ ಹಣ್ಣುಗಳನ್ನು ಕೋಗಿಲೆಗಳು ತಮ್ಮ ಕೊಕ್ಕುಗಳಿಂದ ಕುಕ್ಕಿದಾಗ ತುಳುಕಿದ ಮಧುರಸ ಹೊಳೆಯಾಗಿ ಹರಿಯುವುದನ್ನು ನೋಡಿದ.

ಚಂಗಣಿಗಿಲೆ ಪಾದರಿ ಮೆಣ್ ಮುಡಿವಾಳ ವ
ನಂಗಳ ತೋಟವಿಕ್ಕೆಲದಿ
ಕಂಗೊಳಿಸುವ ಮಧುರ ಸ ವಾಹಿನಿಯೆಂಬ
ಗಂಗಾಜಲವ ಚಪ್ಪರಿದ ೨೪

ಚಂಗಣಗಿಲೆ, ಪಾದರಿ, ಮುಡಿವಾಳ ವೃಕ್ಷಗಳ ತೋಟ ಎರಡೂ ಕಡೆ ಕಣ್ಣಿಗೆ ಹಬ್ಬವನ್ನುಂಟು ಮಾಡಿದಾಗ ಅಲ್ಲಿ ಕಂಗೊಳಿಸುವ ಮಧುರಸವಾಹಿನಿ ಎಂಬ ಗಂಗಾಜಲವನ್ನು ಬೊಗಸೆಯಲ್ಲಿ ಕೊಂಡು ಚಪ್ಪರಿಸಿದ.

ನಾಟಿರ್ದ ಪಸುರ್ಗಿಡ ಪುಷ್ಪಲತೆಯ ವೃಕ್ಷ
ವಾಟಿಯೊಳು ಕುಸುಮ ಸೌರಭಕೆ
ಊಟೆವರಿವ ತುಂಬಿಗಳ ದೊಂಬಿ ದನಿಗೆಯ್ವ
ಕೋಟಿ ಕೋಗಿಲೆಗಳೊಪ್ಪಿದವು ೨೫

ನಾಟಿ ಹಾಕಿದಂತಿದ್ದ ಹಸುರುಗಿಡ, ಹೂಬಳ್ಳಿ, ಮುಗಿಲು ಮುಟ್ಟುವ ಮರಗಳ ಉದ್ಯಾನವನದಲ್ಲಿ ಆವರಿಸಿರುವ ಸುಮಸೌರಭಕ್ಕೆ ಬುಗ್ಗೆಯಂತೆ ಚಿಮ್ಮುವ ದುಂಬಿಗಳ ದೊಂಬಿ, ಸುಮಧುರವಾಗಿ ಕೂಗುವ ಕೋಟಿ ಕೋಗಿಲೆಗಳು ಒಪ್ಪಿದವು.

ಪೆಸರುವಡೆದ ಮಧುರಸವಾಹಿನಿಯ ಕಂ
ಡೆಸೆವ ಚಂದನ ಡೋಣಿಗಡರಿ
ಬಿಸರುಹಗಂಧ ಗಂಧಿನಿಯುರಸ್ಥಳದ ಕ
ಕ್ಕಸ ಕುಚಯುಗಳ ನಿಟ್ಟಿಸಿದ ೨೬

ಹೆಸರುವಾಸಿಯಾದ ಮಧುರಸವಾಹಿನಿಯ ಕಂಡು ಶ್ರೀಗಂಧದ ದೋಣಿಯನ್ನು ಹತ್ತಿದಾಗ ಅದನ್ನು ನಡೆಸುವ ಬಿಸರುಹಗಂಧ ಗಂಧಿನಿ (ಮತ್ಸ್ಯಗಂಧಿ)ಯ ವಕ್ಷಸ್ಥಳದಲ್ಲಿ ಎದ್ದು ಕಾಣುವ ತೆಂಗಿನಕಾಯಿಗಾತ್ರದ ಕುಚದ್ವಯವನ್ನು ನಿಟ್ಟಿಸಿದ.

ಆ ಸಮಯದಿ ಸದ್ಗುರುರಾಯ ನೆನದನು ಪ
ರಾಶರ ಮುನಿಗಾದ ಹದನ
ಬೂಸಚ್ಚೆಯೋಲು ತನಗಹುದೆಂದು ಅವನಿ
ವಾಸಗಾತಿಯರ ಬೀಳ್ಕೊಂಡ ೨೭

ಆ ಸಮಯದಲ್ಲಿ ಸುರುಗುರು ಬೃಹಸ್ಪತಿ ಪರಾಶರ ಮುನಿಗಾದ ಹದನವನ್ನು ನೆನೆದು, ಆ ಬೆಡಗಿಯರನ್ನು ಬೀಳ್ಕೊಂಡ.

ಕಳವೆ ಕ್ಷೇತ್ರದಿಕ್ಕೆಲದಲಿ ನಿಂದು ಪರಿಮಳ
ದಳೆದ ನೀಲಾಬ್ಜವ ಕಿತ್ತು
ತೊಳಲುವ ಗಿಳಿವಿಂಡನಟ್ಟಿ ಪಾರಿಸುವ ಹೆಂ
ಗಳ ರೂಪ ನೋಡುತ್ತೈದಿದನು ೨೮

ಭತ್ತದ ಗದ್ದೆಗಳ ಎರಡೂ ಕಡೆ ನಿಂತು ಪರಿಮಳಯುಕ್ತ ನೀಲಕಮಲ ಕಿತ್ತು ಅಡ್ಡಾಡುವ ಗಿಳಿ ಹಿಂಡುಗಳನ್ನು ಅಟ್ಟುವ ಹೆಣ್ಣುಗಳ ರೂಪವನ್ನು ಚಪ್ಪರಿಸುತ್ತಾ ಬಂದನು.

ಬಟ್ಟ ಬಲ್ಮೊಲೆಯ ಭಾವೆಯರಾಯತಿವೆತ್ತು
ಪಟ್ಟಣದೊಳಗಿಂದ ಪೊರಟು
ನೆಟ್ಟನೆ ಸ್ಮರನಿರ್ದ ನಂದನದೆಡೆಗೆ ಸಾ
ಲಿಟ್ಟುದನೇನ ಪೇಳುವೆನು ೨೯

ಬಟ್ಟೆಮೊಲೆಯ ದಿಟ್ಟೆಯರ ಉಚಿತ ಸಂಯಮದಿಂದ ಪಟ್ಟಣದೊಳಗಿನಿಂದ ಹೊರಟು ಮನ್ಮಥನಿದ್ದ ನಂದನ ವನದೆಡೆಗೆ ಸಾಲಿಕ್ಕಿ ನಡೆವುದನ್ನು ಏನು ಹೇಳಲಿ?

ಕುಂದ ಗಂಧಿನಿಯರ ಮೆಲ್ನುಡಿಗಮಲ ಶ್ರೀ
ಗಂಧವ ಕಾಣಿಕೆ ವಿಡಿದು
ಮಂದಗತಿಯನಾಂತು ಬೃಹಸ್ಪತಿಗಿದಿರಾಗಿ
ಬಂದುದು ತಂಗಾಳಿ ಬನದಿ ೩೦

ಕುಂದ(ಕೋಲು ಮಲ್ಲಿಗೆ) ಗಂಧಿನಿಯರ ಮೃದುಮಾತಿಗೆ ನಿರ್ಮಲ ಶ್ರೀಗಂಧ ಪರಿಮಳವನ್ನು ಕಾಣಿಕೆಯಾಗಿ ಕೊಟ್ಟು, ಮಂದಗತಿಯಲ್ಲಿ ತಂಗಾಳಿ ಬೃಹಸ್ಪತಿಗಿದಿರಾಗಿ ಬಂದಿತು.

ಎಲರುವಟ್ಟೆಯ ಬಳಿವಿಡಿದೈತಂದು ಕ
ಮ್ಮಲರಿಡಿದಿರ್ದ ನಂದನದಿ
ಕೆಲ ರಮಣಿಯರು ಪೂಗೊಯ್ವುದ ಗುರು ಕಂಡ
ಜಲರುಹದಳ ನೇತ್ರೆ ಕೇಳು ೩೧

ಗಾಳಿಯ ಜಾಡನ್ನು ಹಿಡಿದು ಹಿಂಬಾಲಿಸಿ, ಸುಗಂಧಯುಕ್ತ ಪುಷ್ಪಗಳಿಂದ ಕೂಡಿದ ವನದಲ್ಲಿ ಕೆಲ ರಮಣಿಯರು ಹೂ ಕೊಯ್ಯುವುದನ್ನು ಗುರು ಕಂಡನು.

ಏನ ಹೇಳುವೆ ಚಂದ್ರಕಾಂತ ಶಿಲೆಯ ಸೊ
ಪಾನ ತಣ್ಗೊಳದ ಮಧ್ಯದಿ
ನಾನಾ ರತ್ನ ಶೋಭಿತದ ಚಾವಡಿಯಲಿ
ಮೀನಾಂಕನಿರ್ದನೋಲಗದಿ ೩೨

ಚಂದ್ರಕಾಂತ ಶಿಲೆಯ ಸೋಪಾನವುಳ್ಳ ತಣ್ಗೊಳದ ಮಧ್ಯದಲ್ಲಿ ರತ್ನಶೋಭಿತ ಓಲಗಶಾಲೆಯಲ್ಲಿ ಮೀನಾಂಕ(ಮನ್ಮಥ) ನಿದ್ದನು.

ಕೊಂಚೆಗಳುಚ್ಚ ಧ್ವನಿ ಸಲೆ ನೀಲಕಂಠಗ
ಳಿಂಚರ ತಾಳ ನಿರ್ಣಯದಿ
ಸಂಚರಿಸುವ ರಾಜಹಂಸೆಗಳಿರ್ದುವು
ಪಂಚಬಾಣನ ಮುಂದುಗಡೆ ೩೩

ಕೊಂಚೆಗಳ(ಕ್ರೌಂಚಪಕ್ಷಿಗಳ) ಉಚ್ಚಧ್ವನಿ, ನೀಲಕಂಠ(ನವಿಲು)ಗಳ ಇನಿದಾದ ಸ್ವರಗಳ ತಾಳಕ್ಕನುಗುಣವಾಗಿ ಹೆಜ್ಜೆ ಹಾಕುವ ರಾಜಹಂಸಗಳು ಮನ್ಮಥನ ಮುಂದೆ ಸುಳಿದಾಡುತ್ತಿದ್ದವು.

ಪಾಡುವ ಪೆಣ್ದುಂಬಿ ನರ್ತಿಪ ನವಿಲು ಮಾ
ತಾಡುವ ಜಾಣ್ವಕ್ಕಿ ನಿಚಯ
ಬೇಡುವ ಗಿಳಿವಿಂಡು ದೈನ್ಯದಿಂ ಬಿನ್ನಹ
ಮಾಡುತಿರ್ದವು ಮನ್ಮಥನಿಗೆ ೩೪

ಹಾಡುವ ದುಂಬಿ, ನರ್ತಿಸುವ ನವಿಲು, ಮಾತಾಡುವ ಗಿಳಿವಿಂಡು, ದೈನ್ಯದಿಂದ ಮನ್ಮಥನಿಗೆ ಬಿನ್ನಹ ಮಾಡುತ್ತಿದ್ದವು.

ಕುಕ್ಕುವ ಬಗೆದಾರೆಯ ಕೊಡೆ ಬಹು ಕೊಳ
ರ್ವಕ್ಕಿಯ ತೊನೆದಾಡಿಸುತ
ದಿಕ್ಕಿಗೆ ಪೆಸರಾಂತ ಸಿಪಿಲೆಗೆ ಕವಳವ
ನಿಕ್ಕಿ ಕಾದಿಸುತಿರ್ದ ಮದನ ೩೫

ಕುಕ್ಕುವ ಬಗದಾರೆ(ಪಕ್ಷಿವಿಶೇಷ)ಯ ಜೊತೆಯಲ್ಲಿ ನೀರಹಕ್ಕಿಗಳನ್ನು ತೊನೆದಾಡಿಸುತ್ತ ಹೆಸರಾಂತ ಸಿಪಿಲೆ(ಚಿಪಲೆ=ಮೈನಾಹಕ್ಕಿ)ಗೆ ಕವಳವನ್ನಿಕ್ಕಿ ಮನ್ಮಥ ಕಾದಾಟಕ್ಕೆ ಬಿಡುತ್ತಿದ್ದ.

ಚಂದಿರ ವೀರವಸಂತ ಮಂದಾನಿಲ
ಬಂದಿರೆ ಮೂವರ ಕರೆದು
ಎಂದಿನಂತಿರಿ ಪೋಗಿ ಎನುತ ಬೀಳ್ಕೊಟ್ಟು ಸು
ಗಂಧಿನಿಯರ ನೋಡುತಿರ್ದ ೩೬

ಚಂದ್ರ, ವಸಂತ,ಮಂದಾನಿಲರನ್ನು ಬೀಳ್ಕೊಟ್ಟು ಸುಗಂಧನಿಯರನ್ನು ನೋಡತೊಡಗಿದ ಮನ್ಮಥ.

ಇನಿರಸವಾಂತ ಕರ್ವಿಲ್ಲಿಗೆ ಭ್ರಮರ ಸಿಂ
ಜಿನಿಗೊಳಿಸಿ ಎಡದ ಹಸ್ತದಿ
ದನಿಗೆಯ್ಯುತಿರಲು ಬಲಗೈಯ ಪೂಸರದ
ವನಿತೆ ನಿಂದಿರ್ದಳುತ್ಸವದಿ ೩೭

ಸಿಹಿರಸದ ಕಬ್ಬಿನ ಬಿಲ್ಲಿಗೆ ದುಂಬಿ ಹೆದೆಯನ್ನು ಸಜ್ಜುಗೊಳಿಸಿ ಎಡದ ಕೈಯಲ್ಲಿ ಮಿಡಿಯುತ್ತಾ, ಬಲದ ಕೈಯಲ್ಲಿ ಹೂಮಾಲೆ ಹಿಡಿದು ಹೆಣ್ಣೊಬ್ಬಳು ನಿಂತಿದ್ದಳು.

ರಮಣಿಯೊರ್ವಳು ನಿಖಿಳಾಯುಧದೊಳಗು
ತ್ತಮವೆಂದು ಸುರಗಿಯ ಪಿಡಿದಿರೆ
ಘಮಘಮಿಸುವ ಸೊನ್ನಗೆದಗೆ ಎಸಳೆಂಬ
ಜವದಾಡೆಯವಳೊಪ್ಪಿದಳು ೩೮

ಒಬ್ಬಳು ಸಕಲ ಆಯುಧಗಳಲ್ಲಿ ಸುರಗಿ(ಕತ್ತಿ)ಯೊ ಉತ್ತಮವೆಂದು ಹಿಡಿದಿದ್ದರೆ, ಘಮಘಮಿಸುವ ಹೊಂಗೇದಗೆಯು ಎಸಳು ಎನ್ನುವಂತಿರುವಳೊಬ್ಬಳು ಕಠಾರಿಯನ್ನು ಹಿಡಿದು ಕಣ್ಮನ ಸೆಳೆದಳು

ಪೆಂಗಳರಸಿ ಮತ್ತೋರ್ವಳು ಕಮ್ಮನೆಯ
ಪಿಂಗಾರ ಚಮರವಿಕ್ಕುವಳು

ಹೊಂಗೆದಳಿರ ಕೋಮಲ ಪತ್ರವೀಜನ
ದಂಗನೆ ಕೈವೀಸುತಿಹಳು ೩೯

ಹೆಣ್ಣುಗಳರಸಿ ಮತ್ತೊಬ್ಬಳು ಸುವಾಸನೆಯ ಹಿಂಗಾರ(ಹೊಂಬಾಳೆ)ದ ಚಾಮರ ಹಿಡಿದಿದ್ದರೆ, ಹೊಂಗೆಯ ಚಿಗುರಿನ ಕೋಮಲ ಬೀಸಣಿಯನ್ನು ಹಿಡಿದು ಮಗದೊಬ್ಬಳು ನಿಂತಿದ್ದಳು.

ವಿಲಸಿತ ಪೂಗ ಪತ್ರಿಕೆಯೆ ನೇತ್ರಿಕೆಯಾದ
ಜಲಪಾತ್ರೆ ಧಾರಕಿಯೊಡನೆ
ಸುಲಲಿತ ಕ್ರಮುಕ ಬೆಳ್ಳೆಲೆಯ ಸಂಬಳಿಗೆಯ
ಲಲನೆ ನಿಂದಿರ್ದಳೊತ್ತಿನಲಿ ೪೦

ಅಡಕೆಮರದ ಎಲೆಯೇ ತೆಳುವಸ್ತ್ರವಾದ ಜಲಪಾತ್ರೆ ಧಾರಕಿಯೊಡನೆ ಅಡಕೆ ಎಲೆಯ ಪೆಟ್ಟಿಗೆಯ ಲಲನೆ ನಿಂತಿದ್ದಳು.

ನಾಳವಿಚ್ಛೇದ ಸುವರ್ಣ ಪಂಕೇರುಹ
ಕಾಳಾಂಜಿ ಪಿಡಿದೊರ್ವಳಿಹಳು
ಪೇಳಲಚ್ಚರಿಯ ಬಾಹತ್ತ ನಿಯೋಗದ
ಮೇಳದಂಗನೆಯರೊಪ್ಪಿದರು ೪೧

ಹೊಂದಾವರೆಯ ಪೀಕದಾನಿ ಹಿಡಿದು ಒಬ್ಬಳಿರುವಳು. ಹೇಳಲು ಸೋಜಿಗವೆಂದರೆ ಎಪ್ಪತ್ತೆರಡು ಅಧಿಕಾರಿ ಮೇಳದಂಗನೆಯರು ರಂಜಿಸಿದರು.

ಅಂದವಡೆದ ನಾನಾ ಗೀತವಾದ್ಯ ಪ್ರ
ಬಂಧ ವಿವಿಧ ವಿದ್ಯೆಗಳಲಿ
ಒಂದರೊಳು ಕೊರೆಯಿಲ್ಲದ ಹೆಂಗಳಿರ್ದರು
ಕಂದರ್ಪನೊಡ್ಡೋಲಗದಿ ೪೨

ಗೀತ ವಾದ್ಯ ಪ್ರಬಂಧ ಮೊದಲಾದ ವಿದ್ಯೆಗಳಲ್ಲಿ ಏನೊಂದು ಅರೆಕೊರೆಯಿಲ್ಲದ ಅಂದಗಾತಿಯರಿದ್ದರು ಮನ್ಮಥನ ಒಡ್ಡೋಲಗದಲ್ಲಿ.

ಹೊಂಗಳಸಗಳ ಕೀಳ್ಪಡಿಸುವ ವೃತ್ತ ಕು
ಚಂಗಳ ರತಿಯರ ಮೇಳದಿ

ಕಂಗೊಳಿಸುವ ಕಾಮಗೆ ಬೃಹಸ್ಪತಿ ಪೂ
ದೊಂಗುಲನಿತ್ತು ಸಂಧಿಸಿದ ೪೩

ಹೊಂಗಳಸಗಳನ್ನು ಕೀಳಾಗಿಸುವ ದುಂಡು ಮೊಲೆಗಳ ಲಲನೆಯರ ಮೇಳದಲ್ಲಿ ಕಂಗೊಳಿಸುವ ಮನ್ಮಥನಿಗೆ ಬೃಹಸ್ಪತಿ ಹೂಗೊಂಚಲನ್ನು ನೀಡಿ ಸಂಧಿಸಿದನು.

ಬೋಧಾರ್ಹ ಬೃಹಸ್ಪತಿ ತನ್ನ ಮಹದಾಶೀ
ರ್ವಾದವ ಪ್ರೀತಿಯಿಂ ಕುಡಲು
ಆದರಗೆಯ್ದು ಕುಳ್ಳಿರಿಸಿ ಬಳಿಕ ಕೇಳ್ದ ರ
ತೀಧವ ಬಂದ ಸುದ್ದಿಯನು ೪೪

ಬೋಧಿಸುವ ಸುರಗುರು ಪ್ರೀತಿಯಿಂದ ಆಶೀರ್ವದಿಸಲು, ರತೀಧವ (ರತಿಯಗಂಡ ಮನ್ಮಥ) ಆದರದಿಂದ ಉಚಿತಾಸನದಲ್ಲಿ ಕುಳ್ಳಿರಿಸಿ ಬಂದ ಸುದ್ದಿಯನ್ನು ಕೇಳಿದನು.

ಕಾವನೊಡನೆ ವಿಸ್ತರಿಸಿದ ಗುರು ವಾಸು
ದೇವ ನಾಲ್ಮೊಗರಪ್ಪಣೆಯ
ಕೇವಲ ರಹಸ್ಯವೆಂದು ಮನ್ಮಥನಾಗ
ಜೀವನೊಡನೆ ಮಾತಿಗಿಳಿದ ೪೫

ಕೃಷ್ಣ, ಬ್ರಹ್ಮರ ಅಪ್ಪಣೆಯನ್ನು ಸುರಗುರು ರಾಮನಿಗೆ ರಹಸ್ಯವೆಂದು ಹೇಳಿದ, ಮನ್ಮಥ ಆಗ ಜೀವ (ಸುರಗುರು) ನೊಡನೆ ಮಾತಿಗಿಳಿದ.

ನಾರಾಯಣ ವಿಧಿ ವಾಕ್ಯಗಳನು ಮೀರಲು
ಬಾರದೆಂದು ಜೀವ ನುಡಿದ
ಘೋರಾಕೃತಿವೆತ್ತ ಹರನಲ್ಲಿ ಸೆಣಸಲ
ದಾರು ಮೆಚ್ಚುವರೆಂದ ನಗುತ ೪೬

ವಿಷ್ಣು ಬ್ರಹ್ಮರ ಮಾತುಗಳನ್ನು ಮೀರಬಾರದು ಎಂದು ಜೀವ ಹೇಳಿದಾಗ, ಮನ್ಮಥ ರುದ್ರಾಕೃತಿಯ ಹರನೊಡನೆ ಸೆಣಸಲು ಯಾರು ಎಂದ ಬಯಸುವರು.

ತನಗಿಂತ ಬಲ್ಲಿದರೊಳು ಕಾದಿ ಕೈಸೋತು
ಕನಲುವ ದುಃಖವಂತಿರಲಿ
ಜನಸೂಡಿಗೆಯ ಸೈರಿಸಬಲ್ಲರಾರೆಂದು
ಮನಸಿಜ ನುಡಿದ ಜೀವನೊಳು ೪೭

ತನಗಿಂತ ಬಲಾಢ್ಯರೊಡನೆ ಹೋರಾಡಿ ಸೋತ ದುಃಖ ಹಾಗಿರಲಿ, ಜನಜ್ವಾಲೆಯನ್ನು ಸೈರಿಸುವರಾರು ಎಂದು ಜೀವನೊಡನೆ ಮನ್ಮಥ ನುಡಿದ.

ಬಡನುಡಿಯನಾಡಿದೆ ತವ ಪಂಚಬಾಣಕೆ
ಮೃಡ ವಿಧಿ ವಿಷ್ಣು ದೇವೇಂದ್ರ
ಒಡಲೊಳು ಪೆಣ್ಮುದ್ರೆವೆತ್ತರು ನಿನಗೆ ಕಂ
ಗೆಡದವರಾರು ಲೋಕದಲಿ ೪೮

ನಿನ್ನ ಪಂಚಬಾಣಗಳಿಗೆ ವಿಷ್ಣು ಬ್ರಹ್ಮ ಮಹೇಶ್ವರರಾದಿಯಾಗಿ ಕಂಗೆಡದವರು ಯಾರಿದ್ದಾರೆ ಎಂದು ಸುರಗುರು ಪುಸಲಾಯಿಸಿದ.

ಸುರುಗುರುರಾಯ ನಿನ್ನಯ ವಾಕ್ಯವ ಕೇಳಿ
ಹರನ ಮೇಲಾನಂಬತೊಡಲು
ಉರವಣೆಗಾರ ಕೆಂಗಿಡಗಣ್ಣ ತೆರೆದರೆ
ನ್ನಿರವಳಿದಪುದೆಂದು ನುಡಿದ ೪೯

ದೇವಗುರುವೆ, ನಿನ್ನ ಮಾತನ್ನು ಕೇಳಿ ನಾನು ಹರನಿಗೆ ಬಾಣ ಬಿಡಲು, ಅವನು ತನ್ನ ಕೆಂಡಗಣ್ಣ ತೆರೆದರೆ ನಾನು ನಾಶವಾಗುವೆನೆಂದು ನುಡಿದ

ಮತವರಿಯದೆ ಮಾತನಾಡಿದೆ ಕೇಳು ಪರ
ಹಿತಕೊಡಲಳಿದರೇನು ನಷ್ಟ
ಶತಪತ್ರಸಖ ಚಂದ್ರರುಳ್ಳನ್ನ ಕೀರ್ತಿ ಶಾ
ಶ್ವತವಾಗಿಹುದೆಂದು ನುಡಿದ ೫೦

ಉದ್ದೇಶವರಿಯದೆ ಮಾತನಾಡಿದೆ, ಆದರೆ ಪರಹಿತಕ್ಕಾಗಿ ಒಡಲಳಿದರೇನು ನಷ್ಟ? ಸೂರ್ಯಚಂದ್ರರಿರುವ ತನಕ ನಿನ್ನ ಕೀರ್ತಿ ಶಾಶ್ವತವಾಗಿ ಉಳಿಯುವುದು.

ತನುವೊಂದುಳ್ಳೊಡೆ ಸಕಲ ಸುಖಂಗಳೊಳು
ಅನುಭೋಗವ ಕಾಣಬಹುದು
ಮಿನುಗುವ ದೇಹವನು ಬಿಸುಡುವುದೇಕೆಂದು
ಮನುಮಥ ನುಡಿದ ಜೀವನಿಗೆ ೫೧

ಶರೀರವೊಂದಿದ್ದರೆ ಸಕಲ ಸುಖಗಳನ್ನು ಭೋಗಿಸಬಹುದು. ಮಿನುಗುವ ದೇಹವನ್ನು ತ್ಯಜಿಸುವುದೇಕೆಂದು ಮನ್ಮಥ ಜೀವನಿಗೆ ಹೇಳಿದನು.

ಯೋಚಿಸಿ ಮಾತನಾಡು ಪರಹಿತಕ್ಕಾಗಿ ದ
ಧೀಚಿ ತನ್ನೊಡಲ ಮಾಂಸವ
ಚಾಚಿದ ಸುರಪಶುವಿಂಗೆ ಬೆನ್ನಮೂಳೆಯ
ಸೂಚಿಸಿ ಸುರರಾಜಗಿತ್ತ ೫೨

ಪರಹಿತಕ್ಕಾಗಿ ದಧೀಚಿ ತನ್ನ ಪ್ರಾಣವನ್ನೇ ತ್ಯಜಿಸಿದ (ದೇವತೆಗಳು ಇವನ ಬಳಿ ಆಯುಧಗಳನ್ನಿಟ್ಟು ಬಹಳ ಕಾಲ ಬರಲಿಲ್ಲವೆಂದೂ ಅವು ಹಾಳಾಗುತ್ತವೆ ಎಂದು ಜಲದಲ್ಲಿ ಅಭಿಮಂತ್ರಿಸಿ ಸೇವಿಸಿ ಬಿಟ್ಟ. ಆ ಮೇಲೆ ದೇವತೆಗಳು ಬಂದಾಗ ನನ್ನ ಬೆನ್ನಮೂಳೆಯಲ್ಲಿವೆ, ಕಮ್ಮಾರರಿಂದ ಮಾಡಿಸಿಕೊಳ್ಳಿ ಎಂದು ತನ್ನ ಜೀವ ತ್ಯಜಿಸಿದ) ಇಂದ್ರನ ವಜ್ರಾಯುಧವೂ ಅವನ ಮೂಳೆಯಿಂದಲೇ ಸಿದ್ಧವಾಯಿತು.

ನೋಡಲು ಜೀಮೂತವಾಹನ ಫಣಿ ಶಂಖ
ಚೂಡಂಗೆ ಕುತ್ತಿ ತನ್ನೊಡಲ
ಬಾಡ ಗರುತ್ಮನಿಗಿತ್ತು ಸತ್ಕೀರ್ತಿಯ
ನಾಡೊಳು ಪಡೆದುದನರಿಯ ೫೩

ಜೀಮೂತವಾಹನನೆಂಬ ವಿದ್ಯಾಧರ ಸರ್ಪ ಶಂಖಚೂಡನ ಪ್ರಾಣ ರಕ್ಷಣೆಗಾಗಿ ತನ್ನೊಡಲ ಮಾಂಸವನ್ನು ಗರುಡನಿಗಿತ್ತು ಸತ್ಕೀರ್ತಿ ಪಡೆದುದನ್ನು ಮರೆಯದಿರು ಮನ್ಮಥ.

ಹೋಗಲದೇನು ದೊಡ್ಡಿತು ಮಾಂಧಾತ ಸು
ತ್ಯಾಗವ ಬೇಡ ಬಂದವಗೆ
ರಾಗದಿಂದೊಡಲ ಸರ್ರನೆ ಸೀಳ್ದು ದಕ್ಷಿಣ
ಭಾಗವ ಕೊಟ್ಟುದನರಿಯ ೫೪

ಮಾಂಧಾತ ಬೇಡ ಬಂದವನಿಗೆ ಒಡಲ ಸೀಳಿ ದಕ್ಷಿಣಭಾಗವನ್ನು ಕೊಟ್ಟದ್ದನ್ನು ನೆನಸಿಕೊ

ರಾರಾಜಿಪ ಯೌವನ ಮೇಘದೊಡ್ಡಣೆ
ನೀರ ಬೊಬ್ಬುಳಿಕೆಯೆಂದು ತಿಳಿ
ಆರಿದನು ನಚ್ಚಿದುದಿಲ್ಲವು ಲೋಕೋಪ
ಕಾರವೆ ಕೈವಲ್ಯವಹುದು ೫೫

ಪ್ರಕಾಶಮಾನವಾದ ಯೌವನ, ಮೋಡದ ಸಮೂಹ, ನೀರಗುಳ್ಳೆ ಎಂದು ತಿಳಿ, ಯಾರೂ ಇವುಗಳನ್ನು ನಂಬಿ ಕೂಡುವುದಿಲ್ಲ. ಜನಹಿತ ಕಾರ್ಯ ಮೋಕ್ಷ ಪ್ರದಾಯಿಕ

ತೋರ ನುಣ್ಮೊಲೆವೆತ್ತ ಹೆಂಡಿರು ರತ್ನ ಭಂ
ಡಾರ ನಾನಾ ವಸ್ತು ಪೆರರ್ಗೆ
ಸಾರಲೊಪ್ಪುವುದು ತನು ತ್ಯಾಗದ ಲೋಕೋಪ
ಕಾರವೆ ಕೈವಲ್ಯವೆಂದ ೫೬

ದುಂಡುಮೊಲೆಯ ಹೆಂಡಿರು, ರತ್ನ ಭಂಡಾರ, ನಾನಾ ವಸ್ತು ಪರರ ಪಾಲು, ನಮ್ಮ ಜೊತೆಯಲ್ಲಿ ಬರುವುದು ತನುತ್ಯಾಗದ ಲೋಕೋಪಕಾರದ ಕೀರ್ತಿಯೇ, ಕೈವಲ್ಯವೆ ಎಂದು ಬೃಹಸ್ಪತಿ ಹೇಳಿದ.

ಆಷಾಢಭೂತಿಗಳು ನವರತ್ನ ಸುವರ್ಣನ
ಹೇಷರದಂತೆ ಹೊತ್ತಿಹರು
ದೋಷರಹಿತ ಪರಹಿತವೆಂಬುದೆ ನವರತ್ನ
ಭೂಷಣ ಕೇಳು ಕಂದರ್ಪ ೫೭

ಆಷಾಡಭೂತಿಗಳು ನವರತ್ನಗಳನ್ನು ಸುವರ್ಣವನ್ನು ಹೇಷರ (ಹೇಸರಗತ್ತೆ)ದಂತೆ ಹೊತ್ತುಕೊಂಡಿದ್ದಾರೆ. ಆದರೆ ದೋಷರಹಿತವಾದ ಪರಹಿತವೇ ನವರತ್ನಗಳು, ಸುವರ್ಣ ಭೂಷಣಗಳು, ಕೇಳು ಕಂದರ್ಪ ಎಂದನು.

ಆವಕಾಲವನಾದರು ಮೀರಬಪ್ಪುದು
ಸಾವಕಾಲವ ಮೀರಬಹುದೆ
ದೇವರ್ಕಳೆಡರಿಂಗೆ ನಿನ್ನ ದೇಹವ ತೆತ್ತು
ಕಾವನಾಗೆಂದು ಬೋಧಿಸಿದ ೫೮

ಯಾವ ಕಾಲವನ್ನಾದರೂ ಮೀರಬಹುದು, ಸಾವ ಕಾಲವನ್ನು

ಮೀರಬಹುದೆ? ದೇವತೆಗಳ ಸಂಕಟ ಪರಿಹಾರಕ್ಕೆ ನಿನ್ನ ದೇಹವ ತೆತ್ತು ಕಾವ(ರಕ್ಷಕ)ನಾಗೆಂದು ಬೋಧಿಸಿದನು.

ಓರಂತೆ ವೇದಶಾಸ್ತ್ರಾಗನು ಪುರಾಣ
ಸಾರವನರಿದು ನೋಡಿದರೆ
ಭಾರವಪ್ಪುದು ಪರಪೀಡನ ಲೋಕೋಪ
ಕಾರವೆ ಕೈವಲ್ಯವಹುದು ೫೯

ನಿರಂತರವಾಗಿ ವೇದಶಾಸ್ತ್ರ ಪುರಾಣಗಳ ಸಾರವನ್ನು ಅರಿತು ನೋಡಿದರೆ, ಪರಪೀಡನ ವೈಕಲ್ಯವನ್ನುಂಟು ಮಾಡುತ್ತದೆ, ಲೋಕೋಪಕಾರ ಕೈವಲ್ಯವನ್ನು ನೀಡುತ್ತದೆ.

ನೆಟ್ಟನೆ ಸುರಗುರುರಾಯ ಬೋಧಿಸಲೊಡಂ
ಬಟ್ಟು ಪೂಸರಳಿಂದ ಶಿವನ
ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ
ಕೊಟ್ಟ ಮನ್ಮಥ ಜೀವನಿಗೆ ೬೦

ಸುರಗುರುವಿನ ಬೋಧನೆಗೆ ಸಮ್ಮತಿಸಿ, ಹೂಬಾಣದಿಂದ ಶಿವನಿಗೆ ತಾಗುವಂತೆ ತಪೋಭಂಗವಾಗುವಂತೆ ಮಾಡುತ್ತೇನೆ ಎಂದು ಮನ್ಮಥ ಜೀವ(ಸುರಗುರು)ನಿಗೆ ಭಾಷೆಯನ್ನು ಕೊಟ್ಟನು.

ಉರಿ ಬಂದರೆ ಬರಲಿದರಿಂದ ಪರಮೈ
ಸಿರಿ ಉಕ್ಕಿ ಬಂದರೆ ಬರಲಿ
ಹರಿ ನಿರೂಪಿಸಿದಂತೆ ಮಾಡುವೆನೆನ್ನುತ
ತ್ವರಿತದಿ ಬೀಳ್ಕೊಟ್ಟ ಗುರುವ ೬೧

ಇದರಿಂದ ಉರಿ ಬರಲಿ, ಸಿರಿ ಬರಲಿ, ಹರಿ ನಿರೂಪಿಸಿದಂತೆ ಮಾಡುತ್ತೇನೆ ಎಂದು ತ್ವರಿತವಾಗಿ ಗುರುವನ್ನು ಬೀಳ್ಕೊಟ್ಟನು.

ಗಂಡಸುತನವೆತ್ತು ನುಡಿದ ಪಂತದ ಹಮ್ಮು
ಕಂಡು ವೃಂದಾರಕರುಗಳ

ಹಿಂಡು ಬದುಕಿತೆಂದು ಜೀವನು ಕಳುಹಿಸಿ
ಕೊಂಡು ಪೋದನು ಸುರಪುರಕೆ ೬೨

ಗಂಡಸುತನದ ಮಾತಿನಿಂದ ದೇವಸಮೂಹ ಬದುಕಿತೆಂದು ಜೀವನು(ಸುರಗುರು ಬೃಹಸ್ಪತಿ) ಮನ್ಮಥನಿಂದ ಕಳುಹಿಸಿಕೊಂಡು ಸುರಲೋಕಕ್ಕೆ ತೆರಳಿದನು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೩

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಲಕ್ಷ್ಮೀಕಾಂತ ಮರೆಯದೆ ಪೊರೆಯುವನು.

## ೬. ಮನ್ಮಥನ ದಂಡಯಾತ್ರೆ

ಸೊನ್ನಾಂಬರನಂಘ್ರಿ ನಿರ್ಮಾಲ್ಯ ತುಲಸಿಯ
ಕನ್ನದೊಳಿಟ್ಟು ಕೊಂಬಂತೆ
ನಿನ್ನ ಸವಿನುಡಿಗಳ್ಗೆ ಕಿವಿಗೊಡದವರಾರು
ಮನ್ಮಥ ಪೇಳು ಮೇಲ್ಗತೆಯ ೧

ಸೊನ್ನಾಂಬರನ (ಪೀತಾಂಬರಧಾರಿ ವಿಷ್ಣುವಿನ) ಪಾದದ ನಿರ್ಮಾಲ್ಯ (ಬಾಡಿದ ಹೂ) ತುಳಸಿಯನ್ನು ಕನ್ನ(ಕರ್ಣ)ದಲ್ಲಿ ಇಟ್ಟುಕೊಳ್ಳುವಂತೆ, ನಿನ್ನ ನುಡಿಗಳಿಗೆ ಕಿವಿಗೊಡದವರಾರು? ನನ್ನ ಮನದನ್ನ ಉತ್ತಮಕಥೆಯನ್ನು ಹೇಳು

ಮದನಾಗಮ ಶ್ರೀಕಾರಂಗಳಂತಿರ್ಪ
ಸುದತಿ ನಿನ್ನ ಶ್ರೋತ್ರಗಳಿಗೆ
ಉದಧಿಯೊಳೊಗೆದ ಪೀಯೂಷದಂತುಸುರುವೆ
ಹದವಾದ ಮಾತ ಚಿತ್ತೈಸು ೨

ರತಿಶಾಸ್ತ್ರದ ಶ್ರೀಕಾರ(ಆರಂಭಸಂಕೇತ ಅಥವಾ ಶ್ರೀ ಅಕ್ಷರದ ಆಕಾರದಲ್ಲಿರುವ) ದಂತಿರುವ ನಿನ್ನ ಕಿವಿಗಳಿಗೆ ಸಮುದ್ರಮಂಥನ ಕಾಲದಲ್ಲಿ ಮೂಡಿದ ಅಮೃತದಂತೆ ಹದವಾದ ಮಾತನ್ನು ಹೇಳುತ್ತೇನೆ ಕೇಳು.

ಸಸಿಯೊಡಲಡಗ ಭಕ್ಷಿಪರಿಂಗೆ ಲೇಸ ಸೂ
ಚಿಸಿ ಜೀವ ಪೋಗಲತ್ತ ಇತ್ತ
ಬಿಸಿಗಣ್ಣನೊಡನೆ ಕಾದುವೆನೆಂದು ಕಾಮ ತ
ನ್ನಸಿಯಳ ಕೂಡೆ ಪೇಳಿದನು ೩

ಚಂದ್ರನ ಮೈಯ ಮಾಂಸ(ಬೆಳದಿಂಗಳನ್ನು) ಸೇವಿಸುವವರಿಗೆ ಲೇಸ ಬಯಸಿ ಸುರಗುರು ಅತ್ತ ಹೋಗಲು, ಇತ್ತ ಮನ್ಮಥ ಕೆಂಡಗಣ್ಣನೊಡನೆ ಕಾದಾಟಕ್ಕಿಳಿಯುವೆನೆಂದು ಮನ್ಮಥ ತನ್ನ ತೆಳುವಾದ ಮೈಕಟ್ಟಿನ ಮನದನ್ನೆಗೆ ಹೇಳಿದನು.

ಪತಿವಚನಕೆ ಮಾರ್ನುಡಿವುದುಂಟಾದರಾ
ಸತಿಗೆ ಪ್ರಾಯಶ್ಚಿತ್ತವಿಲ್ಲೆಂಬ
ಶ್ರುತಿಯಿದೆ ನಿಮಗೆ ನಾನುಸಿರಲಮ್ಮೆನೆಂದು
ರತಿ ಬಿನ್ನಹವ ಮಾಡಿದಳು. ೪

ಪತಿಯ ಮಾತಿಗೆ ಮಾರ್ನುಡಿಯುವುದು ಉಂಟಾದರೂ ಆ ಸತಿಗೆ ಪ್ರಾಯಶ್ಚಿತ್ತ ಇಲ್ಲವೆಂಬ ವೇದೋಕ್ತಿಯಿದೆ. ನಾನು ನಿಮಗೆ ಹೇಳಲಾರೆನೆಂದು ರತಿ ಬಿನ್ನವಿಸಿದಳು.

ಅದಕೇನು ಕಾಣ ಬಂದುದ ಹೇಳು ಹೇಳೆಂದು
ಮದನ ನಿರೂಪಿಸಲೊಡನೆ
ಸುದತಿ ಶಿರೋಮಣಿ ನಿರ್ದೋಷಿ ತಾನೆಂದು
ಹೃದಯದ ಮಾತ ಬಿಚ್ಚಿದಳು ೫

ಅದಕೇನು ನಿನಗೆ ಅನ್ನಿಸಿದ್ದನ್ನು ಹೇಳು ಹೇಳೆಂದು ಮನ್ಮಥ ಒತ್ತಾಯ ಮಾಡಿದಾಗ ಆಕೆ ತಾನು ನಿರ್ದೋಷಿಯೆಂದು ಅಂತರಂಗದ ಅನ್ನಿಸಿಕೆಗೆ ಅಭಿವ್ಯಕ್ತಿ ನೀಡಿದಳು.

ಹಸ್ತವ ಮುಗಿದು ಕಾಂತನ ಕರ್ಣಯುಗಳಕೆ
ವಿಸ್ತರಿಸಿದಳು ಬಿನ್ನಹವ
ಸ್ವಸ್ತದೊಳಿರು ನಿರ್ಜರರಿಗೋಸುಗ ಪಂಚ
ಮಸ್ತಕನೊಳು ಬೇಡ ಮಥನ ೬

ಸ್ವಸ್ಥವಾಗಿರು, ದೇವತೆಗಳಿಗೋಸ್ಕರವಾಗಿ ಪಂಚಾಸ್ಯನ(ಶಿವನ) ಜೊತೆ ಮಥನ ಬೇಡವೆಂದು ಕೈಮುಗಿದು ಬಿನ್ನವಿಸಿದಳು.

ಅಂಧಕಾಸುರ ಮತ್ತೇಭದಾನವ ಜ
ಲಂಧರ ಮುಖ್ಯ ರಾಕ್ಷಸರ
ಕೊಂದ ಧೀರೊದಾತ್ತ ಹರನೊಳು ಕಾಳಗ
ಕಂದರ್ಪ ನಿನಗೆ ಸಿದ್ಧಪುದೆ ೭

ಅಂಧಕಾಸುರ, ಇಭದಾನವ, ಜಲಂಧರ ಮೊದಲಾದ ರಾಕ್ಷಸರನ್ನು ಕೊಂದ ಹರನೊಂದಿಗೆ ಕಾಳಗಕ್ಕಿಳಿದರೆ ನಿನಗೆ ವಿಜಯ ದೊರಕುವುದೆ?

ಮೂಢರಂದದೊಳು ಊರಗುದ್ದಲಿಯ ಕೊಂಡು
ನಾಡ ಕಾಲುವೆಯ ತಿದ್ದುವರೆ
ಬೇಡ ಲಲಾಟನೇತ್ರನ ಕೂಡ ಕಲಹ ಕೈ
ಗೂಡದೆಂದೊಲಿದು ಪೇಳ್ದಳು ೮

ಮೂಢರಂದದಲ್ಲಿ ಊರಗುದ್ದಲಿಯ ತೆಗೆದುಕೊಂಡು ನಾಡಕಾಲುವೆಯ ತಿದ್ದುವುದು ಸೂಕ್ತವೇ? ಹಣೆಗಣ್ಣನ ಜೊತೆ ಕಲಹ ಬೇಡವೆಂದು ಹೇಳಿದಳು.

ವಾಸವಾದಿ ಸುರಗುರುವಿಗೆ ನಾನಿತ್ತ
ಬಾಸೆಗೆ ತಪ್ಪೆನು ಕೈಲಾಸ
ವಾಸನೊಡನೆ ಕಾಳಗವ ಮಾಡುವೆನೆಂದು
ಪೂಸರ ನುಡಿದ ಮಾನಿನಿಗೆ ೯

ವಿಷ್ಣು ಬೃಹಸ್ಪತಿಗಳಿಗೆ ನಾನು ಕೊಟ್ಟ ಭಾಷೆಗೆ ತಪ್ಪುವುದಿಲ್ಲ. ಕೈಲಾಸವಾಸನೊಡನೆ ಕಾಳಗ ಮಾಡಿಯೇ ತೀರುವೆನೆಂದು ಹೂಬಾಣ ರತಿಗೆ ಹೇಳಿದನು.

ಅಂತರಿಕ್ಷದಲಿ ನೆಲೆಗೊಂಡು ತ್ರಿಪುರಗಳ
ನಾಂತು ಮಾರ್ಮಲೆತಿರ್ದ ಅಮ
ರಾಂತಕರೆರ್ದೆಯ ತ್ರಿಶೂಲದಿ ತಿವಿದ ಕಾ
ಲಾಂತಕನೊಳು ಬೇಡ ಕಲಹ ೧೦

ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ ವಿದ್ಯುನ್ಮಾಲಿಗಳು ಆಕಾಶದಲ್ಲಿ ಮೂರು ಪಟ್ಟಣಗಳನ್ನು ಕಟ್ಟಿಕೊಂಡು ದೇವತೆಗಳಿಗೆ ಮಾರಕರಾಗಿ ವಿಜೃಂಭಿಸುತ್ತಿರುವಾಗ, ಕಾಲಾಂತಕ (ಯಮನಿಗೆ ಯಮ)ನಾದ ಶಿವನು ಆ ಅಮರಾಂತಕ (ದೇವತೆಗಳಿಗೆ ಯಮ) ರಾಗಿದ್ದ ಮೂವರು ರಾಕ್ಷಸರನ್ನು ಕೊಂದನು. ಅಂಥ ಶಿವನೊಡನೆ ಕಲಹ ಬೇಡವೆಂದು ರತಿ ವಿನಂತಿಸಿದಳು.

ಇಷ್ಟು ನೀ ಕೀರ್ತಿಸಲವನ ಮೇಲೆಡಬಿಡದೆ
ಕಷ್ಟವನೆರೆದು ಮತ್ಸರಳ
ವೃಷ್ಟಿಯ ಸುರಿಸಿ ದೇವಾಸುರರೊಳು ತಪ
ಭ್ರಷ್ಟನ ಮಾಳ್ಪೆ ನೋಡೆಂದ ೧೧

ನೀನು ಇಷ್ಟು ಕೀರ್ತಿಸುವ ಶಿವನಿಗೆ ಕಷ್ಟವಾಗುವಂತೆ ಸತತವಾಗಿ ನನ್ನ ಹೂಬಾಣಗಳ ಮಳೆಸುರಿಸಿ ಅವನನ್ನು ತಪೋಭ್ರಷ್ಟ ನನ್ನಾಗಿ ಮಾಡುವೆನು.

ಉತ್ತರೋತ್ತರವಾಗಿ ಶಕುನಾದಿಗಳ ನೀ
ಚಿತ್ತಯಿಸುವುದೆಂದನೆಲು
ಮತ್ತಗಜೇಂದ್ರ ಗಮನೆಯ ಕುಸ್ತರಿಸಿ ಸಮ
ಚಿತ್ತದೆ ಬೀಳ್ಕೊಂಡ ಸತಿಯ ೧೨

ಮುಂದಾಗುವ ಶಕುನಾದಿಗಳನ್ನು ಗಮನಿಸಿ ಮುಂದಡಿಯಿಡು ಎಂದು ಪತ್ನಿ ಬೇಡಿಕೊಂಡಾಗ ಮನ್ಮಥ ಅವಳನ್ನು ಸಮಾಧಾನಪಡಿಸಿ ಸ್ವಸ್ಥ ಮನಸ್ಸಿನಿಂದ ಬೀಳ್ಕೊಂಡನು.

ಮಂಡಳಿಸಿದ ತಳಿರರಥ ರಮ್ಯ ಕಂದರ
ಅಂಡಜ ಧ್ವಜ ಚೈತ್ರ ಸೂತ
ತುಂಡ ಮಾಣಿಕ ವಾಜಿ ಕುಣಿಯಲ್ಕೆ ಇಕ್ಲು ಕೋ
ದಂಡ ಬಂದಡರ್ದನಳ್ತಿಯಲಿ ೧೩

ಮತ್ಸ್ಯಧ್ವಜದಿಂದ ಕೂಡಿದ, ಚೈತ್ರ ಸಾರಥಿಯಿಂದ ಸಜ್ಜಾಗಿರುವ, ಗಿಳಿಯೇ ಕುದುರೆಯಾಗಿರುವ ತಳಿರ(ಚಿಗುರು) ರಥವನ್ನೇರಿದನು ಮನ್ಮಥ.

ಭೋಗಿಭೂಷಣನ ಮೇಲೆ ಮನ್ಮಥ ಸಬಲ
ನಾಗಿ ಪೋದಪನೆಂದು ಬಿಡದೆ
ಕೋಗಿಲೆಯೆಂಬ ಕಟ್ಟಿಗೆಕಾರನ ಕೈಲಿ
ಕೂಗಿಸಿದನು ತೀಕ್ಷಣದಲಿ ೧೪

ನಾಗಭೂಷಣನಾದ ಶಿವನ ಮೇಲೆ ಯುದ್ಧಸನ್ನದ್ಧನಾಗಿ ಮನ್ಮಥ ಹೊರಟಿದ್ದಾನೆ ಎಂಬುದನ್ನು ಕೋಲುಕಾರ ಕೋಗಿಲೆಯ ಮೂಲಕ ಕೂಗಿಸಿದನು.

ವಾರಿಜಭವ ಶಕ್ರಾದಿ ದೇವತೆಗಳು
ನಾರಿಯ ಕುಚಮಂಡಲವನು
ಸೇರಿ ಬದುಕಲೆಂದು ಮದನನ ಮುಂದುಗಡೆ
ಮೋರ ಹೆಗ್ಗಾಳೆ ಸಾರಿದುದು ೧೫

ಬ್ರಹ್ಮ ಇಂದ್ರಾದಿ ದೇವತೆಗಳ ನಾರಿ(ಬಿಲ್ಲಿನ ಹೆದೆ)ಯ ಕುಚಮಂಡಲವನ್ನು

ಹಿಡಿದು ಜೀವ ಉಳಿಸಿಕೊಳ್ಳಲಿ ಎಂದು ಮನ್ಮಥನ ಮುಂದುಗಡೆ ನಮಿಲಿನ ಹೆಗ್ಗಾಳೆಯ(ದೊಡ್ಡ ಕಹಳೆ) ಕೂಗು ಸಾರತೊಡಗಿತು.

ಹೆಕ್ಕಳದಿಂದೊದರುವ ಕೊಂಚೆಗಳ ದನಿ
ಉಕ್ಕಡಗಹಳೆ ಸೂಳೈಸಿ
ಜಕ್ಕವಕ್ಕಿಗಳಿಂಚರದ ಪಿರಿಯ ನಾದ
ತೆಕ್ಕನೆ ತೀವಿತುರ್ವಿಯಲಿ ೧೬

ಉತ್ಸಾಹದಿಂದ ಒದರುವ ಕ್ರೌಂಚಪಕ್ಷಿಗಳ ಉಕ್ಕಡಗಹಳೆಯ(ಸುಂಕದ ಕಟ್ಟೆಯ ಗಡಿಯಲ್ಲಿನ ಕಹಳೆ) ಗಟ್ಟಿಯಾದ ಕಿರುಚು ಧ್ವನಿಗೆ ಚಕ್ರವಾಕ ಪಕ್ಷಿಗಳ ದೊಡ್ಡನಾದ ಸೇರಿಕೊಂಡು ಇಡೀ ಭೂಮಂಡಲ ಕಿವಿ ಮುಚ್ಚಿಕೊಳ್ಳುವಂತಾಯಿತು.

ನೆರೆಕೂಗುವ ಕೊಳರ್ವಕ್ಕಿಯ ದೊದ್ದೆಯ
ಹರೆ ಝುಲ್ಲರಿಯ ನಾದ ತುಂಬಿ
ಗರಿಯ ಝೇಂಕಾರ ಸುಸ್ವರ ಪೂರಿತ ಮಹತ್
ಉರುಮೆಗಳರಚಿದುವಾಗ ೧೭

ಜೋರಾಗಿ ಕೂಗುವ ನೀರಹಕ್ಕಿಗಳ ಗದ್ದಲದ ಚರ್ಮವಾದ್ಯಗಳ ಸದ್ದಿನೊಂದಿಗೆ ಗರಿ(ಪಕ್ಷಿವಿಶೇಷ)ಗಳ ಝೇಂಕಾರನಾದ ಚರ್ಮವಾದ್ಯ ಚೀರಿದವು.

ಬಿಡದೊದರುವ ನಾನಾವಾದ್ಯರಭಸ ಘೀ
ಳಿಡಲು ಬ್ರಹ್ಮಾಂಡ ಭಾಂಡಗಳು
ಒಡವಂತೆ ಘುಡುಘುಡಿಸುತ ಕಂತು ಬಲಗೂಡಿ
ನಡೆವುದನೇನ ಹೇಳುವೆನು ೧೮

ಬಿಡದೆ ಸದ್ದು ಮಾಡುವ ನಾನಾ ವಾದ್ಯಗಳು ಆನೆಗಳಂತೆ ಘೀಳಿಡಲು, ಬ್ರಹ್ಮಾಂಡ ಭಾಂಡ(ಪಾತ್ರ) ಒಡೆದು ಹೋಗುವಂತೆ ಮನ್ಮಥ ಸೈನ್ಯಗೂಡಿ ನಡೆವ ರಭಸವದು ನಿಜಕ್ಕೂ ಅಚ್ಚರಿ

ಇತ್ತೆರದಲಿ ತಳಿರ್ವಡೆದಿರ್ದ ಮಾಮರ
ಮತ್ತೇಭ ಗಿಳಿ ತೇಜಿನಿಚಯ
ವೃತ್ತ ವಿಹಂಗ ಚಕೋರ ಕಾಲಾಳ್ಗಳ
ಮೊತ್ತದಿ ನಡೆದನಳ್ತಿಯಲಿ ೧೯

ಎರಡೂ ಕಡೆಯೂ ಚಿಗುರಿದ ಮಾವಿನ ಮರಗಳ, ಮತ್ತೇಭ (ಮದಿಸಿದ ಆನೆ)ಗಳ, ಗಿಳಿಗಳೆಂಬ ತೇಜಿ(ಕುದುರೆ)ಗಳ, ದುಂಡುದುಂಡಾದ ಚಕೋರ ಪಕ್ಷಿಗಳ ಕಾಲಾಳ್ಗಳ ಸಮೂಹದಲ್ಲಿ ಪ್ರೀತಿಯಿಂದ ನಡೆದನು.

ಮುಂತೆಡಬಲದಿ ಪೌಜಿಕ್ಕಿದ ಚಂದ್ರ ವ
ಸಂತ ಮಂದಾನಿಲಾದಿಗಳು
ಪಂತವ ಬಿಡದೆ ಬಿನ್ನಹಗೈದರು ರತಿ
ಕಾಂತಂಗೆ ಕೈಮುಗಿದೊಡನೆ ೨೦

ಮುಂದುಗಡೆ ಎಡಗಡೆ ಬಲಗಡೆ ಚಂದ್ರವಸಂತ ಮಂದಾನಿಲ ಮೊದಲಾದ ಸೈನ್ಯ ಸಮೂಹ ಛಲ ಬಿಡದೆ ಕೈಮುಗಿದು ರತಿಕಾಂತನಿಗೆ ಬಿನ್ನೈಸಿದರು.

ದಿಟ್ಟಿದಹನನ ಮಸ್ತಕ ಮುರಿವಂದದಿ
ಮೆಟ್ಟಿ ಕೆಂಗಿಡಿಗಳ ಕರೆದು
ಪುಟ್ಟಿಸಿ ಹೃದಯ ಸಂತಾಪವ ತಪವ ಪುಡಿ
ಗುಟ್ಟುವೆನೆಂದನಬ್ಜಾರಿ ೨೧

ಶಿವನ ರುಂಡ ಮುರಿವಂತೆ ಮೆಟ್ಟಿ, ಕೆಂಗಿಡಿಗಳನ್ನು ಕರೆದು, ಎದೆಸಂಕಟವನ್ನುಂಟು ಮಾಡಿ ಅವನ ತಪವನ್ನು ಕೆಡಿಸುವೆನೆಂದನು ಚಂದ್ರ

ಚಿಂತಾರಹಿತನಾಗಿರ್ದ ಮಹೇಶ್ವರ
ನಂತರ್ಭಾವದೊಳಪೊಕ್ಕು
ಸಂತಾಪವ ಕೊನರಿಪೆನೆಂದು ಸ್ಮರಗೆ ವ
ಸಂತ ಬಿನ್ನಹ ಮಾಡಿದನು ೨೨

ಚಿಂತಾರಹಿತನಾದ ಮಹೇಶ್ವರನ ಅಂತರಂಗವನ್ನು ಹೊಕ್ಕು ಸಂತಾಪವನ್ನು ಬಿತ್ತುವೆನೆಂದು ವಸಂತ ಬಿನ್ನಹ ಮಾಡಿದನು.

ಒಮ್ಮನವೆರಸಿ ತಪೋನ್ನತಿ ವಡೆದಿರ್ದ
ನಿಮ್ಮಳಾತ್ಮಕ ಶಿವನೊಡಲ
ಉಮ್ಮಿಯೇಳ್ವಂತೆ ಹೊಯ್ವೆನೆಂದು ಮಂದಾನಿಲ
ಕಮ್ಮಲಗೋಲಂಗೆ ನುಡಿದ ೨೩

ಏಕಾಗ್ರಚಿತ್ತದಿಂದ ತಪೋಮಗ್ನನಾಗಿರುವ ಶಿವನೊಡಲಿನ ಉಮ್ಮಿ(ಹೊಟ್ಟು, ಧೂಳು) ಏಳುವಂತೆ ರುಬ್ಬುವೆನೆಂದು  ಮಂದಾನಿಲ ಮನ್ಮಥನಿಗೆ ಹೇಳಿದನು.

ಬೀರವ ನುಡಿದ ಮೂವರ ಮಾತನು ಕೇಳಿ
ಮಾರ ಮನ್ನಣೆಗೈದನವರ
ಓರಂತೆ ಮುಂಚೂಣಿಯಲಿಂಬಿಟ್ಟು ವಿ
ಸ್ತಾರದಿ ತೆರಳ್ದನರ್ತಿಯಲಿ ೨೪

ವೀರಾವೇಶದಿಂದಾಡಿದ ಮೂವರ ಮಾತುಗಳನ್ನು ಕೇಳಿದ ಮಾರ(ಮನ್ಮಥ) ಅವರಿಗೆ ಮನ್ನಣೆ ಮಾಡಿ, ಅವರನ್ನು ಮಂಚೂಣಿಯಲ್ಲಿ ವಿರಾಜಿಸುವಂತೆ ಮಾಡಿ ಸಂತೋಷದಿಂದ ಮುನ್ನಡೆದನು.

ತೋರಿತು ವಾಸುಕಿಬಗದಾರೆ ಎಡದಲ್ಲಿ
ಹಾರಿತು ಹಂಗ ದಕ್ಷಿಣಕೆ
ತೂರಿತು ಬಲದ ಭಾಗದಿ ಪಳಿ ಮುಂಗಟ್ಟಿ
ಪಾರಿತು ವಾಯಸವೆಡಕೆ ೨೫

ಎಡಗಡೆ ವಾಸುಕಿ(ಸರ್ಪ) ಬಗದಾರೆ(ಪಕ್ಷಿವಿಶೇಷ) ಕಾಣಿಸಿಕೊಂಡಿತು. ಹಂಗ (ಹಾಲಕ್ಕಿ, ಶಕುನದ ಹಕ್ಕಿ) ದಕ್ಷಿಣಕ್ಕೆ ಹಾರಿತು. ಬಲಭಾಗದಲ್ಲಿ ಪಳಿ(ನಾಯಿ)ತೂರಿತು. ಕಾಗೆ ಎಡಕ್ಕೆ ಹಾರಿತು.

ಎಡದೋಳು ಹಾರಿತು ವಾಮಲೋಚನ ಬೆಂ'
ಬಿಡದಲುಗಿತು ಮುಂದೆ ನೋಡೆ
ಗಿಡುಗೆದ್ದು ಪಾರಿತು ಮನ್ಮಥ ಬಲಗೂಡಿ
ನಡೆವಾಗಲೇನ ಹೇಳುವೆನು ೨೬

ಮನ್ಮಥ ಸೈನ್ಯಸಮೇತ ನಡೆಯುವಾಗ ಎಡತೋಳು ಹಾರಿತು, ಎಡಗಣ್ಣು ಅದುರಿತು, ಗಿಡುಗ ಎದ್ದು ಹಾರಿತು,

ಪೊಡವಿಯೊಳಪಶಕುನಂಗಳಾದೊಡೆ ಕಂಡು
ಮಡ ಮುರಿದರೆ ಮಾನಭಂಗ
ಮೃಢನ ಧಿಕ್ಕರಿಸುವೆನೆಂದು ಕೋಪದಾಳಿ
ನಡೆದ ಮನ್ಮಥ ಸೂಟಿಯಲಿ ೨೭

ಅಪಶಕುನಗಳಾಗುವುದನ್ನು ಕಂಡು ಹಿಂದಿರುಗಿದರೆ ಮಾನಗೇಡು ಎಂದು ಮನ್ಮಥನು. ಮೃಡನನ್ನು ಧಿಕ್ಕರಿಸುವೆನೆಂದು ವೇಗದಿಂದ ಸಾಗಿದನು.

ನಿತ್ಯಕರ್ಮವ ಮರೆದರು ದೇವಪೂಜೆಯ
ತತ್ತಳ ಮಾಳ್ಪರು ತಪವ
ಚತ್ತವನೇರಿದರು ಸನ್ಮುನಿಗಳು ದಂ
ಡೆತ್ತಿ ಮನ್ಮಥ ಬಹ ಭರಕೆ ೨೮

ಮನ್ಮಥ ದಂಡೆತ್ತಿ ಬರುವ ರಭಸಕ್ಕೆ ಮುನಿಗಳು ಚತ್ತ(ಒಳಮಾಳಿಗೆ)ವನ್ನು ಏರಿದರು. ತಪವನ್ನು ಕಕ್ಕಾಬಿಕ್ಕಿಯಾಗಿ ಮಾಡಿದರು, ದೇವಪೂಜೆಯ ನಿತ್ಯಕರ್ಮವನ್ನು ಮರೆತರು.

ದಂಡಕೃಷ್ಣಾಜಿನ ಜಪಮಾಲೆ ಧೋತ್ರ ಕ
ಮಂಡಲು ಕೂಡೆ ಸಂಪುಟವ
ಕೊಂಡೊಯ್ಯದೆ ಮರೆದೋಡಿತು ಮುನಿಗಳ
ತಂಡ ಮನ್ಮಥನಬ್ಬರಕೆ ೨೯

ದೊಣ್ಣೆ, ಜಿಂಕೆಚರ್ಮ, ಜಪಮಣಿ, ಪಂಚೆ, ಕಮಂಡಲಗಳ ಜೊತೆಗೆ ಸಂದೂಕ(ಸಣ್ಣ ಪೆಟ್ಟಿಗೆ) ವನ್ನು ಮುನಿಗಳ ತಂಡ ಮರೆತು ಓಡಿತು, ಮನ್ಮಥನ ಅಬ್ಬರಕ್ಕೆ ಹೆದರಿ.

ಕಾಷಾಯಾಂಬರ ಕುಶ ಭಸ್ಮ ಸಮಿದೆಯೌ
ಪಾಸನ ಕೊಳವೆ ಸುಶಾಸ್ತ್ರ
ಭಾಸುರ ಭೂತಿ ಘುಟಿಕೆಗಳ ಮರೆದು ಮು
ನೀಶರೋಡಿದರು ಕಂಡೆಡೆಗೆ ೩೦

ಕಾವಿ ಬಟ್ಟೆ, ದರ್ಭೆ, ಭಸ್ಮ, ಸೌದೆ, ಶಾಸ್ತ್ರದ ಉಪಾಸನಾ ಕೊಳವೆ, ವಿಭೂತಿಯ ಘಟ್ಟಿಗಳನ್ನು ಮರೆತು ಮುನೀಶರೋಡಿದರು.

ದೃಢ ಮುನಿಗಳ ಧಿಕ್ಕರಿಸುತ ಬಿಟ್ಟಲ್ಲಿ
ಬಿಡದೆ ರಾಜ್ಯವ ಸೂರೆಗೊಳುತ
ಸಡಗರದೊಳು ಬಂದು ಕಂಡನು ಬಹುರಮ್ಯ
ವಡೆದಿರ್ದ ಭಾಗೀರಥಿಯ ೩೧

ಮುನಿಗಳ ದೃಢತೆಯನ್ನು ಧಿಕ್ಕರಿಸಿ ರಾಜ್ಯವನ್ನೆ ಸೂರೆಗೊಳ್ಳುತ್ತ ಕೊನೆಗೆ ಬಹು ರಮ್ಯವಾದ ಭಾಗೀರತಿ (ಗಂಗೆ) ತೀರಕ್ಕೆ ಬಂದನು.

ರಾಕ್ಷಸಭೇದಿಯುಂಗುಟ ಸಂಭವೆ ಭಾ
ಳಾಕ್ಷನ ಜಡೆಗಳಿಂ ಇಳಿದು
ಮೋಕ್ಷವ ಕುಡಬಂದ ಪರಮಪಾವನೆಯ ನಿಡಿ
ದೀಕ್ಷಿಸಿದ ರತೀಶನೊಲಿದು ೩೨

ವಿಷ್ಣುವಿನ ಉಂಗುಟದಿಂದ ಉದ್ಭವಿಸಿದವಳೂ, ಹಣೆಗಣ್ಣನ ಜಡೆಯಿಂದ ಇಳಿದು ಬಂದವಳೂ ಆದ ಪರಮಪಾವನೆ ಗಂಗೆಯನ್ನು ರತೀಶನು ಈಕ್ಷಿಸಿದನು.

ಅಗಣಿತ ಬುದ್ಬುದ ತೆರೆನೊರೆ ಸುಳಿ ನಾಭಿ
ಮೊಗವೆತ್ತ ಜಂತು ಮೇಲಕ್ಕೆ
ನೆಗೆವ ಸೀರ್ಪನಿಗಳು ಮುತ್ತಿನಂದದಿ ಕಣ್ಗೆ
ಸೊಗಯಿಸಿತಾ ಪುಣ್ಯಗಂಗೆ ೩೩

ಅಸಂಖ್ಯ ನಿರುಗುಳ್ಳೆಗಳ, ತೆರೆ, ನೊರೆ, ಸುಳಿಯ ಒಕ್ಕುಳ, ಮುಖವೆತ್ತಿದ ಜೀವ ಜಂತು, ಮೇಲಕ್ಕೆ ನೆಗೆಯುವ ತುಂತುರುಹನಿಗಳ ಮುತ್ತುಗಳಿಂದ ಪುಣ್ಯಗಂಗೆ ರಂಜಿಸಿತು.

ವಿಷಪೂರಿತವಾಗಿ ಸಾಸಿರ ಮೊಗದಿ ಶೋ
ಭಿಸುವ ಫಣೀಂದ್ರನಂದದಲಿ
ವಸುಮತಿಯೊಳು ಶುಭ್ರ ಸಂಕಾಶದಿಂ ಪ್ರವ
ಹಿಸುತಿರ್ದಳಾ ಪುಣ್ಯಗಂಗೆ ೩೪

ಸಾಸಿರಮೊಗದ ಫಣೀಂದ್ರ(ಆದಿಶೇಷ)ನಂತೆ ವಿಷಪೂರಿತವಾಗಿ (ವಿಷ ಎನ್ನುವುದಕ್ಕೆ ಪಾಷಾಣ ಎಂಬ ಅರ್ಥದ ಜೊತೆಗೆ ನೀರು ಎಂಬ ಅರ್ಥವೂ ಇದೆ) ವಸುಮತಿಯಲ್ಲಿ ಗಂಗೆ ಪ್ರವಹಿಸುತ್ತಿದ್ದಳು.

ಸಿರಿದೇವಿಯ ಪೆತ್ತ ಸೊದೆಗಡಲಿಳೆಯ ತಾ
ತ್ವರಿಯದಿ ನೋಡಬಂದಂತೆ
ಮುರಿಮುರಿದುರ್ವಿಯಾ ತಳದಲ್ಲಿ ಮಡುಗೊಂಡು
ಪರಿದಳು ತುಂಗ ಬೆಳ್ಗಂಗೆ ೩೫

ಲಕ್ಷ್ಮಿಯನ್ನು ಹೆತ್ತ ಹಾಲ್ಗಡಲೇ ಇಳೆಯನ್ನು ನೋಡಲು ಬಂದಂತೆ ಅಂಕುಡೊಂಕಾಗಿ ಸಾಗುತ್ತಾ ಭೂಮಿಯ ತಳಭಾಗದಲ್ಲಿ ಮಡುಗೊಂಡು ಗಂಗೆ ಹರಿದಳು.

ಸೊಂಡಿಲ ನೆಗಹಿ ಭೋರ್ಗರೆವ ನೀರಾನೆಯ
ತಂಡ ನೆಗಳು ಮೀನ ಕಮಠ
ತಂಡತಂಜದಿ ಡಲಚರ ತುಂಬಿ ಕಣ್ಗೆ ಶ್ರೀ
ಖಂಡವಾಗಿರ್ದಳಾ ಗಂಗೆ ೩೬

ಸೊಂಡಿಲನ್ನೆತ್ತಿ ಘೀಳಿಡುವ ನೀರಾನೆಗಳಿಂದ, ಮೊಸಳೆ ಮತ್ಸ್ಯ ಆಮೆಗಳ ತಂಡ ತಂಡಗಳಿಂದ ಹಾಗೂ ಹತ್ತಾರು ಚಲಚರಗಳಿಂದ ತುಂಬಿ ಗಂಗೆ ಕಣ್ಣಿಗೆ ಶ್ರೀಗಂಧದಂತೆ ಅಥವಾ ಸಂಪತ್ತಿನ ಸಮೂಹದಂತೆ ಮನಮೋಹಕವಾಗಿ ಕಾಣುತ್ತಿತ್ತು.

ಆ ನದಿಯ ಎಡಬಲದಿ ಮಾಳ್ಪ ಪಿಂಡ ಪ್ರ
ದಾನವ ಕೈಕೊಳ್ಳ ಬಂದ
ನಾನಾ ವರ್ಣದ ಪಿತೃಗಳ ದಿವ್ಯ ವಿ
ಮಾನಂಗಳಿರ್ದುವಿಕ್ಕೆಲದಿ ೩೭

ಆ ನದಿಯ ಎಡಗಡೆ ಬಲಗಡೆ ಪಿಂಡ ಪ್ರದಾನ ಕೈಕೊಳ್ಳಲು ಬಂದ ನಾನಾ ವರ್ಣದ ಪಿತೃಗಳ ದಿವ್ಯ ವಿಮಾನಗಳಿದ್ದವು.

ಮಾನವರು ಭಾಗೀರಥಿ ನದಿಯ ಜಲದಲ್ಲಿ
ಸ್ನಾನ ಮಾಳ್ಪರೊಂದು ಮುಖದಿ
ಆನನ ಪಂಚಕನನರಸಿ ಪೋಪರ್ಗಳ
ಮೀನಾಂಕ ನೋಡುತ್ತೈತಂದ ೩೮

ಒಂದು ಮುಖದ ಮಾನವರು ಭಾಗೀರಥಿ ನದಿಯ ನೀರಿನಲ್ಲಿ ಸ್ನಾನಮಾಡಿ ಐದು ಮುಖಗಳ ಶಿವನನ್ನು ಹುಡುಕುತ್ತಾ ಹೋಗುವುದನ್ನು ಮನ್ಮಥ ನೋಡುತ್ತಾ ಬಂದ.

ಮಂದಾಕಿನಿ ದೇವಿ ತಾಯೆ ನಿಮ್ಮೊಳಗಾನು
ಮಿಂದರೀ ಕ್ಷಣ ರುದ್ರನಹೆನು

ಮುಂದಾತನ ಕೂಡೆ ಕಾದುವರಿಲ್ಲೆಂದು
ಕಂದರ್ಪ ನುಡಿದ ಜಾಹ್ನವಿಗೆ ೩೯

ಮಂದಾಕಿನಿದೇವಿ ನಿನ್ನೊಳಗೆ ನಾನು ಮಿಂದರೆ ನಾನು ರುದ್ರನಾಗುವೆನು ಮುಂದೆ ಆತನ ಕೂಡೆ ಹೋರಾಡುವವರು ಇಲ್ಲವೆಂದು ಮನ್ಮಥ ಜಾಹ್ನವಿಗೆ ನುಡಿದ.

ಕ್ಷಿತಿಯೊಳು ಮಹದಾದಿ ಪಾತಕ ನಿನ್ನ ಮೂ
ರುತಿಯ ಕಂಡಾಕ್ಷಣ ಬಯಲು
ಅತಿಕಾಂಕ್ಷೆಯಿಂ ಮಿಂದರೆ ಈಶನಹೆನು ಭಾಗೀ
ರಥಿ ನಿನ್ನ ಹುಗಲಾರೆ ತಾಯೆ ೪೦

ನಿನ್ನ ದರ್ಶನ ಮಾತ್ರದಿಂದಲೇ ಮಹಾ ಪಾಪವೆಲ್ಲ ಬಯಲಾಗುತ್ತದೆ. ಅತಿಯಾದ ಆಸೆಯಿಂದ ಮಿಂದರೆ ಈಶನಾಗುವೆನು, ಗಂಗಾಮಾತೆ ನಿನ್ನೊಳಗೆ ಮುಳುಗಲಾರೆ.

ನಿಡುಗಣ್ಣಿಂದ ನಿಟ್ಟಿಪೆನು ಮದ್ವಲ್ಲಭೆಯ
ಇಡಿಕಿರಿದಿಹ ಬಟ್ಟ ಮೊಲೆಯ
ಕಿಡಿಗಣ್ಣನಾದೊಡೆಂತು ನೋಡುವನೆಂದು
ನುಡಿದ ಕಂದರ್ಪ ಜಾಹ್ನವಿಗೆ ೪೧

ನನ್ನ ಮನದನ್ನೆಯ ತುಂಬಿದ ಬಟ್ಟ ಮೊಲೆಯನ್ನು ನಿಡುಗಣ್ಣಿನಿಂದ ನಿಟ್ಟಿಸುವೆನು. ಆದರೆ ಕಿಡಿಗಣ್ಣನಾದ ಶಿವ ನಿನ್ನನ್ನು ಹೇಗೆ ನೋಡುವನೆಂದು ಮನ್ಮಥ ಗಂಗೆಗೆ ಹೇಳಿದ.

ಭಾಗೀರಥಿ ನಿನ್ನ ಸೋಂಕಿನ ತಂಗಾಳಿ
ತಾಗಿದ ನಿಖಿಳ ಜಂತುಗಳು
ಯೋಗ್ಯತೆವಡೆದು ಸ್ವರ್ಗದ ಸೌಖ್ಯಂಗಳ
ಭೋಗಿಸುತಿಹರು ಸಂತಸದಿ ೪೨

ಭಾಗೀರಥಿದೇವಿ ನಿನ್ನ ಸ್ಪರ್ಶದ ತಂಗಾಳಿ ತಾಕಿದ ಸಕಲ ಜೀವಜಂತುಗಳು ಅರ್ಹತೆ ಪಡೆದು ಸ್ವರ್ಗಸುಖವನ್ನು ಅನುಭವಿಸುತ್ತಿರುವರು ಸಂತಸದಿಂದ.

ಸಕಲ ಜೀವರುಗಳೆಲ್ಲರನು ದುರ್ವಿಷಯದಿ
ಸೊಕಗೊಳಿಸಿದ ಪಾಪವೆನಗೆ
ಪ್ರಕಟಿತವಾಗಿರ್ದು ಪೋಪುದೆಂದಸಮ ಸಾ
ಯಕ ಪೇಳ್ದ ಭಾಗೀರಥಿಗೆ ೪೩

ಸಕಲ ಜೀವರುಗಳೆಲ್ಲರನು ರತಿಸುಖಕ್ಕೆ ದೂಡಿದ ಪಾಪ ನನ್ನೊಳಗಿದ್ದರೂ ನಿನ್ನ ದರುಶನದಿಂದ ಅದು ಹೋಗುವುದೆಂದು ಪಂಚಬಾಣ ಪಾವನ ಗಂಗೆಗೆ ಹೇಳಿದನು.

ಪರಮ ಪವಿತ್ರೋದಕವ ಹಸ್ತದೊಳಾಂತು
ಶಿರದೊಳು ಧರಿಸಿಕೊಂಡೀಂಟಿ
ಸ್ಮರನು ಭಾಗೀರಥಿದೇವಿಗೆ ವಂದಿಸಿ
ತೆರಳಿದ ತುಹಿನಾಚಲಕ್ಕೆ ೪೪

ಪವಿತ್ರ ಗಂಗಾಜಲವನ್ನು ಕೈಯಲ್ಲಿ ತೆಗೆದುಕೊಂಡು ಈಂಟಿ ತಲೆಗೆ ಚಿಮುಕಿಸಿಕೊಂಡ ಮನ್ಮಥ ಭಾಗೀರಥಿಗೆ ವಂದಿಸಿ ಹಿಮಾಚಲದತ್ತ ಸಾಗಿದ.

ಗಿಳಿಕೋಗಿಲೆ ಅರಸಂಚೆ ಮಯೂರ ಬಾಲ
ಅಳಿವಿಂಡು ಸಹಿತ ಮನ್ಮಥನು
ತಳಿರ ರಥವನ್ನೇರಿ ಮುಂದಕೆ ತೆರಳಲು
ಕುಳಿರ್ವೆಟ್ಟು ಕಣ್ಗೆ ರಂಜಿಸಿತು ೪೫

ಗಿಳಿ, ಕೋಗಿಲೆ, ಅರಸಂಚೆ, ನವಿಲು, ಬಾಲದುಂಬಿವಿಂಡು ಸಮೇತ ಮನ್ಮಥನು ಚಿಗುರಿನ ರಥವನ್ನೇರಿ ಮುಂದಕ್ಕೆ ತೆರಳಲು ಕಣ್ಣಿಗೆ ಹಿಮಾಚಲ ಗೋಚರಿಸಿತು.

ಬಡ ರಾವಣನಿಂದ ಲಘುವಾದುದಿಲ್ಲ ಪೆ
ರ್ಗಡೆಗೋಲಾದುದುಮಿಲ್ಲ
ಮೃಢನ ಕಾರ್ಮುಕವಾದುದಿಲ್ಲೆಂದು ಗುರುತ್ವ
ವಡೆದಿರ್ದುದಾ ಕುಳಿರ್ವೆಟ್ಟು ೪೬

ಬಡರಾವಣನಿಂದ ನಾನು ಹಗುರವಾಗಲಿಲ್ಲ, ಸಮುದ್ರ ಮಥನ ಕಾಲದಲ್ಲಿ ಕಡಗೋಲೂ ಆಗಲಿಲ್ಲ, ತ್ರಿಪುರಾಸುರರ ಸಂಹಾರ ಸಂದರ್ಭದಲ್ಲಿ ಶಿವನ

ಬಿಲ್ಲೊ ಆಗಲಿಲ್ಲ ಎಂದು ಸಾರುವಂತೆ ತನ್ನ ಯಥಾಸ್ಥಿತಿಯ ಗುರುತ್ವಶಕ್ತಿಯನ್ನು ಹಿಮಾಚಲ ಉಳಿಸಿಕೊಂಡಿತ್ತು.

ಶಿಲೆಗಳೆಲ್ಲವು ಚಿಂತಾಮಣಿಗಳು ನಿರ್ಝರ
ಜಲಗಳೆಲ್ಲವು ಸಿದ್ಧರಸವು
ಬೆಳೆದಿರ್ದ ವೃಕ್ಷವೆಲ್ಲವು ಕಲ್ಪಕುಜವೆನೆ
ತೊಳಗಿರ್ದುದಾ ಕುಳಿರ್ವೆಟ್ಟು ೪೭

ಕಲ್ಲುಗಳೆಲ್ಲ ದೇವಲೋಕದ ದಿವ್ಯರತ್ನಗಳು, ಝರಿಗಳ ಜಲವೆಲ್ಲ ಸಿದ್ಧರಸ, ಬೆಳೆದಿರುವ ಮರಗಳೆಲ್ಲ ಕಲ್ಪವೃಕ್ಷಗಳು ಎಂಬಂತೆ ಹಿಮಾಚಲ ರಂಜಿಸಿತು.

ಅಮರಾಧಿಪ ಭದ್ರಗಜ ಭುಜಗೇಂದ್ರ ಸ
ತ್ತ್ರಮದಿಂ ತಪವ ಗೆಯ್ವಲ್ಲಿ
ರಮಣೀಯ ವಿಶ್ವರೂಪಾದಂತೆ ಮೆರೆದುದು
ಹಿಮದೊಟ್ಟಿಲು ಪರ್ವತದಿ ೪೮

ಇಂದ್ರನ ಪಟ್ಟದಾನೆ ಐರಾವತ, ಭೂಮಿಯನ್ನು ಹೊತ್ತ ಆದಿಶೇಷ ತಪ ಮಾಡುವಲ್ಲಿ ವಿಶ್ವರೂಪಾದಂತೆ ಹಿಮರಾಶಿ ಪರ್ವತದಲ್ಲಿ ಮೆರೆಯಿತು.

ಯಮ ನಿಯಮ ಮೊದಲಾದಷ್ಟಯೋಗಂಗಳ
ಕ್ರಮದಪ್ಪದೆ ಮುನಿನಿಕರ
ತಮತಮಗಲ್ಲಲ್ಲಿ ಮೆರೆದ ಗುಹೆಗಳ ಸಂ
ಭ್ರಮದಲಿರ್ದುದು ಕುಳಿರ್ವೆಟ್ಟು ೪೯

ಯಮನಿಯಮ ಮೊದಲಾದ ಅಷ್ಟಯೋಗಗಳನ್ನು ಮಾಡಲು ಋಷಿಗಳು ಕ್ರಮತಪ್ಪದೆ ಮೆರೆದ ಗುಹೆಗಳನ್ನು ಒಳಗೊಂಡ ಸಂಭ್ರಮದಲ್ಲಿತ್ತು ಹಿಮಾಚಲ.

ತಪ್ಪದೆ ಬಾಲಕೇಳಿಯೊಳುಮೆಯು ಗುಲುಗುಲು
ಗುಪ್ಪಂಡೆಯನಾಡಿದಂತೆ
ಒಪ್ಪವಡೆದ ಹಿಮದ ದಿಂಡುಗಳು ಎಸೆದವು
ಪುಷ್ಪಬಾಣನ ಕಣ್ಮನಕೆ ೫೦

ಬಾಲ್ಯಾವಸ್ಥೆಯಲ್ಲಿ ಉಮಾದೇವಿ'ಗುಲುಗುಲುಗುಪ್ಪಂಡೆ' ಯಾಟವನಾಡಿದಂತೆ ಮನ್ಮಥನ ಕಣ್ಮನಕೆ ಹಿಮದ ದಿಂಡುಗಳು ಕಂಡು ಬಂದವು.

ಬಾಲೇಂದುಮೌಳಿಯ ತಪದ ತೀವ್ರಾಗ್ನಿಯ
ಜ್ವಾಲೆಯೊಳು ಕುದಿಗೊಂಡ ಕುಳಿರು
ಮೇಲೆ ಮರಳುವ ಬಿಸಿನೀರ ದೊಣೆಗಳಾಗಿರ್ದ
ಲೀಲೆಯನೇನ ಬಣ್ಣಿಪೆನು ೫೧

ಚಂದ್ರಶೇಖರನ ತಪಸ್ಸಿನ ತೀವ್ರಾಗ್ನಿಯ ಜ್ವಾಲೆಯಲ್ಲಿ ಕುದಿಗೊಂಡು ಕರಗಿದ ಹಿಮ ಮೇಲೆ ಮರಳುವ (ಕುದಿಯುವ) ಬಿಸಿನೀರ ದೊಣೆಗಳಾಗಿದ್ದ ಲೀಲೆಯನ್ನು ಹೇಗೆ ವರ್ಣಿಸಲಿ?

ಪುರುಷಾಮೃಗ ಸಿಂಹ ಶರಭ ಶಾರ್ದೂಲ ಭೀ
ಕರಿಸುವ ಕ್ರೋಡ ಭಲ್ಲೂಕ
ಮರೆ ಸಾರಂಗ ಕುರಂಗ ಮತಂಗ ಸಂ
ಚರಿಸಿದುವಾ ಬೆಟ್ಟದೊಳಗೆ ೫೨

ಪುರುಷಾಮೃಗ (ನಾಲ್ಕು ಕಾಲುಗಳ ಮನುಷ್ಯ ಮುಖದ ಕಾಲ್ಪನಿಕ ಪ್ರಾಣಿ), ಸಿಂಹ, ಶರಭ (ಎಂಟುಕಾಲುಗಳನ್ನುಳ್ಳ ಒಂದು ಕಾಲ್ಪನಿಕ ಪ್ರಾಣಿ), ಶಾರ್ದೂಲ (ಹುಲಿ), ಕ್ರೋಡ(ಹಂದಿ), ಭಲ್ಲೂಕ(ಕರಡಿ), ಮರೆ(ಒಂದು ಬಗೆಯ ಜಿಂಕೆ), ಸಾರಂಗ (ಮತ್ತೊಂದು ಬಗೆಯ ಜಿಂಕೆ), ಕುರಂಗ (ಮಗದೊಂದು ಬಗೆಯ ಜಿಂಕೆ), ಮತಂಗ (ಆನೆ) ಸಮೂಹ ಆ ಬೆಟ್ಟದಲ್ಲಿ ಸಂಚರಿಸುತ್ತಿದ್ದವು.

ಸಿಂಗದ ಮೊಲೆಯುಂಬ ಮರಿಯಾನೆ ವ್ಯಾಘ್ರ ಕು
ಚಂಗಳೀಂಟುವ ಬಾಲ ಹರಿಣ
ಮುಂಗುಲಿಯೊಡನಾಡುವೆಳನಾಗರ ಕಂ
ಡಂಗಜ ವಿಸ್ಮಿತನಾದನು ೫೩

ಸಿಂಹದ ಮೊಲೆಯನ್ನು ಕುಡಿಯುವ ಮರಿಯಾನೆಯನ್ನು, ಹುಲಿಯ ಮೊಲೆಯನ್ನೂ ಈಂಟುವ ಜಿಂಕೆಮರಿಯನ್ನು, ಮುಂಗುಸಿಯೊಡನೆ ಸರಸವಾಡುವ ಎಳೆನಾಗರವನ್ನು ಕಂಡು ಮನ್ಮಥ ವಿಸ್ಮಿತನಾದನು.

ರಾಗದ್ವೇಷಂಗಳಿಲ್ಲದೆ ಮೃಗತತಿ
ಯೋಗದೊಳಿರೆ ಕಂಡು ನಗುತ

ಶ್ರೀ ಗೌರೀಶನ ವರ ತಪೋವನ ತಾ
ನಾಗಬೇಕೆಂದ ಮನ್ಮಥ ೫೪

ರಾಗದ್ವೇಷಗಳಿಲ್ಲದೆ ಎಲ್ಲ ಜೀವಜಂತುಗಳು ಪ್ರೇಮ ಪ್ರೀತಿಯೋಗದಲ್ಲಿರುವುದನ್ನು ಕಂಡ ಮನ್ಮಥ, ಗೌರೀಶನ ಈ ತಪೋವನದಂತೆ ತಾನಾಗಬೇಕೆಂದು ಬಯಸಿದ.

ವರಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೫೫

'ವರ ಮೋಹನ ತರಂಗಿಣಿ' ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಲಕ್ಷ್ಮೀಕಾಂತ ರಕ್ಷಿಸುವನು.

## ೭. ಕಾಮದಹನ

ಪನ್ನಗರಿಪುವಾಹನ ಕೃಷ್ಣರಾಯನ
ನಿನ್ನ ಹೃತ್ಕಮಲದೊಳಿಟ್ಟು
ಉನ್ನತವಪ್ಪ ಮೇಲ್ಗತೆವೇಳು ನನ್ನ
ಕನ್ನದ ಜಡ ಪರಿವಂತೆ ೧

ಗರುಡವಾಹನನಾದ ಕೃಷ್ಣನನ್ನು ನಿನ್ನ ಹೃತ್ಕಮಲ ಪೀಠದಲ್ಲಿಟ್ಟು ಉನ್ನತವಾದ 'ಮೇಲ್ಗತೆ' ಹೇಳು, ನನ್ನ ಕನ್ನ(ಕರ್ಣ=ಕಿವಿ)ದ ಜಡ ಹೋಗುವಂತೆ ಎಂದು ಸುಜ್ಞಾನ ವಧೂಟಿ ಕನಕನಿಗೆ ವಿನಂತಿಸುತ್ತಾಳೆ.

ರೂಢಿಯೊಳತ್ಯಂತ ಸುಗುಣೆ ಕೇಳು ತಾಟಂಕ
ಸೂಡಿದ ತವ ಕಿವಿಗೊಳನ
ಕೋಡಿ ಬೀಳ್ವಂತೆ ತುಂಬಿಸುವೆನು ಕಡುರುಚಿ
ಮಾಡಿ ಮೋಹನ ತರಂಗಿಣಿಯ ೨

ಪ್ರಪಂಚದಲ್ಲಿ ಅತ್ಯಂತ ಸುಗುಣೆಯಾದ ನನ್ನ ಮನದನ್ನೆ ಕೇಳು, ತಾಟಂಕ(ಕಿವಿಯ ಆಭರಣ) ತೊಟ್ಟ ನಿನ್ನ ಕಿವಿಯ ಕೊಳ ಮೋಹನತರಂಗಿಣಿಯ ನೆರೆಯಿಂದ ಕೋಡಿಬೀಳುವಂತೆ ಎಸಗುವೆನು.

ಪುಷ್ಪಸುಗಂಧಿನಿ ಕೇಳಾದೊಡಾ ಗಿರಿ
ತಪ್ಪಲೊಳು ಶಿವನಿರ್ದ ವಿಪಿನ
ಒಪ್ಪವಡೆದು ರಾಜಿಸುತಿರ್ದುದು ಕಂ
ದಪ್ಪನ ದೃಗುಯುಗಳಕ್ಕೆ ೩

ಸುಮಸುವಾಸಿನಿ ಕೇಳು, ಗಿರಿಯ ತಪ್ಪಲಲ್ಲಿ ಶಿವನಿದ್ದ ವನ ಮನ್ಮಥನ ಕಣ್ಣುಗಳಿಗೆ ಒಪ್ಪ ಓರಣದಿಂದ ರಾರಾಜಿಸುತ್ತಿತ್ತು.

ಸುತ್ತ ನೋಡಲು ಮುತ್ತು ವಜ್ರ ಮಾಣಿಕ್ಯ
ಉತ್ತಮ ಪಚ್ಚೆಯಂತಿಹುದು

ಮುತ್ತಾಸ್ಪದ ಶ್ರೇಷ್ಠ ಶೋಭಿತ ನೀಲದ
ಮುತ್ತುಗ ಮರಗಳೊಪ್ಪಿದವು ೪

ಸುತ್ತಲೂ ಮುತ್ತು ವಜ್ರ ಮಾಣಿಕ್ಯ ಉತ್ತಮ ಪಚ್ಚೆಯಂತೆಸೆಯುವುದು. ಮುತ್ತುಗಕ್ಕೆ ನೆಲೆಯಾದ ಅಲ್ಲಿ ಶ್ರೇಷ್ಠ ಮುತ್ತುಗದ ಮರಗಳು ಒಪ್ಪಿದುವು.

ವನಧರ್ಮರಾಜ ಬೋರೆಯಂಬುಜ ಭೀಮಾ
ರ್ಜುನ ಸಹದೇವ ದಾಳುಗಳ
ಮನಗೊಂಬ ಬಕುಲ ನೇರಿಲ ವೃಕ್ಷಂಗಳ
ವನವಿರ್ದುದೇನ ಬಣ್ಣಿಸುವೆ ೫

ವನಧರ್ಮರಾಜ (ಒಂದು ಬಗೆಯ ಪುಷ್ಪವೃಕ್ಷ) ಬೋರೆ(ಎಲಚಿ)ಅಂಬುಜ(ನಿಚುಲ ವೃಕ್ಷ) ಭೀಮಾರ್ಜುನ(ದೊಡ್ಡ ಮತ್ತಿಮರ) ಸಹದೇವ(ಔಷಧಿ ಸಸ್ಯ) ದಾರು(ದೇವದಾರು) ಬಕುಲ(ವಕುಳ, ಸುರಹೊನ್ನೆ)ನೇರಿಲ(ನೇರಿಳೆ) ವೃಕ್ಷಗಳಿರುವ ವನವನ್ನು ಹೇಗೆ ಬಣ್ಣಿಸಲಿ?

ಎರೆಯ ಭೂಮಿಯ ಬಾಯ್ದೆರೆ ಧಾನ್ಯ ಮಾನ್ಯರ
ಕರೆವ ಗೋಳಿ ಗಂಡುಗಾರೆ
ಉರೆ ಕಾಬಾಳೆ ಪಾರಿವಾಣ ನಾಮಾಂಕಿತ
ವರ ವೃಕ್ಷ ವಿಪಿನದೊಳಿಹವು ೬

ಎರೆಯ ಭೂಮಿಯ ತುಟಿಯ ಧಾನ್ಯ, ಮಾನ್ಯರನ್ನು ಕೈಬೀಸಿ ಕರೆವ ಗೋಣಿ ಗಂಡುಗಾರೆ ಕಾಡುಬಾಳೆ ಹಾಲಿವಾಣ ವೃಕ್ಷಗಳು ವಿಪಿನದಲ್ಲಿ ರಾರಾಜಿಸುತ್ತಿವೆ.

ವಟ ಬಿಲ್ವ ಭಲ್ಲಾತಕಿ ಚೂತ ಪಿಚುಮಂದ
ಕುಟಜ ಕಪಿತ್ಥಾಮಲಕ
ಶಠ ಶಾಲ್ಮಲಿ ಪಿಪ್ಪಲಿ ಮುಖ್ಯ ವೃಕ್ಷಂಗ
ಳಟವಿಯೊಳೆಸೆದುವೇನೆಂಬೆ ೭

ವಟ(ಆಲ), ಬಿಲ್ವ(ಬೆಲವತ್ತ), ಭಲ್ಲಾತಕಿ(ಗೇರು), ಚೂತ(ಮಾವು) ಪಿಚುಮಂದ(ಬೇವು), ಕುಟಜ(ಬೆಟ್ಟಮಲ್ಲಿಗೆ), ಕಪಿತ್ಥ(ಬೇಲ), ಆಮಲಕ(ನೆಲ್ಲಿ), ಶಾಲ್ಮಲಿ(ಬೂರುಗ), ಪಿಪ್ಪಲಿ(ಹಿಪ್ಪಲಿ) ಮೊದಲಾದ ವೃಕ್ಷಗಳು ಅಡವಿಯಲ್ಲಿ ಇಡಿಕಿರ್ದವು.

ಹುತವಹನೇತ್ರನಿರ್ದಟವಿಯ ಕಂಡು ಮ
ನ್ಮಥ ಮಹೀರಮಣ ಮಂಕೊಂಡು
ಕೃತಕದಿಂದೊಳಪುಗಿಸಿದ ಬೇಗ ವರ ಚೈತ್ರ
ರಥ ಚಂದ್ರ ಮಂದಾನಿಲರನು ೮

ಕೆಂಡಗಣ್ಣ ಶಿವನಿದ್ದ ಅಡವಿಯ ಕಂಡು ಮನ್ಮಥ ಮುನ್ನುಗ್ಗಿ ಚೈತ್ರ ಚಂದ್ರ ಮಂದಾನಿಲರನ್ನು ಬೇಗ ಒಳಕ್ಕೆ ನುಗ್ಗಿಸಿದನು.

ಕಳುಹಿದೊಡೆ ಒಳಪೊಕ್ಕು ವೃಕ್ಷಂಗಳ ನೆರೆ
ತಳಿರಿಸಿದನು ಚೈತ್ರ ಬಿಡದೆ
ಕುಳಿರುಗರೆದ ಚಂದ್ರ ತಂಗಾಳಿ ಮೈಸೋಂಕಿ
ಸುಳಿದುದು ಹರನ ಸಮ್ಮುಖಕೆ ೯

ಒಳಹೊಕ್ಕಂಥ ಚೈತ್ಯ ಮರಗಳನ್ನು ಪೂರಾ ಚಿಗುರಿಸಿದನು, ಚಂದ್ರ ಚಳಿಯನ್ನು ಸುರಿಸಿದ, ತಂಗಾಳಿ ಹರನ ಸಮ್ಮುಖದಲ್ಲಿ ಮೈಸೋಕಿ ಸುಳಿದಾಡಿತು.

ಪುಲ್ಲಶರನ ಮೂಲ ಬಲ ಬನದೊಳು ಪೊಕ್ಕು
ಚೆಲ್ಲವರಿದು ಪೀಡಿಸಲು
ಪಲ್ಲಟಿಸಿದರು ಸದನದೊಳಿರ್ದ ಮುನಿಗಳು
ಗಲ್ಲಕೆ ಕೈಯ ಸಾರ್ಚಿದರು ೧೦

ಹೂಬಾಣನ ಮೂಲಬಲ(ಸೈನ್ಯ) ಚೆಲ್ಲುಚೆಲ್ಲಾಗಿ ಪೀಡಿಸಲು, ಮನೆಯೊಳಗಿದ್ದ ಮುನಿಗಳು ಪಲ್ಲಟಗೊಂಡು, ಗಲ್ಲದ ಮೇಲೆ ಕೈಯಿಟ್ಟು ಯೋಚಿಸತೊಡಗಿದರು.

ಅಲ್ಲಿಗಲ್ಲಿಗೆ ಜಾಜಿ ಸುರಹೊನ್ನೆ ಸಂಪಗೆ
ಮಲ್ಲಿಗೆ ಹೊಗರೇರಿದುವು
ಜಲ್ಲಿ ದುಂಬಿಗಳ ಝೇಂಕಾರಕೆಸ ಮುನಿಜನ
ಡಿಳ್ಳಿಸಿತೇನ ಹೇಳುವೆನು ೧೧

ಅಲ್ಲಲ್ಲಿ ಜಾಜಿ, ಸುರಹೊನ್ನೆ, ಸಂಪಿಗೆ ಮಲ್ಲಿಗೆ ಕಾಂತಿಗೊಂಡವು. ಹಿಂಡುದುಂಬಿಗಳ ಝೇಂಕಾರಕ್ಕೆ ಮನಿಜನ ಕಂಪಿಸಿದರು.

ಮಧುಮಾಸವಲ್ಲ ವಸಂತ ಬಂದಿದೆ ನೋಡಿ
ವಿಧು ಮೂಡಿದೆ ರಾತ್ರಿಯಲ್ಲ
ಇದು ಮದನೋತ್ಪಾತವೆಂದು ಮುನೀಂದ್ರರು
ವಧುಗಳನಮರ್ದಪ್ಪಿದರು ೧೨

ಇದು ಚೈತ್ರ ಮಾಸವಲ್ಲವಾದರೂ ವಸಂತ ಕಾಲಿರಿಸಿದ, ಇದು ರಾತ್ರಿಯಲ್ಲ ಚಂದ್ರ ಮೂಡಿದ, ಇದು ನಿಜಕ್ಕೂ ಮದನನ ಕೈವಾಡವೆಂದು ಮುನೀಂದ್ರರು ವಧುಗಳನ್ನು ಸೆಳೆದಪ್ಪಿಕೊಂಡರು.

ಚಟುಲ ಕಾಮೋದ್ದೀಪನದಿಂದೆ ಕಡುದೂರ್ತ
ವಟುಗಳು ರಿಸಿಕುವರಿಯರ
ಬಟುಮೊಲೆಗಳ ಕೈಲಿ ತುಡುಕಿದರು ಕೇಳಲ್ಲಿ
ನಿಟಿಲಾಕ್ಷ ತಪವಿರ್ದ ಬನದಿ ೧೩

ತೀವ್ರ ಕಾಮೋದ್ದೀಪನದಿಂದ ಧೂರ್ತ ವಟುಗಳು ಋಷಿಕುಮಾರಿಯರ ಬಟುವಾದ ಮೊಲೆಗಳನ್ನು ಕೈಯಲ್ಲಿ ಹಿಡಿದು ಹಿಸುಕಿದರು, ಹಣೆಗಣ್ಣ ತಪವಿದ್ದ ಅಡವಿಯಲ್ಲಿ

ವಾತೋದ್ಘಾಟನೆಯಿಂದತಿ ದೂರದಿಂದ
ಕೇತಕಿ ಗರಿಗಳೈತಂದು
ವೀತರಾಗಿಗಳೆರ್ದೆಗೆ ತಾಗಿ ನಡಲು
ತ್ಪಾತವಾದುದು ತಪೋವನದಿ ೧೪

ಗಾಳಿ ಪ್ರಾರಂಭಗೊಂಡು ದೂರದಿಂದ ಕೇದಗೆ(ತಾಳೆ) ಗರಿಗಳು ಬಂದು ವಿರಾಗಿಗಳ ಎದೆಗೆ ತಾಕಿ ನೆಟ್ಟುಕೊಳ್ಳಲು ತಪೋವನದಲ್ಲಿ ದೊಡ್ಡ ಕೋಲಾಹಲವೇ ಆಯಿತು.

ನನೆಗೋಲನುಪಟಳದಲಿ ಭ್ರಾಂತುಗೊಂಡಿರ್ದ
ವನಚರ ಪೂತ ಸಂಪಗೆಯ
ಕೊನೆಗಳ ಮುರಿದಿಡಲಂಜಲು ತಾಪಸರೆಲ್ಲ
ವನಚರಿಯರನಪ್ಪಿದರು ೧೫

ಹೂಬಾಣನ ಉಪಟಳದಿಂದ ಭ್ರಾಂತುಗೊಂಡಿದ್ದ ಬೇಡ ಸಂಪಗೆ

ಗೊನೆಗಳನ್ನು ಮುರಿದಿಡಲು ಅಂಜಿದಾಗ ತಪಸ್ವಿಗಳೆಲ್ಲ ಬೇಡತಿಯರನ್ನು ಅಪ್ಪಿಕೊಂಡರು.

ಗಳರವಗಳ ಮಾಳ್ಪ ಪಾರಿವ ಬಗದಾರೆ
ಕೊಳರ್ವಕ್ಕಿ ಕೆಲವು ಲಾವುಗೆಯ
ಬಳಗದ ದನಿಗೇಳ್ದ ಮುನಿಗಳ ಚಿತ್ತ ತ
ತ್ತಳವಾದುದೇನ ಹೇಳುವೆನು ೧೬

ಕಂಠಧ್ವನಿ ಮಾಡುವ ಪಾರಿವಾಳ, ಬಗದಾರೆ, ನೀರಹಕ್ಕಿ ಹಾಗೂ ಕೆಲವು ಲಾವುಗೆಗಳ ಕೂಗು ಕೇಳಿದ ಮುನಿಗಳ ಚಿತ್ತ ಕಕ್ಕಾಬಿಕ್ಕಿಯಾಯಿತು.

ಹಲುಬುವ ಗೌಜು ಕರ್ಕರ ಕಪ್ಪರಸೆಟ್ಟಿ
ಚೆಲುವ ಪೆರ್ಬೆಳವ ಕುಕ್ಕುಟ
ಕಲುಕುಟಕಾದಿ ತೋಟದ ಪಕ್ಕಿಗಳ ಕೊರ
ಳುಲುಹಾದುದಾ ತಪೋವನದಿ ೧೭

ಗೌಜು(ಗೌಜಲು=ಕೌಜಲ ಹಕ್ಕಿ), ಕರ್ಕರ(ಕೊಕ್ಕರೆ)ಕಪ್ಪರಸೆಟ್ಟಿ(ಕಪ್ಪಟ) ಬೆಳವ(ಕಾಡು ಪಾರಿವಾಳ), ಕುಕ್ಕುಟ(ಕಾಡುಕೋಳಿ) ಕಲುಕುಟಿಗ(ಮರಕುಟಿಗ ಹಕ್ಕಿಯ ಜಾತಿಗೆ ಸೇರಿದ್ದು) ಮೊದಲಾದ ತೋಟದ ಹಕ್ಕಿಗಳ ಕೂಗು ಕಿವಿ ತುಂಬಿತು.

ಬಟ್ಟವಕ್ಕಿಗಳಂಚೆ ಕೊಂಚೆ ಸಂಚರಿಸಿ ಬೊ
ಬ್ಬಿಟ್ಟುದ ಕೇಳಿ ತಾಪಸರು
ಕೆಟ್ಟರು ಕೆಟ್ಟರು ದಿಟವೆಂದು ಅಲಸದೆ
ಟಿಟ್ಟಿಭ ನುಡಿದುದಾ ಬನದಿ ೧೮

ಅಂಚೆ(ಹಂಸ)ಕೊಂಚೆ(ಕ್ರೌಂಚ) ಯಂಥ ದುಂಡುದುಂಡಾದ ಹಕ್ಕಿಗಳು ಸಂಚರಿಸಿ ಬೊಬ್ಬೆ ಹಾಕಿದ್ದನ್ನು ಕೇಳಿ, ತಪಸ್ವಿಗಳು ಕೆಟ್ಟರು ಕೆಟ್ಟರು ಎಂದು ಟಿಟ್ಟಿಭ ಪಕ್ಷಿ ಭವಿಷ್ಯವನ್ನು ನುಡಿಯಿತು.

ಈಶನ ಬಳಸಿರ್ದ ಸನ್ಮುನಿವರರು ಆ
ಯಾಸವಟ್ಟರು ಕಂತು ಭಯದಿ
ಆ ಸಮಯದಲಿ ಮನ್ಮಥ ಮುಂದೆ ನಡೆದ ವಿ
ಲಾಸವನೇನು ಹೇಳುವೆನು ೧೯

ಶಿವನ ಸುತ್ತಮುತ್ತ ಇದ್ದ ಮುನಿವರರು ಮನ್ಮಥ ಭಯದಿಂದ ಆಯಾಸಗೊಂಡರು. ಆಗ ಮನ್ಮಥ ಮುನ್ನಡೆದ ವಿಲಾಸ ಕುತೊಹಲಕಾರಿ.

ಉಗ್ಗಡಿಸುವ ರಾಜಕೀರ ಜಾಣ್ವಕ್ಕಿಗ
ಳಿಗ್ಗಡೆಯೊಳು ಮುಂದೆ ಮೆರೆಯೆ
ಹೆಗ್ಗಾಳೆ ಕಲಕಂಠ ರಭಸದಿಂದಡರಿದ
ಭರ್ಗನ ವರ ತಪೋವನಕೆ ೨೦

ಕೂಗುವ ಜಾಣ್ವಕ್ಕಿ(ಗಿಳಿ), ರಾಜಕೀರ(ಅರಗಿಳಿ)ಗಳು ಎರಡೂ ಕಡೆ ಮೆರೆಯುತ್ತಿರಲು ಹೆಗ್ಗಾಳೆ (ದೊಡ್ಡ ಕಹಳೆ) ಕಂಠದ ಕಲಕಂಠ(ಕೋಗಿಲೆ) ಶಿವನ ತಪೋವನಕ್ಕೆ ರಭಸದಿಂದ ಎರಗಿತು.

ಸಂದಿಸಿ ಹೋಗುವೆನೆಂದೆನಲು ಬಾಗಿಲೊಳಿರ್ದ
ನಂದೀಶ ಮುರಿಯೆ ಪೇಳಲು
ಕಂದಿದ ವದನದೊಳೆಸೆವ ಕಂದರ್ಪನಿಗೆ
ಬಂದಿದರಾದಳಾ ಗಿರಿಜೆ ೨೧

ಬಾಗಿಲೊಳಗೆ ಹೋಗಲು ಯತ್ನಿಸಿದಾಗ ನಂದೀಶ ಹಿಂದಿರುಗು ಎಂದು ಹೇಳಲು ಮುಖ ಕುಂದಿದ ಮನ್ಮಥನಿಗೆ ಎದುರು ಬಂದಳು ಗಿರಿಜೆ.

ಬೆಸಗೊಂಡಳಾಕ್ಷಣ ಕಾಮ ನೀ ಬಹಳ ಕ
ಕ್ಕಸವೆತ್ತು ಬಂದುದೇಕೆನಲು
ಅಸಮಾಕ್ಷನ ಮೇಲೆ ಕುಸುಮಶರಗಳಿಂದ
ಎಸಲು ಬಂದೆನೆಂದು ನುಡಿದ ೨೨

ಕಾಮ ನೀನಿಲ್ಲಿ ಬಂದದ್ದೇಕೆ ಎಂದು ವಿಚಾರಿಸಲು, ಮನ್ಮಥ ಅಸಮಾಕ್ಷನಾದ ಶಿವನ ಮೇಲೆ ಹೂಬಾಣಗಳನ್ನು ಪ್ರಯೋಗಿಸಲು ಬಂದೆ ಎಂದನು.

ಗೊಲೆಗೊಳಿಸಿದ ಇಕ್ಷುಚಾಪ ಸರೋಜ ನೈ
ದಿಲೆಗೋಲ್ಗಳ ಕೈಲಿ ಹಿಡಿದು
ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ ಹೋ
ಗೆಲೋ ಪಾಪಿ ಮನ್ಮಥ ಮನೆಗೆ ೨೩

ಸಜ್ಜುಗೊಳಿಸಿದ ಕಬ್ಬಿನಬಿಲ್ಲು;ಕಮಲನೈದಿಲೆಗಳ ಬಾಣಗಳನ್ನು ಕೈಯಲ್ಲಿ ಹಿಡಿದು ತಲೆ ಗಟ್ಟಿಯೆಂದು ಕಲ್ಲಿಗೆ ಗುದ್ದಬೇಡ, ಹೋಗೆಲೋ ಪಾಪಿ ಮನ್ಮಥ ಮನೆಗೆ ಎಂದಳು.

ರಜ್ಜುವದೆತ್ತ ದಳ್ಳುರಿ ಗರೋತ್ತಮನೆತ್ತ
ವಜ್ಜರವೆತ್ತಾಲಿ ಕಲ್ಲೆತ್ತ
ಮಜ್ಜೀವಿತೇಶ್ವರನೆತ್ತ ನೀನೆತ್ತ
ಉಜ್ಜುಗಿಸಿದೆ ತಳರೆಂದಳು ೨೪

ಹಗ್ಗವೆಲ್ಲಿ?ದಳ್ಳುರಿಯ ಹಾವೆಲ್ಲಿ? ವಜ್ರವೆತ್ತ?ಆಲಿಕಲ್ಲೆತ್ತ? ನನ್ನ ಮನದನ್ನ ನೆತ್ತ? ನೀನೆತ್ತ? ಪ್ರಯತ್ನಿಸದೆ ಇಲ್ಲಿಂದ ಬೇಗ ಪಯಣಿಸು ಎಂದಳು ಗಿರಿಜೆ.

ನೋಡವ್ವ ನನ್ನ ಸಾಹಸವ ನಿನ್ನಯ ಮೊಗ
ನೋಡದೆ ತಪಗೆಯ್ವ ಶಿವನ
ಗೂಢ ಹೃತ್ಕಮಲವನೊಡೆಯೆಚ್ಚು ನಿನ್ನ ಕೈ
ಗೂಡಿಪೆ ಬಿಡೆನೆಂದ ನಗುತ ೨೫

ನನ್ನ ಸಾಹಸವನ್ನು ನೋಡು ತಾಯೆ, ತಪಸ್ಸು ಮಾಡುವ ಶಿವನ ಹೃತ್ಕಮಲಕ್ಕೆ ಬಾಣ ಪ್ರಯೋಗಿಸಿ, ತಪೋಭಂಗಮಾಡಿ, ಅವನನ್ನು ನಿನಗೊಪ್ಪಿಸುವೆನು ಎಂದನು.

ಇಂದು ನೀನೆನಗೋಸುಗ ಧೂರ್ಜಟಿಯ ಮೇ
ಲೊಂದು ಪೂಸರಲನೆಸೆಯಲು
ನೊಂದು ಲಲಾಟನೇತ್ರವ ತೆರೆದರೆ ನೀನು
ಬೆಂದು ಹೋದಪೆ ಬೇಡ ಮಗನೆ ೨೬

ಇಂದು ನನಗೋಸ್ಕರ ನೀನು ಶಿವನ ಮೇಲೆ ಒಂದು ಹೂಬಾಣ ಪ್ರಯೋಗಿಸಲು, ಅವನು ನೋವಿನಿಂದ ತನ್ನ ಹಣೆಗಣ್ಣ ತೆರೆದರೆ ನೀನು ಸುಟ್ಟು ಬೂದಿಯಾಗುವೆ, ಬೇಡ ಮಗನೆ ಎಂದು ಬುದ್ಧಿ ಹೇಳಿದಳು.

ಓರಂತೆ ನಿನ್ನೊಳೀಶ್ವರ ಕೂಡಲು ಸತ್ಕು
ಮೊರ ಪುಟ್ಟುವ ಪುಟ್ಟಿದೊಡನೆ
ತಾರಕನದಟ ಖಂಡಿಪನೆಂದು ಸುರರಿಗೆ
ನಾರಾಯಣನು ಪೇಳಿದನು ೨೭

ನಿನ್ನೊಡನೆ ಈಶ್ವರ ಕೂಡಿದರೆ ಕುಮಾರ ಹುಟ್ಟುವನು, ಅವನು ತಾರಕಾಸುರನ ಅಟ್ಟಹಾಸನವನ್ನು ಖಂಡಿಸುವನೆಂದು ನಾರಾಯಣನು ದೇವತೆಗಳಿಗೆ ಹೇಳಿದನು.

ಕೇಶವ ಪರಮೇಷ್ಠಿಗಳಪ್ಪಣೆಯಿಂದ
ನಾ ಸವರಿಸಿಕೊಂಡು ಬಂದೆ
ಪೂಸರಲಿಂದೆಚ್ಚು ಶಿವನ ತಂದೀಗ
ಸಂಭಾಷಣೆಗೆಯ್ಯುವೆ ನಿಮ್ಮೊಡನೆ ೨೮

ಹರಿ ಬ್ರಹ್ಮರ ಆದೇಶದಂತೆ ನಾನಿಲ್ಲಿಗೆ ಬಂದೆ, ಹೂಬಾಣದಿಂದ ಎಚ್ಚಿ, ಶಿವನನ್ನು ನಿಮ್ಮೊಡನೆ ಸಂಭಾಷಿಸಲು ಅನುವು ಮಾಡಿಕೊಡುವೆನು.

ಜನನುತೆ ತಾಯೆ ನಿನ್ನೊಳು ರುದ್ರ ನೆರೆದೊಡೆ
ನಿನಗೊರ್ವ ಸತ್ಪುತ್ರನಹನು
ಘನ ಶೌರಿಯವೆತ್ತ ಖಳನ ಖಂಡಿಸಿ ಸು
ಜನರಿಗೆ ಸುಖವನೀವನಮ್ಮ ೨೯

ಜಗದಂಬೆಯೆ, ನಿನ್ನ ಜೊತೆ ರುದ್ರ ನೆರೆದರೆ ಸತ್ಪುತ್ರನೊಬ್ಬ ಹುಟ್ಟುವನು. ಅವನು ಉಪಟಳದ ಖಳನನ್ನು ಖಂಡಿಸಿ ದೇವತೆಗಳಿಗೆ ಸುಖನೆಮ್ಮದಿಯನ್ನು ಕೊಡುವನಮ್ಮ ಎಂದು ಮನ್ಮಥ ಹೇಳಿದನು.

ಏಣನಿಭಾಯತೇಕ್ಷಣೆ ಪಾರ್ವತಿ ಮೆಚ್ಚಿ
ಬಾಣಪಂಚಕನ ಕುಸ್ತರಿಸಿ
ಕೇಣುವಿಲ್ಲದೆ ತನ್ನ ಮರೆಗೊಂಡು ನಂದೀಶ
ಕಾಣದಂತೊಳ ಪುಗಿಸಿದಳು ೩೦

ಜಿಂಕೆಗಣ್ಣಿನ ಪಾರ್ವತಿ ಮೆಚ್ಚಿ ಪಂಚಬಾಣನನ್ನು ಸಮಾಧಾನಪಡಿಸಿ ಮತ್ಸರವಿಲ್ಲದೆ ತನ್ನ ಮರೆ ಮಾಡಿಕೊಂಡು ನಂದೀಶನಿಗೆ ಕಾಣಿಸದಂತೆ ಒಳಹೋಗುವಂತೆ ಮಾಡಿದಳು.

ತಾನು ಮುಗುದೆಯಂತೆ ಸಾರ್ದಳು ಪುರುಪ ನಿ
ಧಾನ ಶಂಭುವಿನ ಹಿಂಗಡೆಯೆ

ನಾನಾ ಶುಶ್ರೂಷೆಯ ಮಾಡುತಿರ್ದಳು
ಮೇನಕಾತ್ಮಜೆ ಮುನ್ನಿನಂತೆ ೩೧

ತಾನು ಮಾತ್ರ ಮುಗ್ಧೆಯಂತೆ ಹೋಗಿ, ಶಿವನ ಹಿಂದುಗಡಡೆ ನಿಂತು ನಾನಾ ಬಗೆಯ ಶುಶ್ರೂಷೆ ಮಾಡತೊಡಗಿದಳು ಮೇನಕಾತ್ಮಜೆಯಾದ ಪಾರ್ವತಿ

ಗಂಡಲರ್ವಕ್ಕಿ ತಿರುವಾಂತ ಇಕ್ಷು ಕೋ
ದಂಡವನೆಡಗೈಯೊಳಾಂತು
ಚಂಡವಿಕ್ರಮ ನೆಯ್ದಿಲಗೋಲ ತಿರುಹತ
ಕಂಡನು ಕುಳಿತಿರ್ದ ಶಿವನ ೩೨

ಗಂಡುದುಂಬಿಯ ಹೆದೆಯುಳ್ಳ ಕಬ್ಬಿನ ಬಿಲ್ಲನ್ನು ಎಡಗೈಯಲ್ಲಿ ಹಿಡಿದುಪ್ರಚಂಡ ಪರಾಕ್ರಮಿಯಾದ ಮನ್ಮಥ ನೆಯ್ದಿಲ ಬಾಣವನ್ನು ತಿರುಗಿಸುತ್ತ ಕುಳಿತಿದ್ದ ಶಿವನನ್ನು ನೋಡಿದನು.

ಕಂಜಬಾಂಧವ ಕಂಜರ ಶತಕೋಟಿ ತೇಜಃ
ಪುಂಜ ಶಾರ್ದೂಲ ಚರ್ಮದ
ಸಂಜೋಗದಲಿ ಕುಳಿತಿರ್ದ ತಪೋಗ್ರತೆಗೆ
ಅಂಜದೆ ಕಾಮ ನಿಟ್ಟಿಸಿದ ೩೩

ಕಮಲಬಾಂಧವನಾದ ಸೂರ್ಯ ಶತಕೋಟಿ ತೇಜೋರಾಶಿಯ ರಾಜ ಹುಲಿಚರ್ಮದ ಕವಚದಲ್ಲಿ ಕುಳಿತಿದ್ದ ಶಿವನ ತಪದ ಉಗ್ರತೆಗೆ ಅಂಜದೆ ಕಾಮ ನಿಟ್ಟಿಸಿದ.

ಬಿಗಿದ ಪದ್ಮಾಸನ ನಾಸಿಕಾಗ್ರದ ದೃಗು
ಯುಗಳ ಸಂಚಲಿಸದ ಚಿತ್ತ
ಬಗೆದೋರದೆ ತನ್ನ ತಾನೆ ಧ್ಯಾನಿಸುತಿರ್ಪ
ಜಗದೀಶನಿರವ ನೋಡಿದನು. ೩೪

ಹಾಕಿದ ಪದ್ಮಾಸನ, ಮೂಗಿನ ತುದಿಯಲ್ಲಿ ನೆಟ್ಟಿರುವ ಅಕ್ಷಿದ್ವಯದ ನೋಟ, ಅಲುಗಾಡದ ಚಿತ್ತ, ಮನಸ್ಸಿನ ಆಳ ತೋರದೆ ತನ್ನನ್ನು ತಾನೆ ಧ್ಯಾನಿಸುತ್ತಿರುವ ಜಗದೀಶನ ಸ್ಥಿತಿಯನ್ನು ನೋಡಿದನು.

ಭೂತನಾಥನು ನೋಡದಿರಲಿತ್ತ ಪಾಠೀನ
ಕೇತು ಮನ್ಮಥ ಮಹಾನಾಥ
ಕಾತುರದಿಂದಿದಿರ್ವಂದು ಕಂಡನು ರತಿ
ಪ್ರೀತ ಮೂಲೋಕ ವಿಖ್ಯಾತ ೩೫

ಭೂತನಾಥನಾದ ಶಿವನು ಇತ್ತ ನೋಡದಿರಲು, ರತಿಪ್ರೀತನೂ, ಮೂಲೋಕ ವಿಖ್ಯಾತನೂ ಪಾಠಿನ ಕೇತುವೂ (ಮತ್ಸ್ಯ ಧ್ವಜನೂ ಆದ ಮನ್ಮಥ ಕಾತುರದಿಂದ ಎದುರು ಬಂದು ನೋಡಿದನು.

ಜತಿಗಳ ಬಗೆಗೆ ಗೋಚರಿಸದೆ ವಾಚಿಪ
ಶ್ರುತಿಗಳೆ ನಿರುಪಮನೆನಿಸಿ
ಅತಿ ರೌದ್ರಾಕಾರವಡೆದಭವನ ಕಂಡು
ರತಿರಾಜ ಹವಣಿಸಿ ನಿಂದ ೩೬

ಯತಿಗಳ ಮನಸ್ಸಿಗೆ ಗೋಚರಿಸದ, ವೇದಗಳಿಗೆ ನಿಲುಕದ, ಅಭವ(ಶಿವ)ನನ್ನು ಕಂಡು ರತಿರಾಜನಾದ ಮನ್ಮಥ ಮನಸ್ಸಿನಲ್ಲೇ ಎಣಿಕೆ ಹಾಕುತ್ತಾ ನಿಂತನು.

ವಿಲಸಿತ ಇಕ್ಷುಕೋದಂಡಕ್ಕೆ ಬಿಗಿದ ಕ
ಮ್ಮಲರ್ವಕ್ಕಿವೆದೆಯ ಜೇವೊಡೆದು
ಗೆಲವಾಂತು ಕಿವವರೆಗೆಳೆದೆಚ್ಚ ನೀಲೋ
ತ್ಪಲ ಬಾಣದಿಂದಲೀಶ್ವರನ ೩೭

ಸುಂದರವಾದ ಕಬ್ಬಿನ ಬಿಲ್ಲಿಗೆ ಬಿಗಿದ ದುಂಬಿಯ ಹೆದೆಯನ್ನು ಜೇವೊಡೆದು, ಕಿವಿಯವರೆಗೆ ಎಳೆದು, ನೈದಿಲೆಯ ಹೂಬಾಣದಿಂದ ಈಶ್ವರನಿಗೆ ಎಚ್ಚಿದನು.

ತಾಗಿತು ಮರ್ಮಸ್ಥಳ ವಕ್ಷವ ಸೀಳ್ದು ವಿ
ಭಾಗಿಸಲು ದೃಢ ಚಿತ್ತದಿ
ಭೋಗಿಭೂಷಣ ಕೋಪವ ತಾಳ್ದು ಕಿಡಿಕಿಡಿ
ಯಾಗಿ ಕೆಂಡಗಣ್ಣು ತೆರೆದ ೩೮

ಅದು ಶಿವನ ಮರ್ಮಸ್ಥಳ ವಕ್ಷವನ್ನು ಸೀಳಿ ಇಬ್ಭಾಗ ಮಾಡಲು, ಶಿವ ದೃಢಚಿತ್ತದಿಂದ ಕೋಪದಿಂದ ಕಿಡಿಕಿಡಿಯಾಗಿ ಕೆಂಡಗಣ್ಣನ್ನು ತೆರೆದನು.

ಭುಗಿಭುಗಿಲು ಛಿಟಿಛಿಟಿಲೆಂದು ಲೋಚನದಿಂ
ದೊಗೆದ ದಳ್ಳುರಿ ಸುತ್ತಿ ಸ್ಮರನ
ಬಿಗಿದ ಬತ್ತಳಿಕೆ ಕರ್ವಿಲ್ಲು ಸಮೇತ ಸು
ಟ್ಟುಗಿದುದು ಉರಿ ನಭಸ್ಥಳಕೆ ೩೯

ಭುಗಿಭುಗಿಲೆಂದು ಛಿಟಿಛಿಟಿಲೆಂದು ಕಣ್ಣಿಂದೊಗೆದ ದಳ್ಳುರಿ(ಜ್ವಾಲೆ) ಮನ್ಮಥನ ಬತ್ತಳಿಕೆ, ಕರ್ವಿಲ್ಲು(ಕಬ್ಬಿನ ಬಿಲ್ಲು) ಸಮೇತ ಸುಟ್ಟು, ಉರಿ ಮುಗಿಲು ಮುಟ್ಟಿತು.

ಒಂದು ಬಿಲ್ಲೈದಲರ್ಗೋಲಿನ ಮೊನೆಯೊಳೈ
ತಂದು ಸುರಲೋಕ ರಕ್ಷಿಸುನ
ಕಂದರ್ಪನ ದೇಹ ಹರನ ಕಣ್ಣುರಿಯಿಂದ
ಬೆಂದುದು ನಿಮಿಷ ಮಾತ್ರದಲಿ ೪೦

ಒಂದು ಕಬ್ಬಿನ ಬಿಲ್ಲು, ಐದು ಹೂಬಾಣಗಳ ಬಲದೊಡನೆ ದೇವಲೋಕ ರಕ್ಷಿಸಲು ಬಂದ ಮನ್ಮಥನ ದೇಹ ಶಿವನ ಹಣೆಗಣ್ಣುರಿಯಿಂದ ನಿಮಿಷದಲ್ಲಿ ಬೆಂದುದು.

ಕರಗಸವೆತ್ತ ಕಂದಳಿಯೆತ್ತ ಕಾಲಸಂ
ಹರನೆತ್ತ ಕಂದರ್ಪನೆತ್ತ
ತರವಲ್ಲದ ಕಾರ್ಯವ ನೆಗಳ್ದಡೆ ಸುರ
ನರ ನಾಗಲೋಕ ಮೆಚ್ಚುವುದೆ ೪೧

ಕರಗಸ(ರೊಂಪ)ಎತ್ತ? ಕಂದಲಿ(ಮಚ್ಚು) ಎತ್ತ? ಕಾಲಸಂಹಾರಿ(ಶಿವ) ಎತ್ತ? ಕಂದರ್ಪ(ಮನ್ಮಥ) ಎತ್ತ? ತರವಲ್ಲದ ಕೆಲಸಕ್ಕೆ ಕೈಹಾಕಿದರೆ ಸುರನರನಾಗಲೋಕಗಳು ಮೆಚ್ಚುವವೆ?

ಗಜವೆತ್ತ ಕಂಠೀರವವೆತ್ತ ರಜನೀ
ವ್ರಜವೆತ್ತ ಭಾಸ್ಕರನೆತ್ತ
ಭುಜಗ ಭೂಷಣನೆತ್ತ ಸ್ಮರನೆತ್ತ ಸೆಣಸಲ್ಕೆ
ತ್ರಿಜಗದೊಳಾರು ಮೆಚ್ಚುವರು ೪೨

ಆನೆಯೆತ್ತ, ಸಿಂಹವೆತ್ತ? ಕತ್ತಲೆ ಎತ್ತ? ಸೂರ್ಯ ಎತ್ತ? ನಾಗಭೂಷಣ

(ಶಿವ) ಎತ್ತ? ಸ್ಮರ(ಮನ್ಮಥ) ಎತ್ತ? ಇಂಥ ಸೆಣೆಸಾಟವನ್ನು ಮೂಲೋಕದಲ್ಲಿ ಮೆಚ್ಚುವರಾರು?

ನಿಜವಾಗಿ ತನ್ನ ಸತ್ತ್ವವ ತಾನರಿಯದೆ
ಭುಜಬಲ ವಿಕ್ರಮರೊಡನೆ
ಗಜಬಜದಿಂದ ಕಾದಿದೊಡೆ ಅಂತಹುದು ಪಂ
ಕಜ ಲೋಚನೆ ಚಿತ್ತೈಸು ೪೩

ನಿಜವಾಗಿ ತಮ್ಮ ಸತ್ತ್ವವನ್ನು ತಾವರಿಯದೆ ಭುಜಬಲ ಪರಾಕ್ರಮಿಗಳೊಡನೆ ಹೋರಾಟಕ್ಕಿಳಿದರೆ ಇದೇ ಗತಿ ಎಂಬುದನ್ನು ಮನದನ್ನೆ ಮನನ ಮಾಡು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೪

'ವರ ಮೋಹನ ತರಂಗಿಣಿ' ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೮. ರತಿಯ ಪ್ರಲಾಪ

ವೇದಶ್ರುತಿಯ ಬಾಯಿ ಬೀಯಗ ತರ್ಕ ವಿ
ಚ್ಛೇದ ಸಜ್ಜನ ಸಮಾಧಿಯ
ಭೇದಕ್ಕೆ ನಿಲುಕದ ಶ್ರೀ ಕೃಷ್ಣರಾಯನ
ಪಾದವ ಕೂರ್ತು ಪೇಳ್ಗತೆಯ ೧

ವೇದಗಳ ಬಾಯಿ ಬೀಯಗವಾದ, ತರ್ಕಾತೀತನಾದ, ಸಜ್ಜನರ ಯೋಗಾವಸ್ಥೆಯ ರಹಸ್ಯಭೇದಿ ಯತ್ನಕ್ಕೆ ನಿಲುಕದ ಶ್ರೀಕೃಷ್ಣನ ಪಾದವನ್ನು ಮೆಚ್ಚಿ ಮೇಲ್ಗತೆಯನ್ನು ಹೇಳು ಎಂದು ಸುಜ್ಞಾನ ವಧೂಟಿ ವಿನಂತಿಸುತ್ತಾಳೆ.

ಕುವಲಯದಳ ನೇತ್ರೆ ಕೇಳು ಕೇವಲ ವೈ
ಷ್ಣವ ರಾಯರುಗಳಿರ್ದೆಸೆಯ
ಪವನ ಬಂದೆರಗೆ ಸನ್ಮತಿವೆತ್ತು ಪೇಳುವೆ
ಶ್ರವಣಕಾನಂದವಪ್ಪಂತೆ ೨

ನೈದಿಲಗಣ್ಣಿನ ಹೆಣ್ಣೆ ಕೇಳು, ವೈಷ್ಣವ ರಾಯರಿಬ್ಬರ (ರಾಮಾನುಜರ ಶ್ರೀವೈಷ್ಣವ ಧರ್ಮ ಹಾಗೂ ವಾದಿರಾಜರ ಮಾಧ್ವಧರ್ಮ) ಎರಡೂ ಕಡೆಯ ಗಾಳಿ ನನ್ನ ಮೇಲೆ ಎರಗುವುದರಿಂದ ಕರ್ಣಮಧುರವಾಗುವಂತೆ ಕಥೆ ಹೇಳುತ್ತೇನೆ ಎಂದು ಕನಕ ಹೇಳಿದ.

ಕಂದರ್ಪನ ದೇಹ ದಹನ ಧೂಮಾಂತರ್ಗತ
ಚಂದನ ವಾಸನೆಯಿಂ ಪ್ರಾಣ
ಸಂದುದು ನಿಶ್ಚಯವಹುದೆಂದು ರತಿ ದುಕ್ಕ
ದಿಂದ ಪ್ರಲಾಪಿಸುತಿರಲು ೩

ಮನ್ಮಥನ ದೇಹ ದಹನದ ಧೂಮಾಂತರ್ಗತ ಶ್ರೀಗಂಧ ವಾಸನೆಯಿಂದ ಪ್ರಾಣ ಹೋಗಿರುವುದು ನಿಶ್ಚಯವೆಂದು ರತಿ ದುಃಖಿಸುತ್ತಿರಲು

ರಾಜಶೇಖರನುರಿಗಣ್ಣಿಂದ ದಹಿಸಿದ
ವಿಜಯ ವಾರ್ತೆಯ ಪವನ ರತಿಗೆ
ಮಾಜದೆ ಪೇಳಲಾಕ್ಷಣ ಓದಿ ಬಂದಳು ವ
ನಜಾಕ್ಷಿ ಶಿವನಿದ್ದ ಬಳಿಗೆ ೪

ರಾಜಶೇಖರ(ಶಿವ) ತನ್ನ ಉರಿಗಣ್ಣಿನಿಂದ ಮನ್ಮಥನನ್ನು ದಹಿಸಿದ ವಿಜಯ ವಾರ್ತೆಯನ್ನು ಗಾಳಿ ಮರೆಮಾಚದೆ ರತಿಗೆ ಹೇಳಿದಾಕ್ಷಣ ಓಡಿಬಂದಳು ಶಿವನಿದ್ದಡೆಗೆ

ಬಂದ ಮಾತ್ರದಿ ನೋಡಿ ಕಂಡಳು ರುದ್ರನ
ಮುಂದೆಸೆಲಿ ಬಿಸಿವಡೆದ
ಗಂಧಸಂಯುಕ್ತ ಭಸ್ಮದಿ ತನ್ನ ವದನಾರ
ವಿಂದವ ಚಾಚಿದಳಳುತ ೫

ರುದ್ರನ ಮುಂದುಗಡೆ ಬಿಸಿವಡೆದ ಗಂಧಸಂಯುಕ್ತ ಭಸ್ಮವನ್ನು ಕಂಡು, ಅಳುವನ್ನು ತಡೆಯಲಾರದೆ ತನ್ನ ಮುಖವನ್ನು ಭಸ್ಮದ ಮೇಲೆ ಚಾಚಿದಳು.

ಬಿಸರುಹದಳನೇತ್ರೆಯ ಕಣ್ಣ ನೀರಿಂದ
ಕೆಸರಾದುದೊಡಲ ತಾಪದಲಿ
ಎಸರರತೊಡನೆ ಭಸ್ಮೀಕೃತವಾಯ್ತು ಬ
ಣ್ಣಿಸ ಬಲ್ಲವರಾರು ದುಕ್ಕವನು ೬

ಕಮಲಾಕ್ಷಿಯ ಕಣ್ಣ ನೀರಿಂದ ಅದು ಕೆಸರಾದರೂ, ಆಕೆಯ ತನು ತಾಪದಿಂದ ಎಸರು(ನೀರು)ಇಂಗಿ ಹೋಗಿ ಮತ್ತೆ ಭಸ್ಮವಾದುದನ್ನು ಬಣ್ಣಿಸಬಲ್ಲವರಾರು?

ಗಿಳಿದೇಜಿಗಳೆಲ್ಲಿ ಕರ್ವಿಲ್ಲು ಮೊರೆವ ಬಾ
ಲಳಿವೆದೆ ಪೂಗೋಲ್ಗಳೆಲ್ಲಿ
ತಳಿರರಥ ಮೀನ ಧ್ವಜವೆಲ್ಲಿ ತೋರೆಂದು
ಕಳೆಗುಂದಿ ಹಲುಬಿದಳಳುತ ೭

ಗಿಳಿ–ಕುದುರೆಗಳೆಲ್ಲಿ? ಕಬ್ಬಿನ ಬಿಲ್ಲು, ಬಾಲದುಂಬಿಯ ಹೆದೆ, ಹೂಬಾಣಗಳೆಲ್ಲಿ? ಚಿಗುರಿನ ರಥ, ಮೀನಧ್ವಜವೆಲ್ಲಿ? ತೋರು ಎಂದು ಕಣ್ಣೀರು ಕರೆದಳು.

ವೀರ ಚಿಮ್ಮುರಿಯ ಪೆರ್ದುರುಬೆಲ್ಲಿ ಪೆರೆಯಂತೆ
ರಾರಾಜಿಪ ನೊಸಲೆಲ್ಲಿ
ಧೀರರ ಸಿಂಗಾಡಿಯ ಪೋಲ್ವ ಪುರ್ಬೆಲ್ಲಿ
ತೋರೆಂದು ಹಲುಬಿದಳಳುತ ೮

ವೀರ ಚಿಮ್ಮುರಿಯ(ರುಮಾಲಿನ) ಪೆರ್ದಲೆ ಎಲ್ಲಿ? ಅರ್ಧಚಂದ್ರಾಕೃತಿಯಂತೆ ರಾರಾಜಿಸುವ ಹಣೆಯೆಲ್ಲಿ? ಧೀರರ ಸಿಂಗಾಡಿ(ಬಿಲ್ಲು)ಯನ್ನು ಹೋಲುವ ಕಣ್ಣ ಹುಬ್ಬೆಲ್ಲಿ? ತೋರೆಂದು ಹಲುಬಿದಳು.

ಸಕಲ ಗುಣಾಢ್ಯ ನಿನ್ನಯ ಪತಾಕೆಯೊಳಿಹ
ಮಕರಾಯತ ನೇತ್ರವೆಲ್ಲಿ
ವಿಕಸಿತ ತಿಲಪುಷ್ಪದಂತೆ ರಂಜಿಸುವ ನಾ
ಸಿಕವೆಲ್ಲಿ ತೋರೆಂದಳಳುತ ೯

ಸಕಲ ಗುಣಸಾಗರ, ನಿನ್ನ ಬಾವುಟದಲ್ಲಿರುವ ವಿಶಾಲ ಮೀಂಗಣ್ಣೆಲ್ಲಿ? ಎಳ್ಳು ಹೂವಿನ ನೀಳ ಕಾವಿನಂತಿದ್ದ ನಿನ್ನ ನಾಸಿಕ(ಮೂಗು) ಎಲ್ಲಿ? ತೋರೆಂದು ಅತ್ತಳು.

ವರ್ಣಾಧಿಕ ಶ್ರೀಕಾರಂಗಳಂತಿರ್ಪ
ಕರ್ಣಗಳೆಲ್ಲಿ ರಾಜಿಸುವ
ಸ್ವರ್ಣದರ್ಪಣವನೇಳಿಪ ಕದಪುಗಳೆಲ್ಲಿ
ಮನ್ಮಥ ತೋರೆಂದಳಳುತ ೧೦

ಶ್ರೀಕಾರದಂತಿರುವ ನಿನ್ನ ಕಿವಿಗಳೆಲ್ಲಿ? ಹೊನ್ನ ಕನ್ನಡಿಯನ್ನು ಹೀಗಳೆವ ನಿನ್ನ ಕೆನ್ನೆಗಳೆಲ್ಲಿ? ಮನ್ಮಥ ತೋರೆಂದು ಕಣ್ಣೀರ್ಗರೆದಳು.

ಹೊದರಾಂತ ಕೋರೆಮೀಸೆಗಳೆಲ್ಲಿ ಕೆಂಬವಳ
ಅಧರವದೆಲ್ಲಿ ರಂಜಿಸುವ
ವದನದೊಳಮಳ ರತ್ನಗಳಂತೆ ರಾಜಿಪ
ರದನವ ತೋರೆಂದಳಳುತ ೧೧

ಪೊದೆಯಂತಿದ್ದ ನಿನ್ನ ಕೋರೆಮೀಸೆಗಳೆಲ್ಲಿ? ಕೆಂಪು ಹವಳದಂಥ ತುಟಿಯೆಲ್ಲಿ? ರಂಜಿಸುವ ನಿನ್ನ ಮುಖದಲ್ಲಿ ರತ್ನಗಳಂತೆ ಫಳಫಳಗುಟ್ಟುವ ಹಲ್ಲುಗಳೆಲ್ಲಿ? ತೋರು ತೋರೆಂದು ಮಮ್ಮಲ ಮರುಗಿದಳು.

ಅಂದವಡೆದ ಮಿಸುನಿಯ ಶಂಖದಂತಿರ್ಪ
ಕಂಧರದ ಸಮರೇಖೆಯಲಿ
ಸೌಂದರ್ಯಮನಾಂತ ಭುಜಯಗಳವ ತೋ
ರೆಂದಾಯತಾಕ್ಷಿ ಹಲುಬಿದಳು ೧೨

ಅಂದವಾದ ಹೊಂಬಣ್ಣದ ಶಂಖದಂತಿದ್ದ ನಿನ್ನ ಕೊರಳಿನ ಸಮರೇಖೆಯಲ್ಲಿ ಕಣ್ ಸೆಳೆಯುತ್ತಿದ್ದ ನಿನ್ನ ಭುಜದ್ವಯವೆಲ್ಲಿ ಎಂದು ಹಲುಬಿದಳು.

ಎಲ್ಲಾ ಕಲೆಗಳನೊಳಕೊಂಡು ರಾಜಿಸುವ
ಮೆಲ್ಲೆದೆ ಕುರುಹೆಲ್ಲಿ ತೋರು
ಸಲ್ಲಲಿತಮಳ ತಳೋದರ ಸುಳಿನಾಭಿ
ಎಲ್ಲಿವೆ ತೋರೆಂದಳಳುತ ೧೩

ಎಲ್ಲ ಕಲೆಗಳನ್ನು ಗೌಣಗೊಳಿಸಿ ನಿನ್ನ ಮೆಲ್ಲೆದೆಯಲ್ಲಿ ಮೆರೆವ ಕುರುಹು ಎಲ್ಲಿ? ನಿರ್ಮಲವಾದ ಕಿಬ್ಬೊಟ್ಟೆಯಲ್ಲಿರುವ ಸುಳಿನಾಭಿ ಎಲ್ಲಿ? ತೋರೆಂದು ಅಳಲಿದಳು.

ಅಪ್ಪುವ ನಳಿತೋಳ್ಗಳೆಲ್ಲಿ ಮತ್ಕುಚದ ಮೇ
ಲೊಪ್ಪುವ ಸಿರಿಯಂಗೈ ಎಲ್ಲಿ
ಬೆಪ್ಪು ಎಸೆವ ಸೆಳ್ಳುಗುರ್ಗಳ ತೋರೆಂದು
ನೆಪ್ಪಿನೊಳು ಬೆದಕಿ ನೋಡಿದಳು ೧೪

ಅಪ್ಪುವ ನಳಿತೋಳುಗಳೆಲ್ಲಿ? ನನ್ನ ಮೊಲೆಯ ಮೇಲೆ ಆಡುವ ನಿನ್ನ ಸಿರಿಯಂಗೈ ಎಲ್ಲಿ? ಬೆಳ್ಳಗೆ ಕಾಣುವ (ಬೆಪ್ಪು–ಬೆಳ್ಪು=ಬಿಳಿಪು)ಸೆಳ್ಳುಗುರುಗಳೆಲ್ಲಿ? ತೋರೆಂದು ನೆನಪಿನಲ್ಲಿ ಬೆದಕಿ ನೋಡಿದಳು.

ಎಳೆವರೆಯದ ಸಿಂಹ ಮಧ್ಯದಂತೊಪ್ಪುವ
ಸೆಳೆನಡುವೆಲ್ಲಿ ಮರೆಯಾಯ್ತು
ಪೊಳೆವ ಪೊಂಬಾಳೆದೊಡೆಯೆಲ್ಲಿ ತೋರೆಂದು
ಕಳೆಗುಂದಿ ಹಲುಬಿದಳಾಗ ೧೫

ಎಳೆವಯಸ್ಸಿನ ಸಿಂಹದ ಸೊಂಟದಂತಿರುವ ನಿನ್ನ ಸೆಳೆನಡುವೆಲ್ಲಿ? ಹೊಳೆವ ಹೊಂಬಾಳೆ ತೊಡೆಯಲ್ಲಿ ತೋರೆಂದು ಅಳಲಿದಳು.

ತುರುಗಿದ ಬಾಣ ತೂಣೀರದಂತೊಪ್ಪುವ
ಕಿರುದೊಡೆಯುಗಳಗಳೆಲ್ಲಿ
ಮಿರುಗುವ ಚರಣಾಂಗುಲಿಯೆಲ್ಲಿ ತೋರೆಂದು
ಮರುಗಿದಳಬುಜಾಯತಾಕ್ಷಿ ೧೬

ಬಾಣಗಳನ್ನು ತುಂಬಿದ ಬತ್ತಳಿಕೆಯಂತಿರುವ ನಿನ್ನ ಕಿರುದೊಡೆದ್ವಯಗಳೆಲ್ಲಿ? ಮಿಂಚುವ ಪಾದಗಳ ಬೆರಳುಗಳೆಲ್ಲಿ? ತೋರೆಂದು ಮಮ್ಮಲ ಮರುಗಿದಳು.

ಪಾತಕ ಹರನೊಳು ಸೆಣೆಸಬೇಡೆನಲಾಗಿ
ಮಾತಾಡಲೊಲ್ಲದ ಮುನಿಸೊ
ನಾ ತಾಳಬಲ್ಲೆನೆ ವಿರಹವನೆಂದಾಕೆ
ಭೂತಳದೊಳು ಹೊರಳಿದಳು ೧೭

ಶಿವನೊಡನೆ ಸೆಣೆಸಬೇಡ ಎಂದು ಹೇಳಿದ್ದರಿಂದ ನನ್ನೊಡನೆ ಮಾತಾಡುವುದಿಲ್ಲವೊ? ವಿರಹವನ್ನು ನಾನು ಸಹಿಸಲು ಸಾಧ್ಯಲ್ಲವೆ? ಎಂದು ನೆಲದ ಮೇಲೆ ಹೊರಳಾಡಿದಳು.

ಓಪನೆ ಸಕಲ ಕಲಾಪನೆ ಸತ್ಕುಲ
ದೀಪನೆ ಲಲಿತ ಪುಂಡ್ರೇಕ್ಷು
ಚಾಪನೆ ಮೋಹನರೂಪನೆ ನಿನ್ನ ಬಿ
ಟ್ಟೇಪರಿಯಲಿ ಬಾಳ್ವೆ ಜೀಯ ೧೮

ಓಪನೂ (ಪ್ರಿಯತಮನೂ) ಸಕಲಕಲಾಪನೂ, ಸತ್ಕುಲ ದೀಪನೂ, ಸುಂದರ ಪುಂಡ್ರೇಕ್ಷು (ಪಟಾವಳಿ ಕಬ್ಬು) ಚಾಪನೂ(ಬಿಲ್ಲನ್ನು ಉಳ್ಳವನೂ), ಮೋಹಕ ರೂಪನೂ ಆದ ನಿನ್ನನ್ನು ಬಿಟ್ಟು ನಾನು ಹೇಗೆ ಜೀವಿಸಲಿ?

ಹಂತಿಯೂಟದ ಚಂದ್ರಮನೇನಾದನೇ
ಕಾಂತದಲಿಹ ಮಂದಮರುತ
ಪಿಂತಾಗಬಪ್ಪುದೆ ನಿನ್ನನೊರ್ವನ ಕಾ
ಲಾಂತಕಗೊಪ್ಪಿಸಿ ಕೊಟ್ಟು ೧೯

ನಿನ್ನೊಬ್ಬನನ್ನು ಯಮಧರ್ಮನಿಗೊಪ್ಪಿಸಿ, ಪಂಕ್ತಿಯೂಟದಲ್ಲಿ ಸದಾ ನಿನ್ನೊಡನೆ ಇರುತ್ತಿದ್ದ ಚಂದ್ರನೂ, ತಂಗಾಳಿಯೂ ಹಿಂದೆ ಉಳಿದುಕೊಳ್ಳಬಹುದೆ?

ಬೋಧಿಸಿ ಪೇಳ್ದೊಡೆನ್ನ ಮಾತು ವಿಷವೆಂದಾ
ಸ್ವಾದಿಸಲೊಲ್ಲದೆ ಬಿಸುಟು
ವಾದಿಗಳಾಚಾರ್ಯನಾಗಿ ಹರನೊಳು ಕಲಹ
ಕಾದಿ ಬೂದಿಯನೆಯ್ದಿದೆಯ ೨೦

ನನ್ನ ಬುದ್ಧಿವಾದವನ್ನು ವಿಷವೆಂದು ಸೇವಿಸಲೊಲ್ಲದೆ ಬಿಸಾಡಿ, ವಾದಿಗಳ ಮುಂಚೂಣಿನಾಯಕನಾಗಿ ಶಿವನೊಡನೆ ಹೋರಾಡಿ ಬೂದಿಯಾದೆಯಾ?

ಹುತವಹನೆಡೆಯೊಳು ಹುದುಗಿರ್ದ ಚಿನ್ನಕ್ಕೆ
ಹಿತವಾಗಿ ಬಣ್ಣ ಬಂದಂತೆ
ಚಿತಭಸ್ಮಲಿಪ್ತ ಶರೀರವಿದ್ದುದು ಪೂ
ರಿತ ಪೊನ್ನ ಕುಂದಣದಂತೆ ೨೧

ಬೆಂಕಿಯಲ್ಲಿ ಹುದುಗಿದ ಚಿನ್ನಕ್ಕೆ ಹಿತವಾದ ಬಣ್ಣ ಬರುವಂತೆ ಮನ್ಮಥನ ಚಿತಾಭಸ್ಮ ಲೇಪಿತ ರತಿಯ ದೇಹ ರಾಜಿಸಿತು ಚಿನ್ನದಲ್ಲಿ ಕೂಡಿಸಿದ ಹರಳಿನಂತೆ.

ಹೊಳೆವ ಹೊಂಬಗರಿಗೆ ಚಿವುರಿಕ್ಕಿ ಕೈಯಾರ
ಬೆಳಗಿದರೆ ಮನಕೊಪ್ಪುವಂತೆ
ಅಳಲುವ ರತಿಯರಸ್ಥಳದಿ ಭಸ್ಮಾಂಕಿತ
ಕಳಸಕುಚಂಗಳೊಪ್ಪಿದವು ೨೨

ಹೊಳೆಯುವ ಹೊಂಬಗರಿಗೆ (ಚಿನ್ನದ ಪಾತ್ರೆ), ಚಿವುರಿಕ್ಕಿ (ಉಜ್ಜಿ) ಬೆಳಗಿದರೆ ಮನಸ್ಸಿಗೆ ಒಪ್ಪುವಂತೆ, ಅಳುವ ರತಿಯ ವಕ್ಷಸ್ಥಲದಲ್ಲಿ ಕಳಶಕುಚಗಳು ಒಪ್ಪಿದವು.

ಮರಿದುಂಬಿ ಕಮ್ಮಲರ್ಧೂಳಿಯೋಳು ಬಿದ್ದೆದ್ದು
ಗರಿ ಬಿಳಿವಣ್ಣವಾದಂತೆ
ತುರುಬಿನ ಆಕಾರವಳಿದು ಭಸ್ಮಾಂಕಿತ
ನಿರಿಗುರಳು ಮೊಗವ ಮುಚ್ಚಿದುವು ೨೩

ಪರಿಮಳಯುಕ್ತ ಹೂವಿನ ಧೂಳಿಯಲ್ಲಿ ಮರಿದುಂಬಿ ಬಿದ್ದೆದ್ದು ಮೈಗೂದಲು ಬಿಳಿಬಣ್ಣವಾದಂತೆ, ರತಿಯ ತುರುಬಿನ ಆಕಾರವಳಿದು ಬೂದಿಲೇಪಿತ ನಿರಿಗುರುಳು ಅವಳ ಮುಖವನ್ನು ಮುಚ್ಚಿದವು.

ಕಕ್ಕಸವೆತ್ತ ಬಲ್ಮೊಲೆಯುಡಿಗೆ ಜಾರಿಹ
ಲೆಕ್ಕವನರಿಯದಾಯಕನ
ದುಕ್ಕವಿನ್ನೆಂತುಟೊ ನೋಳ್ಪರ ಕಣ್ಣ ನೀ
ರೊಕ್ಕೊದನೇನ ಪೇಳುವೆನು ೨೪

ಗಡುಸಾದ ಬಟ್ಟಮೊಲೆಯ ಮೇಲಿನ ಬಟ್ಟೆ ಜಾರಿರುವ ಲೆಕ್ಕವರಿಯದ ಆ ಅಕ್ಕನ ದುಕ್ಕ ಎಷ್ಟಿರಬೇಕು ಎಂದು ನೋಡುವವರ ಕಣ್ಣುಗಳು ನೀರಾಡಿದವು.

ಅಳದವರಳುತಿರ್ದರು ಪತಿಯ ಬಗೆಗೆ ರತಿ
ಹಳವಳಿಸುವಾಲಾಪ ಕಂಡು
ಬಳಿಕ ಬಂದೀಶ್ವರಿ ಗಂಧೋದಕದಿಂದ
ತೊಳೆದಳು ರತಿಯ ನುಣ್ಮೊಗವ ೨೫

ಪತಿಯ ಸಾವಿನ ಬಗೆಗೆ ರತಿಯ ಅಳುವಿನ ಆಲಾಪ ಕಂಡು ಅಳದವರೂ ಅಳಲು ಆರಂಭಿಸಿದಾಗ, ಪಾರ್ವತಿ ಬಂದು ಗಂಧೊದಕದಿಂದ ರತಿಯ ನುಣ್ಣನೆಯ ಮುಖವನ್ನು ತೊಳೆದು ಒರಸಿದಳು.

ಮುತ್ತಿನ ಸೆರಗ ಮುಚ್ಚಿದಳು ಬಲ್ಮೊಲೆಗೆ ಪಿ
ನ್ನೆತ್ತಿಯೊಳು ತುರುಬನಿಕ್ಕಿದಳು
ಹತ್ತಿದ ಮೆಯ್ಧೂಳ ಕೊಡಹಿ ರೆಟ್ಟೆಯ ಹಿಡಿ
ದೆತ್ತಿದಳಬುಜಾಂಬಕಿಯ ೨೬

ಜಾರಿದ ಮುತ್ತಿನ ಸೆರಗನ್ನು ಬಟ್ಟಮೊಲೆಯ ಮೇಲಕ್ಕೆಳೆದಳು, ತಲೆಯ ಹಿಂಭಾಗದಲ್ಲಿ ತುರುಬನ್ನು ಹಾಕಿದಳು, ಮೈಗಂಟಿದ ಧೂಳನ್ನು ಕೊಡವಿ, ರತಿಯ ರೆಟ್ಟೆ ಹಿಡಿದು ಮೇಲೆತ್ತಿದಳು.

ಒಂದೊಂದ ಹಳವಿಸಲೇಕೆ ನಿನನಾಳ್ದನ
ಕೊಂದ ಮದೀಯವಲ್ಲಭನ
ಸಂದರುಶನವಾದರೊಳಿತೆಂದು ಚರಣಾರ
ವಿಂದಕೆ ಪೊಡಮಡಿಸಿದಳು ೨೭

ಒಂದೊಂದನ್ನೇ ನೆನಪಿಸಿಕೊಂಡು ಪ್ರಲಾಪಿಸುವುದೇತಕ್ಕೆ, ನಿನ್ನ ಮನದನ್ನನ ಕೊಂದ ನನ್ನ ವಲ್ಲಭನ ಸಂದರ್ಶನವಾದರೆ ಒಳ್ಳಿತಾಗುವುದೆಂದು ಕರೆದುಕೊಂಡು ಹೋಗಿ ಶಿವನ ಚರಣಾರವಿಂದಕ್ಕೆ ಶರಣಾಗಿಸಿದಳು.

ಲೋಲಲೋಚನೆ ದೃಗುಜಲದಿಂದ ಪಾದಪ್ರ
ಕ್ಷಾಲನಗೆಯ್ದಂಘ್ರಿಯುಗವ
ನೀಲೋತ್ಪಲದಿಂದ ಪೂಜೆಯ ವಿರಚಿಸಿ
ದಾ ಲತಾಂಗಿಯ ಕಂಡ ಹರನು ೨೮

ರತಿ ತನ್ನ ಕಣ್ಣೀರಿನಿಂದ ಶಿವನ ಪಾದ ತೊಳೆದು, ಪಾದಗಳೆರಡನ್ನೂ ಕನ್ನೈದಿಲೆ ಹೂಗಳಿಂದ ಪೂಜಿಸಿದ ಲತಾಂಗಿಯನ್ನು ಹರ ನೋಡಿದನು.

ನುಡಿಸಿದ ಮಗಳೆ ನಿನ್ನಾಳ್ದನೆನ್ನಯ ತಪ
ಗೆಡಿಸಿದ ಕಾರಣದಿಂದ
ಕಿಡಿ ಸುರಿವಕ್ಷಿಯಿಂ ಸುಟ್ಟೆ ವೃಥಾ ದುಕ್ಕ
ಪಡಬೇಡೆಂದು ಪೇಳಿದನು ೨೯

ಮಗಳೆ ನಿನ್ನ ಮನದನ್ನ ನನ್ನ ತಪ ಕೆಡಿಸಿದ ಕಾರಣದಿಂದ ನನ್ನ ಕೆಂಡಗಣ್ಣಿನಿಂದ ಸುಟ್ಟೆ, ವೃಥಾ ದುಕ್ಕ ಪಡೆಬೇಡವೆಂದು ನುಡಿದನು.

ಸಿರಿ ಕರಯುಗಳದಿಂ ಪಿಡಿದೆತ್ತಿ ಪರಮ ತಾ
ತ್ವರಿಯದೆ ಮೊಗವ ನಿಟ್ಟಿಸಲು
ಸುರಿವ ಕಂಬನಿಯಿಂದ ಬಿನ್ನಹ ಮಾಡಿದಳು
ಕರಿಚರ್ಮಾಂಬರನೊಡನೆ ೩೦

ತನ್ನ ಎರಡೂ ಕೈಗಳಿಂದ ಹಿಡಿದೆತ್ತಿ ಹೆಚ್ಚು ಆಸಕ್ತಿಯಿಂದ ಆಕೆಯ ಮುಖವನ್ನು ನೋಡಲು, ಆಕೆ ಆನೆದೊಗಲಿನ ಶಿವನೊಡನೆ ಕಣ್ಣೀರುಗರೆಯುತ್ತಾ ವಿನಂತಿಸಿದಳು.

ಒಂದಪರಾಧವ ಕ್ಷಮಿಸರೆ ಉರೆ ಕರುಣಾ
ಸಿಂಧುಗಳಾಗಿರ್ದವರು
ನೊಂದು ಸೈರಣೆಗೊಂಡುದಿಲ್ಲ ಕೇಳೀಶ್ವರ
ಕಂದರ್ಪನ ಮೇಲೆ ಮುನಿದೆ ೩೧

ಕರಣಾಸಿಂಧುಗಳಾದವರು ಅನ್ಯರ ಒಂದು ಅಪರಾಧವನ್ನು ಮನ್ನಿಸರೆ? ಸೈರಣೆಗೆಟ್ಟು ಬರಿದೇ ಮನ್ಮಥನ ಮೇಲೆ ಮುನಿದೆ.

ಕೊಲ್ಲಲುಜ್ಜುಗಿಸುವುದು ತಕ್ಕುದೆ ರಸದಾಳಿ
ವಿಲ್ಲನಂಥವರುಗಳಿಹರೆ
ಒಲ್ಲದ ಹೆಣ್ಣು ಗಂಡುಗಳನೊಂದಾಗಿಸ
ಬಲ್ಲ ಭಾವಜ್ಞರಂ ತೋರು ೩೨

ರಸದಾಳಿ(ಪಟಾವಳಿ ಕಬ್ಬು)ಬಿಲ್ಲನ್ನು ಹೊಂದಿದ ಮನ್ಮಥನಂಥವರನ್ನು ಕೊಲ್ಲುವುದು ತಕ್ಕದ್ದೆ? ಒಲ್ಲದ ಹೆಣ್ಣು ಗಂಡುಗಳನ್ನು ಒಂದಾಗಿಸ ಬಲ್ಲ ಮನ್ಮಥನಂಥ ಭಾವಜ್ಞರು ಇದ್ದಾರೆಯೇ?

ಪಾಪಕ್ಷಯಕ್ಕೆಂದು ಗಂಗೆಯೊಳ್ಮಿಂದರೆ
ಪಾಪಿಯ ಮೊಸಳೆ ತಿಂದಂತೆ
ತಾಪಸ್ಥ ಸುರರಿಗೆ ಹಿತಗೈಯ ಬಂದ ಪ್ರಾ
ಣೋಪನನುರುಹಿದೆ ನೀನು ೩೩

ಪಾಪಕ್ಷಯಕ್ಕೆಂದು ಬಂದು ಗಂಗೆಯಲ್ಲಿ ಮಿಂದರೆ ಪಾಪಿಯನ್ನು ಮೊಸಳೆ ತಿಂದಂತೆ, ತಾಪಸ್ಥ ದೇವತೆಗಳಿಗೆ ಹಿತಗೈಯಲು ಬಂದ ಪ್ರಾಣಪ್ರಿಯನನ್ನು ನೀನು ಸುಟ್ಟೆ.

ನಾರಾಯಣದನ ವಾಕ್ಯವ ಕೇಳಿ ತ್ರಿದಶೋಪ
ಕಾರಕ್ಕೆ ಸ್ಮರ ನನ್ನನೆಚ್ಚು
ಬಾರದ ಬಟ್ಟೆಯ ಬಳಿವಿಡಿದನ ಬಿಟ್ಟು
ನೇರದಿ ನೀ ಬಾಳು ಮಗಳೆ ೩೪

ನಾರಾಯಣನ ಮಾತನ್ನು ಕೇಳಿ, ದೇವತೆಗಳಿಗೆ ಉಪಕಾರ ಮಾಡಲು ನನಗೆ ಬಾಣದಿಂದ ಹೊಡೆದು, ಹಿಂದಕ್ಕೆ ಬಾರದ ದಾರಿಯನ್ನು ಹಿಡಿದ ಮನ್ಮಥನನ್ನು ನೆನದು, ನಿಟ್ಟುಸಿರು ಬಿಡದೆ ಬಾಳು.

ಪದಿನಾಲ್ಕು ಲೋಕದ ಜನಂಗಳು ಕರುಣಾ
ನಿಧಿಯೆಂದು ನಿನ್ನ ಕೀರ್ತಿಪರು
ಕುದಿಗಣ್ಣಲೆನ್ನಾಳ್ದನ ಸುಟ್ಟು ನನಗೊಂದು
ಬದುಕಿನ ತೆರನ ಪೇಳ್ದಪಿರೆ ೩೫

ಈರೇಳು ಲೋಕದ ಜನರು ನಿನ್ನನ್ನು ಕರಣಾನಿಧಿಯೆಂದು ಕೀರ್ತಿಸುವರು.

ಕಿಡಿಗಣ್ಣಿನಿಂದ ನನ್ನ ಗಂಡನನ್ನು ಸುಟ್ಟು, ಈಗ ನನಗೆ ಬದುಕುವ ಬೇರೊಂದು ಮಾರ್ಗವನ್ನು ಹೇಳ ಹೊರಟ್ಟಿದ್ದೀರಲ್ಲ.

ಸರ್ವರೊಳಗೆ ಮುತ್ತೈದೆಯಾಗಿರ್ದು ವೈ
ಧವ್ಯವನಾಂತು ಬಾಳುವೆನೆ
ಗರ್ವದ ಮಾತಲ್ಲ ತನಗೆ ತನ್ನಾಳ್ವನ
ತರ್ವಾಯ ಮಾಡೆಂದಳಳುತ ೩೬

ಮುತ್ತೈದೆಯಾಗಿದ್ದ ನಾನು ಸರ್ವರ ಮುಂದೆ ವಿಧವೆಯಾಗಿ ಬಾಳಲೆ? ಇದು ಅಹಂಕಾರದ ಮಾತಲ್ಲ, ನನ್ನ ಗಂಡನಿಗೆ ಮಾಡಿದ ಕ್ರಮವನ್ನೇ ತನಗೂ ಮಾಡು ಎಂದಳು.

ಕೊಂಡವ ತೋಡಿಸಬೇಡ ಶುಷ್ಕವ ಸುಟ್ಟು
ಕೆಂಡವ ಮಾಡಿಸಬೇಡ
ಖಂಡೇಂದು ಶೇಖರ ಕಣ್ಕಿಚ್ಚಿನಿಂದೆನ್ನ
ಗಂಡನನುರುಹಿದಂತುರುಹು ೩೭

ಕೊಂಡವನ್ನು ತೋಡುವ ಅಗತ್ಯವಿಲ್ಲ, ಸೌದೆಯನ್ನು ಸುಟ್ಟು ಕೆಂಡ ಮಾಡಬೇಕಾದ ಅಗತ್ಯವೂ ಇಲ್ಲ. ಕಣ್ಣ ಬೆಂಕಿಯಿಂದ ನನ್ನ ಗಂಡನನ್ನು ಸುಟ್ಟ ಹಾಗೆ ನನ್ನನ್ನೂ ಸುಟ್ಟುಬಿಡು, ತಂಗದಿರದಲೆಯವನೆ (ಚಂದ್ರಶೇಖರನೆ)

ಎಂದೆನಲಾಕ್ಷಣ ಪೇಳ್ದಳು ಗಿರಿರಾಜ
ನಂದನೆ ತನ್ನಾಳ್ದನೊಡನೆ
ಕಂದರ್ಪನರ್ಧಾಂಗಿಯ ಮೇಲೆ ವೈಧವ್ಯ
ಪೊಂದದೊಲು ಮಾಡೆಂದಳೊಲಿದು ೩೮

ಗಿರಿಜೆ ತನ್ನ ವಲ್ಲಭನಿಗೆ ವಿನಂತಿಸಿದಳು–ಮನ್ಮಥನ ಅರ್ಧಾಂಗಿಗೆ ವೈಧವ್ಯ ಪ್ರಾಪ್ತವಾಗದಂತೆ ಮಾಡಬೇಕು ಎಂದು.

ಜಡಜ ಕುಟ್ಮಲ ಕುಚಾನ್ವಿತೆಯ ಕಂಬನಿಗಳ
ತೊಡೆದು ಕುಸ್ತರಿಸಿ ಬೋಳೈಸಿ
ಮೃದಿನು ತಾತ್ಪರಿಯಡ ಕಾಮನರ್ಧಾಂಗಿಯ
ನೊಡಬಡಿಸಿದನಾಕ್ಷಣದಿ ೩೯

ಕಮಲದ ಮೊಗ್ಗಿನ ಮೊಲೆಯಂಥ ರತಿಯ ಕಂಬನಿಯನ್ನು ಒರೆಸಿ, ಸಮಾಧಾನಪಡಿಸಿ, ಶಿವನು ಆಕೆಯನ್ನು ಒಪ್ಪಿಸಿದನು.

ನಿನಗೆ ವೈಧವ್ಯ ಲಕ್ಷಣವಿಲ್ಲ ಮನದೊಳು
ನೆನೆದೊಡೆ ಬರ್ಪ ನಿನ್ನಾಳ್ದ
ಮನಸಿಜನೆನಿಸಿ ಜೀವಿಪನೆಂದು ಮುತ್ತೈದೆ
ತನವಿತ್ತನೀಶ್ವರ ರತಿಗೆ ೪೦

ನಿನಗೆ ವೈಧವ್ಯದ ಲಕ್ಷ್ಣವಿಲ್ಲ, ನಿನ್ನ ಮನದಲ್ಲಿ ನೆನೆದರೆ ಸಾಕು ನಿನ್ನ ಮನದನ್ನ ಪ್ರತ್ಯಕ್ಷನಾಗುವನು. ಆದ್ದರಿಂದ ಆತ 'ಮನಸಿಜ' ನೆನ್ನಿಸಿ ಜೀವಿಸುವುದರಿಂದ ನಿನಗೆ ಮುತ್ತೈದೆತನ ನೀನು ಬದುಕಿರುವವರೆಗೂ ಇದ್ದೇ ಇರುತ್ತದೆ.

ಆಡಿದ ಶಿವನ ವಾಕ್ಯವ ಪರಿಕಿಸಲೆಂದು
ನೋಡಿದಳಾತ್ಮ ದೃಷ್ಟಿಯಲಿ
ಗಾಡಿಕಾರನ ಕಂಡು ಘನ ಪರಿತೋಷವ
ಮಾಡಿದಳಂತರಂಗದಲಿ ೪೧

ಶಿವನು ಆಡಿದ ಮಾತನ್ನು ಪರೀಕ್ಷಿಸಬೇಕೆಂದು ಮನದನ್ನನನ್ನು ಮನದಲ್ಲಿ ನೆನೆದಳು. ಕೂಡಲೇ ಗಾಡಿಕಾರ(ಸುಂದರಾಂಗ) ಪ್ರತ್ಯಕ್ಷವಾಗಲು ರತಿ ಹರ್ಷಗೊಂಡಳು.

ಸರಪಾಭರಣ ಭೂಷಿತ ತಪ್ಪದೆ ನಿಮ್ಮ
ವರವಾಕ್ಯವೆನಗೆ ಸಿದ್ಧಿಸಿತು
ಅರಲಂಬನ ಕಂಡೆನಿನ್ನೊಂದು ಬಿನ್ನಹ
ದರಪಕ ವೈರಿ ಚಿತ್ತೈಸು. ೪೨

ಸರ್ಪಾಭರಣ ಭೂಷಿತನಾದ ಶಿವನೇ ನಿಮ್ಮ ವರವಾಕ್ಯ ಎನಗೆ ಸಿದ್ಧಿಸಿತು. ಕಾರಣ ಅರಲಂಬನ (ಹೂಬಾಣನ) ಕಂಡೆನು. ನನ್ನ ಇನ್ನೊಂದು ಬಿನ್ನಹವನ್ನು ದರ್ಪಕ(ಮನ್ಮಥ) ವೈರಿ ಚಿತ್ತೈದು ಎಂದಳು.

ಸಿತಗಿರಿಯಂತಿಹುದು ಮದ್ವಲ್ಲಭನಂಗ
ಚಿತಭಸ್ಮ ಏಗೆಯ್ವೆನೆನಲು

ಕೃತ ಪುಣ್ಯನಾಗಲೆಂದಭವ ತನ್ನೊಡಲಿಗೆ ಧೂ
ಳಿತವ ತಾ ಮಾಡಿಕೊಂಡನು ೪೩

ಸಿತಗಿರಿ(ಬಿಳಿಬೆಟ್ಟ=ಹಿಮಾಚಲ)ಯಂತೆ ರಾಶಿಗೊಂಡಿರುವ ನನ್ನ ವಲ್ಲಭನ ಚಿತಾಭಸ್ಮವನ್ನು ಏನು ಮಾಡಲಿ ಎಂದು ಕೇಳಿಕೊಂಡಾಗ, ಕೃತಪುಣ್ಯನಾಗಬೇಕೆಂದು ಸಾಕ್ಷಾತ್ ಶಿವನೇ ತನ್ನ ಒಡಲಿಗೆ ಬೂದಿಯನ್ನು ಬಳಿದುಕೊಂಡನು.

ಆದುದು ಕಾಮಗಿಂದತಿಶಯ ಪುಣ್ಯವು
ಮಾದೇವ ಕೇಳೆನ್ನ ಪುರಕೆ
ಪೋದಪೆ ಕಳುಹ ಚಿತ್ತೈಸಬೇಕೆಂದು ಶ್ರೀ
ಪಾದಕೆ ನೊಸಲ ಚಾಚಿದಳು ೪೪

ನನ್ನ ಗಂಡನಿಗೆ ಅತಿಶಯ ಪುಣ್ಯ ನಿಮ್ಮಿಂದ ಲಭಿಸಿತು. ಮಾದೇವನೆ, ನನ್ನ ಊರಿಗೆ ಹೋಗಲು ಕಳಿಸಿಕೊಡಿ ಎಂದು ಪಾದಕ್ಕೆ ಹಣೆಯನ್ನು ಚಾಚಿದಳು.

ನಾಗಕಂಕಣ ಕರಯುಗದಿಂದ ಪಿಡಿದೆತ್ತಿ
ಪೊಗೋಲನರ್ಧಾಂಗಿನಿಗೆ
ರಾಗದಿ ವಸ್ತ್ರಬೂಷಣವಿತ್ತು ಕರುಣದಿ
ಪೋಗೆಂದು ಬೀಳ್ಕೊಟ್ಟ ಮುದದಿ ೪೫

ನಾಗಕಂಕಣನು(ಸರ್ಪಭೂಷಣನಾದ ಶಿವನು) ತನ್ನೆರಡೂ ಕೈಗಳಿಂದ ಆಕೆಯನ್ನು ಹಿಡಿದೆತ್ತಿ ಪ್ರೀತಿಯಿಂದ ವಸ್ತ್ರಾಭರಣಗಳನ್ನು ಕೊಟ್ಟು ಕರುಣೆಯಿಂದ ಹೋಗೆಂದು ಬೀಳ್ಕೊಟ್ಟನು.

ಕುಳಿರುವೆಟ್ಟಿನ ಕುವರಿಯ ಶ್ರೀಪದಯುಗ
ನಳಿನ ಸುಗಂಧವಿದ್ದೆಡೆಗೆ
ಸಿಳೀಮುಖವೆರಗುವಂತೆರಗಲು ಪಿಡಿದೆತ್ತಿ
ತಿಳಿಗೈದಳವಳ ದುಕ್ಕವನು ೪೬

ಹಿಮವಂತನ ಮಗಳ ಪಾದಕಮಲ ಸುಗಂಧದೆಡೆಗೆ ಸಿಳೀಮುಖ(ದುಂಬಿ) ಎರಗುವಂತೆ ಎರಗಲು, ಆಕೆಯನ್ನು ಹಿಡಿದೆತ್ತಿ ಅವಳ ದುಕ್ಕವನ್ನು ತಿಳಿಗೊಳಿಸಿದಳು.

ಚಂದನಗಂಧಿ ನಿನ್ನಾಳ್ದ ಚಿತ್ತಜನಾದ
ನೆಂದು ಹಳವಳಿಯದಿರವ್ವ

ಕಂದರ್ಪ ಕೃಷ್ಣನಾತ್ಮಜನಾಗಿ ಪುನರಪಿ
ಬಂದಪ ದಿವ್ಯ ವಿಗ್ರಹದಿ ೪೭

ಚಂದನ(ಶ್ರೀಗಂಧ) ಗಂಧಿಯಾದ ಚೆಂದದ ಗೊಂಬೆಯೆ, ನ್ನಿನ್ನ ಮನದನ್ನ ಕೇವಲ ಮನಸಿಜನಾದನೆಂದು ಪ್ರಲಾಪಿಸಬೇಡ, ಮನ್ಮಥ ಮತ್ತೆ ಕೃಷ್ಣನ ಪುತ್ರನಾಗಿ ಹುಟ್ಟುವನು.

ಮಗಳೆ ನೀನಾತನ ಕೈವಿಡಿದೆಂದಿನ
ಬಗೆಯ ಸೌಖ್ಯಂಗಳನಾಂತು
ಮಿಗೆ ಜೀವಿಸುತ್ತಿರೆಂದುಡುಗೊರೆಗಳನಿತ್ತು
ನಗರಾಜಸುತೆ ಕಳುಹಿದಳು ೪೮

ಮಗಳೆ ನೀನವನ ಕೈಹಿಡಿದು ಎಂದಿನ ರೀತಿಯ ಸುಖವನ್ನು ಅನುಭವಿಸುತ್ತ ಜೀವಿಸೆಂದು ಗಿರಿಜೆ ದಿವ್ಯ ಉಡುಗೊರೆಗಳನ್ನು ಕೊಟ್ಟು ಕಳಿಸಿದಳು.

ಮುಕ್ಕಣ್ಣನರಸಿಯ ಬೀಳ್ಕೊಂಡು ರತಿದೇವಿ
ದುಕ್ಕದಿಂದಾಯಾಸಗೊಳುತೆ
ಅಕ್ಕರಿಗನನೇರಿಕೊಂಡು ತೀವ್ರದಿ ಬಂದು
ಹೊಕ್ಕಳು ಕುಸುಮಾವತಿಯನು ೪೯

ಮುಕ್ಕಣ್ಣನರಸಿಯನ್ನು ಬೀಳ್ಕೊಂಡು ರತಿದೇವಿ ಅಕ್ಕರಿಗ(ಗಿಳಿ)ನನ್ನು ಏರಿಕೊಂಡು ಕುಸುಮಾವತಿ ಪಟ್ಟಣಕ್ಕೆ ಹಿಂದಿರುಗಿದಳು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೫೦

'ವರಮೋಹನ ತರಂಗಿಣಿ' ಎಂಬ ಕಾವ್ಯವನ್ನು ಬರೆದು, ಓದಿ ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೯. ರತಿಯು ಶಂಬರಾಸುರನ ಪಟ್ಟಣಕ್ಕೆ ಹೋದುದು

ಅಂಬೋರುಹನಾಭನ ಪಾದಪದ್ಮ ರೋ
ಲಂಬ ಕೇಳೆನ್ನಯ ಕಿವಿಗೆ
ಸಂಭ್ರಮವಡೆದ ನಾನಾ ಶಬ್ದನಿಚಯವಿ
ದೆಂಬಂತೆ ಪೇಳು ಮೇಲ್ಗತೆಯ ೧

ಕೃಷ್ಣನ ಪಾದಕಮಲ ದುಂಬಿಯೆ ಕೇಳು, ನನ್ನ ಕಿವಿಗೆ ಸಡಗರದ ಬಗೆಬಗೆಯ ಶಬ್ದ ಸಮೂಹವಿದು ಎಂಬಂತೆ ಮೇಲಾದ ಕಥೆಯನ್ನು ಹೇಳು

ಬಾಳೆ ಮಂದಾಗ್ನಿ ಬಕ್ಕೆಯೊಳುಂಟು ಮಿಶ್ರಿತ
ಈಳೆಯೊಳು ಪುಳಿ ನೆರೆದಿಹುದು
ಕೇಳು ಹರಿಕಥಾಮೃತ ಪಂಚಧಾರೆ ಸ
ಮ್ಮೇಳವಾಗಿಹುದೆನ್ನ ರನ್ನ ೨

ಮಂದಾಗ್ನಿ ಬಾಳೆ, ಬಕ್ಕೆ (ಒಂದು ಬಗೆಯ ಹಲಸಿನ ಹಣ್ಣು) ಯೊಳಗುಂಟು; ಈಳೆಯಲ್ಲಿ ಹುಳಿಯುಂಟು. ಹರಿಕಥಾಮೃತದಲ್ಲಿ ಪಂಚಧಾರೆ (ಸಕ್ಕರೆ) ಸಮಾವೇಶವಾಗಿರುವುದು.

ರಾಜ ಮಂದಿರದೊಳು ಬೆದಕಿ ನೋಡಿದಳು ಸ
ರೋಜಾಕ್ಷಿ ತನ್ನ ವಲ್ಲಭನ
ತೇಜೋಮಯ ಚಿತ್ರಪಟವ ಕಂಡಮರ್ದಪ್ಪಿ
ನೈಜವೆಂದು ಬಡಬಡಿಸಿದಳು ೩

ಅರಮನೆಯಲ್ಲಿ ತನ್ನ ಗಂಡನನ್ನು ಕೆದಕಿ ಬೆದಕಿ ನೋಡಿದಳು. ಕಾಂತಿಯುಕ್ತವಾದ ಚಿತ್ರಪಟವನ್ನು ಅಪ್ಪಿಕೊಂಡು ನೈಜವೆಂದು ಬಡಬಡಿಸಿದಳು.

ಇನಿಯ ಕೇಳೆಲೆವೊ ನಾ ಮಾಡಿದ ತಪ್ಪೆಂಬು
ದಿನಿತಿಲ್ಲ ಎಂದಿನಂತೆನ್ನ

ಸ್ತನವ ಪಿಡಿದು ಮುಂಡಾಡಿ ಮುದ್ದಿಸಲೊಲ್ಲ
ದಿನಿತಸಡ್ಡೆಯೆ ಪೇಳು ಜೀಯ ೪

ನಾನು ಎಳ್ಳು ಕಾಳು ಮುಳ್ಳು ಮೊನೆಯಷ್ಟು ತಪ್ಪು ಮಾಡಿಲ್ಲ. ಎಂದಿನಂತೆ ನನ್ನ ಮೊಲೆಯನ್ನು ಹಿಡಿದು ಮುದ್ದಾಡಿ ಮುದ್ದಿಸದೆ ಇಷ್ಟು ಅಸಡ್ಡೆ ಮಾಡುವುದು ಸರಿಯೆ, ಹೇಳು ಇನಿಯ.

ವಚನಂಗಳಿಲ್ಲದಿದ್ದರೆ ಮಾಣಲೆನ್ನ
ಕುಚವಿನ್ಯಸ್ತ ಹಸ್ತದಲಿ
ಕುಚ ಚುಬಕಾಗ್ರವ ಪಿಡಿದೊತ್ತಿ ಚುಂಬಿಪ
ಸಚಳತ್ವ ಮೆಯ್ಗರಗಿದುದೆ ೫

ಮಾತಾಡದಿದ್ದರೆ ಬೇಡ, ಮೊಲೆಯ ಕೆಳಭಾಗದಲ್ಲಿ ಹಸ್ತವನ್ನಿಟ್ಟು ಹಿಡಿದು ಹಿಸುಕಿ, ಕುಚ ಹಾಗೂ ಚುಬುಕಾಗ್ರ(ಗದ್ದದ ತುದಿ)ವನ್ನು ಚುಂಬಿಸುವ ಚುರುಕುತನ ಕರಗಿ ಮಾಯವಾಯಿತೆ?

ಕೋಪವುಂಟಾದೊಡಾಜ್ಞಾಪಿಸು ಕಮನೀಯ
ರೂಪ ನೀ ಕಣ್ದೆರೆದೆನ್ನ
ಆಪಾದಮಸ್ತಕ ಪರ್ಯಂತ ನೋಳ್ಪುದೆಂ
ದೋಪಂಗೆ ಬಿನ್ನಯಿಸಿದಳು ೬

ಸಿಟ್ಟಾದರೆ ಆಜ್ಞಾಪಿಸು, ಸುರಸುಂದರ ಮನದನ್ನ ನೀನು ಕಣ್ಣುತೆರೆದು ನನ್ನನ್ನು ಅಡಿಯಿಂದ ಮುಡಿಯವರೆಗೂ ನೋಡಬೇಕೆಂದು ವಿಜ್ಞಾಪಿಸಿದಳು.

ನೋಡದೆ ನುಡಿಸದೆ ಇರ್ದೊಡೆ ಮಾಣು ಸನ್ನೆಯ
ಮಾಡರೆ ಮನವೊಲಿದವರು
ಕಾಡಲುಚಿವಲ್ಲ ಕರುಣದಿಂದೆನ್ನೆರ್ದೆ
ಗೂಡ ನೋಡೆಂದಳಳುತ ೭

ನೋಡದೆ ಮಾತಾಡದೆ ಇದ್ದರೆ ಹೋಗಲಿ, ಮನವೊಲಿದವರು ಪರಸ್ಪರ ಸನ್ನೆ ಮಾಡುವುದಿಲ್ಲವೆ? ಕಾಡುವುದು ಸರಿಯಲ್ಲ, ದಯಮಾಡಿ ನನ್ನ ಎದೆಮನೆಯನ್ನು ನೋಡು ಎಂದು ಕಣ್ಣೀರು ಕರೆದಳು.

ಎಡದೆಡೆವೆರಲ ಸೆಳ್ಳುಗುರಿಂದ ಕಂಬನಿ
ಗಡಣವ ಮೊಗೆದು ಸಿಂಪಿಸುತ
ಸಡಗರವಾಂತು ಕಾಂತನ ಚಿತ್ರಪಟ ಪಾದ
ಜಡಜಕ್ಕೆ ನೊಸಲ ಚಾಚಿದಳು ೮

ಎಡಗೈಯೊಳಗಿನ ಎಡೆಬೆರಳ(ನಡುಬೆರಳು)ಸೆಳ್ಳುಗುರಿಂದ (ಮೊನಚಾದ ಉಗುರಿನಿಂದ) ಕಣ್ಣೀರು ತೆಗೆದು ಚಿಮುಕಿಸುತ್ತ, ಸಂಭ್ರಮ ಸಡಗರದಿಂದ ಪ್ರಾಣಕಾಂತನ ಚಿತ್ರಪಟದ ಪಾದಕಮಲಕ್ಕೆ ಹಣೆ ಚಾಚಿದಳು.

ಇನಿವಿಲ್ಲನ ಚಿತ್ರಪಟವಿದು ನಿರ್ಜೀವಿ
ದನಿದೋರಲರಿಯದೆಂದೆನುತ
ಮುನಿದಳಲುವ ಮನ್ಮಥನ ಮಡದಿಯ ಕಂ
ಬನಿ ತೊಡೆದರು ಕೆಳದಿಯರು ೯

ಇದು ಮನ್ಮಥನ ಚಿತ್ರಪಟ, ನಿರ್ಜೀವದ ಇದು ಮಾತಾಡಲು ಆಗುವುದಿಲ್ಲ ಎಂದು ಗೆಳತಿಯರು ರತಿಯ ಕಂಬನಿಯನ್ನು ಒರೆಸಿದರು.

ಚಂದನ ಸೌರಭ್ಯದೇವಿಯ ವದನಾರ
ವಿಂದರ ಪನಿನೀರ ನಾದಿ
ಹಿಂದಣ ದುಕ್ಕವ ಮರೆಯೆಂದು ಪೇಳ್ದರೆ
ಕಂದರ್ಪನಿರವ ನೋಡುವಳು ೧೦

ಚಂದನ ಸೌಗಂಧ ದೇವಿಯ ಮುಖಕಮಲವನ್ನು ಪನ್ನೀರಿನಿಂದ ಒದ್ದೆ ಮಾಡಿ, ಹಿಂದಿನ ದುಃಖವನ್ನೆಲ್ಲ ಮರೆತುಬಿಡು ಎಂದು ಹೇಳಿದರೆ, ಮನ್ಮಥನ ಇರುವಿಕೆಯತ್ತ ನೋಡುವಳು.

ನಿಡುದೋಳು ಹಸ್ತಾಂಬುಜವಿರ್ದು ಮತ್ಕುಚ
ವಿಡಿದಪ್ಪಿಕೊಳ್ಳದೀ ಪರಿಯಲಿ
ಬಿಡುಬೀಸು ಬಿಟ್ಟದೆಂತು ಸೈರಿಪೆನೆಂದು
ಮಿಡುಕಿದಳಾತ್ಮವಲ್ಲಭಗೆ ೧೧

ನಿಡುದೋಳು, ಅಗಲವಾದ ಅಂಗೈ ಇದ್ದೂ ನನ್ನ ಕುಚವಿಡಿದು ಅಪ್ಪಿಕೊಳ್ಳದೆ, ಈ ರೀತಿ ಬಿಡುಬೀಸಾಗಿ (ದೀರ್ಘವಿರಾಮ) ಬಿಟ್ಟರೆ ನಾನು ಹೇಗೆ ಸೈರಿಸಲಿ ಎಂದು ಮನದನ್ನನಿಗಾಗಿ ಮಿಡುಕಾಡಿದಳು.

ವಾಚಾಳಿ ಮೌನವದೇಕೆ ಹೇಳೆಲೆ ಹಿಮ
ರೋಚಿ ಮಸ್ತಕನೊಳು ಸೆಣಸಿ
ನಾಚಿದೆನೆನಬೇಡ ಗೆಲವು ಸಂಭವಿಸಿದೆ
ಯೋಚಿಸಿಕೋ ನಿನಗೆ ನೀನೆ ೧೨

ಮಾತಿನಮಲ್ಲ, ಹೀಗೆ ಮಾತಿಲಿ(ಮೌನಿ)ಯಾಗಿರುವುದು ಸರಿಯೆ? ಚಂದ್ರ ಮೌಳಿಯೊಡನೆ ಸೆಣಸಿ ಸೋತು ನಾಚಿಕೆಯಾಗಿದೆ ಎನ್ನಬೇಡ, ಗೆಲವು ಸಂಭವಿಸಿದೆ, ನಿನಗೆ ನೀನೇ ಯೋಚಿಸಿ ನೋಡು.

ಜ್ವಾಲಾಂಬಕನ ತಪೋಭ್ರಷ್ಟನ ಮಾಡಿ
ದೋಲೆಯಕಾರನದಾರು
ಮೂಲೋಕ ವಿಜಯ ಮುಮ್ಮಡಿವೀರ ಕಮ್ಮಲ
ಗೋ್ಲಲ ನೀನಲ್ಲವೆ ಜೀಯ ೧೩

ಕೆಂಡಗಣ್ಣನನ್ನು ತಪೋಭ್ರಷ್ಟನನ್ನಾಗಿ ಮಾಡಿದ ಮೊನೆಗಾರನಾರು? ಮೂಲೋಕವಿಜಯ ಮುಮ್ಮಡಿ ವೀರನಾದ ನೀನಲ್ಲವೆ ಜೀಯ?

ಮಿಗೆ ನೋಡಿ ನುಡಿಸುವ ಲೋಚನಯುಗಳಕ್ಕೆ
ಹೊಗೆಸುತ್ತಿ ವೆರೆಪ್ಪೆ ಮುಚ್ಚಿದುಲೆ
ಢಗೆ ಹೊಡೆದೊಡಲೊಳು ಸ್ಫೋಟಕವೆದ್ದು ನಾ
ಲಗೆ ನುಡಿಗೆಟ್ಟುದೆ ಜೀಯ ೧೪

ನೋಡುವ ನಿನ್ನ ಜೋಡಿಕಣ್ಣುಗಳಿಗೆ ಹೊಗೆಯುಡರಿ ರೆಪ್ಪೆ ಮುಚ್ಚಿಕೊಂಡವೆ? ಧಗೆಯಿಂದ ನಾಲಗೆಯೊಣಗಿ ನುಡಿಗೆಟ್ಟಿತೆ ಜೀಯ?

ಸುಟಿವೆತ್ತು ಕಿಡಿಗಣ್ಣನೊಳು ಕಾದಿ ಉಷ್ಣ ಸಂ
ಘಟಿಸಿದ ತನುತಾಪ ಬಹಳ
ಕುಟಿಲವರ್ಜಿತಳೆನ್ನ ಗೆರೆಚಂದ್ರ ಚೆಂ
ದುಟಿಯ ಪೀರ್ದಡೆ ಶೈತ್ಯವಹುದು ೧೫

ಚುರುಕುತನದಿಂದ ಕೆಂಡಗಣ್ಣನೊಡನೆ ಕಾದಾಡಿ ಉಷ್ಣ ಸಂಘಟನೆಗೊಂಡು ತನುವಿನ ತಾಪ ಬಹಳ. ಮೋಸವಂಚನೆಯಿಂದ ಮುಕ್ತಳಾದ ನನ್ನ ಗೆರೆಚಂದ್ರನಂಥ ತುಟಿಗಳನ್ನು ಚುಂಬನದಿಂದ ಹೀರಿದರೆ ಮೈ ತಂಪಾಗುವುದು.

ಕುಂಬಿನಿಗತಿಜಾಣೆ ಕೇಳವ್ವ ಪಟಚಿತ್ರ
ಚುಂಬಿಸಲರಿಯದೆಂದೆನುತ
ತುಂಬಿಗುರುಳ ತುರುಬಿಕ್ಕಿ ದಾದಿಯರು ನಿ
ತಂಬಿನಿಯೊಡನೆ ಪೇಳಿದರು ೧೬

ಲೋಕದೊಳಗೆ ಅತಿಜಾಣೆಯಾದ ರತಿಗೆ ಚಿತ್ರಪಟ ಚುಂಬಿಸಲರಿಯದು ಎಂದು ತಿಳಿಹೇಳಿದ ದಾದಿಯರು ತಲೆಬಾಚಿ ತುರುಬು ಹಾಕಿದರು.

ಬರಿಯ ಗೋಡೆಯ ಮೇಲೆ ಬರೆದ ಚಿತ್ರವ ಕಂಡು
ಮರುಗಿ ಮಾಡುವುದೇನು ಮಗಳೆ
ತುರುಗೆವೆ ಕಣ್ಬನಿಗಳನೊಸರಿಸದೆ ಮುಂ
ಬರಿವ ಹದನವ ಕೇಳು ತಾಯೆ ೧೭

ಗೋಡೆಯ ಮೇಲೆ ಬರೆದ ಚಿತ್ರವನ್ನು ನೋಡಿ ಮರುಗಿದರೇನು ಫಲ? ಕಣ್ಣೀರನ್ನು ಸುರಿಸದೆ ಮುಂದುವರಿಯುವ ಮಾರ್ಗ ಕೇಳು ತಾಯೆ

ವಾರಜಗಂಧಿ ನಿನ್ನಯ ಕಾಂತ ತಿರುಗದ
ದಾರಿಯಲಿ ಹೋದಾತ ಬಹನೆ
ಭೂರಿಯ ಮಾಡದೆ ಮನೆವಾರ್ತೆಯನು ಸಲೆ ವಿ
ಚಾರಿಪುದೆಂದರಾಳಿಯರು ೧೮

ನಿನ್ನ ಮನದನ್ನ ಹಿಂದಿರುಗಿ ಬಾರದ ದಾರಿಯಲ್ಲಿ ಹೋದಾತ ಮತ್ತೆ ಬರುವನೆ? ಉದಾಸೀನ ಮಾಡದೆ ಮನೆವಾರ್ತೆಯ ಬಗ್ಗೆ ಮುತುವರ್ಜಿಯಿಂದ ಮಗ್ನವಾಗು ಎಂದು ಸೇವಕಿಯರು ಹೇಳಿದರು.

ಒಗತನ ಬಿಟ್ಟುಹೋಹಾಗ ಹಾಲಿಗೆ ಹೆಪ್ಪ
ಮೊಗೆದಿಕ್ಕಿದವರಾರುಂಟು
ಜಗದೇಕ ವೀರನ ಕಾಣದಿರಲರಣ್ಯವ
ಹೋಗಬೇಕು ತಾನೆಂದಳಳುತ ೧೯

ಸಂಸಾರ ತೊರೆದು ಹೋಗುವವರು ಹಾಲಿಗೆ ಹೆಪ್ಪು ಹಾಕಿ ಹೋಗುತ್ತಾರೆಯೆ? ಜಗದೇಕವೀರನನ್ನು ಕಾಣದ ನಾನು ಕಾಡು ಸೇರಬೇಕು ಅಷ್ಟೆ ಎಂದು ಅಳತೊಡಗಿದಳು.

ಕರ್ತೃ ನಾನಾದಡೆ ಸ್ಮರಗೇಹದೊಳಗಿರ್ದ
ಮುತ್ತುರತ್ನವನೊಯ್ವುದಿಲ್ಲ
ಸತ್ತೆಡೆಯಾಡುವ ನಡೆವೆಣನಂತೆ ಕೈ
ಹೊತ್ತುಕೊಂಡಿದೊ ತೆರಳುವೆನು ೨೦

ಒಡತಿ ನಾನಾದರೂ ಮನ್ಮಥನ ಮನೆಯಲ್ಲಿರುವ ಮುತ್ತುರತ್ನಗಳನ್ನು ಒಯ್ಯುವುದಿಲ್ಲ. ಸತ್ತು ಅಡ್ಡಾಡುವ ನಡೆವೆಣನಂತೆ ತಲೆಮೇಲೆ ಕೈಹೊತ್ತು ನಡೆದು ಹೋಗುತ್ತೇನೆ ಅಷ್ಟೆ.

ಆಳಿಯರಪ್ಪ ದಾದಿಯರಿಂಗೆ ಬುದ್ಧಿಯ
ಹೇಳಿ ಮಂದಿರವನೊಪ್ಪಿಸಿ
ತಾಳಿದ ವಿರಹಸಂತಾಪದಿ ಪೊರಮಟ್ಟ
ಳೂಳಿಗದಬಲೆಯರೊಡನೆ ೨೧

ಸೇವಕಿಯರಾದ ದಾದಿಯರಿಗೆ ಬುದ್ಧಿ ಮಾತನ್ನು ಹೇಳಿ, ಅವರ ವಶಕ್ಕೆ ಮನೆಯನ್ನು ಒಪ್ಪಿಸಿ, ವಿರಹಸಂತಾಪದಿಂದ ಜೀತದಾಳುಗಳೊಡನೆ ಹೊರಹೊರಟಳು.

ಅಬ್ಬರಿಸುತ ಬರ್ಪ ಹೆಂಗಳ ಬೀಳ್ಕೊಂ
ಡಿಬ್ಬರು ಕೆಳದಿಯರ್ಕೂಡಿ
ನಿಬ್ಬರದಲಿ ಕಾಮನರ್ಧಾಂಗಿ ನಡೆದಳು
ಹೆಬ್ಬನವನು ನಿಟ್ಟಿಸುತ್ತ ೨೨

ಸಂಕಟದಿಂದ ಅಬ್ಬರಿಸುತ್ತ ಬರುವ ಹೆಣ್ಣುಗಳನ್ನು ಬೀಳ್ಕೊಂಡು ಇಬ್ಬರು ಗೆಳತಿಯರ ಜೊತೆಗೂಡಿ ಕಾಮನರ್ಧಾಂಗಿ ದೊಡ್ಡ ವನವನ್ನು ನಿಟ್ಟಿಸುತ್ತಾ ಮುನ್ನಡೆದಳು.

ಮಾಮರದೆಡೆಯಲಿ ತುರುಗಿರ್ದ ಗಿಳಿವಿಂಡು
ರೋಮಾಕ್ಷ ಕಲಕಂಠ ನಿಚಯ
ಕೋಮಲ ಮರಿದುಂಬಿಗಳಿರ ನಿಮ್ಮಾಳ್ದನ
ಕಾಮನ ತೋರೆಂದಳಳುತ ೨೩

ಮಾವಿನಮರಗಳಲ್ಲಿ ತುಂಬಿರುವ ಗಿಳಿಗಳೆ, ನವಿಲುಗಳೆ, ಕೋಗಿಲೆಗಳೆ, ದುಂಬಿಗಳೆ ನಿಮ್ಮ ಒಡೆಯ ಕಾಮನನ್ನು ತೋರಿಸಿ ಎಂದಳು ಅಳುತ್ತಾ

ಹೂವಿನ ಬನದಲಿ ಹೊಗಬಿಟ್ಟು ತನಿರಸ
ತೀವಿದ ಪಣ್ಗಳ ತಿನಿಸಿ
ಓವಿದ ಕರ್ತನ ತೋರೆಂದು ವರ ರತಿ
ದೇವಿ ದುಕ್ಕದಿ ಹಲುಬಿದಳು ೨೪

ಹೂಬನದೊಳಕ್ಕೆ ನಿಮ್ಮನ್ನು ಕರೆದುಕೊಂಡು ಹೋಗಿ ರಸತುಂಬಿದ ಹಣ್ಣುಗಳನ್ನು ತಿನ್ನಿಸಿದ ಪ್ರೀತಿಯ ಒಡೆಯನನ್ನು ತೋರಿಸಿ ಎಂದು ರತಿ ದುಕ್ಕದಿಂದ ಹಲುಬಿದಳು.

ಗಜ ರಥ ತುರಗ ಪದಾತಿ ಚತುರ್ಬಲ
ವ್ರಜ ಮೀಸಲಳಿಯದಂತಿರ್ದು
ಭುಜಗಭೂಷಣನ ಕಣ್ಗಿಚ್ಚಿಂಗೆ ಮಕರ
ಧ್ವಜ ದೇಹವ ಸಾರ್ಚಬಹುದೆ ೨೫

ಆನೆ, ಕುದುರೆ, ರಥ, ಕಾಲಾಳು – ಚತುರ್ಬಲ ಮೀಸಲಳಿಯದಂತೆ ಇದ್ದು, ಕೆಂಡಗಣ್ಣನ ಹಣೆಗಣ್ಣ ಕಿಚ್ಚಿಗೆ ಒಡೆಯನಾದ ಮನ್ಮಥ ಆಹುತಿಯಾಗಬೇಕೆ?

ತಡೆಯದೆ ತಳತಂತ್ರ ನುಗ್ಗೆದ್ದೊಡೆ ಕಟ್ಟ
ಕಡೆಯಲ್ಲಿ ದೊರೆ ಸಿಕ್ಕಬೇಕು
ಒಡೆಯನನೊಪ್ಪಿಸಿಕೊಟ್ಟು ಬಂದೀ ವನ
ದೆಡೆಯಲ್ಲಿ ನೀವಿರಬಹುದೆ ೨೬

ತಳತಂತ್ರ(ಪದಾತಿ, ಕಾಲಾಳು ಸೈನ್ಯ) ನುಚ್ಚುನೂರಾದ ಮೇಲೆ ಕೊನೆಯಲ್ಲಿ ದೊರೆ ಸಿಕ್ಕ ಬೇಕು. ಆದರೆ ಒಡೆಯನನ್ನು ಬಲಿಗೊಟ್ಟು ನೀವು ಈ ವನದಲ್ಲಿ ಜೀವಿಸಬಹುದೆ?

ಭೂತಳದೊಳಗುಳ್ಳ ನೀತಿ ತಪ್ಪುವುದೆ ಸ
ತ್ತಾತನ ಬಾಯೊಳಗೆ ಮಣ್ಣು
ಚಾತುರ್ಬಲವಿದ್ದು ನೀಪೋದೆ ಮನ್ಮನೋ
ನಾಥ ಹಾಯೆಂದೊರಲಿದಳು ೨೭

ಲೋಕದ ನೀತಿ ತಪ್ಪದು, ಸತ್ತಾತನ ಬಾಯಿಗೆ ಮಣ್ಣು. ಚಾತುರ್ಬಲವಿದ್ದೂ ನೀನು ಹೀಗೆ ಸಾವಿಗೆ ತುತ್ತಾದೆ.

ತಳಿರ ತೊಂಗಲ ತೂಗುವಣೆಯಲಿ ಖೇಡಾ
ಕುಳಿಯ ಸರೋಜ ಮಧ್ಯದಲಿ
ಸುಳಿದಾಡುವ ಮಂದಮರುತ ಮತ್ಕಾಂತನ
ಬಳಿಗೆನ್ನ ಸಾರ್ಚೆಂದಳಳುತ ೨೮

ಚಿಗುರಿನ ಗೊಂಚಲ ತೂಗುಮಣೆಯಲ್ಲಿ, ಕ್ರೀಡಾಕೊಳದ ಕಮಲದ ಮಧ್ಯದಲ್ಲಿ ಸುಳಿದಾಡುವ ತಂಗಾಳಿಯೆ, ನನ್ನ ಪ್ರಾಣಪ್ರಿಯನ ಬಳಿಗೆ ಕರೆದೊಯ್ಯಿ ಎಂದು ದುಕ್ಕಳ್ಳಿಸುತ್ತ ಹೇಳಿದಳು.

ಪೇಳಲುದ್ಯೋಗಿಸಬಾರದೆ ರಾಜಮ
ರಾಳ ಬೊಮ್ಮಗೆ ಪೇಳು ನನ್ನ
ತೋಳೊಳಪ್ಪುವನ ಸೃಷ್ಟಿಸಿ ಕುಡಬೇಕೆಂದು
ಭಾಳವನಡಿಗೆ ಚಾಚಿದಳು ೨೯

ರಾಜಹಂಸನೆ, ನನ್ನ ತೋಳಲ್ಲಿ ಅಪ್ಪಿಕೊಳ್ಳುವ ನನ್ನ ಪ್ರಿಯತಮನನ್ನು ಸೃಷ್ಟಿಸಿಕೊಡುವಂತೆ ನೀನು ಬ್ರಹ್ಮನಿಗೆ ಹೇಳಲು ಪ್ರಯತ್ನಿಸಬಾರದೆ? ಎಂದು ತನ್ನ ಹಣೆಯನ್ನು ಅವನಡಿಗೆ ಚಾಚಿದಳು.

ಕುಚದ ವೃತ್ತತೆಯ ಕೊಟ್ಟಳು ಕೋಕಪಕ್ಷಿಗೆ
ಕಚಭಾರ ಕೊಟ್ಟಳು ನವಿಲಿಗೆ
ವಚನ ಸುಸ್ವರ ತನಗೇಕೆಂದು ಶುಕಪಿಕ
ನಿಚಯಕೆ ಹಂಚಿ ಹಾಕಿದಳು ೩೦

ಮೊಲೆಯ ದುಂಡಗಿನ ಆಕಾರವನ್ನು ಚಕ್ರವಾಕ ಪಕ್ಷಿಗೆ ಕೊಟ್ಟಳು;ಕೂದಲಿನ ಭಾರವನ್ನು ನವಿಲಿಗೆ ಕೊಟ್ಟಳು. ಮಾತಿನ ಮಧುರ ಸ್ವರ ತನಗೇಕೆಂದು ಗಿಳಿಕೋಗಿಲೆಗಳಿಗೆ ಹಂಚಿಕೊಟ್ಟಳು.

ಕಂಗೋಳಿಸುವ ನಾನಾವೃಕ್ಷದೆಡೆಯ ಪ್ಲ
ವಂಗ ದಂಪತಿಗಳೊಪ್ಪಿರಲು
ಅಂಗಜಾತನ ಕಂಡರೆ ತೋರು ತೋರೆಂದು
ಭೃಂಗ ಕುಂತಳೆ ಹಲುಬಿದಳು ೩೧

ಕಂಗೊಳಿಸುವ ಬಗೆಬಗೆಯ ವೃಕ್ಷಗಳಲ್ಲಿ ಪ್ಲವಂಗ(ಕಪ್ಪೆ, ಕೋತಿ ಮುಂತಾದ

ನೆಗೆಯುವ ಪ್ರಾಣಿಗಳು) ದಂಪತಿಗಳು ಒಪ್ಪಿರಲು, ಅಂಗಜನಾದ ಮನ್ಮಥನನ್ನು ಕಂಡರೆ ತೋರು ತೋರೆಂದು ಭೃಂಗಕುಂತಳೆ (ದುಂಬಿಗುರುಳ ತರುಣಿ) ಹಲುಬಿದಳು.

ಮುಂತಣ ವಿಪಿನಾಂತರದಲ್ಲಿ ವೀರ ವ
ಸಂತ ಪಾದಪ ನಿಚಯವನು
ಸಂತಸದಿ ಕೊನರಿಸಿಕೊಂಡಿರೆ ರತಿ ತನ್ನ
ಕಾಂತನ ಬೆದಕಿ ನೋಡಿದಳು ೩೨

ಮುಂದಿನ ಅಡವಿಯಲ್ಲಿ ವಸಂತ ವೃಕ್ಷಸಮೂಹ ಚಿಗುರಿನಿಂದ ಮೆರೆಯುವಂತೆ ಮಾಡಿರಲು, ರತಿ ತನ್ನ ಕಾಂತನ ಅಲ್ಲಿ ಹುಡುಕಿದಳು.

ಹಿಡಿವ ಪೂಸರಗಳಿವೆ ನಿನ್ನ ಪರಮ ಸಂ
ಗಡಿಗ ಚೈತ್ರನ ಕಾಣಲಿಕೆ
ನುಡಿವ ಪಿಕಾಳಿಗಳಿವೆ ತಳತಳನೆ ಹೊಳೆವ
ನಿಡಿಗಣ್ಣನಿಲ್ಲೆಂದಳಳುತ ೩೩

ಹಿಡಿಯುವ ಹೂಬಾಣಗಳಿವೆ, ನಿನ್ನ ಪರಮಸ್ನೇಹಿತ ಚೈತ್ರನನ್ನು ನೋಡುವುದಕ್ಕೆ ಕೋಗಿಲೆಗಳ ಹಿಂಡುಗಳಿವೆ, ಆದರೆ ವಿಶಾಲಾಕ್ಷನಾದ ಮನ್ಮಥ ಮಾತ್ರ ಇಲ್ಲ.

ಹಿಂಡನಗಲಿದ ಹುಲ್ಲೆಯ ನಸೆಯೊಳಗಿಪ್ಪ
ಗಂಡೇಣ ತನ್ನ ವಲ್ಲಭನ
ಕಂಡುದುಂಟಾದೊಡೆ ತೋರು ತೋರೆನುತಲಿ
ಪುಂಡರೀಕಾಕ್ಷಿ ಕೇಳಿದಳು ೩೪

ಹಿಂಡನಗಲಿದ ಹೆಣ್ಣು ಜಿಂಕೆಯ ಬೆದೆಯಲ್ಲಿರುವ ಗಂಡು ಜಿಂಕೆಯೆ, ನನ್ನ ವಲ್ಲಭನನ್ನು ಕಂಡರೆ ನನಗೆ ತೋರು ತೋರೆಂದು ಕಮಲಾಕ್ಷಿ ಕೇಳಿದಳು.

ಅಲ್ಲಿಗಲ್ಲಿಗೆ ಸಾಲುಸಾಲಾಗಿ ನಿಂದಿಹ
ಜಲ್ಲಿಯ ಮೃಗಪಕ್ಷಿಗಳಿರ
ಮಲ್ಲಿಗೆಗೋಲನ ಕಂಡರೆ ತೋರೆಂದು
ಸೊಲ್ಲಿಸಿದಳು ದೈನ್ಯವೆರಸಿ ೩೫

ಅಲ್ಲಲ್ಲಿ ಸಾಲುಸಾಲಾಗಿ ನಿಂತಿರುವ, ಹಿಂಡುಹಿಂಡಾಗಿ ನಿಂತಿರುವ ಮೃಗ ಪಕ್ಷಿಗಳಿರಾ, ಹೂಬಾಣವನ್ನು ಕಂಡರೆ ಹೇಳಿರೆಂದು ದೈನ್ಯದಿಂದ ಕೇಳಿಕೊಂಡಳು.

ನೆಲನಾಕಾಶ ದಿಕ್ಕೆಂಟು  ಷೋಡಶ ಕೋಣ
ಜಲನಿಧಿ ನದಿನದಗಳಿರ
ಅಲರಂಬನ ಕಂಡರೆ ತೋರೆಂದು ವ್ಯಾ
ಕುಲದಿಂದ ಹಲುಬಿದಳಬಲೆ ೩೬

ನೆಲ,ಮುಗಿಲು, ಎಂಟು ದಿಕ್ಕು, ಹದಿನಾರು ಮೂಲೆ, ಸಮುದ್ರ, ನದಿನದಗಳಿರ ಅಲರಂಬನನ್ನು (ಹೂಬಾಣನನ್ನು) ಕಂಡರೆ ತೋರಿರೆಂದು ಹಂಬಲಿಸಿ ಹಲುಬಿದಳು.

ಸ್ತನಭಾರವ ಪೊತ್ತ ಪದಯುಗಳಕೆ ಲೋ
ಚನತಪ್ತ ಜಲವ ಸಿಂಪಿಸುತ
ಘನಪರಿತಾಪದಿ ರತಿದೇವಿ ಬಂದಳು
ಮನದೆರೆಯನ ನೋಡಿಕೊಳುತ ೩೭

ಕುಚಗಳ ಭಾರವನ್ನು ಹೊತ್ತ ಪಾದದ್ವಯಕ್ಕೆ ಕಣ್ಣೀರನ್ನು ಚಿಮುಕಿಸುತ್ತ, ಅಧಿಕ ಸಂತಾಪದಿಂದ ಬಂದಳು ಮನದನ್ನನನ್ನು ಮತ್ತೆ ಮತ್ತೆ ನೋಡಿಕೊಳ್ಳುತ್ತ.

ಚರಣದುಂಗಷ್ಟವೆಡೆವಿದ  ಠಾವಿನಲಿ
ಹರನನರ್ಥಿಸಲೆಂದೆನುತ
ತರಹರದಲಿ ಬಂದಳಬುಜಾಕ್ಷಿ ಶಂಬರಾ
ಸುರನ ಪಟ್ಟಣವ ನೀಕ್ಷಿಸುತ ೩೮

ಪಾದದ ಹೆಬ್ಬೆಟ್ಟು ಎಡವಿದ ಸ್ಥಳದಲ್ಲಿ ಶಿವನನ್ನು ಯಾಚಿಸಲಿ ಎಂದು ಶಂಬರಾಸುರನ ಪಟ್ಟಣವನ್ನು ನೋಡುತ್ತಾ ಬಂದಳು.

ತಪನನುಷ್ಣತೆಯಿಂದ ತನುಲತೆ ಬೆಂಡಾಗಿ
ಲಪನಾಂಬೋರುಹ ಕಳಲಿ
ಅಪರಾಹ್ನ ಕಾಲದಿ ರತಿ ಶಂಬರಾಸುರ
ನುಪವನವನು ಪೊಕ್ಕಳಂದು ೩೯

ಸೂರ್ಯನ ಶಾಖದಿಂದ ಮೈಬಳ್ಳಿ ಬೆಂಡಾಗಿ, ಮುಖಕಮಲ ಬಾಡಿ ಅಪರಾಹ್ನ (ಎಡಹಗಲು) ಕಾಲಕ್ಕೆ ರತಿ ಶಂಬರಾಸುರನ ಉಪವನಕ್ಕೆ ಬಂದಳು.

ಲೋಲಲೋಚನೆ ಬಂದಿರವ ಕಾಣುತ ವನ
ಪಾಲರು ಪಕ್ಷಪಾತದಲಿ
ಬಾಲೇಂದುಕಾಂತ ಪಾಷಾಣದಿ ರಚಿತ ವಿ
ಶಾಲ ತಂಗೋಳ ತೋರಿದರು ೪೦

ರತಿಯ ಆಗಮನವನ್ನು ಕಂಡ ವನಪಾಲಕರು ಚಂದ್ರಕಾಂತ ಶಿಲೆಯಿಂದ ರಚಿತವಾದ ವಿಶಾಲ ತಂಗೊಳವನ್ನು ತೋರಿದರು.

ಪಳಿಕಿನ ಪಟ್ಟಿಕೆಯಲ್ಲಿ ಪೊಂಬಾಳೆಯ
ಸುಳಿ ಹಾಸಿ ರತಿಯ ಕುಳ್ಳಿರಿಸಿ
ನಳಿನಾಕ್ಷಿಯರೊಡತಿಯ ಪಾದದ್ವಿತ್ವ ಮಾಂ
ದಳಿರನಾ ಜಲದೊಳದ್ದಿದರು ೪೧

ಸ್ಫಟಿಕದ ಪೀಠದ ಮೇಲೆ ಹೊಂಬಾಳೆಯ ಸುಳಿಯನ್ನು ಹಾಸಿ ರತಿಯನ್ನು ಅದರ ಮೇಲೆ ಕುಳ್ಳಿರಿಸಿ, ಸೇವಕಿಯರು ಒಡತಿಯ ಮಾವಿನ ಚಿಗುರಿನಂತಿದ್ದ ಪಾದಗಳೆರಡನ್ನು ನೀರಲ್ಲಿ ಅದ್ದಿದರು.

ಹದಿನಾರು ಬಣ್ಣದ ಸೊನ್ನದ ಸರಳ್ಗಳ
ಕುದಿಗಾಸಿ ನೀರೊಳಿಟ್ಟಂತೆ
ಉದಿಸಿತು ಘುಳುಘುಳು ಧ್ವನಿ ತಂಗೊಳದಲ್ಲಿ
ಸುದತಿಯ ತನು ತಾಪದಿಂದ ೪೨

ಹದಿನಾರು ಬಣ್ಣದ ಚಿನ್ನದ ಕಂಬಿಗಳನ್ನು ಕೆಂಪಾಳ ಕಾಸಿ ನೀರೊಳ್ಳಗಿಟ್ಟಂತೆ, ರತಿಯ ತನು ತಾಪದಿಂದ ತಂಗೊಳದಲ್ಲಿ ಘುಳುಘುಳು ಧ್ವನಿ ಉದಿಸಿತು.

ಲಾಲಿಪ ಪದ ಕೈರವನಾಳ ಸತುಗುಂದಿ
ಮಾಲಿದವೆಸಳ್ಗಳು ಬಾಡಿ
ಆಲಿಗಳಲುಗದ ಜಲಚರ ಬೆಂಡೆದ್ದು
ತೇಲಿದವು ಉಷ್ಣ ಸಂಘಟಿಸಿ ೪೩

ನೈದಿಲೆಯ ದಂಟು ಸತ್ತ್ವಗುಂದಿ ಅದರ ಎಸಳುಗಳು ಬಾಡಿ ವಾಲಿದವು, ರೆಪ್ಪೆ ಮುಚ್ಚಿ ತೆಗೆಯದ ಚಲಚರ (ಮೀನು) ಬಿಸಿಗೆ ಬೆಂಡೆದ್ದು ತೇಲಿದವು.

ಚಕ್ರಪಾಣಿಯ ಮೂಲಮೂರ್ತಿಗಳೆಂಬಂತೆ
ಶಕ್ರನ ಮೆಯ್ಗಣ್ಗಳಂತೆ
ವಕ್ರಾಂಬಕ ವಿರೋಧಿಯ ಬಹುಪಟದಂತೆ
ಚಕ್ರಗೊಳದಿ ಮೀಂಗಳಿದ್ದವು ೪೪

ವಿಷ್ಣುವಿನ ಮೂಲ ಮೂರ್ತಿಗಳಂತೆ, ಇಂದ್ರನ ಮೈಯ ಕಣ್ಣುಗಳಂತೆ ವಕ್ರಾಂಬಕ(ಶಿವನ) ವಿರೋಧಿಯ (ಕಾಮನ) ಪಟಾಲಂ(ಸೈನ್ಯ)ನಂತೆ ಚಕ್ರಗೊಳದಲ್ಲಿ ಮೀನುಗಳಿದ್ದವು.

ಬಿಸಿವಡೆದಾ ಸರೋವರದಲ್ಲಿ ಮೀಂಗಳು
ಬಿಸಿತಾಗಿ ಬಾಯ್ಬಿಡುವುದನು
ಅಸಿಯಳು ಮರುಕ ದಿಟ್ಟಿಯಲಿ ನೋಡಿದಾಗ
ಪಸಿ ತಾಪ ಪರಿದುದಾಕ್ಷಣದಿ ೪೫

ಬಿಸಿಗೊಂಡ ಸರೋವರದಲ್ಲಿ ಮೀನುಗಳು ಬಿಸಿತಾಗಿ ಬಾಯಿ ಬಾಯಿ ಬಿಡುವುದನ್ನು ರತಿ ಮರುಕದಿಂದ ನೋಡಿದಾಗ ಅಪ್ಪಟ ತಾಪ ಅಲ್ಲಿಂದ ಕಾಲ್ತೆಗೆಯಿತು.

ತೋಟಿಗರೊಳಗೊರ್ವ ಶಂಬರಾಸುರ ಭೂವ
ಧೂಟಿಯ ವರನಿದ್ದ ಬಳಿಗೆ
ಸೂಟಿಯೊಳೈತಂದು ರತಿಯ ಪ್ರಸಂಗವ
ನಾಟಿಸಿದನು ಕಿವಿಯೊಳಗೆ ೪೬

ಭೂವಧೂಟಿಯ ವರ( ಭೂದೇವಿಯ ಗಂಡ ಅರ್ಥಾತ್ ರಾಜ)ನಾದ ಶಂಬರಾಸುರನಿಗೆ ತೋಟಿಗನೊಬ್ಬ ವೇಗವಾಗಿ ಹೋಗಿ ರತಿಯ ಪ್ರಸಂಗವನ್ನು ಹೇಳಿದನು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ

ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೭

'ವರ ಮೋಹನ ತರಂಗಿಣಿ' ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೧೦. ರತಿ ಶಂಬರಾಸುರರ ಸಂಧಾನ

ಉರಗನ ಬೆನ್ನ ಮೇಲೊರಗಿರ್ದು ಕಾಳಿಂಗ
ಸರಪವನು ಕೊಂದ ರಂಗನ
ಪರಮ ಕಾರುಣ್ಯಾವಲೋಕನದಿಂದ ವಿ
ಸ್ತರಿಸೆನ್ನ ಕಿವಿಗೆ ಮೇಲ್ಗತೆಯ ೧

ಶೇಷಶಾಯಿಯಾಗಿದ್ದು ಕಾಳಿಂಗ ಸರ್ಪವನ್ನು ಕೊಂದ ರಂಗನ(ಕೃಷ್ಣನ) ಕಾರುಣ್ಯದಿಂದ ನನ್ನ ಕಿವಿಗೆ ಮೇಲಾದ ಕಥೆಯನ್ನು ಬಿತ್ತರಿಸು.

ಸಿಂಗರದೋಟದ ಸಿರಿಗಂಪ ಸುಜನರ್ಗೆ
ತಂಗಾಳಿ ತಂದೀವ ತೆರದಿ
ಮಂಗಳ ಹರಿಕಥಾಮೃತವ ನಾ ನಿನ್ನ ಕ
ರ್ಣಂಗಳಿಗೆರೆವೆ ಲೇಸನಿಸೆ ೨

ಸುಂದರವಾದ ತೋಟದ ಸಿರಿಗಂಪನ್ನು ಸುಜನರಿಗೆ ತಂದೀಯುವ ತಂಗಾಳಿಯಂತೆ ಲೇಸಾದ ಹರಿಕಥಾಮೃತವನ್ನು ನಿನ್ನ ಕಿವಿಗಳಿಗೆ ತಂದೆರೆಯುವೆನು.

ಕ್ಷಿತಿನಾಥರೆರೆಯ ಚಿತ್ತೈಸು ಬಂದಾಯಕ
ರತಿದೇವಿಯೆಂದು ನಾನವಳ
ಅತಿ ವಿಶ್ವಾಸಿ ಮಿತ್ರೆಯರಿಂದ ಕೇಳಿದೆ
ಪತಿಕರಿಸೆಂದ ತೋಟಿಗನು ೩

ದೊರೆಗಳ ದೊರೆಯೆ, ಬಂದಾಕೆ ರತಿದೇವಿ ಎಂದು ಆಯಕನ ಪ್ರಿಯಗೆಳತಿಯರಿಂದ ಕೇಳಿ ತಿಳಿದೆ, ದಯ ಮಾಡೆಂದನು ವನಪಾಲಕನು.

ಭಾಸುರ ರಂಭೆಯೂರ್ವಶಿ ಮೇನಕೆ ಮಂಜು
ಘೋಷೆ ತಿಲೋತ್ತಮೆ ಸಹಿತ
ಸಾಸಿರಗಣ್ಣನ ಪಟ್ಟಣದಬಲೆಯರುಗ
ಳೀ ಸುಂದರಿಗೆ ಸಾಟಿಯಿಲ್ಲ ೪

ಥಳಥಳ ಹೊಳೆಯುವ ರಂಭೆ, ಊರ್ವಶಿ, ಮೇನಕೆ, ಮಂಜುಘೋಷೆ, ತಿಲೊತ್ತಮೆ ಸಮೇತ ಇಂದ್ರನ ಪಟ್ಟಣದ ಅಬಲೆಯರು ಈ ಸುಂದರಿಗಾವ ಸಾಟಿ?

ಸಿರಿ ಗಿರಿಜಾತೆ ಶಾರದೆ ಶಚಿದೇವಿಯರ
ಪರಿಯಲ್ಲವಿವಳಚ್ಚು ಬೇರೆ
ಹರಿಹರ ವಿಧಿ ಪುರಂದರರು ಜೀವಾವಧಿ
ಸ್ಮರಿಸಿದರು ಮೊಗದೋರುವಳೆ ೫

ಲಕ್ಷ್ಮೀ, ಪಾರ್ವತಿ, ಶಾರದೆ, ಶಚಿದೇವಿಯರ ರೀತಿಯದಲ್ಲ ಇವಳ ವಿಗ್ರಹ ಬೇರೆ. ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರಾದಿಗಳು ಜೀವಮಾನ ಪರ್ಯಂತ ಸ್ಮರಿಸಿದರೂ ಮುಖ ತೋರುವಳೆ?

ಹಿಂದಣಜನ್ಮದ ಸುಕೃತವಿನ್ನೆಂತುಟೋ
ಮಂದಸ್ಮಿತವದನೆ ನಿನ್ನ
ನಂದನದೊಳು ಬಂದು ಕೈಸಾರ್ದಳು ರೂಪ
ಕಂದರ್ಪ ಕರಸಿಕೊ ಜೀಯ ೬

ಹಿಂದಿನ ಜನ್ಮದ ಪುಣ್ಯಫಲವೋ ಏನೋ, ನಿನ್ನ ಉದ್ಯಾನವನದಲ್ಲಿ ಮುಗುಳುನಗೆಯ ಮುಖದಾಕೆ ಬಂದು ಕೈಗೆ ನಿಲುಕುವಷ್ಟು ಹತ್ತಿರವಾಗಿದ್ದಾಳೆ. ರೂಪದಲ್ಲಿ ಮನ್ಮಥನನ್ನು ಮೀರಿಸುವ ನೀನು ಆಕೆಯನ್ನು ಕರೆಸಿಕೊ ಎಂದು ವನಪಾಲಕ ವಿನಂತಿಸಿದ.

ಮತ್ತೇಭಗಮನೆಯ ಪರಮಲಾವಣ್ಯವ
ಬಿತ್ತರಿಸುವೊಡೆನ್ನ ಹವಣೆ
ಚಿತ್ತದೊಳಂಗೀಕರಿಸಿ ಪಲ್ಲಕ್ಕಿಯ
ನಿತ್ತಡೆ ತರಬಹುದೆಂದ ೭

ಮದಿಸಿದ ಆನೆ ನಡಿಗೆಯವಳ ಅಂದ ಚಂದವನ್ನು ವಿವರಿಸಲು ನನಗೆ ಸಾಧ್ಯವೆ? ನಿನ್ನ ಮನಸ್ಸಿಗೆ ಒಪ್ಪಿ ಪಲ್ಲಕ್ಕಿಯನ್ನು ಕಳಿಸಿದರೆ ಕರೆತರಬಹುದೆಂದನು.

ಎಂದೊಡಾ ಮಾತಿಂಗೊಡನೆದ್ದು ದೈತ್ಯ ಹೊ
ನ್ನಂದಣದಣ್ಣಿರ ಕಳುಹೆ
ಸಂದಣಿಸಿದರು ಕೊಜ್ಜೆಯರು ನಿಯೋಗಿಗಳು
ಬಂದರು ರತಿಯಿದ್ದ ಬಳಿಗೆ ೮

ಆ ಮಾತನ್ನು ಕೇಳಿ ಕೂಡಲೇ ಮೇಲೆದ್ದು ಹೊನ್ನಂದಣ (ಚಿನ್ನದ ಪಲ್ಲಕ್ಕಿ)ದ ಅಣ್ಣಿಯರನ್ನು ಕಳಿಸಲು, ಗೊಜ್ಜಿಗರು ನಿಯೋಗಿಗಳು ಗುಂಪಾಗಿ ರತಿಯಿದ್ದೆಡೆಗೆ ಬಂದರು.

ಬುಧರಣ್ಣಿ ಕೊಜ್ಜೆಯರು ದಾದಿಯರೊಂದಾಗಿ
ಮಧುರ ಸುಸ್ವರದಿ ಬಿನ್ನೈಸೆ
ಉದರಾನ್ನವ ತಿರಸ್ಕರಿಸೆ ಅಂದಣದೊಳು
ಚದುರೆಯನೊಡನೆ ಸಾರ್ಚಿದರು ೯

ವಿದ್ವತ್ತಿನ ಅಕ್ಕಂದಿರು, ಕೊಜ್ಜೆಯರು, ದಾದಿಯರು, ಬಂದಾಗ ಮಧುರ ಮಾತಿನಿಂದ ವಿನಂತಿಸಿದರೂ ಹೊಟ್ಟೆಗನ್ನವನ್ನು ತಿನ್ನದಿದ್ದಾಗ ಆಕೆಯನ್ನು ಕೂಡಲೇ ಪಲ್ಲಕ್ಕಿ ಹತ್ತಿಸಿದರು.

ಮಾಣಿಕ ಖಚಿತ ಹೊನ್ನಂದಣದೊಳು ಕಂತು
ರಾಣಿಯ ಮುಚ್ಚಿ ಬೈಚಿಟ್ಟು
ಓಣಿಯೊಳು ಮೆರೆಸುತ ಕರಕೊಂಡು ಬಂದೊಡನೆ
ಕಾಣಿಸಿದರು ನಿಶಾಚರಗೆ ೧೦

ರತ್ನ ಖಚಿತ ಚಿನ್ನದ ಪಲ್ಲಕ್ಕಿಯಲ್ಲಿ ಮನ್ಮಥನ ರಾಣಿಯನ್ನು ಬೈಚಿಟ್ಟು ಓಣಿಯಲ್ಲಿ ಪಲ್ಲಕ್ಕಿ ಮರೆಸುತ್ತ ಬಂದು ಶಂಬರಾಸುರನಿಗೆ ಆಕೆಯನ್ನು ಕಾಣಿಸಿದರು.

ಘನಸೌಂದರಿಯ ನಿಟ್ಟಿಸಿದಾಕ್ಷಣದಿ ಜೀ
ವನಕೆ ಸಂತಸ ಪಸರಿಸಿತು
ವನಜಾಕ್ಷಿ ತನಗೆ ದಕ್ಕುವಳಲ್ಲವೆಂದು
ಮನದಿ ಮೂರ್ಛೆದಾಳ್ದನಸುರನು ೧೧

ಘನಸುಂದರಿಯನ್ನು ನೋಡಿದಾಕ್ಷಣ ಸಂತಸವಾದರೂ ಈಕೆ ತನಗೆ ದಕ್ಕುವಳಲ್ಲವೆಂದು ಮನದಲ್ಲಿಯೆ ಮೂರ್ಛೆ ತಾಳಿದನು.

ಎಚ್ಚೆತ್ತು ಮಗುಳೆ ನೋಡಿದೊಡೆ ಮನ್ಮಥ
ನೆಚ್ಚನು ದೈತ್ಯೇಶನೊಡಲ
ಎಚ್ಚರು ಪಲ್ಲಟವಾಗಿರಲು ತರುವಾಯ
ಎಚ್ಚೆತ್ತು ರತಿಯ ನಿಟ್ಟಿಸಿದ ೧೨

ಎಚ್ಚೆತ್ತು ಮತ್ತೆ ರತಿಯನ್ನು ನೋಡಿದಾಗ ಮನ್ಮಥ ಶಂಬರಾಸುರನನ್ನು ಎಚ್ಚನು. ಆಗ ಅವನ ಪ್ರಜ್ಞೆ ಪಲ್ಲಟವಾಗಲು, ತರುವಾಯ ಎಚ್ಚೆತ್ತು ರತಿಯ ನಿಟ್ಟಿಸಿದ.

ಬಿಸರುಹದಳ ಲೋಚನೆ ಕೇಳು ನಿನ್ನಯ
ಪೆಸರಾವುದೆಲ್ಲಿಂದ ಬಂದೆ
ಅಸಮಾಕ್ಷನಾಣೆ ನಿಜವ ಪೇಳು ಪೇಳೆಂದು
ಬೆಸಗೊಂಡ ವಿಷಯಾತುರದಿ ೧೩

ಕಮಲದಳಲೋಚನೆ ನಿನ್ನ ಹೆಸರೇನು? ಎಲ್ಲಿಂದ ಬಂದೆ? ಮುಕ್ಕಣ್ಣನಾಣೆ ನಿಜವನ್ನು ಹೇಳು ಎಂದು ಕಾಮಾತುರದಿಂದ ಕೇಳತೊಡಗಿದ.

ನೀಚೋಕ್ತಿಯ ದನಿಯನು ಕೇಳಿ ತಲೆಗುತ್ತಿ
ಲೋಚನ ತಪ್ತವಾರಿಯನು
ಭೂಚಕ್ರದೊಳು ಪ್ರವಹಿಸುವ ದುಕ್ಕಿಯ ಕಂಡು
ನಾಚದೆ ಮಗುಳೆ ಸೊಲ್ಲಿಸಿದ ೧೪

ಕೆಳಮಟ್ಟದ ಮಾತಿನ ರೀತಿಯನ್ನು ಕೇಳಿ, ತಲೆತಗ್ಗಿಸಿ, ಕಣ್ಣಿನ ಬಿಸಿನೀರನ್ನು ಭೂಮಿಗೆ ಸುರಿಸುವ ದುಃಖಿನಿಯನ್ನು ಕಂಡು ನಾಚದೆ, ಮತ್ತೆ ಮಾತಿಗೆ ತೊಡಗಿದ

ಪುರುಷರ ನುಡಿ ಹೊರಡದ ಮುನ್ನ ಸ್ತ್ರೀಯರು
ಹರುಷದಿಂ ಮೇಲ್ಬೀಳುವರು
ವರುಷಾರುತಿಂಗಳು ನನ್ನ ನೀನಂಗೀ
ಕರಿಸಬೇಕೆಂದು ಪೇಳಿದನು ೧೫

ಗಂಡಸರ ಮಾತು ಹೊರಕ್ಕೆ ಬರದ ಮೊದಲೇ ಹೆಂಗಸರು ಹರ್ಷದಿಂದ ಮೇಲೆ ಬೀಳುತ್ತಾರೆ. ವರ್ಷವೊ ಆರ್ಧ ವರ್ಷವೋ ನನ್ನನ್ನು ಅಂಗೀಕರಿಸಬೇಕೆಂದು ಹೇಳಿದನು.

ಮುಖಪರಿಚಯವಿಲ್ಲದೆ ಮಾತಾಡಿದರೇನು
ಸಕಲ ಕಲಾಭಿಜ್ಞೆ ನೀನು
ಮಕರಧ್ವಜನುಪಟಳಕೆನ್ನನೋಪ್ಪಿಸೀ ಪರಿ
ವಿಕಳನ ಮಾಡಲೇಕೆಂದ ೧೬

ಮುಖ ಪರಿಚಯವಿಲ್ಲದೆ ನೇರವಾಗಿ ಇಂಥ ಮಾತಾಡಿದರೇನು? ಸಕಲ ಕಲೆಗಳ ಅಭಿರುಚಿಯ ಅರಿವುಳ್ಳವಳು ನೀನು, ಮನ್ಮಥನ ಉಪಟಳಕ್ಕೆ ಸಿಕ್ಕಿಸಿ ಈ ರೀತಿ ನನ್ನನ್ನು ಊನಗೊಳಿಸಬೇಡ.

ಏಣನಿಭಾಯತೇಕ್ಷಣೆ ಮಾತನಾಡದೆ
ಮಾಣಿಸಿರಲಸುರೇಶ ತನ್ನ
ಪ್ರಾಣವಲ್ಲಭೆಯನಾಕ್ಷಣದಿ ಕರೆಸಿ ಪೂ
ಬಾಣನರಸಿಯ ತೋರಿಸಿದ ೧೭

ಜಿಂಕೆ ಸದೃಶ ಕಣ್ಣಿನ ಕಮನೀಯ ಸುಂದರಿ ಮಾತಾಡದೆ ನಿಲ್ಲಿಸಿರುವುದರಿಂದ ಅಸುರೇಶ ತನ್ನ ಪ್ರಾಣವಲ್ಲಭೆಯನ್ನು ಆಕ್ಷಣ ಕರೆಸಿ, ಹೂಬಾಣನರಸಿಯ (ಮನ್ಮಥನ ರಾಣಿ ರತಿಯನ್ನು)ನ್ನು ತೋರಿಸಿದ.

ಬಟ್ಟ ಕುಚಾನ್ವಿತೆಯೊಡಲ ಸಂತಾಪವ
ತಟ್ಟನೆ ತರಿದು ಕುಸ್ತರಿಸಿ
ನೆಟ್ಟನೆ ತನಗೀಡು ಮಾಡೆಂದು ಕೈಯೆಡೆ
ಗೊಟ್ಟ ಕುರಂಗಲೋಚನೆಯ ೧೮

ದುಂಡು ಕುಚಗಳ ಮೋಹಕ ಚೆಲುವೆಯ ಸಂತಾಪವನ್ನು ಪರಿಹರಿಸಿ, ಸಮಾಧಾನಗೊಳಿಸಿ, ನೇರವಾಗಿ ನನ್ನ ವಶವಾಗುವಂತೆ ಮಾಡೆಂದು, ಜಿಂಕೆಗಣ್ಣಿನವಳನ್ನು ಹೆಂಡತಿಯ ವಶಕ್ಕೆ ಒಪ್ಪಿಸಿದ.

ಮಡದಿ ಮನೋನಾಥನ ವಾಕ್ಯವ ಮೀರದೆ
ಒಡಗೊಂಡು ಬಂದಳಾಲಯಕೆ
ಸಡಗರದಿಂದುಪಚರಿಸುತ ಮೆಲ್ಲನೆ ವಶ
ಪಡೆದಳಾ ರತಿಯ ಚಿತ್ತವನು ೧೯

ಗಂಡನ ಮಾತನ್ನು ಮೀರದೆ ಹೆಂಡತಿ ಆಗಂತುಕ ಹೆಣ್ಣನ್ನು ಒಡಗೊಂಡು

ಮನೆಗೆ ಬಂದು, ಸಂಭ್ರಮದಿಂದ ಉಪಚರಿಸುತ್ತ ಆಕೆಯ ಮನಸ್ಸನ್ನು ವಶಪಡಿಸಿಕೊಂಡಳು.

ಸಾಸಿರ ಪರಿಯ ಬೋಧೆಯ ಮಾತ ಕರ್ಣದೊಳು
ಸೂಸಿ ಮಜ್ಜನ ಭುಕ್ತಿಗೆಯ್ಸಿ
ಆ ಸತಿ ಬೆಸಗೊಳಲುಸಿರ್ದಳು ವರ ರತಿ
ದೇಸಿಗತನದ ಸುದ್ದಿಯನು ೨೦

ಸಾವಿರಾರು ಬಗೆಯ ಬುದ್ಧಿವಾದದ ಮಾತುಗಳನ್ನು ಹೇಳುತ್ತಾ, ಸ್ನಾನ ಊಟಗಳನ್ನು ಮಾಡಿಸಿ, ವಿನಯದಿಂದ ವಿಚಾರಿಸಿಕೊಳ್ಳಲು, ಆಗ ರತಿ ತನ್ನ ಪರದೇಸಿತನವನ್ನು ಹೇಳಿದಳು.

ಹರನುರಿಗಣ್ಣಲೆನ್ನಾಳ್ದ ದೇಹವ ಬಿಟ್ಟ
ವಿರಹದಿ ದೇಶಾಂತರಕೆ
ಪರವಶದಲಿ ಪರಿದು ಬಂದೆ ನಾನಿನ್ನೂ
ಸ್ಮರನ ಶರಣೆಯೆಂದಳವಳು ೨೧

ಶಿವನು ಉರಿಗಣ್ಣಲ್ಲಿ ಎನ್ನ ಗಂಡ ದಗ್ಧನಾದ ಮೇಲೆ, ವಿರಹವನ್ನು ಸಹಿಸಲಾರದೆ ದೇಶಾಂತರಕ್ಕೆ ಪರವಶದಲ್ಲಿ ಬಂದೆ, ನಾನಿನ್ನೂ ಮನ್ಮಥನ ಶರಣೆ ಎಂದಳು.

ಸತ್ತವರೊಡನೆ ಸಾವವರುಂಟೆ ಮಗುಳೊಂದು
ಚಿತ್ತೈಸುವೊಡೊಕ್ಕತನವ
ವೃತ್ತಕುಚಾನ್ವಿತೆ ನಿನಗೆ ತನ್ನಾಳ್ದನಂ
ಇತ್ತಪೆನೆಂದಳಾ ಕಾಂತೆ ೨೨

ಸತ್ತವರೊಡನೆ ಸಾಯುವವರುಂಟೆ? ಮತ್ತೊಂದು ದಾಂಪತ್ಯ ಜೀವನವನ್ನು ಬಯಸುವುದಾದರೆ, ದುಂಡು ಮೊಲೆಗಳ ಮೋಹಕ ಹೆಣ್ಣೆ, ನಿನಗೆ ನನ್ನ ಗಂಡನನ್ನೆ ಕೊಡುವೆನು ಎಂದಳು.

ನಾರಾಯಣ, ಕೃಷ್ಣ, ಗೋವಿಂದ ಬಹಳಪ
ಚಾರದ ಮಾತ ಕೇಳಿದನು

ಆರಾದೊಡಂ ಹದಿಬದೆಯರಿಗನುಭೋಗ
ಬೇರುಂಟೆ ಮತ್ತೊಬ್ಬರೊಡನೆ ೨೩

ನಾರಾಯಣ, ಕೃಷ್ಣ, ಗೋವಿಂದ ಬಹಳ ಅಪಚಾರದ ಮಾತುಗಳನ್ನು ಕೇಳಿದೆನು. ಯಾವುದೇ ಪತಿವ್ರತೆಗೆ ಮತ್ತೆ ಇನ್ನೊಬ್ಬರೊಡನೆ ಅನುಭೋಗ ಉಂಟೆ? ಎಂದಳು ರತಿ

ಮೀನಾಂಕ ಮೃತಿಯೈದ ಮೇಲೆ ನನ್ನಮ್ಮ
ನೀನಾರಿಗೊಗೆತನ ಗೈವೆ
ನಾನಾ ಕಲೆವಂತನೆನ್ನಯ ಪುರುಷ ನಿ
ಧಾನವ ನೋಡೆಂದಳೊಲಿದು ೨೪

ಮನ್ಮಥ ಮೃತನಾದ ಮೇಲೆ ನೀನು ಯಾರೊಡನೆ ಸಂಸಾರ ಮಾಡುವೆ? ನನ್ನ ಗಂಡ ನಾನಾ ಕಲೆಗಳ ಕಲಾವಿದ, ಅವನೊಡನೆ ಒಲಿದು ಬಾಳು ಎಂದಳು ಶಂಬಾಸುರನ ಪತ್ನಿ

ನಿನ್ನ ಮೇಲಣ ಭ್ರಾಂತು ಬಲಿದು ನಿಶಾಚರ
ರನ್ನ ಸಂತಾಪಿಸುತಿಹನು
ಎನ್ನ ಮೆದುನುಡಿಯ ನಿವಾರಿಸಬೇಡೆಂದು
ಬಿನ್ನಹಗೈದಳು ರತಿಗೆ ೨೫

ನಿನ್ನ ಮೇಲಿನ ಭ್ರಾಂತಿಯಿಂದ ನನ್ನ ಗಂಡ ಸಂತಾಪದಿಂದ ಬಳಲುತ್ತಿದ್ದಾನೆ. ನನ್ನ ಮೃದು ಮಾತುಗಳನ್ನು ತೆಗೆದುಹಾಕಬೇಡ ಎಂದು ವಿನಂತಿಸಿದಳು ರತಿಗೆ

ವಾಮಲೋಚನೆ ಕೇಳು ಜಗವ ಮೋಹಿಸುವ
ಕಾಮನ ತೆಕ್ಕೆಗೊಂಡಿದ್ದ
ಕೋಮಲತರ ಬಾಹುಗಳಿಂದ ಪುರುಷ ವಿ
ರಾಮದೇಹವ ಮುಟ್ಟಬಹುದೆ ೨೬

ಸುಂದರಾಕ್ಷಿ ಕೇಳು, ಜಗಮೋಹನನಾದ ಕಾಮನ ತಬ್ಬಿಕೊಂಡಿದ್ದ ಕೋಮಲ ತೋಳುಗಳಿಂದ, ನಿಜಪತಿಯಲ್ಲದವನ ದೇಹವನ್ನು ಮುಟ್ಟಬಹುದೆ? ಎಂದಳು ರತಿ

ಜಡಜ ಕುಟ್ಮಲ ಕುಚಾನ್ವಿತೆ ನಿನ್ನ ಕಂಡಡೆ
ಬಿಡಲಾರ್ಪರೆ ಗಂಡಸರು

ಒಡಬಡದಿರೆ ಬಲುಹಿಂದಲಿ ಮತ್ಕಾಂತ
ತುಡುಕದೆ ಮಾಣ ಕೇಳ್ಮಗಳೆ ೨೭

ತಾವರೆ ಮೊಗ್ಗಿನ ಮೊಲೆಯವಳೆ, ನಿನ್ನ ಕಂಡರೆ ಗಂಡಸರು ಬಿಡುವರೆ? ನೀನು ಒಪ್ಪದಿದ್ದರೆ ನನ್ನ ಗಂಡ ಬಲಾತ್ಕಾರದಿಂದ ನಿನ್ನನ್ನು ಹಿಡಿದು ಹಿಂಡದೆ ಇರಲಾರನು.

ಅಗ್ಗಿಗಣ್ಣಾತ ಕಾಮನ ಸುಟ್ಟು ಮನಸಿಜ
ವಿಗ್ಗರವನು ಮಾಡಿಕೊಟ್ಟ
ನಿಗ್ಗರದಿಂದ ತೋಳ್ವಿಡಿದೊಡೆ ಶಾಪಿಸಿ
ನುಗ್ಗ ಮಾಡುವೆ ನಿಮಿಷದಲಿ ೨೮

ಕೆಂಡಗಣ್ಣ ಶಿವ ಕಾಮನನ್ನೂ ಸುಟ್ಟು ನನಗೆ ಮನಸಿಜ ವಿಗ್ರಹವನ್ನು ಮಾಡಿಕೊಟ್ಟ. ಯಾರಾದರೂ ನನ್ನನ್ನು ನಿಗ್ಗರ(ನಿಗ್ರಹ=ಬಲಾತ್ಕಾರ) ಮಾಡಿದರೆ ಶಪಿಸಿ ಅವರನ್ನು ನುಗ್ಗುನುರಿ ಮಾಡುವೆನು ನಿಮಿಷದಲ್ಲಿ ಎಂದು ಹೇಳಿದಳು ರತಿ.

ಹರಣವ ಬಿಡುವುದೇನರಿದಲ್ಲ ಪೆಣ್ಗೆ ದು
ರ್ಮರಣ ಹೊಲ್ಲೆಹ ಕೇಳಿಬಲ್ಲೆ
ಕರಣವಿಕಾರ ಬೇಡೆಂದು ಪೇಳು ನಿನ್ನ
ಹರಣದೊಲ್ಲಭಗೆಂದಳಳುತ ೨೯

ಪ್ರಾಣ ಬಿಡುವುದು ಅಸಾಧ್ಯವಲ್ಲ. ಹೆಣ್ಣಿಗೆ ದುರ್ಮರಣ ಕೆಟ್ಟದ್ದು ಎಂದು ಕೇಳಬಲ್ಲೆ. ನಿನ್ನ ಪ್ರಾಣವಲ್ಲಭನಿಗೆ ಇಂದ್ರಿಯ ವಿಕಾರ ಬೇಡವೆಂದು ಹೇಳು ಎಂದಳು ದುಃಖಿಸುತ್ತ.

ತೊಡೆದಳು ರತಿಯ ನೇತ್ರಾಂಬುವನುಗುರಿಂದ
ಮಿಡಿದಳು ತಾನು ಕಣ್ಣೀರ
ಪಿಡಿದು ಗಲ್ಲವನು ಮುದ್ದಿಸಿ ಮುದವೆತ್ತು
ನುಡಿದಳು ಖಳರಾಯನರಸಿ ೩೦

ರತಿಯ ಕಣ್ಣೀರನ್ನು ಉಗುರಿನಿಂದ ತೊಡೆದಳು, ಹಾಗೆಯೇ ತಾನು ಕಣ್ಣೀರನ್ನು ಮಿಡಿದಳು. ರತಿಯ ಗಲ್ಲವನ್ನು ಹಿಡಿದು ಮುದ್ದಿಸಿ ಮುದದಿಂದ ನುಡಿದಳು ರಕ್ಕಸನ ರಾಣಿ

ಲೋಕೇಶ್ವರನೆಂಬ ಪಾಪಿಷ್ಠ ಹೆಂಗಳ
ನೇಕೆ ನಿರ್ಮಿತವ ಮಾಡಿದನೊ
ಸಾಕೀ ಪೆಣ್ಜನ್ಮವೇತಕೆ ಸುಡಲೆಂದು
ಆಕೆ ಪೇಳ್ದಳು ದುಃಖದಲಿ ೩೧

ಹಾಳು ಬ್ರಹ್ಮ ಹೆಣ್ಣುಗಳನ್ನೇಕೆ ನಿರ್ಮಿಸಿದನೋ? ಸಾಕು, ಈ ಹೆಣ್ಣು ಜನ್ಮವೇತಕ್ಕೆ ಸುಡಲಿ ಎಂದು ಅಳುತ್ತಾ ಹೇಳಿದಳು ರತಿದೇವಿ.

ಚಿಂತಾತುರ ಬೇಡವಬುಜಾಕ್ಷಿ ನಿನ್ನ ವೃ
ತ್ತಾಂತವ ಖಳರಾಯಗರುಹಿ
ಮುಂತಾವ ತೊಡಕಿಲ್ಲದಂತೆಸುಗವೆನೆಂದು
ಕಾಂತನ ಹೊರೆಗೈದಿದಳು ೩೨

ಕಮಲಾಕ್ಷಿ ಚಿಂತಾತುರ ಬೇಡ, ನಿನ್ನ ಇತಿವೃತ್ತವನ್ನು ನನ್ನ ಗಂಡನಿಗೆ ತಿಳಿಸಿ, ಮುಂದೆ ಯಾವ ತೊಡಕು ನಿನಗೆ ಅಡ್ಡ ಬರದಂತೆ ಮಾಡುವೆನು ಎಂದು ಕಾಂತನ ಬಳಿಗೆ ಕರೆದೊಯ್ದಳು.

ಬಂದಳೆ ಭಾಮಿನಿರನ್ನೆ ನಿನ್ನೊಳಗೇ
ನೆಂದಳು ಬಿರುನುಡಿಗೇಳ್ದು
ನೊಂದಳೆ ಪತಿಭಕ್ತಿಯೆಂಬ ಕೂರಸಿಯಿಂದ
ಕೊಂದಳೆ ಹೇಳೆಂದು ನುಡಿದ ೩೩

ಬಂದಳೆ ಭಾಮಿನಿ ರನ್ನೆ, ನಿನ್ನೊಡನೆ ಏನೆಂದಳು? ಬಿರುನುಡಿ ಕೇಳಿ ನೊಂದಳೆ? ಪತಿಭಕ್ತಿಯೆಂಬ ಹರಿತವಾದ ಕತ್ತಿಯಿಂದ ಕೊಂದಳೆ? ಹೇಳು ಎಂದು ಹೆಂಡತಿಯನ್ನು ಪ್ರಶ್ನಿಸಿದ.

ಬಯ್ದಳೆ ಭಾಷ್ಕಳನೆಂದು ಕಣ್ಣೀರಿಂದ
ತೊಯ್ದಳೆ ಕಾಂತನ ನೆನೆದು
ಹೊಯ್ದಳೆ ನೆಲನ ಶಾಪಿಸಿ ನನ್ನಕೊರಳನು
ಕೊಯ್ದಳೆ ಪೇಳೆಂದು ನುಡಿದ ೩೪

ನನ್ನನ್ನು ಅಸಂಬದ್ಧ ಮಾತುಗಾರ ಎಂದು ಬಯ್ದಳೆ?ಗಂಡನನ್ನು ನೆನೆದು ಕಣ್ಣೀರಿಂದ ತೊಯ್ದಳೆ? ನೆಲವನ್ನು ಶಪಿಸಿದಳೆ? ನನ್ನ ಕೊರಳನ್ನು ಕೊಯ್ದಳೆ? ಹೇಳೆಂದು ಕೇಳಿದ.

ಕಂಡವರುಗಳು ದೂಷಣವ ಮಾಳ್ಪರು ಭ್ರಮೆ
ಗೊಂಡಾಡುವ ಮಾತ ಬಿಸುಡು
ಚಂಡ ವಿಕ್ರಮ ಧೈರ್ಯವನಾಂತುಕೊ ಎಂದು
ಗಂಡನನೊಡಂಬಡಿಸಿದಳು ೩೫

ಅನ್ಯರು ದೂಷಣೆ ಮಾಡುವರು. ಭ್ರಮೆಗೊಂಡು ಆಡುವ ಮಾತುಗಳನ್ನು ಬಿಸಾಡು. ಪ್ರಚಂಡ ವೀರ(ವಿಕ್ರಮ=ಧೀರ) ಧೈರ್ಯವನ್ನು ಬಿಡದೆ ಅಪ್ಪಿಕೊ ಎಂದು ಗಂಡನನ್ನು ಒಡಂಬಡಿಸಿದಳು.

ರಾಯ ನೀನಾರ ಬುತ್ತಿಗೆ ಚಿಟ್ಟುಲೊಟ್ಟೆ
ಕಾಯ ಕೊಯ್ವೆ ಕೇಳು ಕುಸುಮ
ಸಾಯಕನರ್ಧಾಂಗಿಯ ರೂಪ ಕಂಡು ವೃ
ಥಾಯ ದುಕ್ಕವ ಮಾಡದಿರು ೩೬

ಯಾರ ಬುತ್ತಿಗೋಸ್ಕರವಾಗಿ ನೀನು ಚಿಟ್ಟುಲೊಟ್ಟೆ ಕಾಯನ್ನು ಕೊಯ್ಯುವೆ? ಮನ್ಮಥನ ಪತ್ನಿಯ ರೂಪ ಕಂಡು ವೃಥಾ ದುಕ್ಕಿಸದಿರು.

ಮನದನ್ನ ಮದ್ವಾಕ್ಯವ ಕೇಳದೆ ಮೂರ್ಖ
ತನದಿಂದ ಪಿಡಿದರಾ ನೀರೆ
ಘನಶಾಪವ ಕೊಟ್ಟು ಕ್ಷಣದಲಿ ಭೂಮಿ ಭಾ
ಜನ ಮಾಳ್ಪಳು ಜೀಯ ನಿಮ್ಮ ೩೭

ನನ್ನ ಮಾತನ್ನು ಕೇಳದಿದ್ದರೆ, ಮೂರ್ಖತನದಿಂದ ಆಕೆಯನ್ನು ಬಲವಂತವಾಗಿ ಅಪ್ಪಿಕೊಂಡರೆ ಅವಳು ಶಾಪಕೊಟ್ಟು ಕ್ಷಣದಲ್ಲಿ ನಿನ್ನನ್ನು ಮಣ್ಣುಪಾಲು ಮಾಡುವಳು.

ಮಂಡಲದೊಳು ಹದಿಬದೆಯ ಸಂಗವ ಮಾಡಿ
ಭಂಡನಾದ ವಜ್ರಿಯ ನೋಡು
ಗಂಡನುಳ್ಳವಳಾಸೆ ಬೇಡೆಂದು ಬೇಡಿ
ಕೊಂಡೆರಗಿದಳು ವಲ್ಲಭಗೆ ೩೮

ಭೂಮಂಡಲದಲ್ಲಿ ಪತಿವ್ರತೆಯ ಸಂಗವ ಮಾಡಿ ಮೈಯೆಲ್ಲ ತತಾತೂತಾದ ಇಂದ್ರನ ಅವಸ್ಥೆ ನೋಡು. ಗಂಡನುಳ್ಳವಳ ಆಸೆ ಬೇಡವೆಂಡು ಗಂಡನ ಕಾಲು ಕಟ್ಟಿಕೊಂಡಳು.

ಮತ್ತೇಭಗಮನೆ ಕೇಳು ನಿನಗಿಂತ ಚೆಲುವು
ವೆತ್ತ ಉತ್ತಮ ಸ್ತ್ರೀಯುಂಟೆ
ಚಿತ್ತಜನರ್ಧಾಂಗಿ ನಿನ್ನರಮನೆಯಲ್ಲಿ
ತೊತ್ತಾಗಿರಲೆಂದು ನುಡಿದ ೩೯

ಆಗ ಶಂಬರಾಸುರ ತನ್ನ ಪತ್ನಿಗೆ 'ನಿನಗಿಂತ ಚೆಲುವೆಯುಂಟೆ? ಮನ್ಮಥನ ಪತ್ನಿ ನಿನ್ನರಮನೆಯಲ್ಲಿ ತೊತ್ತಾಗಿರಲಿ'ಎಂದು ಹೇಳಿದನು.

ಆರಡಿಗುರುಳ ಮಾನಿನಿ ಕೇಳು ಕರ್ವಿಲ್ಲು
ಗಾರನ ರಾಣಿ ರಕ್ಕಸನ
ನೀರೆಯ ಮನೆಯ ತೊತ್ತಾದಳು ಪ್ರಾಪ್ತಿಯ
ಮೀರಲಾರಿಗು ಅಳವಲ್ಲ ೪೦

ದುಂಬಿಗಳುರುಳ ಮನದನ್ನೆ ಕೇಳು, ಮನ್ಮಥನ ಪತ್ನಿ ರಕ್ಕಸನ ರಾಣಿವಾಸದ ತೊತ್ತಾದಳು. ಪ್ರಾಪ್ತಿಯನ್ನೂ (ವಿಧಿ ಬರೆಹವನ್ನು) ಮೀರಲು ಯಾರಿಗೂ ಸಾಧ್ಯವಿಲ್ಲ ಎಂದೂ ಕನಕ ತನ್ನ ಪತ್ನಿ ಸುಜ್ಞಾನ ವಧೂಟಿಗೆ ಹೇಳಿದನು.

ಇನಿಯನ ವರವಾಕ್ಯವ ಕೇಳ್ದು ಮಾನಿನಿ
ನನಗೆಗೋಲನರ್ಧಾಂಗನೆಗೆ
ಮೊನೆದೋರದೆ ಮೃದುವಾಕ್ಯದಿಂದಡಿಗೆಯ
ಮನೆಗೆಲಸಕೆ ಸಾರ್ಚಿದಳು ೪೧

ಶಂಬರಾಸುರನ ಮಾತಿನಂತೆ ಅವನ ಪತ್ನಿ ಮನ್ಮಥನ ಮಡದಿಗೆ ಮೃದು ಮಾತುಗಳಿಂದ ಅಡಿಗೆಮನೆಯ ಕೆಲಸಕ್ಕೆ ನೇಮಿಸಿದಳು.

ಕೆತ್ತಿದ ರತ್ನಾಭರಣಭೂಷಿತ ಬೋನ
ಗಿತ್ತಿಯರ್ಸುವ್ವಾರಿಗಳಿಗೆ
ಉತ್ತುಂಗದಧಿಕಾರದಿ ನೀನಿರ್ಪುದೆಂದು ಕೈ
ಯೆತ್ತಿ ಕೊಟ್ಟಳಾಯಕಗೆ ೪೨

ರತ್ನಾಭರಣಭೂಷಿತ ಬೋನಗಿತ್ತಿ ಸುವ್ವಾರಿಗಳಿಗೆ ಮೇಲಧಿಕಾರಿಯಾಗಿ ನೀನಿರು ಎಂದು ರತಿದೇವಿಗೆ ಉನ್ನತ ಅಧಿಕಾರ ಕೊಟ್ಟಳು.

ವಾಸಿಯೊಳು ತನ್ನನೊಲ್ಲದ ರತಿದೇವಿಯ
ದಾಸಿಯನು ಮಾಡಿದೆನೆಂಬ
ಭಾಷಿತ ಮಹದೈಶರ್ಯದಿ ಮದನ ಪತ್ನಿ
ದ್ವೇಷಿ ಮಂದಿರದೊಳೊಪ್ಪಿದನು ೪೩

ಸ್ಪರ್ಧೆಯಲ್ಲಿ ನನ್ನನ್ನು ಒಲ್ಲದ ರತಿದೇವಿಯನ್ನು ದಾಸಿ ಮಾಡಿದೆನೆಂಬ ಮಾತಿನ ಮಹದೈಶ್ವರ್ಯದಲ್ಲಿ ಮದನ ಪತ್ನಿ ದ್ವೇಷಿ ಮಂದಿರದಲ್ಲಿ ರಾಜಿಸಿದನು.

ವರಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೪

'ವರ ಮೋಹನ ತರಂಗಿಣಿ' ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

# ೧೧. ಮಾರಜನನ

ಸೌಂದರ್ಯಮಯ ಸುರಾರ್ಚಿತ ಪಾದಪದ್ಮ ಗೋ
ವಿಂದ ಗೋವರ್ಧನೋದ್ಧರಣ
ಎಂದನವರತ ಕೀರ್ತಿಸುವ ನಾಲಗೆಯಿಂದ
ಮುಂದಣ ಕೃತಿವೇಳು ಮುದದಿ ೧

'ಸುರಾರ್ಚಿತ ಪಾದಪದ್ಮ ಗೋವಿಂದ' ಎಂದು ಸದಾ ಕೀರ್ತಿಸುವ ಪವಿತ್ರ ನಾಲಗೆಯಿಂದ ಮುಂದಿನ ಕಥೆಯನ್ನು ಮುಂದುವರಿಸು ಎಂದು ಸುಜ್ಞಾನ ವಧೂಟಿ ಕೇಳಿದಳು.

ಬಾಳೆನ್ನ ಭಾಗ್ಯದ ನಿಧಿಯೆಂದೆನಿಪ ಸು
ಥಾಳ ಬಲ್ಮೊಲೆವೆತ್ತ ನೀರೆ
ಕೇಳಲಾಲಸ್ಯವಿಲ್ಲದ ನಿನ್ನ ಕಿವಿಗೆ ಸ
ಮ್ಮೇಳವ ಮಾಳ್ಪೆ ಸತ್ಕೃತಿಯ ೨

ಎನ್ನ ಭಾಗ್ಯದ ನಿಧಿಯೆ, ಆಕರ್ಷಕ ವಕ್ಷಸ್ಥಲದ ಲಕ್ಷ್ಮಿಯೆ, ಇನಿತೂ ಆಲಸ್ಯವಿಲ್ಲದ ನಿನ್ನ ಕಿವಿಗೆ ಸತ್ಕೃತಿಯ ಸವಿರುಚಿಯನ್ನು ತುಂಬುವೆನು ಎಂದು ಕನಕ ಹೇಳಿದನು.

ಇನಿವಿಲ್ಲನರ್ಧಂಗಿಯ ಕೋಳುವಿಡಿದ ಬೂ
ವನಿತೆಯ ವರನೋಲಗದಿ
ದನಿಗೆಯ್ವ ಗೀತ ವಾದ್ಯವ ಕೇಳಿ ನಾರದ
ಮುನಿ ಮಾರಾಯ ಬಂದಿಳಿದ ೩

ಮನ್ಮಥನ ಪತ್ನಿಯನ್ನು ಕೈಸೆರೆ ಹಿಡಿದ ರಾಜನ ಆಸ್ಥಾನದಲ್ಲಿ ಗೀತ ವಾದ್ಯಗಳು ಧ್ವನಿ ಮಾಡುವುದನ್ನು ಕೇಳಿ ನಾರದ ಮುನಿ ಬಂದು ಇಳಿದನು.

ಚಂದ್ರನಂತೆ ಚಂದ್ರಶೇಖರನಂತೆ ಮೃ
ಗೇಂದ್ರನಂತಹಿರಾಜನಂತೆ

ಇಂದ್ರನೈರಾವತದಂತೆ ನಾರದ ಮು
ನೀಂದ್ರ ಶಂಬರನ ಕಣ್ಗೆಸೆದ ೪

ಚಂದ್ರನಂತೆ, ಚಂದ್ರಶೇಖರನಂತೆ, ಸಿಂಹದಂತೆ, ಆದಿಶೇಷನಂತೆ, ಇಂದ್ರನ ಐರಾವತದಂತೆ ನಾರದ ಮುನಿ ಶಂಬರಾಸುರನ ಕಣ್ಣಿಗೆ ತೋರಿದ.

ಶಂಬರಾಸುರ ನಾರದನ ಕಂಡೆದ್ದು ಪಾ
ದಾಂಬೋರುಹಕೆ ವಂದಿಸುತ
ಮುಂಬರಿದರ್ಘ್ಯಪಾದ್ಯವನಿತ್ತು ರತ್ನ ಕ
ದಂಬವಿಷ್ಟರವನೇರಿಸಿದ ೫

ಶಂಬರಾಸುರನು ನಾರದನನ್ನು ಕಂಡು ಮೇಲೆದ್ದು, ನಾರದನ ಪಾದಕಮಲಕ್ಕೆ ವಂದಿಸಿ ಬಳಿಕ ಅರ್ಘ್ಯ(ಕೈತೊಳೆಯುವ ನೀರು)ವನ್ನೂ, ಪಾದ್ಯ(ಪಾದ ತೊಳೆಯುವ ನೀರು)ವನ್ನೂ ಕೊಟ್ಟು ರತ್ನನಿಬಿಡ ಸಿಂಹಾಸನವನ್ನೇರಿಸಿದನು.

ಪರಮ ಮುನೀಂದ್ರ ಗದ್ದುಗೆಗೊಳಲಸುರೇ
ಶ್ವರ ತನ್ನ ಪೀಠದಿ ಕುಳಿತು
ಕರಮುಕುಳಿತನಾಗಿ ಕೇಳಿದ ನೀ ಬಂದ
ಬರವದೇನೆಂದ ನಗುತ ೬

ನಾರದ ಮುನಿ ಗದ್ದುಗೆ ಮೇಲೆ ಕೂತ ಮೇಲೆ ಅಸುರೇಂದ್ರ ತಾನೂ ತನ್ನ ಪೀಠದಲ್ಲಿ ಕುಳಿತು, ನೀವು ಬಂದ ಉದ್ದೇಶವೇನು ಎಂದು ಕೈಮುಗಿದು ಕೇಳಿದ.

ರಕ್ಕಸರೆಂದು ಮಾತ್ರವಲ್ಲದೆ ನಮ್ಮ
ಮಕ್ಕಳಾಗಿರುವಿರಿ ನೀವು
ಕಕ್ಕಸದಿಂದೊಂದು ಬವರ ಬಂದಡಸಿತು
ಒಕ್ಕಣಿಸಲು ಬಂದೆ ನಿನಗೆ ೭

ಆಗ ನಾರದ 'ನೀವು ರಾಕ್ಷಸರಾದರೂ ನಮ್ಮ ಮಕ್ಕಳು ಇದ್ದ ಹಾಗೆ, ಕರ್ಕಶವಾದ ಒಂದು ಯುದ್ಧ ಬಂದು ಮೇಲ್ಬೀಳಲು ಕಾಯುತ್ತಿದೆ. ಅದನ್ನು ನಿನಗೆ ಒಕ್ಕಣಿಸಲು ಬಂದೆ' ಎಂದನು.

ಸುಟ್ಟನೀಶ್ವರ ಕಣ್ಗಿಚ್ಚಿಂದ ಕಾಮನ
ಪಟ್ಟದ ರಾಣಿ ದುಕ್ಕದಲಿ
ನೆಟ್ಟನೆ ದೇಶಾಂತರವೈತರಲಾಗಿ
ದಿಟ್ಟ ನೀ ಕೋಳ್ಗೊಳಬಹುದೆ ೮

ಈಶ್ವರನ ಕಿಡಿಗಣ್ಣಿಗೆ ಬಲಿಯಾದ ಮನ್ಮಥನ ರಾಣಿ ದುಕ್ಕದಲಿ ದೇಶಾಂತರ ಬಂದಾಗ ಆಕೆಯನ್ನು ನೀನು ಕೈಸೆರೆ ಹಿಡಿಯಬಹುದೆ?

ರಾಣಿಯ ಕೈದುಡುಕಿದನ ಕೊಲ್ಲಲು ಚಕ್ರ
ಪಾಣಿಯ ಪ್ರಾರ್ಥನೆಗೈದು
ಕ್ಷೋಣಿಯೊಳೊಡಲ ಪಿಡಿದು ಬಂದ ಪೆಣ್ಮಂಡೆ
ಮಾಣಿಕ ಹರಿವಧೂಟಿಯಲಿ ೯

ರತಿಯ ಮೈಮೇಲೆ ಕೈಹಾಕಿದವನನ್ನು ಕೊಲ್ಲಲು ಕೃಷ್ಣನನ್ನು ಪ್ರಾರ್ಥಿಸಿ, ಭೂಮಿಯಲ್ಲಿ ಜೀವ ಹಿಡಿದು ಬಂದಿದ್ದಾನೆ, ಸ್ತ್ರೀರತ್ನ ಕೃಷ್ಣನ ಮಡದಿಯಲ್ಲಿ.

ಮುಗುಳಂಬನೊಡಲ ಬೇಡಿದಳು ರುಕ್ಮಿಣಿಯು
ಮಗನಾಗಬೇಕೆನಲೊಡನೆ
ಅಗಧರ ಕೊಟ್ಟನಿರ್ವರಿಗೊಂದು ವರವ ಕೇಳ್
ಜಗದೊಳಗಾಶ್ಚರ್ಯವಾಯ್ತು ೧೦

ರುಕ್ಮಿಣಿ ತನಗೊಬ್ಬ ಮಗನಾಗಬೇಕು ಎಂದು ಗಂಡನನ್ನು ಆಗ್ರಹಿಸಿದಾಗ ಗೋವರ್ಧನಗಿರಿಧಾರಿ ಕೃಷ್ಣ ಇಬ್ಬರಿಗೂ ಒಂದು ವರವನ್ನು ಕೊಟ್ಟನು– ಲೋಕಕ್ಕೆ ಆಶ್ಚರ್ಯವಾಗುವಂತೆ.

ಕಂಜ ಳಾಯತಾಕ್ಷನ ಮಗನಾದ ಮೇ
ಲಂಜ ಮತ್ತಿನ್ನೊರ್ವರಿಗೆ
ರಂಜಕ ಬೇಡ ಮನ್ಮಥ ಕೊಲ್ಲುವ ಧನು
ನಂಜಯಾಂಬಕನಾಣೆ ನಿನ್ನ ೧೧

ಕಮಲಾಕ್ಷನ ಮಗನಾದ ಮೇಲೆ ಮನ್ಮಥ ಯಾರಿಗೂ ಹೆದರನು. ಕೆಂಡಗಣ್ಣಿನ ಶಿವನಾಣೆ ಮನ್ಮಥ ನಿನ್ನನ್ನು ಕೊಲ್ಲುವನು.

ಬಳೆಯಗುಡದೆ ತನಗಹಿತರಾದವರನು
ಮೊಳೆಯೊಳೆ ಮುರುಟಿಸಬೇಕು
ಇಳೆಯಾಳ್ವ ರಾಯರಾಯತವಿದು ನಿನ್ನ ತಿಳಿ
ವಳಿಕೆಯದೇನೊ ನಾನರಿಯೆ ೧೨

ತನಗೆ ಅಹಿತರಾದವರು ಬೆಳೆಯಲು ಅವಕಾಶ ಕೊಡದೆ ಮೊಳಕೆಯಲ್ಲೇ ಚಿವುಟಿ ಹಾಕಬೇಕು, ಭೂಮಿಯನ್ನು ಆಳುವ ಎಲ್ಲ ರಾಜರ ಉಚಿತವಾದ ಕ್ರಮವಿದು. ನಿನ್ನ ತಿಳಿವಳಿಕೆಯೇನೋ ನಾನರಿಯೆನು.

ಕಳಿಲೆಯ ನಖದಲಿ ಚಿವುಟಬಪ್ಪುದು ಮುಂದೆ
ಲಳಿಗೆ ಕೂರುಗುರಿಗಂಜುವುದೆ
ಉಳಿದ ಮಾತೇನು ಆಲಸ್ಯದಿಂದಮೃತವು
ಗಳಿಲನೆ ವಿಷವಾಗದಿಹುದೆ ೧೩

ಬಿದಿರ ಮೊಳಕೆಯನ್ನು ಉಗುರಿನಲ್ಲಿ ಚಿವುಟಿ ಹಾಕಬಹುದು, ಆದರೆ ಆದೇ ಬೆಳೆದು ಬಿದಿರಬೊಂಬಾದಾಗ ಹರಿತವಾದ ಉಗುರಿಗೆ ಅದು ಅಂಜುವುದೆ? ಉಳಿದ ಮಾತೇಕೆ, ಆಲಸ್ಯದಿಂದ ಅಮೃತವೂ ವಿಷವಾಗದಿರುವುದೆ?

ಗುರುವರ ದೇವ ನಾರದಮುನಿ ಪೇಳ್ದುದು
ಗುರುವಾಕ್ಯವೆಂದು ಕೈಕೊಂಡು
ಮರುತ ರೂಪಿಂದ ಕೃಷ್ಣನರಮನೆ ಹೊಕ್ಕು
ತರಳನ ತಂದು ಮರ್ದಿಸುವೆ ೧೪

ಗುರುವರ ದೇವ ನಾರದ ಮುನಿ ಹೇಳಿದ್ದು ಗುರುವಾಕ್ಯವೆಂದು ಭಾವಿಸಿ ಗಾಳಿರೂಪಿನಲ್ಲಿ ಕೃಷ್ಣನರಮನೆಯನ್ನು ಹೊಕ್ಕು ತರಳನನ್ನು ತಂದು ಮರ್ದಿಸುವೆನು ಎಂದು ಉತ್ತರಿಸಿದನು.

ಆಸುರ ಕರ್ಮವಿದಹುದೆಂದು ಪೇಳಿ ದೈ
ತ್ಯೇಶನ ಬೀಳ್ಕೊಂಡು ಮುದದಿ
ಕೇಶವ ನಾರಾಯಣ ಕೃಷ್ಣ ಎನುತಲಾ
ಕಾಶಕೆ ತೆರಳ್ದ ನಾರದನು ೧೫

ಭೀಕರ ಕಾರ್ಯವಿದೆಂದು ಹೇಳಿ, ರಕ್ಕಸನನ್ನು ಬೀಳ್ಕೊಂಡು, ಕೇಶವ, ನಾರಾಯಣ, ಕೃಷ್ಣ ಎನ್ನುತ್ತಾ ನಾರದನು ಆಕಾಶಗಾಮಿಯಾದನು.

ಗಗನದಿ ಬಪ್ಪ ನಾರದನ ಕಾಣುತ ಸೂರ್ಯ
ಭಗವಾನ ತನಗೊಬ್ಬರೊಡನೆ
ಜಗಳವ ಗಂಟಿಕ್ಕದೆ ಬಿಡನೆಂದಂಜಿ
ಹುಗಲೊಡರ್ಚಿದ ಪಡುಗಡಲ ೧೬

ಆಕಾಶದಲ್ಲಿ ಬರುವ ನಾರದನನ್ನು ಕಂಡು, ನನಗೊಬ್ಬರೊಡನೆ ಜಗಳವನ್ನು ಗಂಟಿಕ್ಕದೆ ಬಿಡನೆಂದು ಸೂರ್ಯ ಪಡುಗಡಲಲ್ಲಿ ಮುಳುಗಲು ಯತ್ನಿಸಿದ.

ಮೂವೀಧಿಗೈದು ಮುನ್ನೀರಿಗಿಳಿದು ಚಂದ್ರ
ಗಾವಿಯ ವಸನವ ತಳೆದು
ಸಾವಿರ ಕೈಯಿಂದ ಪೊಡವಟ್ಟನೆಂಬಂತೆ
ತೀವಿತು ಕಡುಸಂಜೆಗೆಂಪು ೧೭

ಮೂರುದಾರಿ ಕೂಡುವ ಸ್ಥಳಕ್ಕೆ ಬಂದು, ಸಮುದ್ರಕ್ಕಿಳಿದು, ಚಂದ್ರಗಾವಿಯ ವಸನವನ್ನು (ಕೆಂಬಣ್ಣದ ಉಡಿಗೆಯನ್ನು)ಉಟ್ಟು, ಸಾವಿರ ಕಿರಣಗಳಿಂದ ನಮಿಸಿದನೆಂಬಂತೆ ಸಂಜೆಗೆಂಪು ಆವರಿಸಿತು.

ಒತ್ತರಿಸಿದ ಸಂಜೆಗೆಂಪು ನುಂಗಿದ ಕಾ
ರ್ಗತ್ತಲೆಯೊಳು ನಿಶಾಚರನು
ಜತ್ತಾಯತವೆತ್ತು ನಡೆತಂದು ಕಂಡ ದೇ
ವೋತ್ತಮನಿರ್ದ ಪಟ್ಟಣವ ೧೮

ಅಂಥ ಸಂಜೆಗೆಂಪನ್ನು ನುಂಗಿ ನೀರುಕುಡಿದ ಕಾರ್ಗತ್ತಲೆಯಲ್ಲಿ ತುಂಬ ಜೋಪಾನದಿಂದ ನಡೆದು ಬಂದು ಶಂಬರಾಸುರ ಕೃಷ್ಣನ ಪಟ್ಟಣವನ್ನು ಕಂಡನು.

ಮಿಸುನಿಯ ಕೋಟೆ ಕೊತ್ತಳ ದಿವ್ಯರತ್ನ ತೆ
ತ್ತಿಸಿದ ಹೊಂಗಳಸಗಳು ತೆನೆಗೆ
ಸಸಿನಿಟ್ಟ ಹಣತೆ ತೇಜಪುಂಜದಂತೆ ರಂ
ಜಸಿತು ರಕ್ಕಸನ ಕಣ್ಮನಕೆ ೧೯

ಹೊಂಬಣ್ಣದ ಕೋಟೆ ಕೊತ್ತಳಗಳು, ದಿವ್ಯ ರತ್ನಗಳನ್ನು ಲಗತ್ತಿಸಿದ ಹೊಂಗಳಸಗಳ ತೆನೆಗೆ (ಕೋಟೆಯ ಮೇಲ್ಭಾಗಕ್ಕೆ)ಉಚಿತವಾಗಿಟ್ಟ ಹಣತೆ ಕಾಂತಿಯುಕ್ತವಾಗಿ ರಂಜಿಸಿತು ರಕ್ಕಸನ ಕಣ್ಮನಗಳಿಗೆ.

ಭೇರಿ ತಂಬಟ ಡೋಳು ಮುಂತಾದ ಬಹುವಾದ್ಯ
ಭೂರಿ ಬೊಂಬಾಳದೀವಿಗೆಯ
ಪಾರಿಯ ಪಟುಭಟರುಗಳು ಸುತ್ತಿದರಾಳು
ವೇರಿಯ ಮೇಲಿಡಿಕಿರಿದು ೨೦

ಭೇರಿ, ತಮ್ಮಟೆ ಡೋಲು ಮುಂತಾದ ಬಹುವಾದ್ಯಗಳು, ದೊಡ್ಡ ದೀಪಸ್ತಂಭದ ಮೇಲಿನ ಜ್ಯೋತಿಗಳು, ಪಹರೆಯ ಪಟುಭಟರುಗಳು(ಸಮರ್ಥ ಯೋಧರು)ಸುತ್ತಲೂ ಕಂದಕವಿರುವ ಕೋಟೆಯ ಮೇಲೆ ಗಿಟಕಾಯಿಸಿರುವುದನ್ನು ಕಾಣಬಹುದಾಗಿತ್ತು.

ಎಚ್ಚರು ಬಹಳ ಪೋಗಲು ಶಕ್ಯವಿಲ್ಲೆಂದು
ಮಚ್ಚರವಳಿದು ಕೊಂಡಾಡಿ
ಸ್ವಚ್ಛದಿ ಮಗುಳೊಂದು ಬುದ್ಧಿಯ ನೆನೆದುಕೊಂ
ಡುಚ್ಚರಿಸಿದ ಮನದೊಳಗೆ ೨೧

ಬಹಳ ಎಚ್ಚರಿಕೆ ವಹಿಸಿದರೆ ಸಾಧ್ಯವಿಲ್ಲೆಂದು ಅಸೂಯೆ ಬಿಟ್ಟು ಕೊಂಡಾಡಿ ಮನದಲ್ಲಿ ಮತ್ತೊಂದು ಸ್ವಚ್ಛ ಯೋಚನೆ ನೆನೆದು ಉಚ್ಚರಿಸಿದನು.

ಗುಣನಿಧಿ ಶುಕ್ರದೇವರು ಕೊಟ್ಟ ಮಂತ್ರದಿ
ಕ್ಷಣದಲಿ ವಿಶ್ವರೂಪಾಂತು
ಝಣಮಣಿಸದೆ ಶಂಬರಾಸುರ ವರ ಸಮೀ
ರಣನಾಗಿ ಪೊಕ್ಕ ದ್ವಾರಕಿಯ ೨೨

ಗುಣನಿಧಿ ಶುಕ್ರದೇವರು ದಯಪಾಲಿಸಿದ ಮಂತ್ರದಿಂದ ಕ್ಷಣದಲ್ಲಿ ವಾಯುವಾಗಿ ವಿಶ್ವರೂಪ ತಾಳಿ ದ್ವಾರಕಿಯನ್ನು ಹೊಕ್ಕನು.

ಪುರವ ನಿಟ್ಟಿಸುತ ಅಸುರಭೇದಿ ಶ್ರೀಕೃಷ್ಣ
ನರಮನೆಯೊಳಗೆ ರುಕ್ಮಿಣಿಯ
ವರ ಸದನವ ಪೊಕ್ಕು ಕುವರನ ಕೊಂಡು ಶಂ
ಬರ ಪೊರಮಟ್ಟನಾಕ್ಷಣದಿ ೨೩

ಪುರವನ್ನು ನೋಡುತ್ತ ರಾಕ್ಷಸಸಂಹಾರಿ ಶ್ರೀಕೃಷ್ಣನ ಅರಮನೆಯೊಳಗೆ ರುಕ್ಮಿಣಿಯ ಮಲಗು ಮನೆಯನ್ನು ಹೊಕ್ಕು ಶಂಬಾರಾಸುರ ಮಗುವನ್ನು ತೆಗೆದುಕೊಂಡು ಕ್ಷಣಾರ್ಧದಲ್ಲಿ ಮಾಯವಾದನು.

ಬಿಸರುಹದಳ ಲೋಚನೆ ಕೇಳು ನೀನೆನ್ನ
ಬೆಸಗೊಳುತಿರ್ದ ಮೇಲ್ಗತೆಯ
ಅಸಮಾಸ್ತ್ರ ತಾಯ ಮಗ್ಗುಲೊಳೊರಗಿರಲು ರ
ಕ್ಕಸ ಸೆಳೆಕೊಂಡ ಮಾಯದಲಿ ೨೪

ಕಮಲದಳ ಲೋಚನೆಯಾದ ಮನದನ್ನೆ ಕೇಳು, ನೀನು ನನ್ನನ್ನು ಕೇಳಿದ ಮೇಲ್ಗತೆಯನ್ನು. ತಾಯ ಬಳಿಯಲ್ಲಿ ಮಲಗಿದ್ದ ಅಸಮಾಸ್ತ್ರ(ಪಂಚಬಾಣ ಮನ್ಮಥ)ನನ್ನು ಸೆಳೆದುಕೊಂಡು ಕಣ್ಮರೆಯಾದನು.

ಸರಿಮಿಂಡಿವೆಣ್ಣೆ ದೈತ್ಯಮಾಯವ ಕೃಷ್ಣ
ನರಿಯನೆಂದೆನಬೇಡ ಅವನ
ಮುರಿಸಬೇಕಾ ಶಿಶುವಿನ ಕೈಯೊಳದರಿಂದ
ಬರುಬನಂದದಿ ನೋಡುತಿರ್ದ ೨೫

ಯೌವನದ ಮನದನ್ನೆ ಲಾಲಿಸು, ರಕ್ಕಸನ ಮಾಯವನ್ನು ಕೃಷ್ಣ ತಿಳಿಯನೆಂದು ಭಾವಿಸಬೇಡ; ಅವನ ಸಂಹಾರವನ್ನು ಆ ಶಿಶುವಿನ ಕೈಯಿಂದಲೇ ಮಾಡಿಸಬೇಕೆಂದು ಬರುಬ(ನಿಸ್ಸಹಾಯಕ)ನಂತೆ ನೋಡುತ್ತಿದ್ದ ಅಷ್ಟೆ.

ಅಂತಕನೆಂಬಂತೆ ಕುವರನ ಕದ್ದುಕೊಂ
ಡಂತರದಿ ಪೋಪ ಖಳನಿಗೆ
ಅಂತರಾತ್ಮಕನಾಗಿ ಶ್ರೀಕೃಷ್ಣ ಮಗುಳೊಂದು
ಚಿಂತಾತುರವನ್ನಿಕ್ಕಿದನು ೨೬

ಯಮನಂತೆ ಕುವರನನ್ನು ಎತ್ತಿಕೊಂಡು ಆಕಾಶದಲ್ಲಿ ಸಾಗುವ ರಕ್ಕಸನ ಅಂತರಾತ್ಮಕನಾಗಿ ಮತ್ತೊಂದು ಚಿಂತಾತುರವನ್ನು ಅವನ ಮನಸ್ಸಿನೊಳಗೆ ಬಿತ್ತಿದನು.

ಈ ತರಳನ ಮರ್ದಿಸಿ ಭ್ರೂಣಹತ್ಯಾ
ಪಾತಕವನು ಕಟ್ಟಿಕೊಳ್ಳುವುದು
ಏತಕೆ ತನ್ನ ತಾನೇ ಸಾಯಲೆನುತೆ ಕೈ
ಸೋತಂತೆ ಬಿಸುಟನಬ್ಧಿಯಲಿ ೨೭

ಈ ಮಗುವನ್ನು ಕೊಂದು ಭ್ರೂಣಹತ್ಯಾ ಪಾಪವನ್ನು ಏತಕ್ಕೆ ಕಟ್ಟಿಕೊಳ್ಳಬೇಕೆಂದು ತನಗೆ ತಾನೇ ಸಾಯಲಿ ಎಂದು ಕೈಸೋತಂತೆ ಕಡಲಿನೊಳಕ್ಕೆ ಬಿಸಾಡಿದನು.

ಏಣಾಂಕ ಗಗನದೊಳಿರ್ದು ತಾ ಪುಟ್ಟಿದ
ತಾಣವ ನೋಡಬೇಕೆನುತ
ಕೇಣವಿಲ್ಲದೆ ಕಡಲಿಳಿವಂತೆ ಮರಿ ಪಂಚ
ಬಾಣ ನೀರೊಟ್ಟಿಲೊಳು ಬಿದ್ದ ೨೮

ಗಗನದಲ್ಲಿರುವ ಚಂದ್ರ ನನ್ನ ಹುಟ್ಟಿನ ಸ್ಥಾನವನ್ನು ನೋಡಬೇಕೆಂದು ಸಮುದ್ರಕ್ಕಿಳಿಯುವಂತೆ ಮರಿ ಪಂಚಬಾಣ(ಮರಿ ಮನ್ಮಥ) ನೀರರಾಶಿಗೆ ಬಿದ್ದನು.

ಪೆತ್ತವರ ಕಣ್ಣಿಗೆ ಕಾಣಿಸಲಿಲ್ಲ ಕಾ
ರ್ಗತ್ತಲೆಯೊಳು ನಿಶಾಚರನು
ನೆತ್ತರ ಕರಣೆ ನೀರೊಳು ಬಿದ್ದುದನು ಕಂ
ಡತ್ತರು ದಿಗ್ವನಿತೆಯರು ೨೯

ಕಗತ್ತಲೆಯಲ್ಲಿ ರಕ್ಕಸನು ಹೆತ್ತವರ ಕಣ್ಣಿಗೆ ಕಾಣಿಸಲಿಲ್ಲ. ರಕ್ತದ ಗರಣೆ ನೀರಿಗೆ ಬಿದ್ದುದನ್ನು ಕಂಡು ದಿಗ್ವನಿತೆಯರು ಅತ್ತಿರು.

ಆನುವರಿಲ್ಲದೆ ಬಿದ್ದ ಶಿಶುವನು ಪೆಣ್ಣು
ಮೀನು ನುಂಗಿತು ತತ್ಕ್ಷಣವೆ
ತಾನೂರ ಹೊಕ್ಕಾಗ ಪೂರ್ವ ದಿಗಂತದಿ
ಭಾನುಮಂಡಲ ಶೋಭಿಸಿತು ೩೦

ಮಗುವನ್ನು ಆತುಕೊಳ್ಳುವವರಿಲ್ಲದೆ ಒಂದು ಹೆಣ್ಣು ಮೀನು ಅದನ್ನು ನುಂಗಿತು. ರಾಕ್ಷಸ ಊರನ್ನು ಹೊಕ್ಕಾಗ ಪೂರ್ವ ದಿಕ್ಕಿನಲ್ಲಿ ಸೂರ್ಯಮಂಡಲ ಶೋಭಿಸಿತು.

ಪ್ರಾತಃಸ್ನಾನವ ಮಾಡಿ ರಕ್ಕಸರಾಯ
ಭೂತೇಶನ ಪಾದಯುಗವ
ಶ್ವೇತಾಬ್ಜದಿಂದರ್ಚಿಸಿ ದಾನವ ಬುಧ
ವ್ರಾತಕೆ ಕೊಟ್ಟನುತ್ಸವದಿ ೩೧

ಬೆಳಗಿನ ಸ್ನಾನ ಮಾಡಿದ ಶಂಬಾರಾಸುರ ಈಶ್ವರನ ಪಾದದ್ವಯವನ್ನು ಬಿಳಿದಾವರೆಯಿಂದ ಪೂಜಿಸಿ ವಿದ್ವಾಂಸರಿಗೆ ದಾನವನ್ನು ಉತ್ಸಾಹದಿಂದ ವಿತರಿಸಿದನು.

ಅಗಣಿತ ದಾನಧರ್ಮವ ಮಾಡಿ ನವ ರ
ತ್ನಗಳಿಂದ ಮೆರೆವ ವಿಷ್ಟರದಿ
ವಿಗಡ ರಕ್ಕಸರಾಯ ಕುಳಿತಿರ್ದನೊಡ್ಡೋ
ಲಗದಲಿ ಸಾಮಂತರೊಡನೆ ೩೨

ಅಸಂಖ್ಯ ದಾನಧರ್ಮಗಳನ್ನು ಮಾಡಿ, ನವರತ್ನಖಚಿತ ಸಿಂಹಾಸನದಲ್ಲಿ ರಕ್ಕಸರಾಯ ಸಾಮಂತರೊಡನೆ ಕುಳಿತಿದ್ದನು.

ಪರಮೈಶ್ವರ್ಯಸಂಪನ್ನ ರಾಕ್ಷಸ ರಾಜ
ನಿರಲಿತ್ತ ಲವಣಾಬ್ಧಿಯಲಿ
ತರಳನ ನುಂಗಿದ ಪೆಣ್ಮೀನನೊರ್ವನು
ಎರೆಹುಳದ ಗಾಳದಿ ಪಿಡಿದ ೩೨

ಹೀಗೆ ರಕ್ಕಸರಾಜ ಇರಲಿತ್ತ, ಅತ್ತ ಲವಣಸಮುದ್ರದಲ್ಲಿ ಮಗುವನ್ನು ನುಂಗಿದ ಹೆಣ್ಣು ಮೀನನ್ನು ಒಬ್ಬ ಬೆಸ್ತ ಎರೆಹುಳದ ಗಾಳ ಹಾಕಿ ಹಿಡಿದನು.

ಮಾಣಿಕ ಮೆಯ್ವಣ್ಣ ಛಾಯಮೀನ ಕಂ
ಡಾಣಿಕಾರಿಕೆ ಜಲಗಾರ
ಕ್ಷೋಣೀಶನಾಸ್ಥಾನಕೆ ಮೀನ ತಂದು ಕೈ
ಗಾಣಿಕೆ ಕೊಟ್ಟ ಶಂಬರಗೆ ೩೪

ಮಾಣಿಕ್ಯಕಾಂತಿಯ ಮೈಬಣ್ಣವಿರುವ ಮೀನನ್ನು ಕಂಡು ಅಣಿಕಾರ ಜಲಗಾರ ರಾಜನ ಆಸ್ಥಾನಕ್ಕೆ ತಂದು ಶಂಬರನಿಗೆ ಕೈಗಾಣಿಕೆಯಾಗಿ ಕೊಟ್ಟನು.

ಹರಗೆ ಹೆರಳು ಹದ್ದು ತೋರದ ಕೆಮ್ಮೀನು
ತೊರೆಗಡಲೊಳಗುಂಟು ಬಲ್ಲೆ
ನೆರೆ ದುರ್ಗಂಧವಿಲ್ಲದೆ ಪರಿಮಳವಾಂತು
ಮೆರೆಯಲು ತಂದೆ ಎನ್ನೊಡೆಯ ೩೫

ಹರಗೆ, ಹೆರಳು, ಹದ್ದು ಗಾತ್ರದ ಕೆಮ್ಮೀನುಗಳು ನದಿಗಳಲ್ಲಿ ಕಡಲುಗಳಲ್ಲಿ ಇರುವುದನ್ನು ಬಲ್ಲೆ. ಆಸರೆ ಈ ಮೀನು ಕೊಂಚವೂ ದುರ್ವಾಸನೆಯಿಲ್ಲದೆ ಸುವಾಸನೆ ಬೀರುತ್ತಿದ್ದುದರಿಂದ ತಂದೆ ಒಡೆಯ ಎಂದು ವಿನಂತಿಸಿದನು.

ಮೀನ ತಂದವಗೆ ಬೇಡಿದ ವಸ್ತುವನಿತ್ತು
ಭೂನಾಥ ತಾತ್ಪರಿಯದಲಿ
ತಾನೊರ್ವ ಹೆಗ್ಗಡಿತಿಯ ಕೈಲಿ ಕಳುಹಿದ
ಬೋನದ ಮನೆಗೀವುದೆನುತ ೩೬

ಮೀನನ್ನು ತಂದ ಬೆಸ್ತನಿಗೆ ಬೇಡಿದ ವಸ್ತುವನ್ನು ಕೊಟ್ಟು ರಾಜ ಒಬ್ಬ ಹೆಗ್ಗಡಿತಿಯ ಕೈಯಲ್ಲಿ ಅಡಿಗೆ ಮನೆಗೆ ಕೊಡುವಂತೆ ಹೇಳಿ ಕಳಿಸಿದ.

ನಿಡಿದೇಹ ಸ್ವರ್ಣ ಚಾಯೆ ಮಂಜಿಷ್ಠೆ ಬಾ
ಯ್ಬಿಡುವ ಪೆಣ್ಮೀನ ತಂದವಳು
ಪಿಡಿನಡುವಿನ ಮಾಯಾಂಗನೆಗಿತ್ತು ಬೇ
ಗಡಿಗೆಯ ಮಾಡ ಹೇಳಿದಳು ೩೭

ಉದ್ದನೆಯ ದೇಹ, ಹೊಂಬಣ್ಣದ ಕಾಂತಿ, ಪ್ರಕಾಶಮಾನವಾದ ಕೆಂಬಣ್ಣಗಳಿಂದ ಬಾಯಿಬಿಡುವ ಹೆಣ್ಣುಮೀನನ್ನು ತಂದ ಹೆಗ್ಗಡತಿ, ಹಿಡಿನಡುವಿನ ಮಾಯಾಂಗನೆಗೆ ಕೊಟ್ಟು ಬೇಗ ಅಡಿಗೆ ಮಾಡಬೇಕೆಂದು ಹೇಳಿದಳು.

ತಾ ಸಿರಿಹಸ್ತಯುಗ್ಮದೊಳಾಂತು ಪಿಡಿದು ವಾ
ರಾಸಿಯೊಳಿರ್ದ ಪೆಣ್ಮೀನ
ಭಾಸಿತ ದಿವ್ಯದೇಹವ ಕಂಡು ಕಣ್ಣೀರ
ಸೂಸಿದಳಧಿಕ ದುಕ್ಕದಲಿ ೩೮

ರತಿ ತನ್ನ ಎರಡೂ ಕೈಗಳಲ್ಲಿರುವ ಹೆಣ್ಣುಮೀನಿನ ಕಾಂತಿಯುಕ್ತವಾದ ದೇಹವನ್ನು ಕಂಡು ದುಕ್ಕದಿಂದ ಕಣ್ಣೀರು ಸುರಿಸಿದಳು.

ಸಾಗರದೊಳಗಿರ್ದು ಜಲಗನ ಬಲೆಗೊಳ
ಗಾಗಿ ಬಂದ ಮೇಲೆ ನಿನ್ನ
ಭೋಗ ಬೊಗ್ಗಾದುದೆನುತ ವಿಚ್ಛೇದನೋ
ದ್ಯೋಗವ ನೆನದಳಾಕ್ಷಣದಿ ೩೯

ಸಮುದ್ರದಲ್ಲಿದ್ದು ಬೆಸ್ತನ ಬಲೆಗೆ ಸಿಕ್ಕಿ ಬಂದ ಮೇಲೆ ನಿನ್ನ ಭೋಗ ಕುಸಿಯಿತು ಎಂದು ತುಂಡು ಮಾಡುವ ಕೆಲಸವನ್ನು ನೆನೆದಳು.

ಮಿಸುನಿಯ ಕಾಲ್ವಲಗೆಯ ಮೇಲೆ ಪೆಣ್ಮೀನ
ಬಸಿರ ಬಗೆವೆನೆಂದೆನುತ
ಅಸಿಧಾರೆಯಲಿ ಮೆಲ್ಲನೆದೆಯ ಬಗಿಯಲಾ
ಸಿಸು ಪೊರಮಟ್ಟುದಾಶ್ವರ್ಯ ೪೦

ಹೊಂಬಣ್ಣದ ಹಲಗೆಯ ಮೇಲೆ ಹೆಣ್ಣು ಮೀನಿನ ಬಸುರನ್ನು ಬಗೆಯುವೆನೆಂದು ಕತ್ತಿ ಬಾಯಿಯಿಂದ ಮೆಲ್ಲನೆ ಎದೆಯನ್ನು ಬಗೆಯಲು ಶಿಶುವೊಂದು ಹೊರಬಂದದ್ದು ಆಶ್ಚರ್ಯ.

ಚಲಚರ ಗರ್ಭದಿಂ ಪೊರಮಟ್ಟು ಬರಲಾ
ವಿಲಸಿತ ಶಿಶುರೂಪ ಕಂಡು
ಅಲರಂಬನರಸಿ ದೃಢಚಿತ್ತದಿ ದೃಗು ಸಂ
ಚಲಿಸದೆ ನಿಂದು ನೋಡಿದಳು ೪೧

ಮೀನಿನ ಗರ್ಭದಿಂದ ಹೊರಬಂದ ಸುಂದರ ಶಿಶುರೂಪ ಕಂಡು ಹೂಬಾಣನ ರಾಣಿ ರೆಪ್ಪೆ ಮುಚ್ಚದೆ ದೃಢಚಿತ್ತದಿಂದ ನಿಂತು ನೋಡಿದಳು.

ನಿಟ್ಟಿಸಲಕ್ಷಿಗಳು ಬೆಂಡೆದ್ದು ನವಿರ್ಗುಡಿ
ಗಟ್ಟಿ ಬೆಮರ್ವನಿ ಮೊಳೆತುದು
ಪುಟ್ಟಿತು ಗದ್ಗದ ಮೆಯ್ ಝುಮ್ಮ ಝುಮ್ಮೆಂದು
ಅಟ್ಟಿತು ರತಿಮನವ ಮೂರ್ಛೆಗೆ ೪೨

ನೋಡುತ್ತಿದ್ದಂತೆ ಕಣ್ಣುಗಳು ಬೆಂಡಾದವು, ಮೈನವಿರು ನಿಮಿರಿ ನಿಂತವು, ಬೆವರ ಹನಿ ಮೂಡಿ ಗದ್ಗದ ಉದಿಸಿತು. ಮೈ ಜುಮ್ಮುಜುಮ್ಮೆಂದು ರತಿಯ ಮನಸ್ಸನ್ನು ಮೂರ್ಛೆಗೆ ದೂಡಿತು.

ಪರಮ ಪತಿವ್ರತೆಯಾಗಿರ್ದು ತನಗೀ
ತರಳನ ಮೇಲೆ ಭ್ರಾಂತು ಮೂ
ಡಿರಲೀಯೊಡಲನೀಡಾಡುವೆನೆನಲಾಗ
ವರ ನಭೋವಚನ ಸೊಲ್ಲಿಸಿತು ೪೩

ಪರಮ ಪತಿವ್ರತೆಯಾಗಿದ್ದು ತನಗೆ ಈ ತರಳನ ಮೇಲೆ ಅತಿ ಭ್ರಾಂತು ಮೂಡಿರಲು ಈ ಒಡಲನ್ನು ಈಡಾಡುವನೆಂಬ ಭಾವನೆ ಬಂದಾಗ ಆಕಾಶವಾಣಿ ಮೊಳಗಿತು.

ಕಂದನ ಕಾದುಕೊ ಮೀನ ಗರ್ಭದಿ ಪುಟ್ಟಿ
ಬಂದ ಮನ್ಮಥ ಶಂಬರನ
ಕೊಂದಾಕ್ಷಣದಲಿ ನಿನ್ನಾಳಿದನಾದಪ
ನೆಂದುದು ವರ ನಭೋವಚನ ೪೪

ಕಂದನನ್ನು ರಕ್ಷಿಸು, ಮೀನಿನ ಗರ್ಭದಿಂದ ಬಂದ ಮನ್ಮಥ ಶಂಬರನ ಕೊಂದು ನಿನ್ನ ಮನದನ್ನನಾಗುವನು ಎಂದಿತು ಅಶರೀರವಾಣಿ.

ಸತ್ಯವಿದಹುದು ನನ್ನಾಳಿದನಾದ ನಿ
ಮಿತ್ಯದಿ ಮನ ಮೂರ್ಛಿಸಿತು
ಅತ್ಯಂತ ಮಮಕಾರದಿ ಸಲಹುವ ಪಾರು
ಪತ್ಯವ ನೆನೆದಳಳ್ತಿಯಲಿ ೪೫

ಇದು ಸತ್ಯ, ನನ್ನ ಇನಿಯನಾಗಿರುವ ಕಾರಣದಿಂದಲೇ ನನ್ನ ಮನಸ್ಸು ಮೂರ್ಛೆಗೆ ಸಂದಿತು. ಹೆಚ್ಚು ಮಮಕಾರದಿಂದ ಕಾಪಾಡುವ ಪಾರುಪತ್ಯವನ್ನು ಪ್ರೀತಿಯಿಂದ ನೆನೆದು ಪುಳಕಿತಳಾದಳು.

ಬಿಸಿನೀರಿಂದ ಮೆಯ್ದೊಳೆದು ಪಕ್ಕೆಯೊಳೊರ
ಗಿಸಿ ವಸ್ತ್ರದಿಂ ಮುಚ್ಚಿ ಪೊದಿಸಿ
ಭಸಿತವ ಮಂತ್ರಿಸಿ ಕಪ್ಪಿಟ್ಟು ನಯನದೊ
ಳಸಿತಾಂಜನವನಿಕ್ಕಿದಳು ೪೬

ಬಿಸಿನೀರಿನಿಂದ ಮೈತೊಳೆದು ಪಕ್ಕದಲ್ಲಿ ಮಲಗಿಸಿ, ವಸ್ತ್ರದಿಂದ ಮುಚ್ಚಿ ಭಸಿತವನ್ನು ಮಂತ್ರಿಸಿ ಹಣೆಗಿಟ್ಟು ಕಪ್ಪಿನ ಬೊಟ್ಟಿಟ್ಟು, ಕಣ್ಣಿಗೆ ಕಾಡಿಗೆಯನ್ನು ಇಟ್ಟಳು.

ಗಂಡನ ಪಿಡಿದು ನುಂಗಿದ ಮೀನ ತನುವ ಚಿನಿ
ಖಂಡವಗೈವಂತೆ ಕೊಯ್ದು
ಸಂಡಿಗೆಗೆಯ್ಯಲು ಶಸ್ತ್ರದೊಳೂರಿ ಮೇಲು
ಗೆಂಡದಿ ಕಾಯಿಸಿ ಕರಿದಳು ೪೭

ಗಂಡನನ್ನು ನುಂಗಿದ ಮೀನಿನ ದೇಹವನ್ನು ಚೂರುಚೂರು ಮಾಡುವಂತೆ ಕೊಯ್ದು ಸಂಡಿಗೆ ಮಾಡಲು ಮೇಲುಗೆಂಡದಲ್ಲಿ ಕರಿದಳು.

ಮಿಕ್ಕ ಮಾಂಸವ ಸಲೆ ಕೈಕರಣಗಳಿಂದ
ಚೊಕ್ಕಟಗೊಳಿಸಿ ಭೀತಿಯಲಿ
ರಕ್ಕಸರಾಯಗಾತಿಥ್ಯವ ಗೆಯ್ದಳು
ಸಕ್ಕರೆವಿಲ್ಲನರ್ಧಾಂಗಿ ೪೮

ಮಿಕ್ಕ ಮಾಂಸವನ್ನು ಚೊಕ್ಕಟಗೊಳಿಸಿ ಭೀತಿಯಿಂದಲೇ ರತಿ ರಕ್ಕಸರಾಯನಿಗೆ ಅಡಿಗೆಯನ್ನು ಸಿದ್ಧಪಡಿಸಿದಳು.

ನಾನಾ ಭಕ್ಷ್ಯ ಭೋಜ್ಯಾದಿ ಲೇಹ್ಯಂಗಳ
ಬೋನಗಾರ್ತಿಯ ಕೈಯಿಂದ
ಭೂನಾಥಗುಣಬಡಿಸಿದೊಡುಂಡು ಮೆಚ್ಚಿದ
ಮೀನಾಂಕನರ್ಧಾಂಗನೆಯ ೪೯

ಬೋನಗಾತಿಯರು ಬಡಿಸಿದ ನಾನಾ ಭಕ್ಷ್ಯ ಭೋಜ್ಯ ಲೇಹ್ಯ(ನಂಚಿಕೆಯ ವಸ್ತು) ಗಳನ್ನು ಆಸ್ವಾದಿಸುತ್ತಾ ಉಂಡು ಮನ್ಮಥನ ಮಡದಿಯನ್ನು ಮೆಚ್ಚಿದನು.

ಅಡಬಲ್ಲ ಜಾಣೆ ಮೆಚ್ಚಿದೆ ನಾನದರಿಂದ
ಪಡೆದ ವರ ಪತಿವ್ರತ ಸ್ತ್ರೀಯ
ತಡಹುದಿಲ್ಲ ನಿನ್ನಾಲಯದೊಳಗೆ ವಿಂ
ಗಡವಾಗಿ ಸುಖದಿ ಬಾಳೆಂದ ೫೦

ಅಡುಗೆಯಲ್ಲಿ ಜಾಣೆ ಎಂದು ಮೆಚ್ಚಿದೆ. ಆದ್ದರಿಂದ ಪತಿವ್ರತಸ್ತ್ರೀಯ ಮೈಯನ್ನು ನಾನು ಮುಟ್ಟುವುದಿಲ್ಲ. ನೀನು ಪ್ರತ್ಯೇಕವಾಗಿ ಈ ಮನೆಯಲ್ಲಿ ಬದುಕು ಎಂದನು.

ನೀ ಧರ್ಮಿಷ್ಠ ನಿರ್ಜರ ಮನೋಮರ್ದನ
ಕ್ರೋಧವ ಬಿಡು ದೈತ್ಯೇಶ
ಭೇದವಿಲ್ಲದೆ ನಂಬುಗೆಗೊಟ್ಟು ನನ್ನಪ
ರಾಧವ ಮರೆಯೆಂದಳಬಲೆ ೫೧

ನೀನು ನಿಜವಾಗಿಯೂ ಧರ್ಮಿಷ್ಠ, ದೈತ್ಯೇಶ ಕ್ರೋಧವನ್ನು ಬಿಡು, ಭೇದಭಾವ ಮಾಡದೆ ನನ್ನ ಅಪರಾಧವನ್ನು ಕ್ಷಮಿಸು ಎಂದಳು.

ಮತ್ತೊರ್ವ ಸ್ಮರವಿಳಾಸಿನಿ ನನ್ನಲ್ಲಿಗೈದು
ಪೆತ್ತಳವಳು ಗಂಡು ಶಿಶುವ
ಪುತ್ತರನ ಸಲಹಲೊ ಬೇಡವೊ ಹೇಳೆಂದು
ಅತ್ತಳು ಕಂಬನಿಗರೆಯುತ ೫೨

ಮತ್ತೊಬ್ಬಳು ಮನ್ಮಥನ ಮಡದಿ ಅಂದರೆ ನನ್ನ ಸವತಿ ನನ್ನಲ್ಲಿಗೆ ಬಂದು ಒಂದು ಗಂಡುಮಗುವನ್ನು ಹೆತ್ತಳು. ಆ ಪುತ್ರನನ್ನು ಸಾಕಲೋ? ಬೇಡವೋ? ಹೇಳು ಎಂದು ಕಣ್ಣೀರು ಕರೆಯುತ್ತಾ ಕೇಳಿದಳು.

ರೋದನಗೆಯ್ಯಲೇತಕೆ ಕೇಳುಕೇಳು ತ
ಳೋದರಿ ನಿನ್ನಯ ಶಿಶುವ
ಸಾದರದಿಂದ ನೀ ಕಾದುಕೋ ಎಂದು ವಿ
ನೋದದಿ ಪೇಳ್ದನಾಯಕಗೆ ೫೩

ರೋದಿಸುವುದೇತಕ್ಕೆ? ಆದರದಿಂದ ಆ ಶಿಶುವನ್ನು ಸಾಕಿಕೊ ಎಂದು ವಿನೋದದಿಂದ ರತಿಗೆ ಹೇಳಿದನು.

ಕ್ಷಿತನಾಥನ ಕೈಯ ಬೀಳ್ಕೊಂಡು ಬಂದಳು
ರತಿದೇವಿ ತನ್ನ ಮಂದಿರಕೆ
ಅತಿಜಾಣ್ಮೆಯೊಳೊಬ್ಬ ಕೆಳದಿಯ ಹಡೆದ ಬಾ
ಣತಿಯಂತೆ ಸಿಂಗರಿಸಿದಳು ೫೪

ರಾಜನನ್ನು ಬೀಳ್ಕೊಂಡು ತನ್ನ ವಾಸದ ಮನೆಗೆ ಬಂದು, ತನ್ನ ಸೇವಕಿ ಗೆಳತಿಯನ್ನು ಹಡೆದ ಬಾಣತಿಯಂತೆ ವೇಷ ಹಾಕಿ ತಯಾರು ಮಾಡಿದಳು.

ಕೆಳದಿಯ ವರ ಕುಮಾರನ ನಿಟ್ಟಿಸುವಂತೆ
ಕಳಹಂಸಗಮನೆ ಬಾಲನ
ತಳತಳಿಸುವ ದಿವ್ಯದೇಹದ ಮೇಲೆ ಕಂ
ಗಳ ದಿಟ್ಟಿಯ ಹರಹಿದಳು ೫೫

ಗೆಳತಿಯ ಮಗನನ್ನು ನೋಡುವಂತೆ ರತಿದೇವಿ ಥಳಥಳಿಸುವ ದಿವ್ಯ ದೇಹದ ಮೇಲೆ ಕಣ್ಣು ಹಾಯಿಸಿ ಸಂತಸ ಪಡುವಳು.

ನೆಟ್ಟನೆ ಮೊಗ ನೋಡಿ ಮುದ್ದಿಪಳು ತರಳನ
ಪುಟ್ಟ ಕೈಗಳ ತಂದು ತನ್ನ
ಬಟ್ಟ ಬಲ್ಮೊಲೆಗಡರ್ಚುವಳು ಬಾಯ್ಗೆ ಬಾಯ
ನಿಟ್ಟು ಗಲ್ಲವ ಚುಂಬಿಪಳು ೫೬

ಮುಖ ನೋಡಿ ಮುದದಿಂದ ಮುದ್ದಿಸುವಳು; ಪುಟ್ಟ ಕೈಗಳನ್ನು ತಂದು ತನ್ನ ಬಟ್ಟಮೊಲೆಗಳ ಮೇಲೆ ಇಡುವಳು; ಬಾಯಿಗೆ ಬಾಯಿಟ್ಟು ಗಲ್ಲವನ್ನು ಚುಂಬಿಸುವಳು.

ರತನಂತೆ ನುಣ್ಮೊಲೆವಿಡಿವನು ಶತನಖಾಂ
ಚಿತ ಮಾಡುವನುರಸ್ಥಳದಿ
ಕೃತಕದಿಂ ನಸುನಕ್ಕು ಮುದ್ದಿಸಲಧರಾ
ಮೃತವುಂಡು ಬೆಳೆದನಾ ಬಾಲ ೫೭

ರತಿ ಕ್ರೀಡಾಸಕ್ತನಂತೆ ರತಿಯ ನುಣ್ಮೊಲೆಯನ್ನು ಹಿಡಿಯುವನು, ವಕ್ಷಸ್ಥಲದಲ್ಲಿ ನೂರಾರು ಉಗುರು ಮುದ್ರೆಯೊತ್ತುವನು, ಮುದ್ದಿಸುವಾಗ ಅಧರಾಮೃತವನ್ನು ಉಂಡು ಪುಟ್ಟ ಪೋರ ಬೆಳೆದನು.

ತಿಂಗಳಾದುದು ತಿಂಗಳೆರಡಾದುದು ಮೂರು
ತಿಂಗಳಾದುದು ನಾಲ್ಕೈದು
ತಿಂಗಳಾದುದು ಆರೇಳೆಂಟೊಂಬತ್ತು
ತಿಂಗಳಾದುದು ಕಂತುವಿಗೆ ೫೮

ತಿಂಗಳು, ಎರಡು ತಿಂಗಳು, ಮೂರು ತಿಂಗಳು– ಹೀಗೆ ಮನ್ಮಥನಿಗೆ ಒಂಭತ್ತು ತಿಂಗಳಾಯಿತು.

ನೂತನ ಮೊಳೆವಲ್ಲೊಗೆದುದು ತೊದಳಾಂತು
ಮಾತನಾಡುವ ಮುದ್ದುಗೆಯ್ವ
ಭೂತಳದೊಳಗಂಬೆಗಾಲಿಟ್ಟು ನಡೆವಂತೆ
ಚೇತನವಾದುದಂಗಜಗೆ ೫೯

ಮೊಳೆ ಹಲ್ಲು ಮೂಡಿದವು, ತೊದಲು ನುಡಿವನು, ಮುದ್ದಿಸುವನು, ಅಂಬೆಗಾಲಿಟ್ಟು ನಡೆಯುವನು. ಪುಟ್ಟಪೋರ ಮನೆಗೆ ಚೇತನ ನೀಡಿದನು.

ಮಿಗೆ ಶೋಭಿಸುವ ಹೊನ್ನುಡಿದಾರ ಕಾಲಂ
ದುಗೆ ಗೆಜ್ಜೆ ಘಳಿರೆಂಬ ರವದಿ
ಪಗೆವನೆಯೊಳಗೆ ನರ್ತಿಸುತಿರ್ದ ಬಾಲನ
ಬಗೆ ಲೇಸಾಯ್ತು ನೋಳ್ಪರಿಗೆ ೬೦

ಚಿನ್ನದ ಉಡಿದಾರ, ಕಾಲಂದುಗೆ, ಗೆಜ್ಜೆಗಳ ಶಬ್ದದಿಂದ ಹಗೆಯ ಮನೆಯಲ್ಲಿ ಕುಣಿಯುತ್ತಿದ್ದ ಬಾಲನನ್ನು ನೋಡಿ ಸಂತೋಷಗೊಳ್ಳುವರು ಇತರರು

ರಾರಾಜಿಸುವ ಹೊಂದೊಡಿಗೆಯ ಕುವರನಿವ
ನಾರವನೆಂದು ಕೇಳಿದೊಡೆ
ಮಾರನಾರ್ಧಾಂಗಿಯ ಸಖಿ ಪೆತ್ತ ವರ ಕು
ಮಾರನೆಂದರು ಕೇಳ್ದರಿಗೆ ೬೧

ಚಿನ್ನದೊಡವೆಗಳ ಈ ಕುವರನು ಯಾರವನು ಎಂದು ಯಾರಾದರೂ ಕೇಳಿದರೆ, ಮನ್ಮಥನ ಮಡದಿಯ ಗೆಳತಿ ಹೆತ್ತ ಕುವರನು ಎಂದು ಹೇಳುತ್ತಿದ್ದರು.

ಅಕ್ಕರೆ ತಲೆದೋರಿತವನಿಯೊಳಿಹ ಗಂಡು
ಮಕ್ಕಳ ಮಾಣಿಕವೆನಿಪ
ಚೊಕ್ಕನ ಪಿಡಿದು ಮುಂಡಾಡುತ ಗರುಡಿಯ
ಹೊಕ್ಕನು ದೈತ್ಯ ಸಾಧನೆಗೆ ೬೨

ಶಂಬರಾಸುರನಿಗೆ ಗಂಡುಮಕ್ಕಳ ಮಾಣಿಕ್ಯವೆನ್ನಿಸುವ ಸುಂದರ ಕುವರನ ಮೇಲೆ ಅಕ್ಕರೆ ಮೊಳೆಯಿತು. ಗರಡಿಮನೆಗೆ ಅಂಗಸಾಧನೆಗೆ ಹೊರಡುವ ಮುನ್ನ ಮಗುವನ್ನು ಮುದ್ದಾಡಿ ಜೊತೆಯಲ್ಲಿ ಕರೆದುಕೊಂಡು ಹೋಗುವ ಪರಿಪಾಠ ಬೆಳೆಯಿತು.

ಆ ತರಳನನು ಗರುಡಿಮನೆಯ ಜಗತಿಯ
ಭೇತಾಳನೆಡೆ ಕುಳ್ಳಿರಿಸಿ
ತಾ ತೊಡೆ ಚಲ್ಲಣವೆರಸಿ ಕಾಸೆಯ ಕಟ್ಟಿ
ಭೂತಾಕೃತಿವೆತ್ತು ನಿಂದ ೬೩

ಆ ಪುಟ್ಟ ಪೋರನನ್ನು ಗರಡಿ ಮನೆಯ ಜಗಲಿಯ ಮೇಲೆ ಕುಳ್ಳಿರಿಸಿ, ತಾನು ಕಾಸೆ ಕಟ್ಟಿ ಚಲ್ಲಣ ತೊಟ್ಟು ಭೂತಾಕಾರದಲ್ಲಿ ನಿಲ್ಲುವನು.

ಪೆರ್ದೊರೆ ದೈತ್ಯ ತನ್ನಂತರಂಗದೊಳಿಡಿ
ದಿರ್ದ ವಿದ್ಯವ ರತೀಶ್ವರಗೆ
ನಿರ್ಧರದಿಂ ಸಮರ್ಪಿಪ ತೆರದಲಿ ಅಡ್ಡ
ಬಿರ್ದ ಭೇತಾಳ ದೇವರಿಗೆ ೬೪

ಹಿರಿಯ ದೊರೆಯಾದ ದೈತ್ಯ ತನ್ನ ಅಂತರಂಗದಲ್ಲಿ ಇರುವ ಎಲ್ಲ ವಿದ್ಯೆಗಳನ್ನು ಪುಟ್ಟ ಪೋರನಿಗೆ ಸಮರ್ಪಿಸುವ ರೀತಿಯಲ್ಲಿ ಬೇತಾಳದೇವರಿಗೆ ಅಡ್ಡಬಿದ್ದನು.

ಪೊಡಮಟ್ಟು ಬೇಡಿಕೊಂಡೆದ್ದು ಸಾಧನೆಗೆಯ್ಯ
ತೊಡಗಿದ ಜಗಜಟ್ಟಿ ದೈತ್ಯ
ಜಡಜಸಂಭವ ಮುಖ್ಯ ಸುರರಿಗೆ ಭೇದಿಸ
ಗೊಡದ ಮಾಯಾ ವಿದ್ಯೆಗಳ ೬೫

ನಮಸ್ಕರಿಸಿ, ಯಾಚಿಸಿ, ಮೇಲೆದ್ದು ಬ್ರಹ್ಮ ಮೊದಲ್ಗೊಂಡು ಯಾವ ದೇವತೆಗಳಿಗೂ ನಿಲುಕದ ಮಾಯಾ ವಿದ್ಯೆಗಳನ್ನು ಸಾಧನೆ ಮಾಡತೊಡಗಿದ.

ದೆಸೆಯಿಂದ ಯಾವ ದೆಸೆಗೆ ಬಾಣ ಹೂಡಿದ
ಮಸೆದ ಧಾರೆಯ ಖಡ್ಗವದು
ಪಸರಿಸಿ ಖಳನ ಮಸ್ತಕವ ಕೀಳ್ಪಡಿಸಿ ರಂ
ಜಿಸೆ ಕಾಮದೇವ ನಿಟ್ಟಿಸಿದ ೬೬

ಯಾವ ಕಡೆಯಿಂದ ಯಾವ ಕಡೆಗೆ ಬಾಣ ಹೂಡಿದ, ಮಸೆದ ಕತ್ತಿ ಖಳನ ನೆತ್ತಿಯ ಮೇಲೆ ನರ್ತಿಸಿತು ಎಂಬುದನ್ನು ಕಾಮದೇವ ನಿಟ್ಟಿಸಿದ.

ಕತ್ತಿಯ ಹೊಳಹು ತೋರಿತು ಸೂರ್ಯನ ಮೆಯ್ಯ
ಮುತ್ತಿದ ಕಿರಣವೆಂಬಂತೆ
ಸುತ್ತಿನ ಚಳಯ ವೃತ್ತತೆಯ ನೋಳ್ಪರ ಕಣ್ಣು
ಕುತ್ತಿದುವೆನ ಬಣ್ಣಿಸುವೆ ೬೭

ಕತ್ತಿಯ ಹೊಳಪು ಸೂರ್ಯನನ್ನು ಮುತ್ತಿದ ಕಿರಣರಾಶಿಯಂತೆ ಕಾಂತಿಮಂಡಲವನ್ನು ಮೂಡಿಸಿದ್ದರಿಂದ ನೋಡುವವರ ಕಣ್ಣುಗಳು ತಗ್ಗಿದವು.

ಲಾಗಿಸಿ ನಭಕ್ಕೆ ಕುಪ್ಪಳಿಸುವ ಬಂದಿದಿ
ರಾಗಿ ನಿಲ್ಲುವ ಭೂತದೊಲು
ತಾಗಿಸಿದ ಶಸ್ತ್ರಾಸ್ತ್ರಕ್ಕೆ ಸಿಕ್ಕದೆ ಬಯ
ಲಾಗಿ ಗರ್ಜಿಪ ಸಿಂಹದಂತೆ ೬೮

ಚಂಗಿಸಿ ಆಕಾಶಕ್ಕೆ ಕುಪ್ಪಳಿಸುವನು, ಮತ್ತೆ ಭೂತದಂತೆ ಬಂದು ಎದುರು ನಿಲ್ಲುವನು, ತಾಗಲು ಬರುವ ಶಸ್ತ್ರಾಸ್ತ್ರಕ್ಕೆ ಸಿಕ್ಕದೆ ಬಯಲಾಗಿ ಸಿಂಹದಂತೆ ಗರ್ಜಿಸುವನು.

ವಿಧಿಯಿಂದ ಶುಕ್ರದೇವರು ತನಗರುಹಿದ
ಹದಿನಾರು ಸಹಸ್ರ ವಿದ್ಯಗಳ
ತುದಿ ಮೊದಲಿಂದ ವಿಸ್ತರಿಸಿದ ಕೌಟಿಲ್ಯ
ನಿಧಿ ಶಂಬರಾಸುರ ಖಳನು ೬೯

ಶುಕ್ರದೇವರು ವಿಧ್ಯುಕ್ತವಾಗಿ ತನಗೆ ಹೇಳಿಕೊಟ್ಟ ಹದಿನಾರು ಸಾವಿರ ವಿದ್ಯೆಗಳನ್ನು ಮೊದಲಿನಿಂದ ತುದಿಯವರೆಗೂ ಶಂಬರಾಸುರನು ಪ್ರದರ್ಶಿಸಿದನು.

ಕಂತುಪಿತನ ಮಾನಸ ಮಾಯತಾಣ ವಿ
ನ್ನೆಂತುಟೊ ಶಂಬರಾಸುರನ
ಭ್ರಾಂತಿಗೊಳಿಸಿ ಮಹದಾದಿ ವಿದ್ಯವ ಸೈ
ಪಿಂ ತೋರಿಸಿದನು ಕಂತುವಿಗೆ ೭೦

ಕಂತುಪಿತನಾದ ಕೃಷ್ಣನ ಮೋಡಿಯ ಆಳಅಗಲ ತಿಳಿದವರಾರು? ಶಂಬರಾಸುರನನ್ನು ಭ್ರಾಂತಿಗೊಳಿಸಿ, ಅವನ ಮಹದಾದಿ ವಿದ್ಯೆಗಳನ್ನೆಲ್ಲ ಪುಟ್ಟ ಬಾಲಕನಿಗೆ ತೋರಿಸಿದನು.

ಒಂದರಗಳಿಗೆ ನೋಡಿದ ಮಾತ್ರದಿ ಕಾಣ
ಬಂದುದಾ ವಿದ್ಯೆ ಕಂತುವಿಗೆ
ಸಂದುದು ಮನದಭಿಪ್ರಾಯ ಸತ್ಕರುಣಾ
ಸಿಂಧು ಶ್ರೀಕೃಷ್ಣನಾಜ್ಞೆಯಲಿ ೭೧

ಒಂದರಗಳಿಗೆ ನೋಡಿದ ಕೂಡಲೇ ಆ ವಿದ್ಯೆ ಪುಟ್ಟ ಮನ್ಮಥನಿಗೆ ಗೊತ್ತಾಯಿತು, ಕರುಣಾಸಿಂಧು ಶ್ರೀಕೃಷ್ಣನ ಕಟಾಕ್ಷದಿಂದ.

ದುರುಳ ದೈತ್ಯಾಧೀಶ್ವರ ಸಾಧನೆ ಮುಗಿದು
ಅಲರಂಬನಪರಾವತಾರ
ತರಳ ಸಹಿತ ಪೊರಮಟ್ಟು ಬಂದನು ಕೆಂ
ಬರಳಂತೆ ಬೆಮರ್ವನಿದಳೆದು ೭೨

ಸಾಧನೆ ಮುಗಿದ ಮೇಲೆ ಶಂಬರಾಸುರ ಹೂಬಾಣನ ಅಪರಾವತಾರವಾದ ತರಳನನ್ನು ಮನೆಗೆ ಕರೆದುಕೊಂಡು ಬಂದನು.

ಬಣ್ಣ ಬಂಗಾರವನುಡತೊಡ ಕೊಟ್ಟು ಹೊಂ
ಬಣ್ಣ ಚಂದನವ ಪೂರೈಸಿ
ಚಿಣ್ಣನ ಬೀಳ್ಕೊಡಲೈತಂದಳು ರತಿ ಎಸ
ಳ್ಗಣ್ಣ ಪುಣ್ಯದ ನಿಧಿಯೆನಿಪ ೭೩

ಬಣ್ಣ(ಬಟ್ಟೆ) ಬಂಗಾರ(ಚಿನ್ನ)ಗಳನ್ನು ಉಡಲುತೊಡಲು ಕೊಟ್ಟು ಹೊಂಬಣ್ಣದ ಚಂದನವನ್ನು ಪೂರೈಸಿ, ಎಸಳುಗಣ್ಣ ಪುಣ್ಯನಿಧಿಯಂತೆ ಕಾಣುವ ಚಿಣ್ಣನನ್ನು ಬೀಳ್ಕೊಡಲು ರತಿ ಬರುವಳು.

ಈಗ ನೀ ಖಳರಾಯನ ಗರುಡಿಯ ಪೊಕ್ಕು
ಬೇಗಲೈತಂದೆ ಬಾಯೆನುತ
ಪೂಗೋಲನ ಬಿಗಿಯಪ್ಪಿ ಮುಂಗಾರಿಯದ
ಅಗಾಂತರವ ಪೇಳಿದಳು ೭೪

ಗರಡಿ ಮನೆಯಿಂದ ಬೇಗ ಬಂದೆ ಬಾ ಎಂದು ಎದುರುಗೊಂಡು, ಅಪ್ಪಿಕೊಂಡು, ಮುಂದಿನ ಕಾರ್ಯಕಲಾಪಗಳ ಅಗಾಂತರ(ಒಳಹೊರಗು)ವನ್ನು ಹೇಳಿದಳು.

ಆತನೆಲ್ಲ ಮಾಯಾತಾಣದ ವಿದ್ಯಾ
ವ್ರಾತವ ತನಗನುಗ್ರಹಿಸಿ
ಭೇತಾಳ ವಿಘ್ನೇಶ್ವರರು ಕೊಟ್ಟರು ವರ
ಪೀತಾಂಬರನಾಜ್ಞೆಯಲಿ ೭೫

ಪೀತಾಂಬರ ಕೃಷ್ಣನ ಅಪ್ಪಣೆಯಂತೆ ಭೇತಾಳ ವಿಘ್ನೇಶ್ವರರು ಶಂಬರಾಸುರನ ಮಾಯಾ ವಿದ್ಯೆಗಳನ್ನೆಲ್ಲ ನನಗೆ ಅನುಗ್ರಹಿಸಿದರು.

ಬಂದುದು ಕೃಷ್ಣರಾಯನ ಕೃಪೆಯಲಿ ತನ್ನ
ಹಿಂದಣ ವರ ಮೂಲ ಶಕ್ತಿ
ಮುಂದಾವುದಕು ಚಿಂತಿಸಬೇಡ ಸುಖ ಬಾ
ಳೆಂದ ಕಂದರ್ಪ ಕಾಮಿನಿಗೆ ೭೬

ಕೃಷ್ಣನ ಕೃಪೆಯಿಂದ ತನ್ನ ಹಿಂದಿನ ಮೂಲಶಕ್ತಿ ಬಂದುದು ಮುಂದೆ ಯಾವುದಕ್ಕೂ ನೀನು ಚಿಂತಿಸಬೇಕಾದ ಅಗತ್ಯವಿಲ್ಲ ಎಂದು ರತಿಗೆ ಕಂದರ್ಪ ಆಶ್ವಾಸನೆ ನೀಡಿದ.

ನೀರೆ ನಿನಗೆ ಸಂದ ಮೂಲಶಕ್ತಿಯ ತಂದು
ತೋರೆನಲು ಬಳೆದು ತೋರಿಸಿದ
ಗಾರಾದ ಶಂಬರಾಸುರನೆಂದು ಕರ್ವಿಲ್ಲು
ಗಾರನ ಕೊಂಡಾಡಿದಳು ೭೭

ನಿನಗೆ ಬಂದ ಮೂಲಶಕ್ತಿಯನ್ನು ತೋರಿಸು ಎಂದು ರತಿ ಕೇಳಲು ಅವಳ ಕಣ್ಣ ಮುಂದೆಯೇ ಬೆಳೆದು ತೋರಿಸಿದ. ಆಗ ರತಿ ಶಂಬರಾಸುರನ ಕಥೆ ಮುಗಿಯಿತು ಎಂದು ಮನ್ಮಥನನ್ನು ಕೊಂಡಾಡಿದಳು.

ಸ್ಮರ ರತಿದೇವಿಯರಿರಲಿತ್ತ ಶಂಬರಾ
ಸುರ ಮಿಂದು ಭೋಜನಗೆಯ್ದು
ವರ ರತ್ನಮಂಟಪದೆಡೆಗೈದಿ ಸಿಂಹ ವಿ
ಷ್ಟರದಲ್ಲಿ ಕುಳಿತ ವೈಭವದಿ ೭೮

ಇತ್ತ ಮನ್ಮಥ ರತಿದೇವಿಯರು ಸಂಭ್ರಮದಿಂದಿರಲು, ಅತ್ತ ಶಂಬರಾಸುರ ಮಿಂದು ಭೋಜನ ಮಾಡಿ, ರತ್ನಮಂಟಪದ ಸಿಂಹಾಸನದ ಮೇಲೆ ಕುಳಿತ.

ಶಂಬರಾಸುರನೊಡ್ಡೋಲಗ ನೀರೊಟ್ಟಿ
ಲೆಂಬಂತೆ ರಾಜಿಸುತಿರಲು
ಕುಂಭಸಂಭವನಂತೆ ನಾರದ ಮುನಿರಾಯ
ಮುಂಭಾಗದಲಿ ಬಂದಿಳಿದ ೭೯

ಶಂಬರಾಸುರನ ಓಲಗಶಾಲೆ ಕಡಲಂತೆ ರಾರಾಜಿಸುತ್ತಿರಲು, ಅಗಸ್ತ್ಯನಂತೆ ನಾರದ ಮುನಿ ಮುಂಭಾಗದಲ್ಲಿ ಬಂದಿಳಿದ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೮೦

"ವರ ಮೋಹನ ತರಂಗಿಣಿ' ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದವರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

# ೧೨. ಶಂಬರಾಸುರ ವಧೆ

ಭೂತಳದೊಳು ಸತ್ಯಭಾಮೆಗೋಸುಗ ಪಾರಿ
ಜಾತ ವೃಕ್ಷವ ಕಿತ್ತು ತಂದ
ಧಾತೂನ್ನತನ ಕಾರುಣ್ಯದಿ ಮನ್ಮನೋ
ನಾಥ ವಿಸ್ತರಿಸು ಮೇಲ್ಗತೆಯ ೧

ಭೂಮಂಡಲದಲ್ಲಿ ಸತ್ಯಭಾಮೆಗೋಸ್ಕರ ಪಾರಿಜಾತ ವೃಕ್ಷವನ್ನು ದೇವಲೋಕದಿಂದ ಕಿತ್ತು ತಂದ ಧಾತೂನ್ನತನ (ಪರಮಾತ್ಮನ) ಕಾರುಣ್ಯದಿಂದ ವಿಸ್ತರಿಸು ಮೇಲ್ಗತೆಯ.

ನೆನೆಯಲಾತ್ಮನಲುದಿಸಿದ ಮಾತ ನಾಲಗೆ
ಗೊನೆಯಲ್ಲಿ ವಿಸ್ತರಗೆಯ್ದು
ಇನಿಯಳೆ ಕೇಳು ನಿನಗೆ ಕರ್ಣರಸಾಯನ
ವೆನಲುಸುರುವೆನೀ ಕೃತಿಯ ೨

ಆತ್ಮದಲ್ಲಿ ಉಗಮಿಸಿದ ಮಾತನ್ನು ನಾಲಗೆಯ ತುದಿಯಿಂದ ವಿಸ್ತರಿಸಿ, ಇನಿಯಳೆ ನಿನಗೆ ಕರ್ಣರಸಾಯನವಾಗುವಂತೆ ಹೇಳುವೆನು ಮುಂದಿನ ಕಥೆಯನ್ನು.

ಲಿಪಿಕರ್ತೃವಿನ ಮಾನಸ ಪುತ್ರ ಮತ್ಕರ್ಮ
ವಿಪಿನ ಕುಠಾರ ನೀ ಬಂದ
ಗುಪಿತವ ಪೇಳೆಂದು ಬೆಸಗೊಳಲವನು ಪುನ
ರಪಿ ಪೇಳ್ದ ಶಂಬರನೊಡನೆ ೩

ಬ್ರಹ್ಮನ ಮಾಸಪುತ್ರನೂ, ನನ್ನ ಕರ್ಮದ ಕಾಡಿಗೆ ಕುಠಾರಪ್ರಾಯನೂ ಆದ ನೀನು ಬಂದ ರಹಸ್ಯವನ್ನು ಹೇಳೆನಲು ಪುನಃ ಶಂಬರನಿಗೆ ಹೇಳಿದನು ಹೀಗೆ :

ವನಜಾಕ್ಷನಣುಗನ ಮರ್ದಿಸೆಂದೆನಲು ದಾ
ಸಿನವ ಮಾಡಿದೆ ಪಾಪಿ ನಿನ್ನ

ಘನಸತ್ತ್ವ ಸಫಲಗೊಳ್ಳದೆ ಪೋದುದ ಕಂಡು
ಮನ ನಿಲ್ಲದೈತಂದೆ ಮಗನೆ ೪

ಕಮಲಾಕ್ಷನ ಪುತ್ತನ್ನು ಮರ್ದಿಸು ಎಂದು ಹೇಳಿದರೂ ನೀನು ಉದಾಸೀನ ಮಾಡಿದೆ. ನಿನ್ನ ಸತ್ತ್ವ ಸಫಲಗೊಳ್ಳದೆ ಹೋದುದರಿಂದ ಮನಸ್ಸು ನಿಲ್ಲದೆ ಮತ್ತೆ ಬಂದೆ.

ಸಂದೇಹಿಸ ಬೇಡ ಕಾವನನು ಕಡಲೊಳ
ಗಂದೆ ಹಾಯಿಕಿ ಮರ್ದಿಸಿದೆ
ತಂದೆ ನೀನೆನ್ನ ಮೇಲಣ ಮಮಕಾರದಿ
ಬಂದೆ ಬದುಕಿದೆನು ಜೀಯ ೫

ಸಂಶಯ ಬೇಡ, ಕಾಮನನ್ನು ಅಂದೇ ಕಡಲಿಗೆಸೆದು ಮರ್ದಿಸಿದೆ. ನೀನು ನನ್ನ ಮೇಲಿನ ಮಮಕಾರದಿಂದ ವಿಚಾರಿಸಿಕೊಂಡು ಹೋಗಲು ಬಂದದ್ದು ಸಂತಸ ಎಂದನು ಶಂಬರ.

ಖುಲ್ಲ ರಕ್ಕಸ ನೀನು ಕುವರನ ಕೈಯಾರ
ಕೊಲ್ಲದೆ ಕಡಲೊಳು ಬಿಸುಟೆ
ಹೊಲ್ಲೆಹದೊಂದು ಪೆಣ್ಮೀನು ಕಂಡೆರಗಿ ಕ
ರ್ವಿಲ್ಲನ ನೆರೆನುಂಗಿತಾಗ ೬

ಖೂಳ ರಕ್ಕಸ, ನೀನು ಕುವರನನ್ನು ಕೈಯಾರೆ ಕೊಲ್ಲದೆ ಕಡಲೊಳಕ್ಕೆ ಎಸೆದೆ. ಕೀಳು ದರ್ಜೆಯ ಹೆಣ್ಣುಮೀನು ಅಲ್ಲಿಗೆರಗಿ ಕುವರನನ್ನು ಗುಳುಂ ಎಂದು ನುಂಗಿತು.

ಒರ್ಬರ ಕಣ್ಗೆ ಗೋಚರಿಸದಂದದಿ ಮೀನ
ಗರ್ಭವ ರತಿದೇವಿ ಬಗಿಯೆ
ಅರ್ಭಕ ಪೊರಮಟ್ಟು ಬಂದನು ಖಳಚಂದ್ರ
ಸ್ವರ್ಭಾನು ತಾನೆಂಬಂತೆ ೭

ಒಬ್ಬರ ಕಣ್ಣಿಗೂ ಗೋಚರಿಸಿದಂತೆ, ಮೀನಿನ ಗರ್ಭವನ್ನು ರತಿದೇವಿ ಸೀಳಲು, ಅರ್ಭಕ ಹೊರಬಂದನು– ಖಳಚಂದ್ರ ಸ್ವರ್ಭಾನುವಿನಂತೆ (ರಕ್ಕಸಚಂದ್ರನನ್ನು ನುಂಗುವ ರಾಹುವಿನಂತೆ)

ಲಲನೆ ತನ್ನ ವಿಲಾಸಿನಿಯ ಕಂದನೆಂದು
ಸಲಹಿದಳಾ ಚಿಣ್ಣನನ್ನ
ಹಲವು ವಿದ್ಯೆಯ ಗರುಡಿಯ ಪೊಕ್ಕು ಕಲಿತನು
ಗೆಲುವುಂಟವಗೆ ಸೋಲ್ನಿನಗೆ ೮

ರತಿ ತನ್ನ ಗೆಳತಿಯ ಮಗನೆಂದು ಸಾಕಿ ಸಲಹಿದಳು ಆ ಚಿಣ್ಣನನ್ನು. ನಿನ್ನ ಗರಡಿ ಮನೆಯಲ್ಲಿ ಹಲವು ವಿದ್ಯೆಗಳನ್ನು ಕಲಿತನು. ಗೆಲವು ಅವನಿಗೆ, ಸೋಲು ನಿನಗೆ

ಪುಟ್ಟನೆಂದೆನಬೇಡ ಪರಮಶಕ್ತಿಯ ತಂದು
ಕೊಟ್ಟನು ಕೃಷ್ಣ ಮನ್ಮಥಗೆ
ದಟ್ಟೈಸಿ ನೀ ಬಾಹುಬಲದಿಂದ ಕಾಡಲು
ಪೆಟ್ಟನಿಕ್ಕದೆ ಬಿಡನೆಂದ ೯

ಪುಟಾಣಿ ಹುಡುಗನೆಂದು ಅಸಡ್ಡೆ ಮಾಡಬೇಡ, ಕೃಷ್ಣ ಮನ್ಮಥನಿಗೆ ಪರಮಶಕ್ತಿಯನ್ನು ಧಾರೆ ಎರೆದಿದ್ದಾನೆ. ನೀನು ಬಾಹುಬಲದಿಂದ ಹೋರಾಡಿದಾಗ ಅವನು ಪೆಟ್ಟು ಕೊಡದೆ ಬಿಡನು ಎಂದನು ನಾರದ.

ಕುಡಿಮೀಸೆ ಕುಣಿದವು ಮೂಗಲಿ ಪೊಗೆಸುತ್ತಿ
ಕಿಡಿಗಳನಕ್ಷಿ ಮುಕ್ಕುಳಿಸೆ
ಜಡಿದನು ಕೈಯ ಖಡ್ಗವ ಜಳಪಿಸಿ ದೈತ್ಯ
ನುಡಿದ ಕಠೋರ ವಾಕ್ಯಗಳ ೧೦

ಕಣ್ಣುಗಳು ಕಿಡಿಗಳನ್ನು ಮುಕ್ಕುಳಿಸಲು ಮೂಗಿನಲಿ ಹೊಗೆ ಸುತ್ತಿಕೊಂಡು ಕುಡಿಮೀಸೆಗಳು ಕುಣಿದವು ;ಕೈಯಲ್ಲಿರುವ ಖಡ್ಗವನ್ನು ಜಳಪಿಸಿ ಜಡಿದು, ದೈತ್ಯ ಕಠೋರ ವಾಕ್ಯಗಳನ್ನು ನುಡಿದ.

ಸರ್‍ರನೆ ಸೀಳ್ವೆ ದಿಗ್ಗಜದ ಮಂಡೆಯ ಮೆಟ್ಟಿ
ಸುರ್‍ರನೆ ಸುರಿವೆನೇಳ್ಗಡಲ
ತಿರ್‍ರನೆ ತಿರುಹುವೆ ಧರಣಿಯ ಮಹದಾದಿ
ಪರ್ವತವನು ಕೀಳ್ವೆ ನೋಡು ೧೧

ದಿಗ್ಗಜದ ಮಂಡೆಯನ್ನು ಮೆಟ್ಟಿಕೊಂಡು ಸರ್‍ರನೆ ಸೀಳುವೆನು, ಸಪ್ತ ಸಮುದ್ರಗಳನ್ನು ಸುರ್‍ರನೆ ಸುರಿದುಕೊಳ್ಳುವೆನು(ಬಾಯೊಳಕ್ಕೆ ಬಸಿದುಕೊಳ್ಳುವೆ), ಧರಣಿಯನ್ನು ತಿರ್‍ರನೆ ತಿರುಗಿಸುವೆನು, ಮಹದಾದಿ ಪರ್ವತವನ್ನು ಕೀಳುವೆನು ನೋಡು.

ಕೋಪವಿನ್ನೇತಕೆ ಮಗನೆ ನಿನ್ನೊಳು ಕಾದ
ಲಾಪರೆ ಸುರನರೋರಗರು
ಈ ಪಡುಚನ ಕೈಯ್ಯ ಕಾರ್ಯವೇನೆಂಬುದ
ನೀ ಪರಿಕಿಸಿ ಕೇಳ್ದರಿಯ ೧೨

ಕೋಪವೇತಕ್ಕೆ ಮಗನೆ, ಸುರನರೋರಗರು ನಿನ್ನೊಡನೆ ಯುದ್ಧ ಮಾಡಬಲ್ಲರೆ? ಈ ಮಲಗಿದವನ ಕೈಯೊಳಗಿನ ಕಾರ್ಯವೇನೆಂಬುದನ್ನು ನೀನು ಪರೀಕ್ಷಿಸಿ ನೋಡಿ ತಿಳಿದಿಲ್ಲವೆ? ಕೇಳಿ ತಿಳಿದಿಲ್ಲವೆ?

ಆದಿಯೊಳಜ ಕೊಟ್ಟ ವರ ನಿನ್ನ ವಿದ್ಯೆಯ
ಸಾಧಿಸಿದನ ಕೈಲಿ ನೀನು
ಭೇದಿಸಿಕೊಂಬ ಸಂಪ್ರಾಪ್ತಿಯುಂಟೆಲೆವೊ ವಿ
ಭೇದಿಸಿ ನೋಡಿಕೊ ಮಗನೆ ೧೩

ನಿನ್ನ ವಿದ್ಯೆಯ ಸಾಧಿಸಿದವನ ಕೈಯಿಂದಲೇ ನೀನು ಹತನಾಗುವ ವಿಧಿಬರಹವ ಉಂಟು ಎಂದು ಮೊದಲಿಗೆ ಬ್ರಹ್ಮ ಕೊಟ್ಟ ವರ, ಅದನ್ನು ವಿಭೇದಿಸಿ ನೋಡಿಕೊ ಮಗನೆ.

ನೀತಿಯಿದಹುದು ಸನ್ಮುನಿರಾಯ ನಿನ್ನಯ
ಮಾತ ಮೀರಿ ನಡೆದವನಲ್ಲ
ಈ ತರಳನ ಕೆಯ್ಯ ಕೊಂಬೆನು ಸಮರಕ್ಕೆ
ಪೀತಾಂಬರ ಬರಲೆಂದ ೧೪

ಸನ್ಮುನಿರಾಯ ನಿನ್ನ ನೀತಿಯನ್ನು ಮೀರಿ ನಡೆದವನಲ್ಲ. ಈ ಹುಡುಗನೊಡನೆ ಕಾದಾಟಕ್ಕೆ ನಿಲ್ಲುವೆನು, ಸಮರಕ್ಕೆ ಪೀತಾಂಬರನಾದ ಕೃಷ್ಣನೂ ಬರಲಿ ಎಂದನು.

ಅಂತಕ ಹರನಾದೊಡಾಗಲಿ ಬರಿ ಬಾಯ
ಪಂತದ ಮಾತ ಸೊಲ್ಲಿಪರೆ
ಎಂತಾದೊಡೆ ಕಾದಿ ಎಡರಿಲ್ಲದೆ ಗೆದ್ದು
ನಿಂತರೆ ನಿಜವೆನ್ನಬಹುದು ೧೫

ಅಂತಕಹರ (ಯಮನನ್ನು ಸೋಲಿಸಿದ ಈಶ್ವರ) ನಾಗಲೀ ಬರೀ ಬಾಯಿಮಾತಿನ ಶಪಥವನ್ನು ಮಾಡುವರೆ? ಹೇಗೋ ಹೋರಾಡಿ ತೊಂದರೆ ಇಲ್ಲದೆ ಗೆದ್ದಾಗ ಮಾತ್ರ ನಿಜ ಎನ್ನಬಹುದು.

ಹುಟ್ಟಿದ ದಿನವೇಳರೊಳಗೆ ಷಣ್ಮುಖ ಹುಡಿ
ಗುಟ್ಟಿದ ತಾರಕಾಸುರನ
ನಿಟ್ಟೆಲ್ವು ಮುರಿದು ನಿರ್ಜರರಿಗೆ ಪಟ್ಟವ
ಕಟ್ಟಿದ ಕತೆಯ ನೀನರಿಯ ೧೬

ಹುಟ್ಟಿದ ಏಳುದಿನಗಳ ಒಳಗೆ ಷಣ್ಮುಖ ತಾರಕಾಸುರನ ನಿಟ್ಟೆಲುಬು ಮುರಿದು ಪುಡಿಪುಡಿ ಮಾಡಿ ದೇವತೆಗಳಿಗೆ ಪಟ್ಟವ ಕಟ್ಟಿದ ಕಥೆಯನ್ನು ನೀನು ತಿಳಿದಿಲ್ಲವೇನು?

ಸಣ್ಣವನೆನಬೇಡ ಹರಿ ತನ್ನ ಪೆತ್ತವ
ಳಣ್ಣನ ಮಡುಹಿ ಮೇದಿನಿಯ
ತಿಣ್ಣವನಿಳುಹಿದ ಬಹು ಬಾಹುಬಲಾಢ್ಯರ
ಕಣ್ಣಾರೆ ನೀ ಕಂಡರಿಯ ೧೭

ಸಣ್ಣವನು ಎನ್ನಬೇಡ, ಕೃಷ್ಣ ತನ್ನ ತಾಯಿಯ ಅಣ್ಣನನ್ನು (ದೇವಕಿಯ ಅಣ್ಣ ಕಂಸ) ಸಂಹರಿಸಿ ಭೂಭಾರವನ್ನು ಇಳಿಸಿದ. ಇಂಥ ಬಲಾಢ್ಯರ ನೀ ಕಣ್ಣಾರೆ ಕಂಡಿಲ್ಲವೇನು?

ಕಪಟನಾಟಕ ಸೂತ್ರಧಾರನ ಸುತ ನಿನ್ನ
ಕಪಟವಿದ್ಯವ ಸಾಧಿಸಿದ
ಕಪಟಾನ್ವಿತನೊಳು ನಾನೊಮ್ಮೆ ಪೋಗಿ ನಿ
ಷ್ಕಪಟದಿ ಮಾತಾಡಿ ಬರಲೆ ೧೮

ಕಪಟನಾಟಕ ಸೂತ್ರಧಾರಿಯಾದ ಕೃಷ್ಣನ ಮಗ ನಿನ್ನ ಕಪಟ ವಿದ್ಯೆಯನ್ನು

ಸಾಧಿಸಿದ. ಅಂಥ ಕಪಟಾನ್ವಿತನ ಬಳಿಗೆ ಹೋಗಿ ನಿಷ್ಕಪಟದಿಂದ ಮಾತಾಡಿ ಬರಲೆ?

ನಾರದ ಮುನಿಪುಂಗವ ನಿನ್ನ ಪೋಗೆನ್ನ
ಬಾರದು ಬೇಡೆನ್ನ ಬಹುದೆ
ಆರ ಮೇಲಪೇಕ್ಷೆಯಿದೆಯೊ ಪರಮ ವಿ
ಚಾರವ ಮಾಡು ಹೋಗೆಂದ ೧೯

ನಾರದ ಮುನಿಶ್ರೇಷ್ಠ ನಿನ್ನ ಹೋಗೆನ್ನಬಾರದು ಬೇಡೆನ್ನಬಹುದೆ? ಆದ ಮೇಲೆ ಆಪೇಕ್ಷೆ ಇದೆಯೊ ಉತ್ತಮ ವಿಚಾರವನ್ನು ಮಾಡು ಹೋಗೆಂದ

ಓರಂತೆ ಮಧು ಘೃತ ರಸದಾಳಿರಸ ಗೋ
ಕ್ಷೀರದಂತೆಸೆವ ಕಾರ್ಯಕ್ಕೆ
ನೀರಂತೆ ಕಡಜಿಗನೆಸರಂತೆ ಪುಳಿಯಂತೆ
ನಾರದ ಬಂದನಾ ಎಡೆಗೆ ೨೦

ಒಂದೇಸಮನಾಗಿ ಮಕರಂದ, ತುಪ್ಪ, ರಸದಾಳಿ ಕಬ್ಬಿನ ರಸ, ಹಸುವಿನ ಹಾಲಿನಂತೆಸೆವ ಕಾರ್ಯಕ್ಕೆ ನೀರಂತೆ, ಕಡಜಿಗನ ಎಸರಂತೆ(ಸಾರಿನಂತೆ), ಹುಳಿಯಂತೆ ನಾರದ ಬಂದನು ಅಲ್ಲಿಗೆ.

ಬೋಧಾರುಹನಾಗಿ ಮುನಿರಾಯ ನೀ ಬಂದ
ಭೇದವ ಕರುಣಿಪುದೆನುತ
ಪಾದಕೆ ಪೊಡಮಟ್ಟು ರತಿದೇವಿ ಪರಮ ಪು
ಣ್ಯೋದಯ ಸಲಹೆಂದಳಳುತ ೨೧

ದಿವ್ಯಜ್ಞಾನಿ ಗುರುವಾಗಿ ಮುನಿಪುಂಗನ ನೀನು ಬಂದ ಭೇದೋಪಾಯವನ್ನು ಕರುಣಿಸು ಎಂದು ಪಾದಕ್ಕೆ ನಮಸ್ಕರಿಸಿ, ಪರಮ ಪುಣ್ಯೋದಯ ನಮ್ಮನ್ನು ರಕ್ಷಿಸು ಎಂದು ರತಿದೇವಿ ಕಣ್ಣೀರು ಕರೆದಳು.

ಕೊರಳೊಳು ಗದ್ಗದ ಸುರಿವ ಕಂಬನಿಯ ಕೈ
ಬೆರಳ ನೆಗ್ಗಿಸುತ ಸಂಪಗೆಯ
ಅರಳುಂಡ ಪೆಣ್ದುಂಬಿಯಂದದಿ ರತಿ ಪೂ
ಸರಲನ ತಂದು ತೋರಿದಳು ೨೨

ಕೊರಳಲ್ಲಿ ಗದ್ಗದ, ಕಣ್ಣಲ್ಲಿ ಸುರಿವ ಕಂಬನಿಯ ಕೈಬೆರಳನ್ನು ನೆ(ಹಿಸಕುತ್ತ)ಗ್ಗಿಸುತ್ತ, ಸಂಪಗೆಹೂವಿನ ಮಧುವುಂಡ ಹೆಣ್ಣದುಂಬಿಯಂತೆ ರತಿ ಮರಿ ಹೂಬಾಣನನ್ನು ತಂದು ತೋರಿದಳು.

ಕಂಡ ಸನ್ಮುನಿರಾಯ ಕಮನೀಯ ಇಕ್ಷುಕೋ
ದಂಡನ ತರಳ ವಿಗ್ರಹವ
ಚಂಡವಿಕ್ರಮದೇಳ್ಗೆಯ ನೋಡಿ ಮನಸೋತು
ಕೊಂಡಾಡಿದನು ಕೂರ್ಮೆಯಲಿ ೨೩

ಸುಂದರವಾದ ಮನ್ಮಥನ ಮರಿ ಮೂರ್ತಿಯನ್ನು ಕಂಡ ನಾರದ,ಅವನ ಪ್ರಚಂಡ ಸಾಹಸದೆತ್ತರವನ್ನು ನೋಡಿ ಮನಸೋತು ಪ್ರೀತಿಯಿಂದ ಕೊಂಡಾಡಿದನು.

ಮುದ್ದಡಸಿದ ಚಿಣ್ಣ ತಾವರೆಗಣ್ಣ ಅನಿ
ರುದ್ಧ ತಾತ್ಪರಿಯದಿ ನಿನಗೆ
ದುದ್ಧರ ಪರಮಶಕ್ತಿಯ ಕೃಪೆ ಮಾಡಿದೆ
ಕದ್ದಯ್ಸದೆ ಕಾದು ಮನಗೆ ೨೪

ಮುದ್ದುಮುದ್ದಾದ ತಾವರೆಗಣ್ಣಿನ ಚಿಣ್ಣ ಅನಿರುದ್ಧ, ನಿನಗೆ ದುರ್ಧರವಾದ ಪರಮಶಕ್ತಿಯನ್ನು ಕೃಪೆ ಮಾಡಿದ್ದೇನೆ ಹಿಂದೆ ಮುಂದೆ ನೋಡದೆ ಯುದ್ಧ ಮಾಡು ಮಗನೆ

ದೇವಾಧೀಶ ನಿನ್ನಯ ಸದು ಹೃದಯ ರಾ
ಜೀವದೊಳಿರಲೆಂದು ಹರಸಿ
ಕಾವನಕೆಯ್ಯಲಿರಕ್ಕಸನಾಯುಷ್ಯ
ತೀವಂತೆ ಮಾಡಿದ ಮುನಿಪ ೨೫

ದೇವಾದೀಶನಾದ ವಿಷ್ಣು(ಕೃಷ್ಣ) ನಿನ್ನ ಎದೆಕಮಲದಲ್ಲಿರಲಿ ಎಂದು ಹರಸಿ, ಕಾಮನ ಕೈಯಲ್ಲಿ ರಕ್ಕಸನ ಆಯುಷ್ಯ ತುಂಬುವಂತೆ ಮಾಡಿದ ನಾರದಮುನಿರಾಯ.

ಮುರಹರ ಹೃದಯ ಸ್ಥಾನವ ಸನ್ಮುನಿ ನಿನ್ನ
ವರವಾಕ್ಯ ವಜ್ರಜೋಡಾಯ್ತು
ತರಳನೆಂದೆನಬೇಡ ತವಕಿಪ ದೈತ್ಯನ
ಹರಣವ ಕೊಂಬೆ ನಾನೆಂದ ೨೬

ಕೃಷ್ಣನ ಹೃದಯ ಸ್ಥಾನದಲ್ಲಿರುವ ಸನ್ಮುನಿರಾಯ ನಿನ್ನ ವರವಾಕ್ಯ ನನಗೆ ವಜ್ರದ ರಕ್ಷಾಕವಚವಾಯಿತು. ಹುಡಗನೆಂದು ಭಾವಿಸಬೇಡ, ತವಕಿಸುವ ದೈತ್ಯನ ಪ್ರಾಣವನ್ನು ತೆಗೆಯುವೆ ನಾನು ಎಂದನು.

ಶಿವನಿಂದಲೀ ಬಟ್ಟೆ ಬಂತು ಮತ್ಕಾಂತಗಿಂ
ದಿವನಿಂದಲೇನಾದಪುದೊ
ಅವಗಡವಾಗಿದೆಯೆನಗೆ ವಿಸ್ತರಿಸೆಂದು
ಧವಳಾಕ್ಷಿ ಎರಗಿದಳು ಮುನಿಗೆ ೨೭

ಶಿವನಿಂದ ನನ್ನ ಗಂಡನಿಗೆ ಈ ಗತಿ ಬಂತು; ಇಂದು ಶಂಬರಾಸುರನಿಂದ ಯಾವ ಗತಿ ಬರುವುದೋ, ನನಗೆ ಆತಂಕವಾಗಿದೆ ವಿವರಿಸು ಎಂದು ರತಿ ನಾರದನಿಗೆ ನಮಿಸಿದಳು.

ಮಲ್ಲಿಗೆಗೋಲನ ಮಡದಿ ನಿನಗಾವ ಭಯ
ವಿಲ್ಲವೆಂದಾಡಿ ಮನ್ಮಥನ
ಗೆಲ್ಲವರಿತು ನಾರದ ಮುನಿ ಖಳನಿ
ದ್ದಲ್ಲಿಗೆ ಬಂದನಾಕ್ಷಣದಿ ೨೮

ಹೂಬಾಣನ ಮನದನ್ನೆ , ನಿನಗೆ ಯಾವ ಭಯವೂ ಬೇಡ, ಮನ್ಮಥನ ಗೆಲುವು ಖಚಿತ ಎಂದು ನಾರದ ನುಡಿದು ಖಳನಿದ್ದಲ್ಲಿಗೆ ಬಂದನು.

ಬಾರದ ಮುನ್ನ ಧಿಕ್ಕರಿಸಿ ಕೇಳ್ದಸುರನು
ಮಾರನ ವಾಕ್ಯ ನಿಷ್ಠುರವ
ನಾರದ ಮುನಿ ವಿಸ್ತರಿಸಲ್ವೆ ಕರ್ಣ ಕ
ಠೋರವನಾಂತು ಕೋಪಿಸಿದ ೨೯

ಬರುವ ಮುನ್ನ ರಕ್ಕಸ ಧಿಕ್ಕರಿಸಿ ಕೇಳಿದ. ನಾರದ ಮಾರನ(ಮನ್ಮಥನ) ನಿಷ್ಠುರ ವಾಕ್ಯವನ್ನು ವಿಸ್ತರಿಸಿ ಹೇಳಿದಾಗ ರಕ್ಕಸ ಕರ್ಣಕಠೋರ ವಿಷಯವನ್ನು ಕೇಳಿ ಸಿಡಿಮಿಡಿಗೊಂಡ.

ನೀರಜೋದ್ಭವ ಮಾನಸಪುತ್ರ ನೀನಲ್ಲ
ದಾರಾದಡೀ ಮಾತುಗಳ

ಭಾರಕನಾಗೆನ್ನೊಡ ನುಸಿರ್ದೊಡೆ ಸೀಳಿ
ತೋರಣಗಟ್ಟುತಿರ್ದೆನೆಂದ ೩೦

ಬ್ರಹ್ಮನ ಮಾನಸಪುತ್ರನಾದ ನೀನಲ್ಲದೆ ಇನ್ನಾರಾದರೂ ಈ ಮಾತುಗಳನ್ನು ಹೊಣೆಗಾರನಾಗಿ ಎನ್ನೊಡನೆ ಹೇಳಿದ್ದರೆ ಸೀಳಿ ತೋರಣಕಟ್ಟುತ್ತಿದ್ದೆ ಎಂದನು.

ಕಂಡುದ ನುಡಿದರೆ ಕೋಪವೆ ಇಕ್ಷುಕೋ
ದಂಡ ಕಾದಲಿಕೆ ಬಂದಿಹನೆ
ಅಂಡಲೆದಾತನ ಪಿಡಿತಂದು ನಡುವಿಂಗೆ
ತುಂಡು ಮಾಡದೆ ಬಿಡುವೆನೆ ೩೧

ಕಂಡುದನ್ನು ಹೇಳಿದರೆ ಕೋಪವೆ?ಹೂಬಾಣ ಕದನಕ್ಕೆ ಬಂದಿರುವನೆ? ಅಲೆದಾಡಿ ಅವನನ್ನು ಹಿಡಿದು ತಂದು ಮಧ್ಯಕ್ಕೆ ಎರಡು ತುಂಡು ಮಾಡದೆ ಇರುವೆನೆ?

ಪೊಟ್ಟೆಯ ನುಡಿಗಳಂತಿರಲಿ ನಾರದ ನಿನ್ನ
ದಿಟ್ಟಿಗಚ್ಚರಿಯೀವೆನೆನುತ
ಜಟ್ಟಿಗ ದೈತ್ಯರ್ಗೆ ಬೆಸಗೊಟ್ಟು ಹಿಡಿತರ
ಲಟ್ಟಿದ ಖಳ ಕುಮಾರಕನ ೩೨

ರಸವಿಹೀನ ಓಟೆಯಂಥ ಮಾತುಗಳು ಹಾಗಿರಲಿ, ನಾರದಮುನಿಯೇ ನಿನ್ನ ದೃಷ್ಟಿಗೆ ಆಶ್ಚರ್ಯವನ್ನುಂಟು ಮಾಡುವನೆಂದು ಮಾರಕುಮಾರನನ್ನು ಹಿಡಿದು ತರುವಂತೆ ದೈತ್ಯ ಜಟ್ಟಿಗಳಿಗೆ ಅಪ್ಪಣೆ ಮಾಡಿ ಅಟ್ಟಿದನು.

ಹಂತವ ಮುರಿಯ ಬಂದಸುರರಿಗಿದಿರಾಂತು
ನಿಂತಿರೆ ಕಂಡು ಸೈರಿಸದೆ
ಮುಂತೊರ್ವ ತುಡುಕಲು ತಿವಿದ ಬಾಯೊಳಿದ್ದ
ದಂತಗಳು ಹೊರ ಸಿಡಿವಂತೆ ೩೩

ಹಂತ(ಪಂಥ)ವನ್ನು ಮುರಿಯಲು ಬಂದ ರಕ್ಕಸರಿಗೆ ಎದುರುತಾಗಿ ನಿಂತಿರುವವರನ್ನು ಕಂಡು ಸೈರಿಸದೆ, ಮುಂದೊಬ್ಬ ಹಿಡಿಯಲೋಸುಗ ತಿವಿದ ಬಾಯೊಳಗಿನ ಹಲ್ಲುಗಳು ಹೊರಕ್ಕೆ ಸಿಡಿಯುವಂತೆ.

ಮತ್ತೊರ್ವ ದಡಿಗ ದಾನವ ಬಂದು ಕೈವಿಡಿ
ದೊತ್ತಲು ಬಿಡಿಸಿಕೊಂಡವನ
ಕತ್ತಿಯಿಂ ತಿವಿಯಲ್ಕೆ ಮೂಗು ಬಾಯೊಳಗೆಲ್ಲ
ನೆತ್ತರು ವಸಂತವಾಯಿತು ೩೪

ಮತ್ತೊಬ್ಬ ದಡಿಯ ದೈತ್ಯ ಬಂದು ಕೈಹಿಡಿದಾಗ ಬಿಡಿಸಿಕೊಂಡು ಅವನ ಕತ್ತಿಯಿಂದ ತಿವಿಯಲು ಮೂಗು ಬಾಯೊಳಗೆಲ್ಲ ರಕ್ತದೋಕುಳಿಯಾಯ್ತು.

ಎಡಬಲದಿ ಪಿಂತೆ ಮುಂತೆ ಬಂದಸುರರು
ತುಡುಕಲ್ಕೆ ಬಿಡಿಸಿಕೊಂಡವರ
ಮೃಡನ ನಾಟ್ಯವನಾಡಿ ದಂಡೆ ಕಾಲಿಂದ
ಹೊಡೆದುರ್ವಿಯಲೊರಗಿಸಿದ ೩೫

ಹಿಂದೆಮುಂದೆ ಎಡಬಲದಲ್ಲಿ ದೈತ್ಯರು ಬಂದು ಹಿಡಿಯಲು, ದಂಡೆಕಾಲುಗಳಿಂದ ಮೃಥನ ನಾಟ್ಯವನ್ನಾಡಿ ಅವರನ್ನು ಹೊಡೆದು ಭೂಮಿಯಲ್ಲಿ ಒರಗಿಸಿದನು.

ಪರಿದಿಟ್ಟ ದಿಟ್ಟಿಯ ಬಳಿಕೊರ್ವನ ಕಾಲ
ಮುರಿದಿಟ್ಟ ನಿಟ್ಟೆಲುಗಳನು
ನಿರಿನಿಟಿಲೆಂಬಂತೆ ಮುರಿದು ಮಸ್ತಕಗಳ
ತಿರಿಕಲ್ಲನಾಡಿ ಬೊಬ್ಬಿರಿದ ೩೬

ನೋಟದ ಕಣ್ಣನ್ನು ಸೀಳಿಟ್ಟ, ಬಳಿಕ ಒಬ್ಬನ ಕಾಲನ್ನು ಮುರಿದಿಟ್ಟ, ನಿಟ್ಟೆಲುಬುಗಳನ್ನು ರಿನಿಟಲು ಎಂಬಂತೆ ಮುರಿದು, ತಲೆಗಳಲ್ಲಿ ಅಣ್ಣೆಕಲ್ಲಾಟವನ್ನು ಆಡಿದ.

ಕಾದಿ ಸತ್ತುವರನ ಪಿಡಿದವರ್ತಿರುಗದ
ಹಾದಿಯ ಮೆಟ್ಟಿದರು ಮಗುಳೆ
ಭೇದಿಸಲರಿದೆನೆ ಮಾಬಲವೈತಂದು ವಿ
ರೋಧಿಯ ಮುತ್ತಿತ್ತೇನೆಂಬೆ ೩೭

ಕಾದಾಡಿ ಸತ್ತುವರನನ್ನು ಹಿಡಿದವರು, ಹಿಂದಿರುಗದ ಹಾದಿಯನ್ನು ಹಿಡಿದರು. ಭೇದಿಸಲು ಅಸಾಧ್ಯವೆನ್ನಿಸುವ ಮಹಾಬಲ(ಸೈನ್ಯ) ಬಂದು ಶತ್ರುವಿಗೆ ಮುತ್ತಿಗೆ ಹಾಕಿದ್ದನ್ನು ಏನು ಹೇಳಲಿ?

ಕಾದುರಿಯೊಳು ಕರ್ಬುನದ ಮೇಲ್ಗಂಬದಲಿ
ಸಾಧನೆಗೆಯ್ದ ಪುಲ್ನರರು
ಐದಿದ ದಾರಿಯಲಿ ತೀರ್ಕಣೆಯಾದ ತೆರ
ನಾದುದು ಬಂದ ದೈತ್ಯರಿಗೆ ೩೮

ಕಾದುರಿಯಲ್ಲಿ ಕಬ್ಬಿಣದ ಮೇಲ್ಗಂಬದಲ್ಲಿ ಸಾಧನೆ ಮಾಡಿದ ಹುಲು ಮಾನವರು ಬಂದ ದಾರಿಯಲ್ಲಿ ಅಂತ್ಯವಾದ ರೀತಿಯಾಯಿತು ಬಂದ ರಕ್ಕಸರಿಗೆ

ಮೃಡನ ಕಣ್ಣುರಿ ಕಾಮನ ಬಾಹು ಬಲದೊಳ
ಗಡಗಿರ್ದು ತಲೆದೋರಿದಂತೆ
ಬಿಡದೆ ಕಂತುವಿನ ಪ್ರತಾಪಾಗ್ನಿ ಬೆನ್ನಟ್ಟಿ
ಸುಡತೊಡಗಿತು ನಿಶಾಚರರ ೩೯

ಶಿವನ ಕೆಂಡಗಣ್ಣಿನ ಉರಿ ಕಾಮನ ಬಾಹುಬಲದಲ್ಲಿ ಅಡಗಿದ್ದು ತಲೆದೋರಿತೆಂಬಂತೆ ಮನ್ಮಥನ ಪ್ರತಾಪಾಗ್ನಿ ನಿಶಾಚರರನ್ನು ಬೆನ್ನಟ್ಟಿ ಸುಡತೊಡಗಿತು.

ಕದನದಿ ಮುರಿದಿಕ್ಕಿ ಖಳದೈತರ ಶಸ್ತ್ರ
ಸದನವ ಹೊಕ್ಕು ಸೂಟಿಯಲಿ
ಹೆದೆವಿಲ್ಲು ಕೋಲ್ಗಳ ಕೈಕೊಂಡು ಬಿತ್ತೀಸಾ
ಯುಧನಾಗಿ ಪೊರವಟ್ಟು ಬಂದ ೪೦

ಖಳದೈತ್ಯರನ್ನು ಕದನದಲ್ಲಿ ಮುರಿದಿಕ್ಕಿ, ಶರವೇಗದಲ್ಲಿ ಶಸ್ತ್ರಸದನವನ್ನು ಹೊಕ್ಕು ಹೆದೆ, ಬಿಲ್ಲು, ಬಾಣಗಳ ಕೈಕೊಂಡು ಬತ್ತೀಸ್ (ಮೂವತ್ತೆರಡು) ಆಯುಧನಾಗಿ ಹೊರಟು ಬಂದ.

ಕೊಲುವುದೇನಚ್ಚರಿ ರಣರಂಗದೊಳು ನೀವು
ಹುಲುದೈತ್ಯರು ನಮಗಿದಿರೆ
ಬಲುಹುಳ್ಳಡೆ ಬರಹೇಳೆಂದು ಮನ್ಮಥ
ಕಲು ಹೃದಯನಿಗೆ ಕರೆ ಕೊಟ್ಟನು ೪೧

ರಣರಂಗದಲ್ಲಿ ಹುಲುದೈತ್ಯರಾದ ನೀವು ನಮಗೆ ಸರಸಾಟಿಯೆ? ಶಕ್ತಿಯಿದ್ದರೆ ಕಲ್ಲುಹೃದಯನಾದ ಶಂಬರನನ್ನು ಬರಹೇಳೆಂದು ಕರೆಕೊಟ್ಟನು.

ಬಡಿಸಿಕೊಂಡೊರ್ವ ಬಂದುಸುರಿದ ಕುವರನ
ತುಡುಕಿದ ನಿಖಿಳ ರಕ್ಕಸರ
ಮುಡಿ ತೋಳ್ತೊಡೆಗಳ ಕಿತ್ತಿಟ್ಟನೆನೆ ಕೇಳ್ವ
ಹುಡುಗನ ಪರಮ ಪೌರುಷವ ೪೨

ಬಡಿಸಿಕೊಂಡ ಒಬ್ಬ ಬಂದು ಹೇಳಿದ, ಕುವರನ್ನು ಹಿಡಿದ ಸಕಲ ರಕ್ಕಸರ ತಲೆತೋಳು ತೊಡೆಗಳನ್ನು ಬೇರ್ಪಡಿಸಿದನೆಂದಾಗ ಹುಡುಗನ ಪರಮಪೌರುಷವನ್ನು ಅರಿತ.

ರಣಹೇಡಿಗಳಾದವರ ಕಣ್ಮನಕೆ ಸೀರ್
ನೊಣ ಗರುತ್ಮನಂತಿಹುದು
ಬಣಗರ ತೊಲಗ ಹೇಳೆನುತ ಮುಮ್ಮಡಿ ರಾ
ವಣನಂತೆ ನಿಂದು ಗರ್ಜಿಸಿದ ೪೩

ರಣಹೇಡಿಗಳಿಗೆ ಸಣ್ಣ ನೊಣ ಗರುಡನಾಗಿ ಕಾಣುವನು. ರಣರಂಗದಿಂದ ಆ ಕ್ಷುದ್ರರನ್ನು ತೊಲಗಿಸು ಎಂದು ಶಂಬರ ಮುಮ್ಮಡಿ ರಾವಣನಂತೆ ಗರ್ಜಿಸಿದ.

ಬಟ್ಟಮುತ್ತುಗಳ ಕೇವಣಿಸಿರ್ದ ಪಾರಿಯ
ಪಟ್ಟಾವಳಿ ಚಲ್ಲಣವನು
ತೊಟ್ಟು ಪೆರ್ದೊಡೆಗೆ ಕೇಸರಿ ಮಧ್ಯಕೆ ಬಿಗಿ
ದುಟ್ಟ ಕಾಸೆಯನುತ್ಸವದಿ ೪೪

ದುಂಡು ಮುತ್ತುಗಳನ್ನು ಕೀಲಿಸಿದ ಬಣ್ಣದ ಪಟ್ಟೆಪಟ್ಟೆ ಇರುವ ರೇಷ್ಮೆ ಚಲ್ಲಣವನ್ನು ತೊಡೆಗೆ ತೊಟ್ಟು, ಸಿಂಹದ ಸೊಂಟಕ್ಕೆ(ಸಣ್ಣ ನಡುವಿಗೆ) ನಡುಕಟ್ಟನ್ನು ಬಿಗಿದನು.

ವೀರ ಚಿಮ್ಮುರಿಯ ಸುತ್ತಿದ ಸಿರಿಮುಡಿಗೆ ಮಂ
ದಾರ ಮಾಲೆಯ ಕಟ್ಟಿ ಹಣೆಗೆ
ರಾರಾಜಿಪ ತಿಲಕವನಿಟ್ಟು ಗಂಧವನು
ಪೂರಯಿಸಿದನು ನುಣ್ಮೆಯ್ಗೆ ೪೫

ವೀರಸದೃಶ ರುಮಾಲನ್ನು ಸುತ್ತಿದ ತಲೆಗೆ ಮಂದಾರ ಮಾಲೆಯನ್ನು ಕಟ್ಟಿ, ಹಣೆಗೆ ಹೊಳೆಯುವ ಬೊಟ್ಟನ್ನಿಟ್ಟು, ಗಂಧವನ್ನು ಲೇಪಿಸಿದನು ನುಣ್ಣನೆಯ ಮೈಗೆ.

ಬಿಡದೊದರುವ ಗಂಟೆ ಸರಪಣಿ ಭಾಸುರ ಹೊಂ
ದೊಡರು ಮಾಣಿಕದಿಂದೆಸೆವ
ಕಡೆಯ ಪೆಂಡೆಯವಿಟ್ಟು ಕಾದುವ ರಣಧರೆ
ಯೆಡೆಗೈತಂದನಾಕ್ಷಣದಿ ೪೬

ಬಿಡದೆ ಸದ್ದು ಮಾಡುವ ಗಂಟೆ, ಸರಪಳಿ, ಕಾಂತಿಯುಕ್ತ ಚಿನ್ನದಾಭರಣ, ರತ್ನಖಚಿತವಾದ ಕಂಕಣ ಕಾಲಂದುಗೆ ಹಾಕಿಕೊಂಡು ಹೋರಾಡುವ ರಣಭೂಮಿಗೆ ಬಂದನು ಕ್ಷಣಾರ್ಧದಲ್ಲಿ

ಪರಿಮಳ ತಾಂಬೂಲ ಕಾಸೆ ಚಲ್ಲಣ ಪೊಂ
ಬರಿವಾಣದೊಳು ಕುವರನಿಗೆ
ಸರಿ ಮೈಭೋಗವ ಕಳುಹಲು ಕೈಕೊಂಡು
ಪಿರಿದು ಸಿಂಗರವಾಂತು ಬಂದ ೪೭

ಕುಮಾರನಿಗೆ ಪರಿಮಳದ ತಾಂಬೂಲ, ನಡುಕಟ್ಟು, ಚಲ್ಲಣಗಳನ್ನು ಚಿನ್ನದ ಹರಿವಾಣದಲ್ಲಿಟ್ಟು ಕಳುಹಿಸಿದಾಗ ಅವುಗಳನ್ನು ಕೈಕೊಂಡು ಶೃಂಗಾರಗೊಂಡು ಬಂದ.

ಹೆಜ್ಜೆ ಹೆಜ್ಜೆಗೆ ತೊಡೆಚಲ್ಲಣಕಡರ್ಚಿದ
ಗೆಜ್ಜೆಯ ಗಲಿರೆಂಬ ರವದಿ
ನಿರ್ಜರ ರಿಪುವಿರ್ದೆಡೆಗೆ ಬಂದನು ಕಂತು
ದುರ್ಜಯ ಕೃಷ್ಣನಂದದಲಿ ೪೮

ಹೆಜ್ಜೆಹೆಜ್ಜೆಗೆ ತೊಡೆಚಲ್ಲಣಕ್ಕೆ ಲಗತ್ತಿಸಿದ ಗೆಜ್ಜೆಯ ಗಲಿರೆಂಬ ಶಬ್ದದಿಂದ ದೇವತೆಗಳ ದ್ವೇಷಿಯಾದ ಶಂಬರನಿದ್ದೆಡೆಗೆ ಬಂದನು–ದುರ್ಜಯ ಕೃಷ್ಣನ ರೀತಿಯಲ್ಲಿ

ಬಾಲನಂತೆಸೆದಿರ್ದ ಸುಜನರ್ಗೆ ಕಮ್ಮಲ
ಗೋಲನಂದದಿ ಪೆಣ್ಗಳಕೆ
ಕಾಲನಂತೆಸೆದ ಶಂಭರನ ಕಣ್ಮನಕೆ
ಲೋಲಾಕ್ಷಿ ಚಿತ್ತೈಸಿದನು ೪೯

ಸುಜನರಿಗೆ ಬಾಲಕನಂತೆ ಕಂಡನು, ಹೆಂಸರಿಗೆ ಮನ್ಮಥನಂತೆ ಕಂಡನು, ಶಂಬರನಿಗೆ ಯಮನಂತೆ ಕಂಡನು, ಇದನ್ನು ಚಂಚಲಾಕ್ಷಿ ಚಿತ್ತೈದು.

ಕಾಳಗಕಿದಿರಾಂತು ನಿಲ್ಲಲಾರದೆ ಚಿಣ್ಣ
ಡಾಳಕತನದೊಳೋಡುವನು
ತಾಳಾಸವ ಊಡಿಸೆಂದು ಬೋಧಿಸಿದ ಮ
ರಾಳವಾಹನ ಕಪಟದಲಿ ೫೦

ಯುದ್ಧದಲ್ಲಿ ಎದುರು ನಿಲ್ಲಲಾರದೆ ಮನ್ಮಥ ವಂಚಿಸಿ ಓಡುವನೆಂದೂ ಅದಕ್ಕಾಗಿ ತಾಳೆಮರದ ಹೆಂಡವನ್ನು ಊಡಿಸೆಂದು ನಾರದ ಕಾಪಟ್ಯವನ್ನು ಶಂಬರನಿಗೆ ಬೋಧಿಸಿದನು

ಕಂಡ ಮಾತ್ರದಿ ಖಳರಾಯನೆರಿಸಿ ಕೋ
ದಂಡದ ತಿರುವ ಜೋವೊಡೆಯೆ
ಸೊಂಡಿಲ ನೆಗಹಿ ಭೂಮಿಯ ಹೊತ್ತ ಸರ್ವ ವೇ
ತಂಡಗಳೊರಲಿದಂತಾಯ್ತು ೫೧

ಚಿಣ್ಣನನ್ನು ಕಂಡ ತಕ್ಷಣ ದೈತ್ಯ ಬಿಲ್ಲನ್ನು ಹೆಗಲಿಗೇರಿಸಿ ಹೆದೆಯನ್ನು ಜೇವೊಡೆಯಲು ಭೂಮಿಯನ್ನು ಹೊತ್ತ ಎಲ್ಲ ಆನೆಗಳು ಸೊಂಡಿಲನ್ನೆತ್ತಿ ಒರಲಿದಂತಾಯ್ತು.

ರಂಜಿಪ ಹೊಂಗಟ್ಟಿನ ಬಿಲ್ಲ ಮನ್ಮಥ
ಸಿಂಜಿನಿಗೊಳಿಸಿ ಜೇವೊಡೆಯೆ
ಅಂಜಿದ ಫಣಿರಾಯ ತಲೆದೊನೆಯಲು ರತ್ನ
ಗುಂಜಿಯಂದದೊಳುದುರಿದವು ೫೨

ಮನ್ಮಥ ರಂಜಿಸುವ ಬಿಲ್ಲಿನ ಹೆದೆಯನ್ನು ಜೇವೊಡೆಯಲು, ಅಂಜಿದ ಆದಿಶೇಷನ ತಲೆ ಅಲುಗಾಡಿ ರತ್ನಗಳು ಗುಲಗಂಜಿ ಬೀಜದಂತೆ ಉದುರಿದವು.

ದ್ವಿತೀಯ ಕಾರ್ಮುಕ ನಿಷ್ಠುರದಿಂದಖಿಳ ದೇ
ವತೆಗಳೆಲ್ಲರ ಭೀತಿಗೊಳಿಸಿ
ವ್ಯಥೆಗೊಂಡು ಶಂಬರಾಸುರ ನೆಚ್ಚ ರೌದ್ರೋ
ನ್ನತ ಬಾಣದಿಂದ ಬಾಲಕನ ೫೩

ಎರಡನೆಯ ಬಿಲ್ಲಿನ ಕಾಠಿಣ್ಯದಿಂದ ಅಖಿಳ ದೇವತೆಗಳನ್ನು ಹೆದರಿಸಿ, ಭಯಂಕರ ಬಾಣದಿಂದ ಶಂಬರಾಸುರ ಬಾಲಕನಿಗೆ ಎಚ್ಚಿದನು.

ಶರಸಂಧಾನವಿನ್ನೆಂತುಟೊ ಬಂದ ನಿ
ಷ್ಠುರ ಬಾಣ ನಿಚಯವ ಕಡಿದು
ಸ್ಮರ ಬೊಬ್ಬಿರಿದೆಚ್ಚ ಶಂಬರಾಸುರನ ಪೇ
ರುರದಲಿ ಥಟ್ಟುಗಿವಂತೆ ೫೪

ಮನ್ಮಥನ ಶರಸಂಧಾನ ಎಷ್ಟು ಆಗಾಧವಾದದ್ದೋ ಏನೋ, ತನ್ನತ್ತ ಬಂದ ನಿಷ್ಠುರ ಬಾಣಸಮುದಾಯವನ್ನು ತುಂಡು ತುಂಡು ಮಾಡಿ, ಶಂಬರಾಸುರನ ವಿಶಾಲ ವಕ್ಷಸ್ಥಲಕ್ಕೆ ನಾಟಿಕೊಳ್ಳುವಂತೆ ಮನ್ಮಥ ಬೊಬ್ಬಿರಿದು ಕೇಕೆ ಹಾಕಿ ಬಾಣಪ್ರಯೋಗಿಸಿದನು.

ಇಂತು ಕೈಚಳಕದ ಬಿಲುಗಾರತನ ಕಾಣ
ಬಂತು ನೀನೆನಗಿದಿರ್ವಂದು
ಗೊಂತಾಗಿ ನಿಲಬೇಡವೆಂದು ಕೂರ್ಗಣೆಯಿಂದ
ಕಂತುವಿನೆರ್ದೆಗಿಕ್ಕಿದನು ೫೫

ಹೀಗೆ ಕೈಚಳಕದ ಬಿಲ್ಲುಗಾರತನ ಸಾಗಿದಾಗ, ನೀನು ಹೀಗೆ ಗೊಂತಾಗಿ (ಗೂಟವಾಗಿ) ನನ್ನೆದುರು ನಿಲ್ಲಬೇಡವೆಂದು ಶಂಬರಾಸುರ ಹರಿತವಾದ ಬಾಣದಿಂದ ಮನ್ಮಥನ ಎದೆಗೆ ಎಚ್ಚಿದನು.

ಈ ಪಾಡುಪಂತದ ಮಾತನಾಡುವ ಶರ
ಚಾಪಾಗಮಜ್ಞ ನೀನಹುದು
ನಾ ಪರಣವ ಕೊಂಬೆ ನೋಡೆಂದು ದೈತ್ಯ ಚ
ಮೂಪನನೆಚ್ಚು ಬೊಬ್ಬಿರಿದ ೫೬

ಶಪಥದ ಮಾತನಾಡುವ ಬಿಲ್ಲುಬಾಣಗಳ ಶಾಸ್ತ್ರಜ್ಞ ನೀನು ಆದರೆ ನಾನು ನಿನ್ನ ಪ್ರಾಣವನ್ನು ಬಲಿಕೊಡುವೆನು ನೋಡು ಎಂದು ರಾಕ್ಷಸಸೇನಾನಿಯನ್ನು ಬೊಬ್ಬಿರಿದು ಎಚ್ಚಿದನು.

ಎಲೆ ಮಂಕು ಮದನ ನಿನ್ನರಳಂಬು ಹೆಂಗಳ
ಮೊಲೆ ಗುರಿಯುಳ್ಳಂಥವೆನ್ನ
ಶಿಲೆ ವಕ್ಷದೊಳು ನಾಂಟಲರಿಯವು ತೊಲಗೆಂದು
ಸಲೆ ಕೂರ್ಗಣೆಯೊಳಿಕ್ಕಿದನು ೫೭

ಎಲೋ ಮಂಕು ಮದನ, ನಿನ್ನ ಹೂಬಾಣಗಳು ಹೆಣ್ಣುಗಳ ಮೊಲೆಗೆ ಗುರಿಯುಳ್ಳಂಥವು. ನನ್ನ ಕಲ್ಲೆದೆಗೆ ನಾಟಲಾರದಂಥವು ಅತ್ತ ತೊಲಗು ಎಂದು ಹರಿತವಾದ ಬಾಣದಿಂದ ಎಚ್ಚಿದನು.

ಪೇತೆ ನೀನೇನು ದೊಡ್ಡಿತು ಎನ್ನ ಸರಲ ಮು
ಯ್ಯಾತುಕೊಂಬೊಡೆ ರುದ್ರಗರಿದು
ಮಾತುಗಾರಿಕೆ ಬೇಡ ಹಿಡಿಯೆಂದು ಭಾಳದೆ
ತೂತೇಳಲೆಚ್ಚ ಬೊಬ್ಬಿರಿದ ೫೮

ಕೈಲಾಗದ ಪೇತಲ, ನೀನೇನು ದೊಡ್ಡವನು, ನನ್ನ ಬಾಣವನ್ನು ಆತುಕೊಳ್ಳಲು ರುದ್ರನಿಗೂ ಅಸಾಧ್ಯ. ಮಾತು ಬೇಡ, ತಗೋ ಎಂದು ಹಣೆ ತೂತು ಬೀಳುವಂತೆ ಎಚ್ಚಿದ.

ನಡೆವೆತ್ತ ನೀಲಾಚಲ ಶಿಖರದ ಕಲ್ಲ
ಪಡೆಯೊಳಗಿದ್ದ ಕೆನ್ನೀರು
ಒಡೆ ಹಾಯ್ವಂತೆ ರೋಹಿತಧಾರೆ ಸುರಿದು ಕಿ
ಗ್ಗಡೆಯಲ್ಲಿ ವಾಹಿನಿಯಾಯ್ತು ೫೯

ನಡೆಯುವ ನೀಲಾಚಲ ಶಿಖರದ ಕಲ್ಲಪಡೆ(ಸಂಧಿ, ಇರುಕಲು)ಯಲ್ಲಿದ್ದ ಕೆನ್ನೀರು ಮುಂದಕ್ಕೆ ಹಾದು ಹೋಗುವಂತೆ, ರಕ್ತ ಸುರಿದು ಕೆಳಭಾಗದಲ್ಲಿ ನದಿಯಾಯ್ತು.

ನಿಟಲದಿ ಸುರಿವ ರಕ್ತವ ಕಟ್ಟುಗೊಳಿಸಿ ಧೂ
ರ್ಜಟಿಯ ಹೃತ್ಕಮಲವ ನೆನೆದು
ಸುಟಿವೆತ್ತು ಕೂಗಿ ಬೊಬ್ಬಿರಿದು ಸತ್ರಾಣ ಸಂ
ಘಟಿಸೆ ರಕ್ಕಸ ನುಡಿಗೊಟ್ಟ ೬೦

ಹಣೆಯಲ್ಲಿ ಸುರಿಯುತ್ತಿರುವ ರಕ್ತವನ್ನು ಕಟ್ಟುಗೊಳಿಸಿ ಶಿವನ ಹೃತ್ಕಮಲವನ್ನು

ನೆನೆದು, ತೀಕ್ಷ್ಣತೆಯಿಂದ ಕೂಗಿ ಬೊಬ್ಬಿರಿದು, ತ್ರಾಣ ಸಂಘಟಿಸಲು ರಕ್ಕಸನು ಪ್ರತಿಯಾಗಿ ಪಡಿನುಡಿದ.

ಕರೆಗೊರಲನ ಕಣ್ಣ ದಳ್ಳುರಿಯಲಿ ಬೆಂದ
ಕರಿಗೊಳ್ಳಿ ನಿನಗೇಕೆ ಪಂತ
ನೆರೆ ಕೂರ್ಗಣೆಯಿದ ಕಾಯ್ದುಕೊಳ್ಳೆನುತಾರ್ದು
ಪೆರೆನೊಸಲೊಡೆಯಲಿಕ್ಕಿದನು ೬೧

ನೀಲಕಂಠನ ಹಣೆಗಣ್ಣ ದಳ್ಳುರಿಯಿಂದ ಬೆಂದು ಕರಿಗೊಳ್ಳಿಯಾದ ನಿನಗೇಕೆ ಪಂಥ? ಹರಿತವಾದ ಈ ಬಾಣವನ್ನು ತಡೆದುಕೋ ಎಂದು ಮನ್ಮಥನ ಅರ್ಧಚಂದ್ರಾಕಾರದ ಹಣೆ ಒಡೆಯುವಂತೆ ಎಚ್ಚನು.

ಮಸ್ತಕ ಬಿರಿದೊಸರುವ ರಕ್ತವ ಸಿರಿ
ಹಸ್ತದಿಂ ಒತ್ತೊತ್ತಿ ನಿಲಿಸಿ
ದುಸ್ತರ ಶರದಿಂದ ಕಡಿದ ರಕ್ಕಸನ ಕ
ರಸ್ಥಳದೊಳಗಿರ್ದ ಧನುವ ೬೨

ತಲೆಯೊಡೆದು ಸುರಿವ ರಕ್ತವನ್ನು ತನ್ನ ಕೈಯಿಂದ ಒತ್ತಿ ಒತ್ತಿ ನಿಲ್ಲಿಸಿ, ಅಸಾಧ್ಯವಾದ ಬಾಣದಿಂದ ರಕ್ಕಸನ ಕೈಯೊಳಗಿದ್ದ ಬಿಲ್ಲನ್ನು ತುಂಡಾಗುವಂತೆ ಖಂಡಿಸಿದನು.

ಖಂಡಣೆಗೆಯ್ದ ಕಾರ್ಮುಕದರ್ಧ ಭಾಗದ
ದಿಂಡನೆ ತಿರುಹಿ ಮನ್ಮಥನ
ಮಂಡೆಯ ಮೇಲೆ ಗಟ್ಟಿಸಲಡ್ಡ ಹಿಡಿದ ಕೋ
ದಂಡವಿಕ್ಕಡಿಯಾದುದೊಡನೆ ೬೩

ತುಂಡಾದ ಬಿಲ್ಲಿನ ಅರ್ಧ ಭಾಗದ ದಿಂಡನ್ನೆ ಗರ್‍ರನೆ ತಿರುಗಿಸಿ, ಮನ್ಮಥನ ಮಂಡೆಯ ಮೇಲೆ ಗಟ್ಟಿಸದಂತೆ ಅಡ್ಡ ಹಿಡಿದ ಕೋದಂಡ ಎರಡು ತುಂಡಾಯಿತು.

ಕಲಹದಿ ಖಂಡಿತಾವಾಗಲಾ ಬಿಲ್ದಂಡವ
ಬಲರಾಮನಂದದಿ ಪಿಡಿದು
ಚಲದಂಕಮಲ್ಲನ ರಣರಂಗದೆಡೆಯಲಿ
ನಿಲಲೀಯದಟ್ಟಾಡಿ ಬಡಿದ ೬೪

ಕಾದಾಟದಲ್ಲಿ ತುಂಡಾದ ಬಿಲ್ಲದಂಡವನ್ನೇ ಬಲರಾಮನಂತೆ ಹಿಡಿದು ಛಲದಂಕಮಲ್ಲ ಶಂಬರನನ್ನು ರಣರಂಗದಲ್ಲಿ ಅಟ್ಟಾಡಿಸಿಕೊಂಡು ಬಡಿದನು.

ಅಪ್ಪಳಿಸಿದರೆ ಗಾಯವಹುದೆಂದು ಸೊಂಟದ
ಮುಪ್ಪಿಡಿಯನು ಕಿತ್ತುಕೊಂಡು
ದಪ್ಪಕನೆರ್ದೆಯಲಿ ತಿವಿದು ರಕ್ಕಸ ಕಡು
ದಪ್ಪ ತೋರುತ ನಿಂದಿರ್ದ ೬೫

ಅಪ್ಪಳಿಸಿದರೆ ಗಾಯವಾಗುತ್ತದೆ ಎಂದು ಸೊಂಟದ ಮುಪ್ಪಿಡಿ(ತ್ರಿಶೂಲದಂಥ ಆಯುಧ) ಯನ್ನು ತೆಗೆದುಕೊಂಡು ಮನ್ಮಥನ ಎದೆಗೆ ತಿವಿದು ರಕ್ಕಸ ಕಡುದರ್ಪದಿಂದ ನಿಂತನು.

ಎಡಗೈಯೊಳೇನು ಚಮತ್ಕಾರದಿ ಹಾರು
ಹೊಡೆದು ಮಟ್ಟವ ಕಿತ್ತುಕೊಂಡು
ದೃಢಗಲಿ ಖಳನುರಸ್ಥಲದಿ ಕಠಾರಿಯ
ಬುಡಮಟ್ಟ ತಿವಿದು ಬೊಬ್ಬಿರಿದ ೬೬

ಮನ್ಮಥ ಚಮತ್ಕಾರದಿಂದ ಕುಪ್ಪಳಿಸಿ ಮಟ್ಟ(ಆಯುಧ ವಿಶೇಷ) ವನ್ನು ಕಿತ್ತುಕೊಂಡು, ಶಂಬರನ ಎದೆಗೆ ಕಠಾರಿಯಿಂದ ಬುಡಮಟ್ಟ ತಿವಿದು ಬೊಬ್ಬಿರಿದ.

ಹೊನ್ನ ಹೊಳಹಿನ ಕಠಾರಿಯ ಮೊನೆ ಮೊಳೆ
ಬೆನ್ನೊಳಗೆ ತಲೆದೂರಿಸಲು
ತನ್ನೆಡಗಾಲ ರಕ್ಕಸನೆರ್ದೆಗೆ ಚಾಚಿ
ಬಿನ್ನಣದಲಿ ಕಿತ್ತು ತೆಗೆದ ೬೭

ಚಿನ್ನದ ಹೊಳಪಿನ ಕಠಾರಿಯ ಮೊನೆ ಬೆನ್ನೊಳಗೆ ತಲೆದೂರಿಸಲು, ಮನ್ಮಥ ರಕ್ಕಸನೆದೆಗೆ ತನ್ನೆಡಗಾಲ ಒದೆಗೊಟ್ಟು, ಬಿನ್ನಣದಿಂದ ಕಿತ್ತು ತೆಗೆದ.

ಸುರಿದುದು ಖಳನ ಗಾತ್ರದಿ ರಕ್ತ ಕಣ್ಣೀರು
ಸುರಿದುದಾತನ ಪೆಣ್ಜನಕೆ
ಸುರಿದುದು ಪೂವಳೆ ಕಾಮಗೆ ನೇತ್ರದಲಿ
ಸುರಿದುದಾನಂದಾಶ್ರು ರತಿಗೆ ೬೮

ಶಂಬರನ ಗಾತ್ರ(ದೇಹ)ದಿಂದ ರಕ್ತ ಸುರಿದುದು. ಅವನ ಸ್ತ್ರೀಯರಿಗೆ ಕಣ್ಣೀರು ಸುರಿದುದು. ಕಾಮನಿಗೆ ಹೂವಿನಮಳೆ ಸುರಿದುದು. ರತಿಯ ನೇತ್ರದಲ್ಲಿ ಆನಂದಾಶ್ರು ಸುರಿದುದು.

ಗೆಲುವಾದುದಸುರನ ಕೀಳ್ಪಡಿಸಿದ ಬಾಹು
ಬಲವಂತ ಕಾಂತಕಂಡು
ಲಲನೆ ಬಂದಮರ್ದಪ್ಪಿ ಮುಂಡಾಡಿ ಕುಟುಕುದಂ
ಬಲವಿತ್ತು ಕುಸ್ತರಿಸಿದಳು ೬೯

ಅಸುರನನ್ನು ಕೀಳಾಗಿಸಿದ ಭುಜಬಲದ ಕಾಂತನ ಕಂಡು ರತಿಗೆ ಗೆಲುವು ಒಲವು ಮೂಡಿತು. ಕೂಡಲೇ ಗಂಡನನ್ನು ಬಾಚಿ ತಬ್ಬಿ ಮುತ್ತಿಟ್ಟು ಗುಟುಕು ತಾಂಬೂಲವನ್ನು ಕೊಟ್ಟು ಸುಧಾರಿಸಿದಳು.

ಗಾಯದೊಳೊರೆವ ರಕ್ತವ ಕಟ್ಟುಗೊಳಿಸಿ ಕ
ಷಾಯ ತಂಬುಲವನು ಕೊಟ್ಟು
ಆಯತಾಕ್ಷಿಯರುಪಚರಿಸಲ್ಕೆ ರಕ್ಕಸ
ರಾಯ ಬಂದಿರಿದ ಶೂಲದಲಿ ೭೦

ಗಾಯದಿಂದ ಸುರಿವ ರಕ್ತವನ್ನು ನಿಲ್ಲಿಸಿ, ಕಷಾಯ ತಂಬುಲವನ್ನು ಕೊಟ್ಟು ವಿಶಾಲಾಕ್ಷಿಯರು ಉಪಚರಿಸಲು, ರಕ್ಕಸರಾಯ ಶೂಲದಲ್ಲಿ ಬಂದಿರಿದ.

ಶೂಲವ ಖಂಡಣೆಗೆಯ್ದು ಖಂಡೆಯದಿ ಪೂ
ಗೋಲ ದೈತ್ಯನ ಕಡಿಯಲವನು
ಕಾಲಭೈರವನಂತೆ ಗದೆಯೊಳಪ್ಪಳಿಸಲಾ
ಬಾಲ ತನ್ನ ಗದೆಯೊಡ್ಡಿದನು ೭೧

ಶೂಲವನ್ನು ಖಂಡಿಸಿ ಖಂಡೆಯ (ಕತ್ತಿ)ದಿಂದ ಹೂಬಾಣ ರಕ್ಕಸನನ್ನು ಕಡಿಯಲು, ಅವನು ಕಾಲಭೈರವನಂತೆ ಗದೆಯಲ್ಲಿ ಅಪ್ಪಳಿಸಿದಾಗ ಮನ್ಮಥ ತನ್ನ ಗದೆಯೊಡ್ಡಿದನು.

ಪೆಟ್ಟಿಗೆ ಪೆಟ್ಟ ಕೋ ಎನುತ ಮಂಡೆ ಮೇಲೆ
ಕುಟ್ಟಿದ ಗದೆಯ ಘಟ್ಟಣೆಗೆ

ಪುಟ್ಟಿದ ಪ್ರತಿಶಬ್ದ ನಿಷ್ಠುರದಿಂದ ಕಂ
ಗೆಟ್ಟುದು ಸುರನರೋರಗರು ೭೨

ಪೆಟ್ಟಿಗೆ ಪೆಟ್ಟ ಕೊ ಎಂದು ಮಂಡೆಯ ಮೇಲೆ ಕುಟ್ಟಿದ ಗದೆಯ ಏಟಿಗೆ ಹುಟ್ಟಿದ ಮಾರ್ದನಿಗೆ ಕಂಗಾಲಾದರು, ಸುರಲೋಕ ನರಲೋಕ ನಾಗಲೋಕದ ಜನರು.

ಕೊಂಡಾಡುವಂದದಿ ಕಡಿದಾಡುತಿರ್ದವು
ದ್ದಂಡ ವೀರರ ಕೈಯೊಳೆಸೆವ
ತಂಡತಂಡದ ಖಡ್ಗಧಾರೆಯ ಕೆಂಗಿಡಿ
ಕೆಂಡದ ಮಳೆಯಾದುದಿಳೆಗೆ ೭೩

ಕೊಂಡಾಡುವ ರೀತಿಯಲ್ಲಿ ಕಡಿದಾಡುತ್ತಿದ್ದ ಕಡುದರ್ಪದ ವೀರರ ಕೈಯಲ್ಲಿ ಝಗಝಗಿಸುವ ಖಡ್ಗಧಾರೆಯ ಕೆಂಗಿಡಿಯಿಂದ ಇಳೆಗೆ ಕೆಂಡದ ಮಳೆಯಾಯ್ತು.

ಬಾಣ ಪಂಚಕನೊಳು ಬತ್ತೀಸ ಖಡ್ಗ ಪ್ರ
ವೀಣತೆಯಲಿ ಕಾದಿ ದಣಿದು
ಕೇಣವಿಲ್ಲದೆ ಮುನ್ನ ಕಲಿತಿರ್ದ ಮಾಯಾ
ವಾಣಿಯವನುದ್ಯೋಗಿಸಿದ ೭೪

ಪಂಚಬಾಣ(ಅರವಿಂದ, ಆಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ) ನಾದ ಮನ್ಮಥನ ಮೇಲೆ ಮೂವತ್ತೆರಡು ಖಡ್ಗ ಪ್ರಾವಿಣ್ಯದಿಂದ ಕಾದಾಡಿ ದಣಿದು ಬಸವಳಿದು ಶಂಬರ ಮೊದಲು ಕಲಿತಿದ್ದ ಮಾಯಾ ವಾಣಿಯವ(ವಾಣಿಜ್ಯ)ನ್ನು ಪ್ರಯೋಗಿಸಿದ.

ಹರನರಸಿಯೊಳಂದು ಸೆಣಸಿದ ಮಹಿಷಾ
ಸುರನೇನು ಲಕ್ಷ್ಯವೆಂದೆನುತ
ವರ ಸೈರಿಭನ ರೂಪಾಗಿ ಬಂದೆರಗಿದ
ಸ್ಮರನೊಡಲೊಡನೆ ಒಡೆವಂತೆ ೭೫

ಪಾರ್ವತಿಯೊಡನೆ ಹಿಂದೆ ಸೆಣಸಿದ ಮಹಿಷಾಸುರ ಎಷ್ಟರವನು ಎಂಬಂತೆ ಶಂಬರ ಕೋಣನ ರೂಪ ತಾಳಿ ಮನ್ಮಥನ ಒಡಲೊಡೆವಂತೆ ಬಂದೆರಗಿದ.

ವಾರಿಜದಳಲೋಚನೆ ಕೇಳು ರಣ ಮಹಾ
ಮಾರಿಯ ಮುಂದೆ ಬೊಬ್ಬಿರಿದು
ತೋರಿಯ ಕೋಣನ ಪೆರ್ದಲೆ ಕಡಿವಂತೆ ಹ
ರಾರಿ ಖಂಡಿಸಿದ ಖಂಡೆಯದಿ ೭೬

ಹರಾರಿ(ಮನ್ಮಥ) ತನ್ನ ಖಡ್ಗದಿಂದ ರಣ ಮಹಾಮಾರಿಯ ಮುಂದೆ ಧಡೂತಿ ಕೋಣನ ತಲೆ ಕಡಿಯುವಂತೆ ಕಡಿದನು.

ಅದರ ಮಸ್ತಕವುಡಿದುರುಳ್ದೊದು ಬಳಿಕೊಂಡೆ
ಮದಗಜರೂಪಿನೊಳು ಬಂದ
ತ್ರಿದಶಾರಾತಿಯ ನರಸಿಂಹನಂದದಿ
ಕದನದಿ ಮೆಟ್ಟಿ ಸೀಳಿದನು ೭೭

ಅದರ ತಲೆ ನೆಲಕ್ಕುರಳಿದಾಗ ಶಂಬರ ಆನೆಯ ರೂಪತಾಳಿ ಬಂದ. ಆಗ ಮನ್ಮಥ ನರಸಿಂಹನಂತೆ ತ್ರಿದಶಾರಾತಿ (ದೇವತೆಗಳ ಶತ್ರು)ಯನ್ನು ಸೀಳಿದನು.

ಸೀಳಿದ ಬಳಿಕೊಂದು ಸಿಂಹರೂಪದಿ ಬಂದು
ಘೀಳಿಡುತುಗುರ್ಗಳಿಂ ಬಗಿಯೆ
ದಾಳಿಗೆ ಬೆದರದೆ ಶರಭ ವಿಗ್ರಹದಿ ಥ
ಡಾಳಿಸಿ ಮುರಿದಟ್ಟಿದನು ೭೮

ಸೀಳಿದ ಬಳಿಕ ಸಿಂಹ ರೂಪದಲ್ಲಿ ಬಂದು ಉಗುರುಗಳಿಂದ ಬಗೆಯಲು ಬಂದಾಗ ಮನ್ಮಥ ದಾಳಿಗೆ ಬೆದರದೆ ಶರಭ(ಸಿಂಹದವೈರಿ) ರೂಪದಲ್ಲಿ ಅದನ್ನು ಮುರಿದಟ್ಟಿದನು.

ಗಂಡಾಳುತನದಿ ಶರಭನ ಸೀಳ್ವ ಗಂಡ ಭೇ
ರುಂಡನೊಲು ಖಳರಾಯ ಬಂದು
ತುಂಡದ ಕುಂತದಿ ತಿವಿದರೆ ಇಕ್ಷುಕೋ
ದಂಡನೊಂದೆಸೆಗೆ ಲಂಘಿಸಿದ ೭೯

ಶರಭನನ್ನು ಸೀಳುವ ಗಂಡಭೇರುಂಡ ರೂಪದಲ್ಲಿ ಬಂದು ಕೊಕ್ಕಿನ ಭರ್ಜಿಯಿಂದ ತಿವಿದಾಗ ಕರ್ಬಿಲ್ಲ (ಮನ್ಮಥ) ಬೇರೆಡೆಗೆ ಲಂಘಿಸಿದ.

ಮಕರಾಂಕ ಮಾಯಾವಿದ್ಯವ ಗರುಡಿಯ ಚಾ
ರಕನಾಗಿ ಕಲಿತ ಕೌಳಿಕವ
ಪ್ರಕಟಿತ ಘನ ಮಾರ್ಜಾಲನಾಗಿ ಖಳ ನಾ
ಯಕನ ವಿಗ್ರಹವ ನೆಗ್ಗಿಸಿದ ೮೦

ಮನ್ಮಥ ಗರುಡಿಯ ಚಾರಕನಾಗಿ ಕಲಿತ ಮಾಯಾವಿದ್ಯದ ಮೋಸ ವಂಚನೆಗೆ ಅನುಗುಣವಾಗಿ ಘನ ಮಾರ್ಜಾಲ(ಬೆಕ್ಕು) ನಾಗಿ ಖಳನ ದೇಹವನ್ನು ಪರಚಿ ನೆಗ್ಗಿಸಿದನು.

ನೆಲೆಗಾಣಿಸದೆ ಶಂಬರ ದೈತ್ಯನು ಕಾರ್ಗ
ತ್ತಲೆಯಾಗಿ ಕುವರನ ತುಡುಕಲು
ಸಲೆ ಭಾಸ್ಕರ ರೂಪ ತಾಳ್ದು ಮನ್ಮಥ ಮೆಟ್ಟಿ
ತಲೆಯ ಕಡಿದನು ಕೌತುಕದಿ ೮೧

ಶಂಬರ ಕಾರ್ಗತ್ತಲೆಯಾಗಿ ಮನ್ಮಥನನ್ನು ಹಿಡಿದಾಗ, ಮನ್ಮಥ ಸೂರ್ಯನ ರೂಪ ತಾಳಿ ಸೋಜಿಗಗೊಳ್ಳುವಂತೆ ತಲೆಯನ್ನು ಕಡಿದ.

ನೂತನ ವಿದ್ಯೆ ಸಿದ್ಧಿಸಿತೆಂದು ಖಳ ಮೀನ
ಕೇತುವ ಕೊಂಡಾಡಿದನು
ಚೇತನಗೆಡದೆ ಮುಷ್ಟಿ ಬಲನಾಗಿ ನಿಲ್ಲೆಂ
ದಾತನ ಕರೆದು ಬೊಬ್ಬಿರಿದ ೮೨

ನೂತನ ವಿದ್ಯೆ ಸಿದ್ಧಿಸಿತೆಂದು ಶಂಬರ ಮನ್ಮಥನನ್ನು ಕೊಂಡಾಡಿದನು ಜೊತೆಯಲ್ಲೇ ಚೈತನ್ಯಗೆಡದೆ ಮುಷ್ಟಿಬಲದಿಂದ ನಿಲ್ಲೆಂದು ಆತನ ಕರೆದು ಬೊಬ್ಬಿರಿದ.

ದಪ್ಪಕ ದೈತ್ಯ ವಲ್ಲಭನಂ ಇದಿರಾಂತು
ನಿಪ್ಪಸರದೆ ತೋಳ ಮೊದಲ
ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರ್ದ
ಒಪ್ಪವನೇನ ಬಣ್ಣಿಪೆನು ೮೩

ಮನ್ಮಥ ರಕ್ಕಸರಾಯನಿಗೆ ಎದುರಾಗಿ ಉತ್ಸಾಹರಭಸದಿಂದ ತೋಳನ್ನು ತಟ್ಟಿ ದಂಡೆಯೊತ್ತಿ ನಿಂತ ಒಪ್ಪವನ್ನು ಬಣ್ಣಿಸಲದಳ.

ತ್ರಾಣಾನ್ವಿತ ಶಂಬರಾಸುರ ವರ ಪಂಚ
ಬಾಣರ ಬಿರುಮುಷ್ಟಿಗಳು
ಚಾಣೂರ ಮಲ್ಲ ಕೃಷ್ಣರ ಕಾಳಗವಾದು
ದೇಣಾಯತಾಕ್ಷಿ ಚಿತ್ತೈಸು ೮೪

ಶಂಬರಾಸುರ ಪಂಚಬಾಣರ ಬಿರುಮುಷ್ಟಿಗಳು ಚಾಣೂರಮಲ್ಲ ಕೃಷ್ಣರ ಕಾಳಗವನ್ನು ನೆನಪಿಗೆ ತರುವಂತಿದ್ದವು, ಜಿಂಕೆಗಣ್ಣಿನ ಹೆಣ್ಣೆ ಲಾಲಿಸು.

ಹೊಗುವರು ಹೊರಡುವರೆಲ್ಲಿ ಸಿಕ್ಕಿದರಲ್ಲಿ
ಬಿಗಿವರು ಬಿನ್ನಣಿಸುವರು
ನೆಗೆವರು ಕೆಳಗು ಮೇಲಾಗುವರೊಡನೆದ್ದು
ಒಗೆವರು ನಿಂದು ಕಾದುವರು ೮೫

ಒಳಗೆ ಹೋಗುವರು ಹೊರಗೆ ಹೊರಡುವರು, ಎಲ್ಲಿ ಸಿಕ್ಕಿದರಲ್ಲಿ ಬಿಗಿವರು, ಬಿನ್ನಾಣ ಮಾಡುವರು, ನೆಗೆಯುವರು, ಕೆಳಗು ಮೇಲಾಗುವರು, ತಕ್ಷಣವೇ ಎದ್ದು ಸೆಣೆಯುವರು ಮತ್ತೆ ನಿಂತು ಕಾದಾಡುವರು.

ಎಡಗೈಯಲೇನು ಚಮತ್ಕಾರದಿ ಹಾರ
ಹೊಡೆದು ತೂಗುವ ಪದದ್ವಯದಿ
ಪೊಡವಿ ತಲ್ಲಣಿಪಂತೆ ಖಳರಾಯ ಗರ್ಜಿಸಿ
ಮೃಡ ತಪಧ್ವಂಸಿಯನೊದ್ದನು ೮೬

ಎಡಗೈಯೂರಿ ಪಟ್ಟಿ ಹೊಡೆದು ತೂಗುವ ಪಾದದ್ವಯದಿಂದ ನೆಲ ನಡುಗುವಂತೆ ಖಳರಾಯ ಗರ್ಜಿಸಿ ಮನ್ಮಥನನ್ನು ಒದ್ದನು.

ಪೆಟ್ಟಿಗೆ ಮೆಯ್ಯುಗ್ಗಡದೆಡಗೆಯ್ಯೊಳಣೆದು ಬೊ
ಬ್ಬಿಟ್ಟಿದಿರಾಂತು ರಕ್ಕಸನ
ದಿಟ್ಟಿವಾಳಿಕೆಯ ವಂಚಿಸಿ ನೊಸಲೊಡೆವಂತೆ
ಹೆಟ್ಟಿದ ವಜ್ರಮುಷ್ಟಿಯಲಿ ೮೭

ಪೆಟ್ಟಿಗೆ ದೇಹ ಸಿಕ್ಕದಂತೆ ಎಡಗೈಯಲ್ಲಿ ಸೆಣೆದು ಬೊಬ್ಬೆ ಹಾಕುತ್ತಾ ರಕ್ಕಸನ ದೃಷ್ಟಿವಾಳಿಕೆ(ವಾಡಿಕೆ, ರೂಢಿ)ಯನ್ನು ವಂಚಿಸಿ ಹಣೆಹೊಡೆಯುವಂತೆ ವಜ್ರಮುಷ್ಟಿಯಿಂದ ಕುಟ್ಟಿದ.

ಹಣೆಯೊಡೆದುಗುವ ರೋಹಿತಧಾರೆ ಕಮ್ಮಲ
ಗರ್ಣೆಯನ ಮೇಲೆ ಚೆಲ್ಲಿದವು
ತ್ರಿಣಯನ ಕಣ್ಣ ಕೆಂಗಿಡಿ ಬಂದುದೆನುತ ಲಂ
ಘಣೆಯಿಂದ ಕಡೆಗೆ ಚಿಮ್ಮಿದನು ೮೮

ಹಣೆಯೊಡೆದು ಜಿನುಗುವ ರಕ್ತಧಾರೆ ಮನ್ಮಥನ ಮೇಲೆ ಚೆಲ್ಲಿತು. ಮುಕ್ಕಣ್ಣನ ಕೆಂಡಗಣ್ಣಿನ ಕಿಡಿಗಳು ಬಂದವೆಂದು ಪಕ್ಕಕ್ಕೆ ಲಂಘಿಸಿದನು.

ನಿಟಿಲರಂಧ್ರಕೆ ಹಚ್ಚಿ ಔಷಧವ ಖಳನ
ಕುಟಿಲಾಳಕಿಯರು ಕುಸ್ತರಿಸೆ
ಸುಟಿವೆತ್ತು ಮದನಂಗೆ ರತಿ ತನ್ನ ತೊಂಡೆವ
ಣ್ದುಟಿಯ ಕವಳವಿತ್ತಳೊಲಿದು ೮೯

ಹಣೆಯ ತೂತಿಗೆ ಮದ್ದನ್ನು ಹಚ್ಚಿ ಖಳನ ಗುಂಗುರುಗೂದಲ ಕೋಮಲೆಯರು ಶುಶ್ರೂಷೆ ಮಾಡಿದರೆ, ಇತ್ತ ರತಿ ಅತಿ ಶೀಘ್ರದಿಂದ ಮನ್ಮಥನಿಗೆ ತನ್ನ ತೊಂಡೆವಣ್ ತುಟಿಯ ಕವಳ (ತಾಂಬೂಲ, ಅನ್ನ)ವನ್ನು ಪ್ರೀತಿಯಿಂದ ಕೊಟ್ಟಳು.

ಮಂಡೆಯನೊರಸಿ ಪೆರ್ಭುಜಗಳನೊತ್ತಿ ಹೊ
ನ್ನಂಡೆಯೊಳು ಪನ್ನೀರನಿತ್ತು
ಖಂಡೇಂದು ನೊಸಲಬಲೆಯರು ಗಲ್ಲ ಗಲ್ಲಿಸೆ
ಗಂಡೇರಿ ಮಾತನಾಡಿದನು ೯೦

ತಲೆಯೊರಸಿ, ಭುಜಗಳನ್ನೊತ್ತಿ, ಚಿನ್ನದ ಅಂಡೆಯಲ್ಲಿ ಪನ್ನೀರನ್ನು ಕೊಟ್ಟು, ಹೋಳುಚಂದ್ರನ ಹಣೆಯ ಅಬಲೆಯರು ಗದ್ದವನ್ನು ಅಲುಗಾಡಿಸಲು ಶಂಬರನಿಗೆ ಪರಾಕ್ರಮ ಉಕ್ಕೇರಿ ಮಾತನಾಡಿದನು.

ಪತಿಯಿಲ್ಲದವಳೆಂದು ತನ್ನಯ ಮಿಂಡಿವೆಂ
ಡತಿಯ ಕೋಳ್ಗೊಂಡಿಹ ಕುನ್ನಿ
ಧೃತಿಗೆಡಬೇಡ ಧೈರ್ಯವನಾಂತು ಬಾರೆಂದು
ರತಿರಾಜ ಮೂದಲಿಸಿದನು ೯೧

ಗಂಡ ಇಲ್ಲದವಳೆಂದು ನನ್ನ ಮಿಂಡಿವೆಂಡತಿ(ಯೌವನದ ಪತ್ನಿ)ಯನ್ನು ಸೆರೆ ಹಿಡಿದ ನಾಯಿ, ಹೆದರಿಕೊಳ್ಳದೆ ಮುಂದೆ ಬಾರೆಂದು ಮನ್ಮಥ ಮೂದಲಿಸಿದನು.

ಎಂದೆನಲು ಇನಿತೊಂದು ಗರ್ವದ ಬಿರುನುಡಿ
ಚೆಂದವೆ ನಿನಗೆಂದು ದೈತ್ಯ
ಬಂದಡಹಾಯ್ದು ರಟ್ಟೆಯ ಹಿಡಿದು ತಿರುಹಲು
ಕಂದರ್ಪ ನೆಗೆದನಾಗಸಕೆ ೯೨

ಇಂಥ ಗರ್ವದ ಮಾತು ನಿನಗೆ ಚೆಂದವೆ ಎಂದು ರಕ್ಕಸ ಬಂದು ಮನ್ಮಥನ ರಟ್ಟೆಯನ್ನು ಹಿಡಿದು ತಿರುಗಿಸಲು ಮನ್ಮಥ ಮುಗಿಲಿಗೆ ಹಾರಿದನು.

ಹಕ್ಕಿಗಳರಸ ಜೀಮೂತವಾಹನಗೆ ಧು
ಮ್ಮಿಕ್ಕಿದೊಲೆರಗಿ ರಕ್ಕಸನ
ಸಿಕ್ಕಿಸಿ ತಲೆಮುರಿವಂತೊದ್ದು ನೆಲದೊಳ
ಗಿಕ್ಕಿದ ಕಾಮ ಖಾತಿಯಲಿ ೯೩

ಹಕ್ಕಿಗಳರಸ(ಗರುಡ) ಜೀಮೂತವಾಹನನ ಮೇಲೆರಗಿದಂತೆ ರಕ್ಕಸನ ಮೇಲೆರಗಿ ಮುಂಡದಿಂದ ರುಂಡ ಬೇರಾಗುವಂತೆ ಒದ್ದು, ನೆಲಕ್ಕೆ ಬೀಳುವಂತೆ ಮಾಡಿದ.

ನಿಲ್ಲದೆ ರತಿಯ ಕೋಳ್ವಿಡಿದಾತನ ಪಾಣಿ
ಪಲ್ಲವಗಳ ಕಿತ್ತು ಬಿಸುಟ
ಪುಲ್ಲಶರಗೆ ಮೆಚ್ಚಿ ಸುರರು ಪೂಮಳೆಗರೆ
ದೆಲ್ಲರು ಕೊಂಡಾಡಿದರು ೯೪

ರತಿಯ ಸೆರೆ ಹಿಡಿದ ರಕ್ಕಸನ ಕೈಗಳನ್ನು ಕಿತ್ತು ಬಿಸಾಡಿದ ಮನ್ಮಥನನ್ನು ಮೆಚ್ಚಿದ ಸುರರು ಹೂಮಳೆಗರೆದು ಕೊಂಡಾಡಿದರು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೯೫

“ವರ ಮೋಹನ ತರಂಗಿಣಿ”ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೧೩. ರತಿಯ ವಿವಾಹ

ನೀಲೋತ್ಪಲ ಶ್ಯಾಮ ಕಮಲಾಂಬಕನಂಕ
ಮಾಲಾ ಸುಪ್ರಬಂಧವನು
ಆಲಸ್ಯ ಪರಿಹರವಪ್ಪಂತೆ ಪೇಳ್ನಿನ್ನ
ನಾಲಗೆ ಪರಮ ಪವಿತ್ರ ೧

ಕನ್ನೈದಿಲೆಯಂಥ ಕಡು ಕಪ್ಪಾದವನ(ಶ್ಯಾಮ), ಕಮಲಾಕ್ಷನ, ಸುವಿಖ್ಯಾತನ ಕಾವ್ಯವನ್ನು ಆಲಸ್ಯ ನಿವಾರಣೆಯಾಗುವಂತೆ ಹೇಳು. ಏಕೆಂದರೆ ನಿನ್ನ ನಾಲಿಗೆ ಪರಮ ಪವಿತ್ರವಾದುದು.

ಒಡಲಾಂತು ಹರಿಯ ಕೀರ್ತನೆಗೆಯ್ಯದ ಜಿಹ್ವೆ
ಕಡಲನಾಲಗೆಯಾಗದಿಹುದೆ
ಮಡದಿ ಕೇಳದರಿಂದ ಕೃಷ್ಣ ಚರಿತ್ರವ
ತಡೆಯದೆ ನಿನಗೆ ವಿಸ್ತರಿಪೆ ೨

ಶರೀರ ಧಾರಿಯ ನಾಲಗೆ ಕೃಷ್ಣನ ಕೀರ್ತನೆ ಮಾಡದಿದ್ದರೆ ಅದು ಕಡಲನಾಲಗೆ(ಅಲೆ)ಎನ್ನಿಸಿಕೊಳ್ಳುತ್ತದೆ ಅಷ್ಟೆ. ಆದ್ದರಿಂದ ಕೃಷ್ಣ ಚರಿತ್ರೆಯನ್ನು ನಿನಗೆ ಸಚಿತ್ರವಾಗಿ ವಿಸ್ತಿರಿಸ ಹೇಳುವೆನು.

ಕಂದರ್ಪ ಖಳನೊಡಲಿಂದ ಸುರಿವ ರಕ್ತ
ಚಂದನ ಬೊಟ್ಟಿಟ್ಟು ರತಿಯ
ಹಿಂದಣ ನೋವ ಕುಸ್ತರಿಸುತಿರಲು ನಾರದ
ಬಂದಂಗಜನ ಕೀರ್ತಿಸಿದ ೩

ಮನ್ಮಥ ರಕ್ಕಸನ ಒಡಲಿಂದ ಸುರಿಯುವ ರಕ್ತದ ಬೊಟ್ಟಿಟ್ಟು ರತಿಯ ಹಿಂದಿನ ನೋವನ್ನೆಲ್ಲ ಹೋಗಲಾಡಿಸಿ ಸಮಾಧಾನ ಮಾಡುತ್ತಿರುವಾಗ ನಾರದ ಬಂದು ಮನ್ಮಥನನ್ನು ಕೊಂಡಾಡಿದನು.

ಶಂಬರಾಸುರನ ಮರ್ದಿಸಲಾಗಿ ತ್ರಿದಶ ಕ
ದಂಬ ಸಗ್ಗದಿ ಗುಡಿಗಟ್ಟಿ
ಜಂಭಾರಿ ಮುಖ್ಯ ನಿರ್ಜರರೈತಂದು ದಿ
ವ್ಯಾಂಬರಗಳನಿತ್ತರೊಲಿದು ೪

ಶಂಬರಾಸುರನನ್ನು ಕೊಂದದ್ದರಿಂದ ದೇವತೆಗಳ ಸಮೂಹ ಸ್ವರ್ಗದಲ್ಲಿ ಗುಂಪುಗೂಡಿ ಇಂದ್ರನೇ ಮೊದಲಾದ ಅಮರರು ಬಂದು ದಿವ್ಯಾಂಬರಗಳನ್ನು ಮನ್ಮಥನಿಗೆ ಒಪ್ಪಿಸಿದರು.

ಭೂರಿವೃಂದಾರಕರು ಬಲ್ಲಂತೆ ಕೈ
ವಾರಿಸೆ ಖಳನುಪಟಳವನು
ತೀರಿಸಲಂಗಜಾತಗೆ ಮೆಚ್ಚಿ ವರ ಶಂಬ
ರಾರಿ ನಾಮವನಿತ್ತರೊಲಿದು ೫

ದೇವತೆಗಳು ತಮತಮಗೆ ತಿಳಿದಂತೆ ಹೊಗಳಿ, ರಕ್ಕಸನ ಉಪಟಳಕ್ಕೆ ಮಂಗಳ ಹಾಡಿದ ಮನ್ಮಥನಿಗೆ 'ಶಂಬರಾರಿ' ಎಂಬ ಹೊಸ ಹೆಸರನ್ನು ಟಂಕಿಸಿ ಬಳಸಿದರು.

ಕುಂಭಕರ್ಣನ ಒಡಲಂದದಿ ಕೆಡೆದಿರ್ದ
ಶಂಬರನೊಡಲ ರೋಹಿತವ
ಕಂಬನಿಯಿಂದ ನಿವಾರಿಪ ವಧುಗಳ ನಿಕು
ರುಂಬವನೇನ ಬಣ್ಣಿಸುವೆ ೬

ಕುಂಭಕರ್ಣನ ದೇಹದಂತೆ ಬಿದ್ದಿರುವ ಶಂಬರನೊಡಲ ರಕ್ತವನ್ನು ಕಂಬನಿಯಿಂದ ನಿವಾರಿಸುವ ಹೆಂಗಸರ ಗುಂಪಿನ ವರ್ಣನೆ ಮಾಡಲಸಾಧ್ಯ.

ನಾರಾಯಣನಾತ್ಮಸಂಭವ ದೈತ್ಯ ಗಂ
ಭೀರ ಮಂತ್ರಿಯನು ಕರೆಸಿ
ಊರೊಡೆತನದ ಪಟ್ಟವ ಕಟ್ಟಿ ಪರಮ ವಿ
ಚಾರದ ಬುದ್ಧಿ ಪೇಳಿದನು ೭

ಕೃಷ್ಣನ ಮಗನಾದ ಮನ್ಮಥ ಶಂಬರನ ಮಂತ್ರಿಯನ್ನು ಕರೆಸಿ, ಊರೊಡೆತನದ ಪಟ್ಟವನ್ನು ಕಟ್ಟಿ, ಬುದ್ಧಿವಾದವನ್ನು ಬೋಧಿಸಿದನು.

ರಕ್ಕಸನೊಡಲಿಂಗೆ ಸಂಸ್ಕಾರವ ಮಾಡು
ಬೊಕ್ಕಸ ಭಂಡಾರ ಜತನ
ಚೊಕ್ಕಟವಾಗಿ ರಾಜ್ಯವನಾಳು ದ್ವಾರಕಿ
ಹೊಕ್ಕಂತೆ ಬಹೆನು ತೀವ್ರದಲಿ ೮

ಶಂಬರನಿಗೆ ಸಂಸ್ಕಾರ ಕ್ರಿಯೆಗಳನ್ನು ನೆರವೇರಿಸು, ಬೊಕ್ಕಸ ಭಂಡಾರದ ಬಗೆಗೆ ಎಚ್ಚರದಿಂದಿರು, ಚೊಕ್ಕಟವಾಗಿ ರಾಜ್ಯವನ್ನು ಆಳು, ದ್ವಾರಕಿಗೆ ಹೋಗಿ ಬಹುಬೇಗ ಹಿಂದಿರುಗಿ ಬರುವೆನು.

ಪೋಪುದುಚಿತವಲ್ಲ ಜೀಯ ಕೇಳ್ ದೈತ್ಯ ಚ
ಮೂಪನ ಮಹದೈಶ್ವರ್ಯ
ನೀ ಪರಿಗ್ರಹಿಸಿಕೊಂಡಿಹುದೆಂದು ರತಿಯ ಪ್ರಾ
ಣೋಪಗೆ ಖಳಮಂತ್ರಿ ನುಡಿದ ೯

ಹೋಗುವುದು ಸರಿಯಲ್ಲ, ದೈತ್ಯಸೇನಾನಿಯ ಮಹದೈಶ್ವರ್ಯವನ್ನು ನೀನು ವಹಿಸಿಕೊಂಡು ನಿರ್ವಹಿಸು ಎಂದು ದೈತ್ಯಮಂತ್ರಿ ರತಿಯ ಮನದನ್ನನಿಗೆ ಹೇಳಿದ.

ಒಪ್ಪವಡೆದ ಮಾತಹುದಿದು ಜೋಪಾನ
ತಪ್ಪದೆ ರಾಜ ಮಂದಿರವ
ಸಪ್ಪ ನಿಧಾನವ ಕಾಯ್ವಂತೆ ಕಾದಿರೆಂ
ದಪ್ಪಣೆಗೊಟ್ಟ ರಕ್ಕಸಗೆ ೧೦

ಕರಾರು ಮಾತಿದು, ಆರಮನೆಯ ಸಕಲವನ್ನು ಸರ್ಪ ನಿಧಿಯನ್ನು ಕಾಯುವಂತೆ ಕಾಯಬೇಕೆಂದು ಮಂತ್ರಿಗೆ ಅಪ್ಪಣೆ ಮಾಡಿದ.

ನಿಗ್ಗರಹವಡಿಸದೆ ಪ್ರಜೆ ಪರಿವಾರವ
ವೆಗ್ಗಳದಿಂ ತುಷ್ಟಿಬಡಿಸು
ಅಗ್ಗರಾರ ಮಾನ್ಯವು ದೇವಸ್ಥಾನಂಗಳ
ಕುಗ್ಗರಾಮಿಸ ಬೇಡೆಂದ ೧೧

ಪ್ರಜೆಗಳನ್ನು ನಿಗ್ರಹಕ್ಕೊಳಪಡಿಸದೆ ಆಧಿಕ್ಯದಿಂದ ಹರ್ಷಗೊಳಿಸು, ಅಗ್ರಹಾರಗಳನ್ನು ಮಠಮಾನ್ಯಗಳನ್ನು, ದೇವಸ್ಥಾನಗಳನ್ನು ಹಾಳುಗೆಡಿಸಲು ಬೇಡ ಎಂದು ಹೇಳಿದನು.

ಮುರಹರನಾಣೆ ಘೋಷಣೆಯಲಿ ಜವೆ ಬೀ
ಸರು ಹೋಗದಂತೆ ನೀನಿರ್ದು
ಕರೆಯಲಟ್ಟಿದರೆ ದ್ವಾರಕಿಗೆಯ್ದುವುದು ಚಕ್ರ
ಧರನರಿಕೆಯ ಮಾಳ್ಪುದೆಂದ ೧೨

ಕೃಷ್ಣನ ಮೇಲಾಣೆ, ಈ ಘೋಷಣೆ ಕೊಂಚವೂ ವ್ಯರ್ಥವಾಗದಂತೆ ನಿರ್ವಹಿಸು, ಕರೆಯಲು ಕಳಿಸಿದರೆ ದ್ವಾರಕಿಗೆ ಬಂದು ಕೃಷ್ಣ ಬಯಕೆಯನ್ನು ನೆರವೇರಿಸು.

ಎನಲಂಗಜಾತಗೆ ಪೊಡಮಟ್ಟು ಖಳಮಂತ್ರಿ
ಎನಗಿದ ಒಪ್ಪಿಸ ಬೇಡೆನುತ
ಘನವಿಶ್ವಾಸವಡೆದು ವಿಜ್ಞಾಪಿಸಿದನು
ಮನದಭಿಪ್ರಾಯ ವನರುಹಿ ೧೩

ಆಗ ಮನ್ಮಥನಿಗೆ ವಂದಿಸಿ, ನನಗೆ ಈ ಜವಾಬ್ದಾರಿಯನ್ನು ಒಪ್ಪಿಸಬೇಡ ಎಂದು ಮನದ ಅಭಿಪ್ರಾಯವನ್ನು ಬಿನ್ನೈಸಿದನು.

ಮಕರಕೇತನ ಕೇಳು ಮದ್ವಲ್ಲಭನಲ್ಲಿ
ಸಕಲಲೋಕ ಸಂಚರಿಸುವ
ಅಕಳಂಕ ರತ್ನ ಕೇವಣಿಸಿರ್ದ ದಿವ್ಯ ಪು
ಷ್ಪಕವಿದೆ ನೋಡೆಂದನೊಲಿದು ೧೪

ಮೀನಧ್ವಜನಾದ ಮನ್ಮಥನೆ, ನನ್ನ ಒಡೆಯನ ಬಳಿ, ದೇವಲೋಕ ಸಂಚರಿಸುವ ರತ್ನಖಚಿತ ದಿವ್ಯ ಪುಷ್ಪಕವಿದೆ ನೋಡು ಎಂದನು.

ನೋಡಿದ ಕಣ್ಗೆ ಮಂಗಳವಪ್ಪ ಪ್ರತಿಸೂರ್ಯ
ಮೂಡಿದಂತಿಹ ಪುಷ್ಪಕವ
ಮಾಡಿದ ಕೆಲಸಕೆ ಪ್ರತಿಯಿಲ್ಲವೆನುತ ಕೊಂ
ಡಾಡಿದನಧಿಕ ಸಂತಸದಿ ೧೫

ಪ್ರತಿಸೂರ್ಯನಂತೆ ಹೊಳೆಯುವ ಮಂಗಳ ಪುಷ್ಪಕವನ್ನು ನೋಡಿ ಮನ್ಮಥ ಕೊಂಡಾಡಿದನು.

ನೆನೆದ ಕಾರ್ಯವು ಸಿದ್ಧಿಸಿತೆಂದು ನಿರ್ಜರ
ಜನರ ಬೀಳ್ಕುಟ್ಟು ರಕ್ಕಸನ
ಮನಕೆ ಸಂತಸವಿತ್ತು ಬರಿಸಿದ ನಿಬಿಡ ಯೌ
ವನ ವಧೂ ರತ್ನಂಗಳನು ೧೬

ನೆನೆದ ಕಾರ್ಯ ಸಿದ್ಧಿಸಿತು ಎಂದು ದೇವತೆಗಳನ್ನು ಬೀಳ್ಕೊಟ್ಟು, ಮಂತ್ರಿಯ ಮನಕ್ಕೆ ಸಂತಸವನ್ನಿತ್ತು, ಸಾಂದ್ರ ಯೌವನ ವಧೂ ರತ್ನಗಳನ್ನು ಕರೆಸಿದನು.

ಅತಿ ರಮ್ಯವಡೆದ ನಾನಾ ವಸ್ತುಗಳ ತುಂಬಿ
ರತಿ ಸಹಿತಡರಿ ಪುಷ್ಪಕವ
ಗತಿ ಸೂತ್ರವ ನೋಡಿ ತೆರಳಿದ ದ್ವಾರಾ
ವತಿಯ ಮಾರ್ಗವಿದೆಂದೆನುತ ೧೭

ಸುಂದರ ನಾನಾ ವಸ್ತುಗಳನ್ನು ತುಂಬಿ, ರತಿಸಹಿತ ಪುಷ್ಪಕವನ್ನೇರಿ, ಗತಿಸೂತ್ರವನ್ನು ನೋಡಿ, ದ್ವಾರಾವತಿಯ ಮಾರ್ಗ ಇದೇ ಎಂದು ಭಾವಿಸಿ ತೆರಳಿದನು.

ಏನ ಬಣ್ಣಿಸ ಬಪ್ಪುದು ರತ್ನ ಖಚಿತ ವಿ
ಮಾನ ಖೇಚರ ಮಾರ್ಗದಲಿ
ಮೀನಾಂಕನ ಕೊಂಡು ಬಂದುದಾಕ್ಷಣ ಪವ
ಮಾನ ವೇಗವ ಕೀಳ್ಪಡಿಸಿ ೧೮

ರತ್ನ ಖಚಿತ ವಿಮಾನ ರತಿಮನ್ಮಥರನ್ನು ಒಳಗೊಂಡು ಗಗನ ಮಾರ್ಗದಲ್ಲಿ ವಾಯುವೇಗವನ್ನು ಹಿಂದಿಕ್ಕಿ ಬಂದುದು.

ಮೋಡದ ಓಡಕೆ ತೇಜವನಿಕ್ಕಿ ಹಂಸಾ
ರೂಢ ನಾರದನ ಹಿಂದಿಕ್ಕಿ
ನೋಡಲಾಕ್ಷಣ ಪುಷ್ಪಕವಿಳಿದುದು ದೇವ
ಚೂಡಾಮಣಿಯ ಪಟ್ಟಣದಿ ೧೯

ಮೋಡದ ದೋಣಿಗೆ (ಓಡಕೆ) ವೇಗವನ್ನಿತ್ತು, ಹಂಸಾರೂಢ ನಾರದನ ಹಿಂದಕ್ಕಿಕ್ಕಿ, ದೇವಚೂಡಾಮಣಿ ಎನ್ನಿಸಿದ ಕೃಷ್ಣನ ಪಟ್ಟಣದಲ್ಲಿ ಇಳಿಯಿತು.

ಸ್ಮರನ ಪುಷ್ಪಕವ ಕಣ್ಣಲಿ ಕಂಡು ಕೃಷ್ಣನ
ಅರಮನೆ ಪೆಣ್ಣುಗಳು ಮುದದಿ
ಪರಪುರುಷನ ನಿಟ್ಟಿಸಬಾರದೆಂದು ಮಂ
ದಿರದೊಳು ಹೊಕ್ಕರಾಕ್ಷಣದಿ ೨೦

ಮನ್ಮಥನ ಪುಷ್ಪಕವನ್ನು ಕಂಡ ಅರಮನೆಯ ಹೆಣ್ಣುಗಳು ಪರಪುರುಷನನ್ನು ನೋಡಬಾರದೆಂದು ಸರ್‍ರನೆ ಮಂದಿರವನ್ನು ಹೊಕ್ಕರು.

ಕಾಮನ ಕಂಡಾಕ್ಷಣದಲ್ಲಿ ಸುರಸಾರ್ವ
ಭೌಮ ಶ್ರೀಕೃಷ್ಣನೆಂದೆನುತ
ವಾಮಲೋಚನೆಯರು ತನುಪುಳಕಿತರಾಗಿ
ಭ್ರಾಮಕವಡೆದಿರ್ದರಾಗ ೨೧

ಕಾಮನನ್ನು ಕಂಡಾಕ್ಷಣ ಸುರಸಾರ್ವಭೌಮ ಶ್ರೀಕೃಷ್ಣನೆಂದು ಭಾವಿಸಿದ ಸುಂದರಾಕ್ಷಿಯರು ರೋಮಾಂಚಿತರಾಗಿ ಭ್ರಮಾಲೋಕದಲ್ಲಿ ತೇಲಾಡಿದರು.

ಕೆಲಬರು ಕೃಷ್ಣನೆಂಬರು ಕೃಷ್ಣನಲ್ಲೆಂದು
ಕೆಲಬರು ಜೂಜು ಕಟ್ಟುವರು
ಕೆಲಬರು ನೀನೇನ ಬಲ್ಲೆಯೆಂದಲಸದೆ
ನೆಲೆ ನಿಂದು ನೋಡುತಲಿಹರು ೨೨

ಕೆಲವರು ಕೃಷ್ಣ ಎನ್ನುವರು, ಕೆಲವರು ಕೃಷ್ಣನಲ್ಲವೆಂದು ಜೂಜು ಕಟ್ಟುವರು, ಕೆಲವರು ನಿನಗೇನು ಗೊತ್ತು ಎಂದು ಆಲಸ್ಯಪಡದೆ ಒಂದೇ ಸಮ ನೋಡುತ್ತಿರುವರು.

ಫಣಿತಲ್ಪನಾದುದುಂಟಾದೊಡೆ ಕೌಸ್ತುಭ
ಮಣಿಯಿಲ್ಲ ವಕ್ಷಸ್ಥಳದಿ
ಗುಣಿಸಿದೊಡಚ್ಯುತನಿರಬಹುದೆಂದು ರು
ಕ್ಮಿಣಿದೇವಿ ನೋಡಿದಳ್ಮುದದಿ ೨೩

ಫಣಿತಲ್ಪ (ಶೇಷಶಾಯಿ)ನಾದ ರಂಗನಾಥನಾಗಿದ್ದರೆ ವಕ್ಷಸ್ಥಳದಲ್ಲಿ ಕೌಸ್ತುಭ ರತ್ನವಿಲ್ಲ, ಲೆಕ್ಕ ಹಾಕಿ ನೋಡಿದರೆ ಕೃಷ್ಣನಿರಬಹುದೆಂದು ರುಕ್ಮಿಣಿ ಮುದದಿಂದ ನೋಡಿದಳು.

ಇನ್ನಾವ ಪುಣ್ಯಸ್ತ್ರೀ ತಪವಿದ್ದು ಪಡೆದಳೊ
ಚಿನ್ನದ ಪ್ರತಿಮೆಯಂಥವನ
ಎನ್ನ ಕುವರನಿದ್ದೊಡೆ ಇಂತಿರುತಿರ್ದನೆಂದು
ಚೆನ್ನಾಗಿ ಮೊಗವ ನೋಡಿದಳು ೨೪

ಯಾವ ಪುಣ್ಯವಂತೆ ತಪಸ್ಸು ಮಾಡಿ ಪಡೆದಳೋ ಇಂಥ ಚಿನ್ನದ ಪ್ರತಿಮೆಯಂತೆ ಇರುವ ಸುಂದರನನ್ನು. ನನ್ನ ಕುವರ ಇದ್ದಿದ್ದರೆ ಹೀಗೆ ಇರುತ್ತಿದ್ದ ಎಂದು ಚೆನ್ನಾಗಿ ಮುಖವನ್ನು ನೋಡುತ್ತಾ ಅಳೆದು ಸುರಿದಳು.

ಪುಣ್ಣಿಮೆಯಾದುದು ಮುಖಚಂದ್ರಮಂಡಲ
ತಣ್ಣಸವೆದೆಯೊಳಾವರಿಸೆ
ಕಣ್ಣರಿಯದೊಡೇನು ಕರುಳ್ಬಲ್ಲುದೆಂಬಂತೆ
ಚಿಣ್ಣನ ನೋಡಿದಳು ತಾಯಿ ೨೫

ಹುಣ್ಣಿಮೆ ಚಂದ್ರನ ಶೈತ್ಯ ಎದೆಯನ್ನಾವರಿಸಿತು, ಅವನ ಮುಖವನ್ನು ಕಂಡಾಗ, ಕಣ್ಣರಿಯದಿದ್ದರೇನು ಕರುಳು ಬಲ್ಲದು ಎಂಬಂತೆ ಚಿಣ್ಣನನ್ನು ನೋಡಿದಳು.

ಗಂಧೇಭಗಮನೆ ಬಲರಾಮಸಹಿತ ಗೋ
ವಿಂದನೊಂದೆಸೆಗೆ ಪೋಗಿರ್ದು
ಬಂದನಾಕ್ಷಣವೆ ಮಂದಿರವ ಹೊಕ್ಕಿರ್ದ
ಕಂದರ್ಪನಿರವ ನೀಕ್ಷಿಸಿದ ೨೬

ಯಾವುದೋ ಕೆಲಸಕ್ಕೆ ಹೊರಹೋಗಿದ್ದ ಬಲರಾಮ ಸಮೇತ ಕೃಷ್ಣ ಹಿಂದಿರುಗಿ ಬಂದು, ಮಂದಿರವನ್ನು ಹೊಕ್ಕಿದ್ದ ಮನ್ಮಥನನ್ನು ನೋಡಿದನು.

ಈತನದಾರು ಬಂದೊಳಪೊಕ್ಕನೇಂದಗ್ರ
ಜಾತನ ಬೆಸಗೊಳಲಾಗಿ
ಭೂತಾಂತರಾತ್ಮಕ ನೀ ಬಲ್ಲೆ ಪೇಳೆಂದು
ಪೀತಾಂಬರನ ಕೇಳಿದನು ೨೭

ಈತನು ಯಾರು ಮನೆಯೊಳಕ್ಕೆ ಪ್ರವೇಶಿಸಿದ್ದಾನೆ? ಎಂದು ಅಣ್ಣನನ್ನು ಕೇಳಿದಾಗ, ಸಕಲಜೀವಜಂತುಗಳ ಅಂತರಾತ್ಮನಾದ ನಿನಗೆ ಗೊತ್ತು ಹೇಳೆಂದು ಬಲರಾಮ ಪೀತಾಂಬರ(ಕೃಷ್ಣ) ನನ್ನು ಕೇಳಿದನು.

ನೆರೆದಿರ್ದ ಗೋಪಿಯರು ಭಾವನ ನುಡಿಗೇಳು
ತಿರಲಂಜಿ ಪೊಕ್ಕರಾಲಯವ
ದರಹಾಸ ಮುಖ ರುಕ್ಮಿಣಿದೇವಿ ಕಾಂತನ
ಹೊರೆಗೈತಂದಳುತ್ಸವದಿ ೨೮

ನೆರೆದಿದ್ದ ಗೋಪಿಯರು ಭಾವನ ನುಡಿಗೇಳಲಂಜಿ ಮಂದಿರದ ಒಳಕ್ಕೆ ಹೋದರು. ಮಂದಹಾಸಮುಖಿಯಾದ ರುಕ್ಮಿಣಿ ಮಾತ್ರ ಕಾಂತನ ಸಮೀಪಕ್ಕೆ ಬಂದಳು ಉತ್ಸಾಹದಿಂದ.

ಕುಂಭಕುಚಾನ್ವಿತೆ ಕುವಲಯನೇತ್ರೆ ದಾ
ಳಿಂಬದ ಬಿತ್ತಿನಂತೆಸೆವ
ಕೆಂಬಲ್ಲ ರುಚಿದೋರಿ ಬಿನ್ನವಿಸಿದಳು ಪೀ
ತಾಂಬರಧರಗೊಂದು ಮಾತ ೨೯

ಗಡಿಗೆ ಮೊಲೆಯವಳೂ, ಕನ್ನೈದಿಲೆ ಕಣ್ಣವಳೂ, ದಾಳಿಂಬೆ ಬೀಜದಂತೆಸೆವ ಕೆಂಬಲ್ಲಿನವಳೂ(ಕೆಂಪು ಹಲ್ಲಿನವಳು) ಆದ ರುಕ್ಮಿಣಿ ಪೀತಾಂಬರನಿಗೆ ಒಂದು ಮಾತನ್ನು ಬಿನ್ನವಿಸಿದಳು.

ಸಕಲ ಜೀವರುಗಳಂತರ್ಭಾವದಲಿ ವ್ಯಾ
ಪಕ ಮೂರ್ತಿ ನೀನಿದ ಬಲ್ಲೆ
ಪ್ರಕಟಿತವ ಮಾಡೀತನಾರು ಮಮ ಕುಮಾ
ರಕನಲ್ಲವೆ ಪೇಳು ಜೀಯ ೩೦

ಸಕಲ ಜೀವಿಗಳ ಅಂತರಾತ್ಮನಾದ ಪರಮಾತ್ಮನೆ ನಿನಗೆ ಸರ್ವವೂ ಗೊತ್ತು. ಈತನು ಯಾರು? ನನ್ನ ಕುಮಾರನಲ್ಲವೆ?ಹೇಳು ಜೀಯ ಎಂದು ಗೋಗರೆದಳು.

ಒಡಲೊಳಗೊಂಬತ್ತು ತಿಂಗಳು ಹೊತ್ತಿರ್ದು
ಪಡೆದಳ್ಗೆ ಪರವಶವಾಯ್ತು
ಕಡೆಯೊಳಿದ್ದಾತನೆಂತರಿವೆ ನಾನೆಂದು
ಮಡದಿಯೊಡನೆ ಉಸುರಿದನು ೩೧

ಒಂಭತ್ತು ತಿಂಗಳು ಹೊತ್ತು ಹೆತ್ತ ನಿನಗೆ ಮರೆವು ಉಂಟಾಯ್ತು. ಇದಿರಿಂದ ಹೊರತಾದ ನನಗೆ ಹೇಗೆ ಅರಿವಾಗಬೇಕು? ಎಂದು ಹೇಳಿದನು.

ಏಣನಿಭಾಯತೇಕ್ಷಣೆ ಕೇಳು ನವ ಪಂಚ
ಬಾಣನ ಕತೆಯ ಪೇಳುವೊಡೆ
ಮಾಣದೆ ರಾಜಹಂಸವನೇರಿ ಕಲಹ ಪ್ರ
ವೀಣ ನಾರದ ಬಂದಿಳಿದ ೩೨

ಆ ಸಮಯಕ್ಕೆ ಸರಿಯಾಗಿ ಹೊಸ ಮನ್ಮಥನ ಕಥೆಯನ್ನು ಹೇಳಲು ಕಲಹಪ್ರವೀಣನಾದ ನಾರದ ರಾಜಹಂಸವನ್ನೇರಿ ಬಂದು ಅಲ್ಲಿಳಿದ.

ಬಂದ ನಾರದ ಮುನೀಶ್ವರಗುಪಚರ‍್ಯಗೈದು
ಹೊಂದವಗದೊಳು ಕುಳ್ಳಿರಿಸಿ
ಗಂಧ ಕತ್ತುರಿಯ ಲೇಪವನಿಕ್ಕಿ ದೇವಕಿ
ನಂದನ ಮಾತನಾಡಿಸಿದ ೩೩

ಬಂದ ನಾರದನಿಗೆ ಆದರೋಪಚಾರ ಮಾಡಿ ಚಿನ್ನದ ಸಿಂಹಾಸನದಲ್ಲಿ ಕುಳ್ಳಿರಿಸಿ ಗಂಧ ಕಸ್ತೂರಿಯ ಲೇಪನವನ್ನು ಹಚ್ಚಿ, ದೇವಕಿನಂದನ(ಕೃಷ್ಣ)ನುಡಿಸಿದನು.

ಹಕ್ಕಿಯನೇರಿ ಆಯಾಸವಡುತೆಲ್ಲೆಲ್ಲಿ
ತುಕ್ಕಿ ಬಂದಿರಿ ಪೇಳ್ವುದೆನೆ
ಸೊಕ್ಕಿದ ಶಂಬರಾಸುರನ ವಿಗ್ರಹವ ಸೀ
ಳ್ದಿಕ್ಕಿಸಿ ಬಂದೆ ಕೇಳ್ಜೀಯ ೩೪

ಹಕ್ಕಿ(ಅರಸಂಚೆ)ಯನ್ನೇರಿ ಅಯಾಸಪಟ್ಟು ಎಲ್ಲೆಲ್ಲಿ ಅಲೆದು ಬಂದಿರಿ ಹೇಳಬೇಕು ಎಂದು ಕೇಳಲು, ಸೊಕ್ಕಿದ ಶಂಬರಾಸುರನ ಮೂರ್ತಿಯನ್ನು ಭಗ್ನಗೊಳಿಸುವಂತೆ ಮಾಡಿ ಬಂದಿದ್ದೇನೆ ಎಂದನು.

ತ್ರಿಜಗದೊಳದಟುಳ್ಳ ದೈತ್ಯನ ಮಡುಹಿದ
ಭುಜಬಲನಾರು ಪೇಳೆನಲು
ನಿಜಗಲಿ ಇವನೀಗ ನೋಡೆಂದು ಮಕರ
ಧ್ವಜನ ವಿಗ್ರಹವ ತೋರಿಸಿದ ೩೫

ಮೂರು ಲೋಕದಲ್ಲಿ ಅತಿ ಪರಾಕ್ರಮಿಯಾದ ರಕ್ಕಸನನ್ನು ಸಂಹರಿಸಿದ ಭುಜಬಲನಾರು ಹೇಳು ಎಂದಾಗ ನಿಜವಾದ ಕಲಿ(ಶೂರ)ಇವನೆಂದು ಮೀನಕೇತನ(ಮನ್ಮಥ) ನನ್ನು ತೋರಿಸಿದ.

ಎನಲಿವನಾರ ಕುಮಾರಕನೆಂಬುದ
ಘನಪೌರುಷದಿ ರುಕ್ಮಿಣಿಗೆ
ಕನಲದೆ ಪೇಳು ಪೇಳೆನಲಾಗಿ ನಾರದ
ಮನವೊಲಿದೊರೆದನಾಯಕಗೆ ೩೬

ಆಗ ಇವನು ಯಾರು ಕುಮಾರನೆಂಬುದನ್ನು ರುಕ್ಮಿಣಿಗೆ ಹೇಳು ಹೇಳು ಎಂದು ಒತ್ತಾಯಿಸಿದಾಗ ನಾರದ ಆಕೆಗೆ ನಿಜಕಥೆಯನ್ನು ಹೇಳಿದ.

ಭಿನ್ನವಿಲ್ಲದೆ ಪೇಳ್ವೆ ಬಿಸಜಾಕ್ಷಿ ಕೇಳೀತ
ಮುನ್ನಮೀಶ್ವರನ ಕಣ್ಣುರಿಗೆ
ತನ್ನ ದೇಹವ ತೆತ್ತು ಮನಸಿಜನಾಗಿರೆ
ಗನ್ನಗತಕವಾದುದೊಡನೆ ೩೭

ಕಮಲಾಕ್ಷಿ ಕೇಳು, ಇವನು ಮೊದಲು ಈಶ್ವರನ ಕಣ್ಣುರಿಗೆ ತನ್ನ ದೇಹವನ್ನು ತೆತ್ತು ಮನಸಿಜನಾದದ್ದೇ ಒಂದು ಗನ್ನಗತಕ(ಮೋಸ)ವಾಯಿತು.

ಭೂತಳದೊಳಗೆ ಶಂಬರನೆಂಬ ರಕ್ಕಸ
ನಾತಗೆ ರತಿ ಸಿಕ್ಕಿದಳು
ಆತನ ಕೊಲಲಂಗಜನ ದೇಹವ ಬೇಡಿ
ಪೀತಾಂಬರನು ಪ್ರಾರ್ಥಿಸಿದ ೩೮

ಭೂಮಂಡಲದಲ್ಲಿ ಶಂಬರನೆಂಬ ರಕ್ಕಸನಿಗೆ ರತಿ ಸಿಕ್ಕದಳು. ಅವನನ್ನು ಕೊಲ್ಲಲು ಪೀತಾಂಬರನು (ಕೃಷ್ಣನು) ಅಂಗಜನ ದೇಹವನ್ನು ಬೇಡಿದನು.

ಮಧುಸೂದನ ಮೆಚ್ಚಿ ಮದನಂಗೆ ತನ್ಮಯ
ಯದುವಂಶದಿ ಬಹುದೆನಲು
ಅದು ನಿಮಿತ್ತವಾಗಿ ನಿನ್ನ ಜಠರದಿ ಬಂ
ದುದುಭವಿಸಿದ ಕೇಳು ತಾಯೆ ೩೯

ಮಧುಸೂದನ (ಮಧು ಎಂಬ ರಾಕ್ಷಸನನ್ನು ಕೊಂದ ಕೃಷ್ಣ) ಮೆಚ್ಚಿ ಮನಸಿಜನನ್ನು ತನ್ನ ಯದುವಂಶದಲ್ಲಿ ಜನಿಸೆಂದು ಬಯಸಿದಾಗ, ಆ ಕಾರಣದಿಂದ ಅವನು ನಿನ್ನ ಗರ್ಭದಲ್ಲಿ ಜನಿಸಿದ.

ಮುದ್ದು ಮುಖಾನ್ವಿತೆ ಶಿಶು ನಿನ್ನ ಮಗ್ಗುಲೊ
ಳಿದ್ದುದ ಮಟಮಾಯಗೆಯ್ದು
ಕದ್ದುಕೊಂಡೊಯ್ದು ಶಂಬರ ಶರಧಿಗೆಸೆಯೆ
ಬಿದ್ದುದು ಮೀನ ಬಾಯೊಳಗೆ ೪೦

ನಿನ್ನ ಪಕ್ಕದಲ್ಲಿ ಮಲಗಿದ್ದ ಮಗುವನ್ನು ಕದ್ದೊಯ್ದು ಶಂಬರ, ಅದನ್ನು ಸಮುದ್ರದೊಳಕ್ಕೆ ಎಸೆದಾಗ ಅದು ಒಂದು ಹೆಣ್ಣು ಮೀನಿನ ಬಾಯಿಗೆ ಬಿದ್ದಿತು.

ಮೃಢ ತಪಧ್ವಂಸಿಯ ನುಂಗಿದ ಪೆಣ್ಮೀನು
ಕಡಲೊಳಗಿರಲೊರ್ವ ಪಿಡಿದು
ಪೊಡವಿಯನಾಳ್ವ ಶಂಬರಗೀಯಲದನು
ಸೀಳ್ದಡಲು ರತಿಗೆ ವಹಿಸಿದ ೪೧

ಆ ಮೀನು ಕಡಲಲ್ಲಿರುವಾಗ ಒಬ್ಬ ಬೆಸ್ತ ಅದನ್ನು ಹಿಡಿದು ಭೂಪತಿ ಶಂಬರನಿಗೆ ಕೊಡಲು, ಶಂಬರ ಅದನ್ನು ಅಡಲು ರತಿಗೆ ವಹಿಸಿದನು.

ಆ ಮಾಮೀನ ಗರ್ಭವ ಸೀಳಲೊಳಗಿದ್ದ
ಕಾಮನ ತರಳ ವಿಗ್ರಹವ
ಹೇಮಾಂಬುರಹ ಮೊಗ್ಗೆ ಮೊಲೆಯ ಭಾಮಿನಿ ಕಂಡು
ಭ್ರಾಮಕವಡೆದಳಾಕ್ಷಣದಿ ೪೨

ಆ ಮಹಾಮೀನಿನ ಗರ್ಭವ ಸೀಳಲು ಒಳಗಿದ್ದ ಕಾಮನ ದೇಹವನ್ನು ಕಂಡು ಹೊಂದಾವರೆ ಮೊಗ್ಗೆಮೊಲೆಯ ರತಿ ಭ್ರಾಂತಿಗೊಂಡಳು.

ಹಲವು ದಾಯವ ಪೇಳಿಯಾ ಹಸುಗಂದನ
ಸಲಹಿದಳತಿ ಕಾಂಕ್ಷೆಯಲಿ
ಮಲೆವ ಶಂಬರನ ಮಾಯಾವಿದ್ಯದೇಳ್ಗೆಯ
ಹೊಲಬ ತೋರ್ದಳಾಳ್ದನಿಗೆ ೪೩

ಹಲವಾರು ದಾಯ(ರಕ್ತಸಂಬಂಧ)ವನ್ನು ಹೇಳಿ ಹಸುಗಂದನ ಸಲಹಿದಳು. ಮಲೆತು ನಿಂತ ಶಂಬರನ ಮಾಯಾವಿದ್ಯೆಯ ಹೊಲಬನ್ನು (ಮಾರ್ಗ, ರೀತಿ) ತನ್ನ ಪೂರ್ವದ ಗಂಡ, ವರ್ತಮಾನದ ಸಾಕುಮಗನಿಗೆ ಗೊತ್ತಾಗುವಂತೆ ಮಾಡಿದಳು.

ಭೇದಿಸಲರಿದೆಂಬ ಮಾಯ ವಿದ್ಯವನೆಲ್ಲ
ಸಾಧಿಸಿ ಶಂಬರನೊಡನೆ
ಕಾದಿ ಬಂಡನದಿ ಸತಿಶಿರೋಮಣಿಯ ಸಂ
ಪಾದಿಸಿ ತಂದನಿತ್ತ ನೋಡು. ೪೪

ಭೇದಿಸಲು ಅಸಾಧ್ಯವೆಂಬ ಮಾಯಾ ವಿದ್ಯೆಯನ್ನೆಲ್ಲ ಸಾಧಿಸಿ, ಶಂಬರನೊಡನೆ ಯುದ್ಧ ಮಾಡಿ, ಅವನನ್ನು ಕೊಂದು, ತನ್ನ ಸತಿಯನ್ನು ಮತ್ತೆ ಕೂಡಿಕೊಂಡು ಬಂದಿದ್ದಾನೆ ನೋಡು.

ಮಾಧವನರ್ಧಾಂಗಿ ಮರೆಯದೆ ಕೇಳಂದು
ಪೋದ ತವಸುತ ಪುಣ್ಯದಿಂ
ಕಾದಲೆ ಸಹಿತ ಬಂದ ನೋಳ್ಪುದೆಂದು ಶ್ರೀ
ಪಾದಕೆ ಪೊಡಮಡಿಸಿದನು ೪೫

ಅಂದು ಮಾಯವಾದ ನಿನ್ನ ಮಗ ತನ್ನ ಸತಿಸಮೇತ ಬಂದಿದ್ದಾನೆ ನೋಡೆಂದು ಹೇಳಿ, ಅವರನ್ನು ಶ್ರೀ(ಲಕ್ಷ್ಮೀ)ಪಾದಕೆ ಎರಗಿಸಿದನು.

ಚರಣದೊಳೆರಗಿದ ತನಯನ ಪಿಡಿದೆತ್ತಿ
ಪರವಶದಿಂದ ತಕ್ಕೈಸಲು
ತೊರೆದು ನುಣ್ಮೊಲೆವಾಲು ಕಂದನ ಮೈಮೇಲೆ
ಸುರಿದುದಿನ್ನೇನ ಬಣ್ಣಿಸುವೆ ೪೬

ಚರಣಕ್ಕೆರಗಿದ ತನಯನನ್ನು ಹಿಡಿದೆತ್ತಿ ಪರವಶದಿಂದ ಬಾಚಿ ತಬ್ಬಿಕೊಳ್ಳಲು, ಮೊಲೆಯ ಹಾಲು ಜಿನುಗಿ ಕಂದನ ಮೈಮೇಲೆ ಸುರಿಯಿತು.

ನೋಡುವಳಣುಗನ ಬಿಗಿಯಪ್ಪಿ ಬಿಡದೆ ಮುಂ
ಡಾಡುವಳು ಮೊಲೆವಾಲು ಸುರಿಯೆ
ಊಡುವಳು ಕರಯುಗದೊಳಗುಪಚಾರವ
ಮಾಡುವಳು ಮರೆಯದೆ ಸೊಸೆಗೆ ೪೭

ಕಂದನನ್ನು ನೋಡುವಳು, ಬಿಗಿಯಾಗಿ ಅಪ್ಪಿ ಮುದ್ದಾಡುವಳು, ಮೊಲೆಹಾಲು ಸುರಿಯ ತೊಡಗಿದಾಗ ಊಡುವಳು(ಕುಡಿಸುವಳು), ಮರೆಯದೆ ಸೊಸೆಗೆ ತನ್ನೆರಡು ಕೈಗಳಿಂದ ಉಪಚಾರವ ಮಾಡುವಳು.

ಮಗ ಸೊಸೆ ಸಹಿತ ರುಕ್ಮಿಣಿ ಕಾಂತನ ಪಾದ
ಯುಗಳಕ್ಕೆ ಪೊಡಮಡಲೊಡನೆ
ನೆಗಹಿದ ಶ್ರೀಕೃಷ್ಣವಲ್ಲಭೆಗೊರ್ವ ಮೊ
ಮ್ಮಗನಾಗಲೆನುತ ಹರಸಿದ ೪೮

ಮಗ ಸೊಸೆ ಸಹಿತ ರುಕ್ಮಿಣಿ ಕಾಂತನ ಪಾದದ್ವಯಕ್ಕೆ ನಮಸ್ಕರಿಸಿದಾಗ, ಮೇಲೆತ್ತಿದ ಕೃಷ್ಣ ತನ್ನ ಮಡದಿಗೆ ಒಬ್ಬ ಮೊಮ್ಮಗನಾಗಲಿ ಎಂದು ಹರಸಿದ.

ದೃಢಗಲಿಯಹುದೆಂದು ಮಗನ ಮಸ್ತಕವ ಮೆ
ಯ್ದಡಹಿ ತಳ್ಕೈಸಿದ ಬಳಿಕ
ಸಡಗರದಿಂದೆಳ್ದು ಬಲರಾಮನಂಘ್ರಿಗೆ
ಪೊಡಮಡಿರೆಂದನು ನಗುತ ೪೯

ಕಡುಗಲಿ(ಮಹಾಶೂರ)ಯೆಂದು ಮಗನ ಮಸ್ತಕ ಹಾಗೂ ಮೈಯನ್ನು ಸವರಿ ಅಪ್ಪಿಕೊಂಡ ಅನಂತರ, ಸಡಗರದಿಂದ ಬಲರಾಮನ ಪಾದಗಳಿಗೆ ನಮಸ್ಕರಿಸಿ ಎಂದು ನಗುನಗುತ್ತಾ ಹೇಳಿದನು.

ನೀಲಾಂಬರಗೆ ಸತ್ರಾಜಿತಸುತೆಗೆ ಪೂ
ಗೋಲ ವಂದಿಸಿ ತನ್ನಯ
ಲೋಲಾಕ್ಷಿಸಹಿತ ನಿಂದಿರಲಾಗಿ ಪರಮಾನು
ಕೂಲ ಶ್ರೀಕೃಷ್ಣ ನೋಡಿದನು ೫೦

ನೀಲಾಂಬರನಿಗೆ(ಬಲರಾಮನಿಗೆ) ಸತ್ರಾಜಿತ ಸುತೆಗೆ (ಸತ್ಯಭಾಮೆಗೆ)ವಂದಿಸಿ ಸತಿಪತಿಗಳಿಬ್ಬರೂ ನಿಂತಿರುವಾಗ ಪರಮಾನುಕೂಲ (ಶ್ರೇಷ್ಠ ಸಹಾಯಕ)ಶ್ರೀಕೃಷ್ಣ ನೋಡಿದನು.

ವಿನಯದೋಳಗ್ರಜಾತನ ಕೂಡೆ ಕೃಷ್ಣ ಯೋ
ಚನೆಗೊಂಡು ಪೇಳಿದ ತನ್ನ
ತನಯಗೆ ತತ್ಪುರ ಸ್ಥಾನದಿ ಶುಭವೆತ್ತ
ಮನೆಯಾಗಬೇಕೆಂದು ನುಡಿದ ೫೧

ವಿನಯದಿಂದ ಅಣ್ಣನ ಕೂಡೆ ಯೋಚನೆ ಮಾಡಿ, ತನ್ನ ತನಯನಿಗೆ ಪುರದಲ್ಲಿ ಒಂದು ಶುಭದಾಯಕ ಮನೆ ಬೇಕೆಂದು ನುಡಿದ.

ಅಂಗಜಾತಗೆ ತಕ್ಕಮನೆಯಾವುದೆನುತ
ರಂಗನೊಡನಗ್ರಜ ನುಡಿದು
ಮಂಗಳ ಮುಹೂರ್ತವ ಬೆಸಗೊಳಲೆಂದು ಪಂ
ಚಾಂಗ ಪ್ರೌಢರ ಕರೆಸಿದನು ೫೨

ರತಿಮನ್ಮಥರಿಗೆ ತಕ್ಕಮನೆ ಯಾವುದೆಂದು ಕೃಷ್ಣನೊಡನೆ ಬಲರಾಮ ಮಾತಾಡುತ್ತಾ ಮಂಗಳ ಮಹೂರ್ತವನ್ನು ಕೇಳುವುದಕ್ಕೋಸ್ತರ ಪಂಚಾಂಗ ಪ್ರೌಢರನ್ನು ಕರೆಸಿದನು.

ಬಂದರನೇಕ ಜ್ಯೋತಿಷರು ಆಶೀರ್ವಾಕ್ಯ
ದಿಂದ ಮಂತ್ರಾಕ್ಷತೆ ಕೊಟ್ಟು
ಅಂದವಡೆದ ಪಂಚಾಂಗ ಪ್ರಶ್ನೆಯ ಗೋ
ವಿಂದಗೆ ಬಿನ್ನವಿಸಿದರು ೫೩

ಬಂದ ಅನೇಕ ಜ್ಯೋತಿಷರು(ಜೋಯಿಸರು) ಆಶಿರ್ವಾಕ್ಯದಿಂದ ಮಂತ್ರಾಕ್ಷತೆ ಕೊಟ್ಟು ಗೋವಿಂದನಿಗೆ ಪಂಚಾಂಗ ಪ್ರಶ್ನೆಯನ್ನು ಬಿನ್ನವಿಸಿದರು.

ಕೇಶವ ಮುದವೆತ್ತು ಬೆಸಗೊಂಡ ನಿಖಿಲ ಜೋ
ತಿಷರೊಳಧಿಕ ಶಾಸ್ತ್ರಿಗಳನು
ಭಾಸುರವೆತ್ತ ಪ್ರದ್ಯುಮ್ನನ ಸದ್ಗೃಹ ಪ್ರ
ವೇಶಕೆ ದಿನವಾವುದೆಂದು ೫೪

ಕೇಶವ ಹರ್ಷದಿಂದ ಪ್ರದ್ಯುಮ್ನನ (ಮನ್ಮಥನ)ಗೃಹಪ್ರವೇಶಕ್ಕೆ ಶುಭದಿನ ಯಾವುದೆಂದು ಅಖಿಳ ಜ್ಯೋತಿಷ್ಯರಲ್ಲಿ ಅಧಿಕ ಶಾಸ್ತ್ರಿಗಳನ್ನು ಬೆಸಗೊಂಡನು.

ತಿಥಿವಾರ ನಕ್ಷತ್ರ ಯೋಗಕರಣ ಗ್ರಹ
ಗತಿ ನೆಲೆಗಳ ನೆರೆ ಗುಣಿಸಿ
ಮಿತಿವೇಳ್ದರು ಮಾಘ ಸಿತ ಪಂಚಮಿ ಬೃಹ
ಸ್ಪತಿವಾರದೊಳಗೊಳಿತೆಂದು ೫೫

ತಿಥಿ, ವಾರ, ನಕ್ಷತ್ರ, ಯೋಗ ಕರಣ, ಗ್ರಹಗತಿಗಳನ್ನು ಗುಣಿಸಿ' ಮಾಘ,ಸಿತಪಂಚಮಿ, ಬೃಹಸ್ಪತಿವಾರ' ಒಳ್ಳಿತೆಂದು ಹೇಳಿದರು.

ಗುಣಿಸುವರಾವೇನ ಬಲ್ಲೆವು ಶ್ರುತಿ ಶಿರೋ
ಮಣಿಯೆ ಸರ್ವಜ್ಞ ನೀ ಬಲ್ಲೆ
ಫಣಿತಲ್ಪ ಸೂರ್ಯಸಿದ್ಧಾಂತ ನಿನ್ನಯ ಕಣ್ಣ
ಕುಣಿಕೆಯೊಳಿಹುದೆಂದರವರು ೫೬

ಗುಣಿಸುವವರು ನಾವೇನು ಬಲ್ಲೆವು?ನೀನು ಸರ್ವಜ್ಞ; ಓ ಶೇಷಶಾಯಿ, ಸೂರ್ಯಸಿದ್ಧಾಂತ ನಿನ್ನ ಕಣ್ಣ ಕುಣಿಕೆಯಲ್ಲಿದೆ ಎಂದರು.

ಸಾರದ ಮಾತನಾಡಿದಿರಿ ನೀವ್ಗಳೆಂದು
ನಾರದನವರ ಕುಸ್ತರಿಸಿ
ಓರಂತೆ ಭಕ್ತಿಪೂರ್ವಕದಿಂದ ಶ್ರೀ ರಮ
ಣೀರಮಣನ ಹೊಗಳಿದರು ೫೭

ಸಾರವತ್ತಾದ ಮಾತನ್ನು ನೀವಾಡಿದಿರಿ ಎಂದು ನಾರದನು ಅವರನ್ನು ತಾರೀಪು ಮಾಡಿ, ಭಕ್ತಿಪೂರ್ವಕವಾಗಿ ಲಕ್ಷ್ಮೀಕಾಂತನನ್ನು ಹೊಗಳಿದರು.

ನಿಗಮಾಗಮಶಾಸ್ತ್ರ ಉಪನಿಷತ್ಪುರಾಣಾ
ದಿಗಳನವರತ ಕೊಂಡಾಡಿ
ಜಗದಧಿಪತಿ ಕೃಷ್ಣರಾಯನ ಶ್ರೀಪಾದ
ಯುಗಳವ ಕಡೆಗಂಡುದಿಲ್ಲ ೫೮

ನಿಗಮ, ಆಗಮ, ಶಾಸ್ತ್ರ, ಉಪನಿಷತ್, ಪುರಾಣಾದಿಗಳು ಅನವರತ ಜಗದಧಿಪತಿ ಕೃಷ್ಣನ ಶ್ರೀಪಾದಯುಗಳವನ್ನು ಕೊಂಡಾಡಿವೆಯೇ ವಿನಾ ಕಡೆಗಣಿಸಿಲ್ಲ.

ಅಜಭವೇಂದ್ರಾದಿ ವೃಂದಾರಕರು ಮನುಮುನಿ
ವ್ರಜದೊಳುತ್ತಮ ಜ್ಞಾನಿಗಳು
ಭಜನೆಯ ಮಾಳ್ಪರು ಭಕುತಿಯಿಂದಲಿ ಚತು
ರ್ಭುಜ ನಿನ್ನ ಕಡೆಗಂಡುದಿಲ್ಲ ೫೯

ಅಜ(ಬ್ರಹ್ಮ) ಭವ(ಹರ) ಇಂದ್ರಾದಿ ದೇವತೆಗಳು, ಮನುಮುನಿ ಸಮೂಹದಲ್ಲಿ ಉತ್ತಮ ಜ್ಞಾನಿಗಳು, ಭಕ್ತಿಯಿಂದ ಭಜನೇ ಮಾಡುವರೇ ವಿನಾ, ಓ ಚತುರ್ಭುಜ ನಿನ್ನ ಕಡೆಗಣಿಸಿಲ್ಲ.

ನಾಟಕವಲ್ಲವೆ ನರರಂತೆ ನಕ್ಷತ್ರ
ಪಾತಕರ ಪ್ರಶ್ನೆಗೇಳುವುದು
ನೋಟಕರೇನು ಬಲ್ಲರು ಕೃಷ್ಣ ನಿನ್ನ ಚು
ನ್ನಾಟ ಬೇಡೆಂದ ನಾರದನು ೬೦

ಹುಲು ಮನುಜರಂತೆ ನಕ್ಷತ್ರ ಪಾತಕರನ್ನು ಪ್ರಶ್ನೆ ಕೇಳುವುದು ನಾಟಕವಲ್ಲವೆ? ಬರೀ ನೋಟಕರು ಏನು ಬಲ್ಲರು? ಕೃಷ್ಣ ನಿನ್ನ ಚುನ್ನಾಟ (ಹಾಸ್ಯ, ಕಟಕಿ)ಬೇಡ ಎಂದು ನಾರದ ಹೇಳಿದನು.

ಸರ್ವಜ್ಞ ಸರಸಿಜೊದರ ಕಂತು ರತಿಗೆ ಗಾಂ
ಧರ್ವ ವಿವಾಹವ ಮಾಡಿ
ನಿರ್ವಾಹಗೊಟ್ಟು ಬೇರಿರಿಸೆಂದು ಮುನಿ ನಿ
ಗರ್ವದಿಂದ ಬಿನ್ನಯಿಸಿದನು ೬೧

ಸರಸಿಜೋದರ(ಕಮಲನಾಭ),ಕಂತು ರತಿಗೆ ಗಾಂಧರ್ವ ವಿವಾಹ ಮಾಡಿ, ಪ್ರತ್ಯೇಕ ವಾಸಸ್ಥಾನವನ್ನು (ನಿರ್ವಾಹ) ಏರ್ಪಡಿಸಬೇಕೆಂದು ನಾರದ ಮುನಿ ನಿಗರ್ವದಿಂದ ಬಿನ್ನೈಸಿದನು.

ಜನನಾಥ ಮುನಿವಾಕ್ಯವ ಕೇಳಿ ನಿಬಿಡ
ಸ್ತನಭಾರಭರಿತೆ ರುಕ್ಮಿಣಿಗೆ
ವಿನಯದಿ ಬೆಸಸಿದ ಕಂದರ್ಪ ರತಿಗೆ ಮ
ಜ್ಜನ ಮಾಡಿಪುದು ನೀನೆಂದು ೬೨

ಮುನಿ ವಾಕ್ಯವನ್ನು ಕೇಳಿದ ಕೃಷ್ಣ ಕೂಡಲೇ ರುಕ್ಮಿಣಿಗೆ ರತಿಮನ್ಮಥರಿಗೆ ಸ್ನಾನ ಮಾಡಿಸೆಂದು ವಿನಯದಿಂದ ಅಪ್ಪಣೆ ಕೊಟ್ಟ.

ಲೇಸೆನುತ್ತೈತಂದು ಮಗ ಸೊಸೆಗೆಣ್ಣೆಯ
ಪೂಸಿ ಪೊಂಬಚ್ಚಲೊಳು ಪುಗಿಸಿ
ಮೀಸಿದ ಬಳಿಕ ಸಿಂಗರಗೆಯ್ದು ರನ್ನದ
ಬಾಸಿಂಗವನು ಸೂಡಿದರು ೬೩

ಒಳ್ಳೆಯದು ಎಂದು ಬಂದು ಮಗ ಸೊಸೆಗೆ ಎಣ್ಣೆಯನ್ನು ಹಚ್ಚಿ, ಬಚ್ಚಲಿಗೆ ಕರೆದುಕೊಂಡು ಹೋಗಿ ಮೀಯಿಸಿ, ಬಳಿಕ ಸಿಂಗರಿಸಿ, ರನ್ನದ ಬಾಸಿಂಗವನ್ನು ತೊಡಿಸಿದರು.

ದುಂಡುಮುತ್ತು ರತ್ನ ಕೇವಣಿಸಿದ ಹೊನ್ನ
ತೊಂಡಲ ಸೂಡಿದರು ಮುದದಿ
ಖಂಡೇಂದು ಫಣೆಗೆ ಕತ್ತುರಿಯಿಟ್ಟರಿರ್ವರ
ಗಂಡಸ್ಥಳಕೆ ಕಜ್ಜಳಿಯ ೬೪

ದುಂಡು ಮುತ್ತು ರತ್ನ ಕೀಲಿಸಿದ ಚಿನ್ನದ ತೊಂಡಲ(ತಲೆಯಲ್ಲಿ ಧರಿಸುವ ಮುತ್ತಿನ ಆಭರಣ)ವನ್ನು ತಲೆಗೆ ಸೂಡಿದರು, ಅರ್ಧಚಂದ್ರಾಕಾರದ ಹಣೆಗೆ ಕಸ್ತೂರಿ ಇಟ್ಟರು, ಇಬ್ಬರ ಗಂಡಸ್ಥಳಕ್ಕೆ(ಕೆನ್ನೆಗೆ) ಕಜ್ಜಳಿ (ಔಷಧಗಳ ಮಿಶ್ರಣ)ಯನ್ನು ಲೇಪಿಸಿದರು.

ಕೆಳದಿ ಕೇಳ್ ಮಾಣಿಕ್ಯದಾರತಿಗಳ ತಂದು
ಬೆಳಗಿದರು ಪೊಂಬರಿವಣದಿ
ಕಳಸ ಕನ್ನಡಿವೊತ್ತ ಗೋಪಿಯರು ಶೋಭನ
ಗಳ ಪಾಡಿದರು ರಾಗದಲಿ ೬೫

ಚಿನ್ನದ ಹರಿವಾಣದಲ್ಲಿ ರತ್ನದಾರತಿಗಳ ತಂದು ಬೆಳಗಿದರು. ಕಳಸ ಕನ್ನಡಿ ಹೊತ್ತ ಗೋಪಿಯರು ಸೋಬಾನೆ ಪದಗಳನ್ನು ಹಾಡಿದರು.

ಏಣನಿಭಾಯತೇಕ್ಷಣೆಯರ ಸಂದೋಹ
ಬಾಣ ಪಂಚಕ ರತಿಯರನು
ಕೇಣವಿಲ್ಲದೆ ಸಂಭ್ರಮವೆತ್ತು ತಂದು ಕ
ಲ್ಯಾಣ ಮಂಟಪವ ಸಾರ್ಚಿದರು ೬೬

ಜಿಂಕೆಗಣ್ಣೆಯರ ಗುಂಪು ಮನ್ಮಥ ರತಿಯರನ್ನು ಸಂಭ್ರಮದಿಂದ ಕಲ್ಯಾಣ ಮಂಟಪಕ್ಕೆ ಕರೆತಂದರು.

ನೆಟ್ಟನೆ ತೆರೆವಿಡಿದರು ಶಾಸ್ತ್ರವಿಧಿಯಿಂದ
ಮೆಟ್ಟಕ್ಕಿಯ ಮೇಲೆ ನಿಲಿಸಿ
ಶಿಟ್ಟರು ಮಂಗಳಾಷ್ಟಕದ ನಿರೀಕ್ಷಣೆಯ
ಲಿಟ್ಟರು ದಂಪತಿಗಳನು ೬೭

ಹೆಣ್ಣುಗಂಡುಗಳ ಮಧ್ಯೆ ನೆಟ್ಟನೆ ತೆರೆ ಹಿಡಿದರು, ಶಾಸ್ತ್ರದಂತೆ ಮೆಟ್ಟಕ್ಕಿಯ ಮೇಲೆ ನಿಲ್ಲಿಸಿದರು, ಶಿಟ್ಟರು(ಶಿಷ್ಟರು)ಮಂಗಳಾಷ್ಟಕದ(ಮದುವೆ ಮುಂಜಿ

ಮುಂತಾದ ಶುಭ ಕಾರ್ಯಗಳಲ್ಲಿ ಆಶೀರ್ವಾದ ರೂಪದ ಎಂಟು ಶ್ಲೋಕಗಳು ) ನಿರೀಕ್ಷಣೆಯಲ್ಲಿಟ್ಟರು ನವದಂಪತಿಗಳನ್ನು.

ಮಧುಪರ್ಕ ತಂಡುಲಾರೋಪಣ ಮೊದಲಾದ
ವಿಧಿಗಳಿಂದ ಪುರೋಹಿತರು
ವಧು ರತ್ನವ ವಹ್ನಿಸಾಕ್ಷಿಯೊಳಗೆ ಧಾರೆಯ
ಪದುಮಾಸ್ತ್ರಗೆರೆದರುತ್ಸವದಿ ೬೮

ಮಧುಪರ್ಕ(ಮೊಸರು, ತುಪ್ಪ, ನೀರು, ಜೇನುತುಪ್ಪ ಮತ್ತು ಸಕ್ಕರೆಗಳ ಮಿಶ್ರಣ) ಹಾಗೂ ಅಕ್ಕಿಯನ್ನು ಹೊರಿಸುವುದು ಮೊದಲಾದ ವಿಧಿಗಳಿಂದ ಪುರೋಹಿತರು ಅಗ್ನಿಸಾಕ್ಷಿಯಾಗಿ ರತಿಯನ್ನು ಮನ್ಮಥನಿಗೆ ಧಾರೆ ಎರೆದರು.

ಶೂರ್ಪ ಸಾಮುದ್ರಿಕ ಗುಡ ದಾನವ ಬುವಿಯ
ಲಿರ್ಪ ಸುರವೃಂದಕೆ ಕೊಟ್ಟು
ದರ್ಪಕ ರತಿಗೂಡಿ ರಾಜಮಂದಿರಕ್ಕೈ
ತರ್ಪ ಸಂಭ್ರಮವನೇನೆಂಬೆ ೬೯

ಮೊರ, ಉಪ್ಪು, ಬೆಲ್ಲ ದಾನವನ್ನು ಭೂಲೋಕದ ಸುರರಿಗೆ (ಬ್ರಾಹ್ಮಣರಿಗೆ) ಕೊಟ್ಟು ರತಿಮನ್ಮಥರು ರಾಜಮಂದಿರಕ್ಕೆ ಬರುವ ಸಂಭ್ರಮವನ್ನು ವರ್ಣಿಸಲ ಸಾಧ್ಯ.

ಪ್ರಣಯೊಪಚಾರಗಳಿಂದ ಸದ್ವಾದ್ಯ ಘೋ
ಷಣೆಯಿಂದ ಧವಳಶೋಭನದಿ
ಗುಣನಿಧಿ ಶ್ರೀಕೃಷ್ಣರಾಯರು ನಿಖಿಲ ನಿ
ಬ್ಬಣಗೂಡಿ ಪೊಕ್ಕರಾಲಯವ ೭೦

ಬಾಂಧವ್ಯದ ಉಪಚಾರಗಳಿಂದ, ಇಂಪಾದ ವಾದ್ಯಗಳ ಘೋಷಣೆಯಿಂದ ಶುಭ್ರ ಶೋಭನದಲ್ಲಿ ಶ್ರೀಕೃಷ್ಣಬಲರಾಮರು ನಿಖಿಲ ನಿಬ್ಬಣದೊಂದಿಗೆ ಮಂದಿರ ಹೊಕ್ಕರು.

ಮುತ್ತಿನ ಸೇಸೆಯೊಳೆಸೆವ ರತ್ನಂಗಳು
ಕೆತ್ತಿರ್ದ ಹಸೆಯ ವಿಷ್ಟರವ

ಪತ್ತಿರ್ದ ದಂಪತಿಗಳ ವಿಗ್ರಹಗಳಿಗೆ
ತೆತ್ತಿಸಿದಂತೆ ಶೋಭಿಸಿದವು ೭೧

ಕೆತ್ತಿದ ಹಸೆಯ ಸಿಂಹಾಸನವನ್ನು ಹತ್ತಿದ್ದ ದಂಪತಿಗಳ ದೇಹಗಳಿಗೆ, ಮುತ್ತಿನ ಸೇಸೆಯಿಂದ ಉದುರುವ ರತ್ನಗಳು ತೆತ್ತಿಸಿದಂತೆ ಶೋಭಿಸಿದವು.

ನೋಡಿದೊಡೊಂದೇ ದಿವಸದಿ ದಿನನಾಲ್ಕನು
ಜೋಡಿಸಿ ವೈವಾಹ ವಿಧಿಯ
ಮಾಡಿದರು ಮಂಗಳೊತ್ಸವದಿಂದ ಹಣವನೀ
ದಾಡಿದ ಕೃಷ್ಣ ವಿಬುಧರ್ಗೆ ೭೨

ನೋಡಿದರೆ ದಿನ ನಾಲ್ಕನು ಒಂದೇ ದಿನದಲ್ಲಿ ಜೋಡಿಸಿ ವಿವಾಹ ವಿಧಿಯನ್ನು ಮಾಡಿದರು. ಮಂಗಳೋತ್ಸವದ ಪ್ರಯುಕ್ತ ಕೃಷ್ಣ ವಿದ್ವಾಂಸರಿಗೆ ಹಣವನ್ನು ಚೆಲ್ಲಿದನು.

ಸಡಗರದಿ ಕೃಷ್ಣ ಸರ್ವಜ್ಞ ಸಭೆಗೆ ಹೊ
ನ್ನುಡುಗೊರೆಗಳನಿತ್ತ ಬಳಿಕ
ಮಡದಿ ರುಕ್ಮಿಣಿಗೂಡಿ ಮದುವಕ್ಕಳ ತಂದು
ಪೊಡಮಡಿಸಿದರು ನಾರದಗೆ ೭೩

ಸಡಗರದಿಂದ ಸರ್ವಜ್ಞರ ಸಭೆಗೆ ಹೊನ್ನಿನ ಉಡುಗೊರೆಗಳನ್ನು ಕೊಟ್ಟ ಬಳಿಕ, ಕೃಷ್ಣ ತನ್ನ ಪತ್ನಿ ರುಕ್ಮಿಣಿಗೂಡಿ ಮದುಮಕ್ಕಳನ್ನು ಕರೆತಂದು ನಾರದನಿಗೆ ಪೊಡಮಡಿಸಿದರು.

ಚರಣದೊಳೆರಗಿದ ಚಾರು ದಂಪತಿಗಳ್ಗೆ
ವರವಿತ್ತು ವಾತ್ಸಲ್ಯದಿಂದ
ಮುರಹರ ಮುದ್ದು ರುಕ್ಮಿಣಿಗೆ ಕೈಯೆಡೆಗೊಟ್ಟು
ಕರ ಸಂತಸವನೈದಿಸಿದ ೭೪

ಕಾಲಿಗೆ ಬಿದ್ದ ಸುಂದರ ದಂಪತಿಗಳಿಗೆ ವರವಿತ್ತು, ಕೃಷ್ಣ ರುಕ್ಮಿಣಿಯರಿಗೆ ಕೈಕೊಟ್ಟು ಕರ(ಅಧಿಕ)ಸಂತಸವನ್ನು ಪಡುವಂತೆ ಮಾಡಿದ.

ಹೊನ್ನೊಡಲನ ಪುತ್ರ ಕೇಳು ಖೇಚರದಿಂ
ದೆನ್ನಾತ್ಮಜನೈತಂದು

ನಿನ್ನಿಂದ ಕೈಸಾರ್ಚಿದುದು ನಿಶ್ಚಯವೆಂದು
ಬಿನ್ನಯಿಸಿದಳು ನಾರದಗೆ ೭೫

ಬ್ರಹ್ಮನ ಮಾನಸಪುತ್ರನಾದ ನಾರದನೇ ಕೇಳು, ಆಕಾಶದಿಂದ ನನ್ನ ಮಗ ಬಂದು ನನ್ನ ಕೈಸೇರಿದ್ದು ನಿನ್ನಿಂದ ಎಂಬುದು ನಿಶ್ಚಯ ಎಂದು ವಿಜ್ಞಾಪಿಸಿದಳು.

ಅಪರಾವತಾರದ ಸಿರಿದೇವಿ ಕೇಳ್ನಿನ್ನ
ಲಪನಾಬ್ಜಮಿತ್ರ ಮಾಧವನ
ಕಪಟವಿದಲ್ಲದೆ ತಾನೆತ್ತ ಬಲ್ಲೆನೆಂ
ದುಪಮಿಸಿ ನಾರದ ನುಡಿದನು ೭೬

ನಿನ್ನ ಮುಖ ಕಮಲ ಸೂರ್ಯನಾದ ಮಾಧವನ ಮೋಸವಲ್ಲದೆ, ನಾನೇನು ಬಲ್ಲೆನು ಎಂದು ನಾರದ ಹೇಳಿದನು.

ಹಮ್ಮನಾಡಿದೊಡಾಕ್ಷಣದಲ್ಲಿ ಮುರಿದಿಕ್ಕಿ
ಬ್ರಹ್ಮಾದಿ ಸುರರ ಭಂಗಿಪರು
ನಮ್ಮನದಾರು ಬಲ್ಲರು ಪೂತು ಮಾತವು
ನಿಮ್ಮಾಣೆ ಕೇಳವ್ವ ತಾಯೆ ೭೭

ಅಹಂಕಾರದ ಮಾತಾಡಿದರೆ ಆ ಕ್ಷಣದಲ್ಲಿ ಧ್ವಂಸ ಮಾಡಿ, ಬ್ರಹ್ಮಾದಿ ಸುರರನ್ನು ಭಂಗಿಸುವರು. ನಮ್ಮನ್ನು ಯಾರು ಬಲ್ಲರು? ಹೊಗಳಿಕೆ ಮಾತುಗಳಿವು, ನಿಮ್ಮಾಣೆ ಕೇಳವ್ವ ತಾಯೆ

ಹೂಡುವ ಜಗವನೊಂದೆವೆಯಾಟದಿ ಬಯ
ಲ್ಮಾಡುವ ಮಗುಳೆ ಸೃಷ್ಟಿಸುವ
ನೋಡುವ ತಾನಲ್ಲದವನಂತೆ ಒಳಹೊರ
ಗಾಡುವ ಚೇಷ್ಟಿತನೀತ ೭೮

ಜಗವನ್ನು ಹೂಡುವನು (ಆರಂಭಿಸುವನು); ಎವೆ ಮುಚ್ಚಿ ತೆರೆಯುವಷ್ಟರಲ್ಲಿ ಬಯಲು ಮಾಡುವನು; ಮತ್ತೆ ಸೃಷ್ಟಿಸುವನು, ನೋಡುವನು ತಾನಲ್ಲದವನಂತೆ, ಒಳಹೊರಗೆ ಆಡುವ ಚೇಷ್ಟಿತ(ಕ್ರಿಯಾಶೀಲ, ಚಲನಶೀಲ) ನೀತ.

ಹಿತನೀತ ಶತ್ರುರೂಪನೀತ ವಿಧಿಭವಾ
ರ್ಚಿತ ಪಿತಾಮಹನೀತ ಸರ್ವ
ಗತನೀತ ಘನವಿವೇಕದಿ ನಿರೀಕ್ಷಿಸಲ
ಚ್ಯುತನೀತ ಕೇಳವ್ವ ತಾಯಿ ೭೯

ಹಿತನೀತನು;ಶತ್ರು ರೂಪನೀತನು; ಬ್ರಹ್ಮ ಈಶ್ವರನಿಂದ ಪೂಜಿತನೀತನು; ಸರ್ವ ವಸ್ತುಗಳ ಅಂತರಂಗದಲ್ಲೂ ಇರುವಾತನು; ವಿವೇಕದಿಂದ ವಿಚಾರ ಮಾಡಿ ನೋಡಿದರೆ ಅಚ್ಯುತ(ಶಾಶ್ವತ) ನೀತನು.

ಇತಿಹಾಸ ನಿಗಮಾಗಮ ಶಾಸ್ತ್ರ ಪೌರಾಣ
ತತಿಗಗೋಚರನೆನ್ನಲ್ಪ
ಮತಿಗೆಂತು ಕಾಣಿಸಿಕೊಂಬನು ತ್ರೈಲೋಕ್ಯ
ಸತಿ ಶಿರೋಮಣಿ ಲಾಲಿಸವ್ವ ೮೦

ಇತಿಹಾಸ,ನಿಗಮ, ಆಗಮ, ಶಾಸ್ತ್ರ, ಪುರಾಣಗಳಿಗೂ ನಿಲುಕದ ಅಗೋಚರನು. ನನ್ನ ಅಲ್ಪಮತಿಗೆ ನಿಲುಕುವನೆ, ಗೋಚರಿಸುವನೆ? ಮೂರು ಲೋಕದ ಸ್ತ್ರೀ ರತ್ನಳಾದ ನೀನು ಯೋಚಿಸವ್ವ.

ಪಾರವಿಲ್ಲದ ಪುರುಷನೀತ ದ್ವಿತೀಯವ
ತಾರದ ಸಿರಿದೇವಿ ನೀನು
ಓರಂತೆ ಸೊಗವಾಳುವುದೆಂದು ಬೀಳ್ಕೊಂಡು
ನಾರದನಡರಿದ ನಭಕೆ ೮೧

ತೀರ(ಅಂಚು) ವಿಲ್ಲದ ಪುರುಷನೀತನು; ಜೊತೆಗಾರನನ್ನು ತರದ ಸಿರಿದೇವಿ ನೀನು; ನಿರಂತರ ನಿರುಮ್ಮಳವಾಗಿ ಸುಖವಾಗಿರುವುದು ಎಂದು ಆಶೀರ್ವದಿಸಿ, ಬೀಳ್ಕೊಂಡು ನಾರದನು ನಭೋಗಾಮಿಯಾದನು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೮೨

“ವರ ಮೋಹನ ತರಂಗಿಣಿ” ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರಿರುವ ತನಕ ಶ್ರೀಕಾಂತ ರಕ್ಷಿಸುವನು.

## ೧೪. ಜಲಕ್ರೀಡೆ

ಗದೆ ಶಂಬ ಚಕ್ರ ಪಂಕೇರುಹ ಪಾಣಿಯ
ಹೃದಯದೊಳಿಂಬಿಟ್ಟುಕೊಂಡು
ಸೊದೆಗಡಲೊಳ್ದೆರೆಯಂತೆ ಮೇಲ್ಗತೆಯ ಮಾ
ಣದೆ ಪೇಳು ಮನ್ಮನೋನಾಥ ೧

ಗದೆ, ಶಂಖ, ಚಕ್ರ, ಕಮಲಹಸ್ತವನ್ನು ಹೃದಯದಲ್ಲಿಟ್ಟುಕೊಂಡು ಹಾಲಸಮುದ್ರದ ಅಲೆಯಂತೆ ಮೇಲಾದ ಕಥೆಯನ್ನು ಹೇಳು ಎನ್ನ ಮನದನ್ನ

ಬಡನಡುವಿನ ಚೆನ್ನೆ ಭಾಮಿನಿಯರ ರನ್ನೆ
ಕೊಡಮೊಲೆವೆಣ್ಣೆ ಎಸಳ್ಗಣ್ಣ
ಸಡಗರದಿ ನಿನ್ನ ಕರ್ಣದ್ವಯಕೆ ಕಡುರುಚಿ
ವಡಿಸುವೆ ಕೇಳು ಮೇಲ್ಗತೆಯ ೨

ಸಣ್ಣ ಸೊಂಟದ ಚೆನ್ನೆ ಭಾಮಿನಿಯರ ರನ್ನೆ, ಕೊಡಮೊಲೆವೆಣ್ಣೆ, ಎಸಳ್ಗಣ್ಣೆ ನಿನ್ನ ಕರ್ಣದ್ವಯಕ್ಕೆ ಸಡಗರದಿಂದ ಸದಭಿರುಚಿಯ ಮೇಲ್ಗತೆಯನ್ನು ಹೇಳುವೆನು ಕೇಳು

ಮುದೆವೆತ್ತು ಕಮಲದಳಾಯತಾಕ್ಷಿಗೆ ಹಲಾ
ಯುಧ ಪೇಳ್ದ ಚತುರೋಕ್ತಿಯಲಿ
ಮುದುವಕ್ಕಳೂಟವ ಮಾಡಲಾರೋಗಿಪ
ಸದನಕ್ಕೆ ತೆರಳೆಂದ ನಗುತ ೩

ಮದುಮಕ್ಕಳೂಟವನ್ನು ಮಾಡಲೋಸುಗ ಊಟದ ಮನೆಗೆ ನಡೆಯಿರಿ ಎಂದು ಜಾಣಮಾತಿನಿಂದ ಬಲರಾಮ ವಿಶಾಲಾಕ್ಷಿಗೆ ಹೇಳಿದ.

ಮಾಧವ ಕೇಳ್ದು ರುಕ್ಮಿಣಿ ಸತ್ಯಭಾಮೆ ಮುಂ
ತಾದ ವಧೂಟಿಯರ ಸಹಿತ

ತಾ ಧೊಕ್ಕನೆ ಭುಕ್ತಶಾಲೆಗೆ ಬಂದ ಶ್ರೀ
ಪಾದ ನೂಪುರ ಜಣತ್ಕರದಿ ೪

ಕೂಡಲೇ ಕೃಷ್ಣ ರುಕ್ಮಿಣಿ, ಸತ್ಯಭಾಮೆ ಮೊದಲಾದ ಹೆಣ್ಣುಗಳೊಡನೆ ತಟಕ್ಕನೆ ಊಟದ ಮನೆಗೆ ಬಂದ, ಲಕ್ಷ್ಮಿಯ ಕಾಲಂದುಗೆಯ ಝಣತ್ಕಾರ ಶಬ್ದದೊಡನೆ

ಅಕಳಂಕ ಮಣಿ ಪಾತ್ರೆಯೊಳಿಟ್ಟ ತಪ್ತೋ
ದಕವ ಹೊಂಗೊಡದಲಿ ತಂದು
ಪ್ರಕಟಿಸಿ ಪಾದಪ್ರಕ್ಷಾಲನಗೆಯ್ದರಾ
ನಕ ದುಂದುಭಿಯ ನಂದನನ ೫

ನಿರ್ಮಲವಾದ ರತ್ನಪಾತ್ರಯಲ್ಲಿಟ್ಟಿದ್ದ ಬಿಸಿನೀರನ್ನು ಚಿನ್ನದ ಕೊಡದಲ್ಲಿ ತಂದು, ಆನಕ ದುಂದುಬಿಯ(ವಸುದೇವನ) ನಂದನನ(ಮಗನಾದ ಕೃಷ್ಣನ) ಪಾದ ತೊಳೆದರು.

ಕರಚರಣಂಗಳ ತೊಳೆದುಕೊಂಡೊಳಪೊಕ್ಕು
ಮುರಹರ ಬಲರಾಮ ಕಾಮ
ಸರುಚಿರ ರತ್ನಪೀಠಗಳಲ್ಲಿ ಕುಳಿತರು
ವರ ವಧೂಟಿಯರೊಗ್ಗೂಡಿ ೬

ಕೈಕಾಲುಗಳನ್ನು ತೊಳೆದುಕೊಂಡು,ಕೃಷ್ಣ ಬಲರಾಮ ಮನ್ಮಥರು ರತ್ನಪೀಠಗಳಲ್ಲಿ ಕುಳಿತರು, ಸತಿಯರ ಸಮೇತ

ಮುತ್ತಿನ ಗದ್ದುಗೆಗಳ ಮುಂದೆ ನವರತ್ನ
ಕೆತ್ತಿದಡ್ಡಣಿಗೆಯ ಮೇಲೆ
ತೆತ್ತಿಸಿ ಹೊಂಬರಿವಣವಿಟ್ಟು ಸೊಡರ್ಗಳ
ನೆತ್ತಿದರುಭಯ ಪಕ್ಷದಲಿ ೭

ಮುತ್ತಿನ ಪೀಠಗಳ ಮುಂದೆ ನವರತ್ನಖಚಿತ ಅಡ್ಡಣಿಗೆಯ ಮೇಲೆ ಹೊಂದಿಸಿ ಚಿನ್ನದ ಹರಿವಾಣವನ್ನಿಟ್ಟು ದೀಪಗಳನ್ನು ಬೆಳಗಿಸಿದರು ಎರಡೂ ಕಡೆಯಲ್ಲಿ

ಇಂತೆಸೆದಿಹ ಶ್ರೀಕೃಷ್ಣದೇವರಾಯನ
ಹಂತಿಯೊಳು ಸಮ್ಮೋಹನದ

ತಿಂತಿಣಿಯೆನೆ ಬೋನಗಿತ್ತಿಯರು ಬಡಿಸಲ್ಕೆ
ತೊಂತಿದರೆನ ಬಣ್ಣಿಪೆನು ೮

ಶ್ರೀಕೃಷ್ಣನ ಪಂಕ್ತಿಯಲ್ಲಿ ಸಮ್ಮೋಹನದ ಸಮೂಹ ರೂಪದಲ್ಲಿ ಬೋರಿಗಿತ್ತಿಯರು ಆವನಸಿದರು (ತೊಂತಿದರು) ಅದನ್ನು ಬಣ್ಣಿಸುವುದು ಹೇಗೆ?

ಆಗ ತಾನೇ ಬಗ್ಗರಿಸಿದ ಬಿಸಿಬಿಸಿ ಮೇ
ಲೋಗರ ಪಳಿದ್ಯ ಪಲ್ಯಗಳ
ರಾಗೇಂದು ವದನೆಯರೆಡೆ ಮಾಡುವ ಸುಪ್ರ
ಯೋಗವನೇನ ಬಣ್ಣಿಪೆನು ೯

ಆಗತಾನೆ ಒಗ್ಗರಿಸಿದ ಬಿಸಿಬಿಸಿಯಾದ ಮೇಲೋಗರ, ಪಳಿದ್ಯ(ಮಜ್ಜಿಗೆಹುಳಿ),ಪಲ್ಯಗಳನ್ನು ರಾಗೇಂದು ಮುಖಿಯರು(ಕೆಂಪಾದ ಚಂದ್ರಮುಖಿಯರು) ಬಡಿಸುವ ವಿಧಾನವನ್ನು ವರ್ಣಿಸಲಸದಳ.

ಪಿಡಿನಡುವಿನ ಪೆರ್ಮೊಲೆವೆಣ್ಗಳು ಹೊನ್ನ
ಪಿಡಿ ಸೋರೆಗಳೊಗ್ಗಯ್ಯಲಿ
ಪಿಡಿದರನೇಕ ಸತ್ಪರಿಕರಗಳ ತಂದು
ಬಡಿಸಿದರತಿ ವೇಗದಲಿ ೧೦

ಹಿಡಿನಡುವಿನ, ಕೊಡಮೊಲೆಯ ಹೆಣ್ಣುಗಳು ಚಿನ್ನದ ಹಿಡಿಯ ಪಾತ್ರೆಗಳನ್ನು ಒಂದು ಕೈಯಲ್ಲಿ ಹಿಡಿದು ಒಳ್ಳೆಯ ಸಾಮಗ್ರಿಗಳನ್ನು ತಂದು ಬಡಿಸಿದರು.

ಸಿತರಾಜಾನ್ನದಕ್ಕಿಯ ನೈವೇದ್ಯ ಸ
ದ್ಘೃತ ತೋವೆ ಪಳಿದ್ಯ ಶಾಕಗಳ
ಮಿತಿಯಿಲ್ಲದಡಿಗೆಗಾರ್ತಿಯರು ಬಡಿಸಲ್ಕೆ ಅ
ಚ್ಯುತ ಹೆಂಗಳೊಡನೆ ಭುಂಜಿಸಿದ ೧೧

ಬಿಳಿ ರಾಜಾನ್ನದಕ್ಕಿಯ ನೈವೇದ್ಯ, ತುಪ್ಪ, ತೊವ್ವೆ, ಮಜ್ಜಿಗೆಹುಳಿ, ವ್ಯಂಜನ ಪದಾರ್ಥಗಳನ್ನು ಅಡಿಗೆಗಾತಿಯರು ಹೇರಳವಾಗಿ ಬಡಿಸಲು ಕೃಷ್ಣ ಹೆಂಗಸರೊಡನೆ ಭುಂಜಿಸಿದ.

ಗುಣಯುತ ಬಲರಾಮ ಸಾತ್ಯಕಿ ಕೃತವರ್ಮ
ಪ್ರಣವಜ್ಞರುದ್ಧವಾದಿಗಳು

ಉಣಬಂದು ಮದುಮಕ್ಕಳೊಡಗೂಡಿ ಕೃಷ್ಣ
ರ್ಪಣವೆಂದು ತುತ್ತನೆತ್ತಿದರು ೧೨

ಬಲರಾಮ, ಸಾತ್ಯಕಿ, ಕೃತವರ್ಮ, ಪ್ರಣವಮಂತ್ರಜ್ಞರಾದ ಉದ್ದವ ಮೊದಲಾದವರು ಮದುಮಕ್ಕಳೊಡಗೂಡಿ ಕೃಷ್ಣಾರ್ಪಣವೆಂದು ತುತ್ತನ್ನು ಎತ್ತಿ ಬಾಯಿಗಿಟ್ಟುಕೊಂಡರು.

ತೋಯಾನ್ನವನುಂಡು ಬಳಿಕಾಜ್ಯ ಬಹುವಿಧ
ಪಾಯಸ ನಿಖಿಳ ಕಜ್ಜಾಯ
ಪ್ರೀಯದಿ ದಧ್ಯನ್ನವನು ಕೈಕೊಂಡು ರ
ಸಾಯನಗಳನೀಂಟಿದರು ೧೩

ತೋಯಾನ್ನ (ಸಾರು ಅನ್ನ)ವನ್ನುಂಡು, ಬಳಿಕ ತುಪ್ಪ, ಪಾಯಸ, ಕಜ್ಜಾಯ, ದಧ್ಯನ್ನ (ಮೊಸರನ್ನ) ಗಳನ್ನು ಸೇವಿಸಿ ಕೊನೆಯಲ್ಲಿ ರಸಾಯನಗಳನ್ನು ಈಂಟಿದರು.

ಉಚಿತವರಿದು ಮಿಂಡಿವೆಣ್ಗಳು ನವರತ್ನ
ಖಚಿತಭೂಷಣ ಹಸ್ತದಿಂದ
ಶುಚಿವೆತ್ತು ಬಡಿಸಲ್ಕೆ ಶ್ರೀಕೃಷ್ಣರಾಯನು
ರುಚಿನೋಡಿ ಮೊಗವನೀಕ್ಷಿಸಿದ ೧೪

ಔಚಿತ್ಯವರಿತು ಯುವತಿಯರು ರತ್ನಖಚಿತ ಭೂಷಣ ಹಸ್ತದಿಂದ ಬಡಿಸಲು, ಅವುಗಳ ರುಚಿಯನ್ನು ನೋಡಿ, ಅವರ ಮುಖವನ್ನು ಈಕ್ಷಿಸಿದ.

ಬಡಿಸಿದರು ಮಂದನ ಮಜ್ಜಿಗೆ ಕೆಲರಿಂಗೆ
ನಿಡಿವೆತ್ತ ತಿಳಿ ಕೆಲಬರಿಗೆ
ಹಿಡಿಹೊನ್ನ ಹೂಜೆಗಳಿಂದ ಸೌರಭವೆತ್ತ
ಕುಡಿನೀರ ಕೊಡಲೀಂಟಿದರು ೧೫

ಕೆಲವರಿಗೆ ಮಂದನ ಮಜ್ಜಿಗೆ(ಗಟ್ಟಿಮಜ್ಜಿಗೆ), ಕೆಲವರಿಗೆ ತಿಳಿಮಜ್ಜಿಗೆ, ಚಿನ್ನದ ಹೂಜಿಗಳಲ್ಲಿ ಪರಿಮಳಯುಕ್ತ ಕುಡಿನೀರನ್ನು ಕೊಡಲು ಈಂಟಿದರು.

ಊಟವ ಮಾಡಿದ ವಧುಬಂಧುಗಳೊಡನೆ ಚು
ನ್ನಾಟದಲಿ ಕೃಷ್ಣ ಕೈದೊಳೆದು
ಮೀಟಾದ ಸಿರಿಗಂಪ ಕೈಕೊಂಡು ಕರ್ಪೂರ
ಕೂಟ ವೀಟಿಕೆಯನು ಸವಿದ ೧೬

ಊಟ ಮಾಡಿದ ಕೃಷ್ಣ ವಧುಬಂಧುಗಳೊಡನೆ ಚುನ್ನಾಟವಾಡುತ್ತಾ ಕೈತೊಳೆದು ಸುಂದರವಾದ ಪರಿಮಳ ಕೈಕೊಂಡು ಕರ್ಪೂರ ಮಿಶ್ರಿತ ವೀಳಯವನು ಸವಿದ

ಮಣಿಮೂರ್ತಿಗಳೆನಲು ವರ ಸತ್ಯಭಾಮೆ ರು
ಕ್ಮಿಣಿ ವಸಂತಾಪೇಕ್ಷೆಯಲಿ
ಫಣಿತಲ್ಪಂಗೆ ಬಿನ್ನೈಸಲು ಮನದೊಳಿ
ಟ್ಟಣಿಸಿದ ಕೇಳಾಯುತಾಕ್ಷಿ ೧೭

ರುಕ್ಮಿಣಿ ಸತ್ಯಭಾಮೆಯರು ಓಕುಳಿಯಾಟದ ಅಪೇಕ್ಷೆಯನ್ನು ಶೇಷಶಾಯಿಯಾದ ಕೃಷ್ಣನಿಗೆ ವಿನಂತಿಸಲು ಅವನು ಮನಸ್ಸಿನಲ್ಲಿ ಹರ್ಷಿಸಿದ.

ಭುಕ್ತಶಾಲೆಯಿಂದಾಗ ಪೊರಮಟ್ಟು ಮಾಣಿಕ
ಯುಕ್ತ ಪೊಂಬಾವುಗೆ ಪದದಿ
ರಕ್ತಾಧರೆಯರುಗ್ಗಡಿಸಲ್ಕೆ ಪರಮ
ಮುಕ್ತಿದಾಯಕನಡಿಯಿಟ್ಟ ೧೮

ಊಟದ ಮನೆಯಿಂದ ಹೊರಟು ಕೆಂಪು ತುಟಿಯ ಹೆಣ್ಣುಗಳು ಉಗ್ಗಡಿಸಿದಾಗ ಮುಕ್ತಿದಾಯಕನಾದ ಕೃಷ್ಣ ರತ್ನಖಚಿತ ಚಿನ್ನದ ಪಾದುಕೆಯ ಪಾದಗಳನ್ನು ಮುಂದಿಟ್ಟ.

ಇಳೆಯನೀರಡಿ ಮಾಡಿದ ಪಾದ ಜತನ ಬಾಂ
ಬೊಳೆಯನು ಪೆತ್ತಂಘ್ರಿ ಜತನ
ಹಳುಗಲ್ಲಾಗಿದ್ದ ಮುನಿವಧುವಿಗೆ ಜೀವ
ಕಳೆಯಿತ್ತ ಪಾದವೆಚ್ಚರಿಕೆ ೧೯

ಬ್ರಹ್ಮಾಂಡವನ್ನು ಎರಡು ಅಡಿಯಲ್ಲಿ ಆವರಿಸಿದ ಪಾದ ಎಚ್ಚರಿಕೆ, ಆಕಾಶಗಂಗೆಯನ್ನು ಹೆತ್ತ ಪಾದ ಎಚ್ಚರಿಕೆ, ಕಾಡುಗಲ್ಲಾಗಿದ್ದ ಮುನಿಪತ್ನಿ ಅಹಲ್ಯೆಗೆ ಜೀವ ಕಳೆಯಿತ್ತ ಪಾದ ಎಚ್ಚರಿಕೆ.

ನಿಟ್ಟಿಸೆ ಯಮಳಾರ್ಜುನರ ಬಿಂಕವ ಮುರಿ
ದೊಟ್ಟಿದ ಪಾದವೆಚ್ಚರಿಕೆ
ತೊಟ್ಟಿಲಂತೆಸದಿರ್ದ ಶಕಟನ ನೆಲಕಿಕ್ಕಿ
ಮೆಟ್ಟಿದ ಪಾದವೆಚ್ಚರಿಕೆ ೨೦

ಯಮಳಾರ್ಜುನರ ಠೇಂಕಾರವನ್ನು ಧ್ವಂಸ ಮಾಡಿದ ಪಾದ ಎಚ್ಚರಿಕೆ. ತೊಟ್ಟಿಲಾಕಾರದಲ್ಲಿ ಹೊಳೆಯುತ್ತಿದ್ದ ಶಕಟನನ್ನು ನೆಲಕ್ಕೆ ಹಾಕಿ ಮೆಟ್ಟಿದ ಪಾದ ಎಚ್ಚರಿಕೆ.

ತಡೆಯದೆ ಕಾಳಿಂದಿಯೊಳಗಿರ್ದ ಫಣಿಪನ
ಹೆಡೆಯ ಮೆಟ್ಟಿದ ಪಾದ ಜತನ
ಸಡಗರದಿಂ ಹರ್ಮ್ಯದೊಳಗಿರ್ದ ಮಾವನ
ಕೆಡಹಿ ಮೆಟ್ಟಿದ ಪಾದ ಜತನ ೨೧

ಕಾಳಂದಿ ನದಿಯೊಳಗಿದ್ದ ಫಣೀಂದ್ರನ ಹೆಡೆಯನ್ನು ಮೆಟ್ಟಿದ ಪಾದ ಜತನ(ಜೋಪಾನ), ಸಡಗರದಿಂದ ಮಂದಿರದಲ್ಲಿದ್ದ ಮಾವನನ್ನು ಕೆಡವಿ ಮೆಟ್ಟಿದ ಪಾದ ಜತನ.

ಎಲ್ಲ ದೇವರ ಸಿರಿಮುಡಿಗಡರ್ಚುದ ತವ
ಮೆಲ್ಲಡಿ ಜತನವೆಂದೆಂಬ
ಸಲ್ಲಲಿತಾಂಗಿಯರೆಡಬಲದಲಿ ರಮಾ
ವಲ್ಲಭನೈತಂದ ಮುದದಿ ೨೨

ಎಲ್ಲ ದೇವರ ಸಿಡಿಯುಡಿಗೇರುವ ನಿನ್ನ ಮೆಲ್ಲಡಿ(ಕೋಮಲಪಾದ) ಜತನ ಎಂದು ಎಡಬಲದಲ್ಲಿ ಹೇಳುವ ಲಲಿತಾಂಗಿಯರ ನಡುವೆ ಕೃಷ್ಣ ಬಂದ

ಪೊಗಳಲಚ್ಚರಿ ರುಕ್ಮಿಣಿ ಸತ್ಯಭಾಮೆಯ
ರುಗಳು ಸಖೀಜನವೆರೆಸಿ
ಜಗದೀಶ್ವರನೆಡಬಲದಲ್ಲಿ ಬರಲು ಹೊ
ಮ್ಮಿಗವೇಂಟೆಯಂತಾದುದಂದು ೨೩

ಸಖಿಯರೊಂದಿಗೆ ರುಕ್ಮಿಣಿ ಸತ್ಯಭಾಮೆಯರು ಕೃಷ್ಣನ ಎಡಬಲದಲ್ಲಿ ಬರಲು ಚಿನ್ನದ ಜಿಂಕೆಯ ಬೇಟೆಯಂತಾಯಿತು.

ಬಾಲೆ ರುಕ್ಮಿಣಿ ಸತ್ಯಭಾಮೆಯರು ಕೃಷ್ಣನು
ಕೂಲೆಯರು ಹೊನ್ನ ಹಾವುಗೆಯ
ಲೀಲೆಯಿಂ ಮೆಟ್ಟಿ ಮೆಲ್ಲಡಿಯನಿಡಲು ರಂಗ
ವಾಲಿಯ ಪಜ್ಜೆಯೊಪ್ಪಿದವು ೨೪

ಕೃಷ್ಣಸಹಾಯಕರಾದ ರುಕ್ಮಿಣಿ ಸತ್ಯಭಾಮೆಯರು ಚಿನ್ನದ ಪಾದುಕೆಗಳನ್ನು ಮೆಟ್ಟಿ ಕೋಮಲ ಪಾದಗಳನ್ನು ಇಡಲು, ರಂಗವಲ್ಲಿಯ ಹೆಜ್ಜೆಗಳು ಒಪ್ಪಿದವು.

ಮುರಹರನರ್ಧಾಂಗಿಯರ ಕೋಮಲವೆತ್ತ
ಚರಣಾಂಗುಲಿಯ ಭೂಷಣದ
ವರ ರತ್ನಗಳಿಂ ಅಡಿಯಿಡಲುದುರಿದ ಪುಡಿ
ಮೆರೆದುದು ಮಣಿದೀಪ್ತಿಯಂತೆ ೨೫

ಕೃಷ್ಣನ ಅರ್ಧಾಂಗಿಯರ ಕೋಮಲಪಾದಗಳ ಬೆರಳಲ್ಲಿರುವ ರತ್ನದ ಒಡವೆಗಳಿಂದ ಅಡಿಯಿಡಲು ಉದುರಿದ ಪುಡಿ ರತ್ನದೀಪ್ತಿಯಂತೆ ಮೆರೆಯಿತು.

ಸಿರಿಹರಿಯ ರಾಣಿಯರ ಪಾದದ ಹೊನ್ನ
ಸರಪಳಿಯೆಳೆಯುತ್ತ ಬರಲು
ವರ ನೀಲ ನೆಲಗಟ್ಟಿನ ಮೇಲೆ ಪೊಂಬಳ್ಳಿ
ಗೆರೆಯ ಚಿತ್ರ ಮೂಡಿಸಿದುವು ೨೬

ಶ್ರೀಕೃಷ್ಣನ ರಾಣಿಯರ ಪಾದಗಳ ಹೊನ್ನಿನ ಸರಪಳಿಯನ್ನು ಎಳೆಯುತ್ತ ಬರಲು ನೀಲ ನೆಲಗಟ್ಟಿನ ಮೇಲೆ ಚಿನ್ನದ ಬಳ್ಳಿಗೆರೆಯನ್ನು ಮೂಡಿಸಿದವು.

ತುಂಟ ರಕ್ಕಸರ ಹಾಹೆಗಳ ಮಧ್ಯದ ಹೊನ್ನ
ಗಂಟೆಯ ನಾದವಂಘ್ರಿಯೊಳು
ವೆಂಟಣಿಸಲು ಕೃಷ್ಣ ನಡೆತಂದು ಕ್ರೀಡಾ
ಮಂಟಪವನು ಸಾರ್ದನೊಲಿದು ೨೭

ತುಂಟ ರಕ್ಕಸರ ಹಾಹೆಗಳ (ಪಯತ್ಥಳಿಗಳ) ಮಧ್ಯದ ಹೊನ್ನ ಗಂಟೆಯ ನಾದ ಪಾದಗಳನ್ನು ಆವರಿಸಲು ಕೃಷ್ಣ ನಡೆದು ಕ್ರೀಡಾಮಂಟಪವನ್ನು ತಲುಪಿದನು.

ನೋಡಲು ಕಣ್ಗೆಸೆದುವು ಚಂದ್ರಕಾಂತದ
ಕ್ರೀಡಾಕೊಳಗಳಲ್ಲಲ್ಲಿ
ಜೋಡಣೆಗೆಯ್ದ ಸುವರ್ಣಮಂಟಪದ ಕೈ
ವಾಡವನೇನ ಬಣ್ಣಿಪೆನು ೨೮

ದೃಷ್ಟಿ ಹರಿಸಿದಾಗ ಅಲ್ಲಲ್ಲಿ ಚಂದ್ರಕಾಂತ ಶಿಲೆಯ ಕ್ರೀಡಾಕೊಳಗಳು ಕಂಡು ಬಂದವು. ಹಾಗೆಯೇ ಸುವರ್ಣಮಂಟಪದ ಕುಶಲ ಕೆಲಸದ ಕೈಚಳಕವನ್ನು ವರ್ಣಿಸುವುದು ಹೇಗೆ?

ಕುಂಬಸ್ತನ ಬಾಹುಮೂಲವಕ್ಷ ಮುಖಚಂದ್ರ
ಬಿಂಬ ಲಾವಣ್ಯದಿ ಮೆರೆವ
ಹೊಂಬುತ್ತಳಿಗಳಿರ್ದುವು ರತ್ನಮಯ ಹೇಮ
ಗಂಬ ಚಾವಡಿಗಳಗ್ರದಲಿ ೨೯

ಕುಂಭಸ್ತನಗಳ, ಬಾಹುಮೂಲ ವಕ್ಷದ, ಮುಖಚಂದ್ರನ ಬಿಂಬ ಸೌಂದರ್ಯದಿಂದ ಕಂಗೊಳಿಸುವ ಚಿನ್ನದ ಪುತ್ತಳಿಗಳು, ರತ್ನಖಚಿತ ಚಿನ್ನದ ಕಂಬದ ಚಾವಡಿಗಳಲ್ಲಿ ಎದ್ದು ಕಾಣುತ್ತಿದ್ದವು.

ರತ್ತನ ಕೋಲ ಹೊನ್ನಂಡೆಗಳನಾಂತು
ಪುತ್ತಳಿ ಮದನಿಕೆ ಎಡೆಯಲಿ
ಚಿತ್ತರ ಬಿಡಿಸಿದ ಬಿನ್ನಾಣಗಳ ನೋಡಿ
ಚಿತ್ತೈಸಿದನು ಕೃಷ್ಣ ನಗುತ ೩೦

ರನ್ನದ ಕೋಲು ಚಿನ್ನದ ಅಂಡೆಗಳನ್ನು ಹಿಡಿದು ಮದನಿಕೆ ಬೊಂಬೆಯ ಸ್ಥಳದಲ್ಲಿ ಚಿತ್ತಾರ ಬಿಡಿಸಿದ ಬಿನ್ನಾಣಗಳನ್ನು ನೋಡಿ ಕೃಷ್ಣ ನಗುತ ಆಗಮಿಸಿದನು.

ಮುಡಿವಾಳ ದವನ ಪಚ್ಚೆಯತೆನೆ ಸೌರಭ್ಯ
ವಡೆದ ಪೊಂಬಾಳೆ ಪೂದಂಡೆ
ನಿಡಿದಾದ ಮೃಗಝುಲ್ಲಿ ನಿಖಳ ಫಲಂಗಳು
ಗಿಡಿದಿರಲು ಕೃಷ್ಣ ನಿಟ್ಟಿಸಿದ ೩೧

ಮುಡಿವಾಳ, ದವನ, ಪಚ್ಚೆಯ ತೆನೆ, ಪರಿಮಳಯುಕ್ತ ಹೊಂಬಾಳೆ, ಹೂದಂಡೆ, ಕಸ್ತೂರಿಯ ಲೇಪನ ದ್ರವ್ಯ, ಹಣ್ಣುಗಳು ತುಂಬಿರಲು ಕೃಷ್ಣ ಈಕ್ಷಿಸಿದ.

ಶಾಲೆಗಳಿಂದ ಕುಚ್ಚುಗಳಿಂದ ಕಮ್ಮಲ
ಮಾ೯ಲೆ ಝುಲ್ಲರಿ ಝುಲ್ಲಿಯಿಂದ
ಬಾಲೆಯರುಗಳ ಕಣ್ಮನಕೆ ರಾಟಣದು
ಯ್ಯಾಲೆ ನಾಲ್ದೆಸೆಯೊಳೊಪ್ಪಿದವು ೩೨

ಸ್ಯಾಲೆಗಳಿಂದ, ಕುಚ್ಚುಗಳಿಂದ, ಪರಿಮಳಯುಕ್ತ ಹೂಮಾಲೆ ಕುಚ್ಚು ಗೊಂಚಲುಗಳಿಂದ ಹೆಣ್ಣುಗಳ ಕಣ್ಣಿಗೆ ರಾಟಣದುಯ್ಯಾಲೆ ನಾಲ್ಕು ದಿಕ್ಕುಗಳಲ್ಲಿ ಕಂಗೊಳಿಸಿದವು.

ಕೆಳದಿ ಕೇಳಿಂತಪ್ಪ ಶಶಿಕಾಂತ ಶಿಲಾ
ಕೊಳವಿರಲೊಂದೊಂದ ನೋಡಿ
ಬಲರಾಮ ಸಾತ್ಯಕಿ ಪ್ರದ್ಯುಮ್ನರ್ಗೆತ್ತು
ಜಳರುಹ ನೇತ್ರೆಯರು ನಕ್ಕರು ೩೩

ಇಂತಹ ಚಂದ್ರಕಾಂತ ಶಿಲೆಯ ಕೊಳವಿರಲು ಒಂದೊಂದನ್ನೂ ನೋಡಿ, ಬಲರಾಮ ಸಾತ್ಯಕಿ ಪ್ರದ್ಯುಮ್ನ ಸದೃಶವೆಂದು ಕಮಲಾಕ್ಷಿಯರು ನಕ್ಕರು.

ಅವರವರು ತಮ್ಮತಮ್ಮ ಪ್ರಾಣಕಾಂತರ
ನಿವಹವೊಂದಾಗಿ ತತ್ಕೊಳದಿ
ಬೆವಹರಿಸಿದರಾಯತವೆತ್ತು ಧರಣೀ
ಧವನೋಕುಳಿಗೆ ನೇಮಿಸಿದ ೩೪

ಅವರವರು ತಮ್ಮ ತಮ್ಮ ಮನದನ್ನರ ಜೊತೆ ಆ ಕೊಳದಲ್ಲಿ ವ್ಯವಹರಿಸಲು, ಕೃಷ್ಣರಾಜ ಓಕುಳಿಗೆ ನೇಮಿಸಿದ.

ಲಾಲೆಗಾರ್ತಿಯರಚ್ಯುತನಾಜ್ಞೆಯಿಂದ ಪೆ
ರ್ಗಾಲುವೆ ಹೊಂದೂಂಬ ನೆಗಹಲು
ಕೀಲಣೆಗೆಯ್ದ ಸುವರ್ಣವೇತಂಡ ಶುಂ
ಡಾಲದಿಂಸುರಿದುದು ಸಲಿಲ ೩೫

ಅಚ್ಯುತನ ಮಾತಿನಿಂದ ಬೆಡಗಿಯರು ಕಾಲುವೆಯ ತೂಬನ್ನು ಎತ್ತಲು, ಜೋಡಣೆಗೊಂಡ ಹೊನ್ನಾನೆಯ ಸೊಂಡಿಲಿನಿಂದ ನೀರು ಸುರಿಯತೊಡಗಿತು

ನಲಿನಾಕ್ಷಿಯರ ಕಂಧರದ ಪ್ರಮಾಣಕ್ಕೆ
ಸಲಿಲ ಪೂರಿತವಾಗಲೊಡನೆ
ಒಲಿದವರ ಮೇಲೆ ಪೊಂದೂಂಬ ಗಂಧೋದಕ
ಚಲಿಸಿತು ಸಿಂಗಾರ ಬನದಿ ೩೬.

ಕಮಲಾಕ್ಷಿಯರ ಕುತ್ತಿಗೆಯವರೆಗೆ ನೀರು ತುಂಬಿಕೊಂಡಾಗ ಪ್ರೀತಿಪಾತ್ರರ ಮೇಲೆ ತೂಬಿನ ಸುಗಂಧ ಜಲ ಚಲಿಸತೊಡಗಿತು.

ಹಿಮರುಚಿಕಾಂತ ಶಿಲಾಕೀಲಿತ ಕೊಳಕೆ ಕುಂ
ಕುಮದಲದ್ಧೂಳಿಯೊಡೆಗಲಸಿ
ರಮಣಿಯರ ತಳಿರಡಿದಳೆದಿರ್ದ ಲತೆಯಂತೆ
ರಮಣೀಯವಾದುದು ಸಲಿಲ ೩೭

ಚಂದ್ರಕಾಂತಶಿಲೆಯಿಂದ ರಚಿತವಾದ ಕೊಳಕ್ಕೆ ಕುಂಕುಮದ ಹೂವಿನ ಧೂಳಿ ಒಡೆಗಲಸಿ ರಮಣಿಯರ ಚಿಗುರಿನ ಪಾದ ತಳೆದ ಬಳ್ಳಿಯಂತೆ ನೀರು ರಮಣೀಯವಾಯ್ತು.

ಸಕಲ ದಿವ್ಯ ಪರಿಮಳದ್ರವ್ಯವ ಗಂಧೋ
ದಕದಲಿ ಹದ ಮಾಡಲೊಡನೆ
ವಿಕಸಿತ ಕಮಲದಳಾಕ್ಷ ತನ್ನಯ ವಧೂ
ನಿಕರಕೆ ಸೂಚನೆಗೆಯ್ದನು ೩೮

ಎಲ್ಲ ಪರಿಮಳ ದ್ರವ್ಯವನ್ನು ಗಂಧೋದಕದಲ್ಲಿ ಹದವಾಗಿ ಬೆರೆಸಲು ಹಿಗ್ಗಿದ ಕಮಲಾಕ್ಷ ತನ್ನ ಸ್ತ್ರೀಸಮುದಾಯಕ್ಕೆ ಸೂಚನೆ ಕೊಟ್ಟನು.

ಖಂಡೇಂದು ನೊಸಲ ಕಾಮಿಯನಿಯರ್ಗೆ ರನ್ನ ಪೊ
ನ್ನಂಡೆ ಜೀರ್ಕೊಳವೆ ಸಮೇತ
ಚೆಂಡಲರಿನ ಪೊಟ್ಟಣ ದಿವ್ಯಚಂದನದ
ಉಂಡೆಗಳನು ಕೊಟ್ಟ ನಗುತ ೩೯

ಅರ್ಧಚಂದ್ರಾಕಾರರ ಹಣೆಯ ಕಾಮಿನಿಯರಿಗೆ ಚಿನ್ನದ ಅಂಡೆ, ಜೀರ್ಕೊಳವೆ ಸಮೇತ ಚೆಂಡು ಹೂ ಪೊಟ್ಟಣ, ಶ್ರೀಗಂಧದ ಉಂಡೆಗಳನ್ನು ಕೊಟ್ಟ.

ಅರಾರಿಗೇನೇನ ಕೊಡಬೇಕವನೆಲ್ಲ
ತಾರತಮ್ಯದಿ ನಿಯೋಗಿಸಲು
ತೋರನುಣ್ಮೊಲೆಯ ಮಾನಿನಿರನ್ನೆಯರು ಶೃಂ
ಗಾರವ ತಾಳ್ದರುತ್ಸವದಿ ೪೦

ಯಾರಾರಿಗೆ ಏನೇನು ಕೊಡಬೇಕು ಅದನ್ನೆಲ್ಲ ತಾರತಮ್ಯದಿಂದ ನಿಯೋಜಿಸಲು, ನಾರಿಯರು ಉತ್ಸಾಹದಿಂದ ಶೃಂಗಾರಗೊಂಡರು.

ಕೋವಿದೆ ಕೇಳು ರುಕ್ಮಿಣಿ ಸತ್ಯಭಾಮಾ
ದೇವಿಯರು ಕುರುಳ ಬಾಸಣಿಸಿ
ಪೂವಿಡಿಕಿರಿದರು ಪೆರ್ಜಡೆವೆಣೆದು ಕೃಷ್ಣ
ಮೂವೀದಿಗೊಂಡು ನೋಳ್ಪಂತೆ ೪೧

ರುಕ್ಮಿಣಿ ಸತ್ಯಭಾಮೆಯರು ಕೂದಲನ್ನು ಬಾಚಿ, ಜಡೆ ಹೆಣೆದು , ಹೂವನ್ನು ಮುಡಿದರು ಕೃಷ್ಣ ತಬ್ಬಿಬ್ಬಾಗಿ ನೋಡುವಂತೆ.

ಭೃಂಗಕುಂತಲವ ತ್ರಿಭಾಗಿಸಿ ನಿಖಿಲ ಗೋ
ಪಾಂಗನೆಯರು ಜಡೆವೆಣೆಯೆ
ತುಂಗಸ್ತನದ ಕೊಪ್ಪರಿಗೆಯ ನಿಧಿ ಕಾವ ಭು
ಜಂಗನಂತೆ ಬೆನ್ನೇರಿದುವು ೪೨

ದುಂಬಿಗುರುಳನ್ನು ಮೂರು ಸೀಳಾಗಿಸಿ ಗೋಪಿಯರೆಲ್ಲ ಜಡೆ ಹೆಣೆದಾಗ, ಕೊಡಮೊಲೆಯ ಕೊಪ್ಪರಿಗೆಯ ನಿಧಿ ಕಾಯುವ ಸರ್ಪಗಳಂತೆ ಬೆನ್ನೇರಿದವು.

ಬಮ್ಮ ಕಳಸಕುಚೆಯರು ಕೃಷ್ಣರಾಯನ
ತಮ್ಮೆದೆವನೆಯೊಳಿಂಬಿಡಲು
ನಿಮ್ಮಳ ಬಹಿರ್ಭಾಗದೊಳೆಸೆವಂತೆ ಪೆ
ರ್ದಮ್ಮಿಲ್ಲ ಜಡೆಗಳೊಪ್ಪಿದವು ೪೩

ಹೊಂಗಳಸ ಕುಚೆಯರು ಕೃಷ್ಣನನ್ನು ತಮ್ಮ ಎದೆಮನೆಯಲಲಿ ಆಶ್ರಯ ನೀಡಲು ಹೊರಭಾಗದಲ್ಲಿ ನಿರ್ಮಲವಾದ ದೊಡ್ಡ ತುರುಬು ಜಡೆಗಳು ಕಂಗೊಳಿಸಿದವು. (ಬಮ್ಮ<ಭರ್ಮ=ಹೊನ್ನು)

ಜಡೆಗೆ ಪೂಸಿದರು ಕತ್ತುರಿ ಕಮ್ಮಲರ್ಗಳ
ಬಿಡೆಯವಿಲ್ಲದೆ ಕೇವಣಿಸಿ
ತಡೆಯದೆ ಕಪ್ಪುರವಟ್ಟುಗಳನು ಹೆಕ್ಶಿರ
ದೆಡೆಯಲ್ಲಿ ನೆಲೆಗೊಳಿಸಿದರು ೪೪

ಜಡೆಗೆ ಕಸ್ತೂರಿಯನ್ನು ಲೇಪಿಸಿದರು, ಪರಿಮಳದ ಹೂಗಳನ್ನು ಸಂಕೋಚವಿಲ್ಲದೆ ಕೀಲಿಸಿದರು, ಶಿರದ ಹಿಂಭಾಗದಲ್ಲಿ ಒಂದು ಬಗೆಯ ಸುಗಂಧದ್ರವ್ಯದ ಬೊಟ್ಟುಗಳನ್ನು ನೆಲೆಗೊಳಿಸಿದರು.

ನೊಸಲ ಕತ್ತುರಿಯೊರ್ಧ್ವಪುಂಡ್ರದ ಕರ್ಣದೊ
ಳೆಸೆವ ಜವಾದಿ ಮೆಯ್ಯೊಳಗೆ
ಬಿಸಜಗಂಧಿಯರಾಯತವೆತ್ತು ಕಾವನ
ಮಸೆದ ಕೂರಲಗಿನಂತಿಹರು ೪೫

ಹಣೆಯಲ್ಲಿ ಕಸ್ತೂರಿಯ ಮೇಲ್ಮುಖನಾಮದ, ಕಿವಿಯಲ್ಲಿ ಪುನುಗನ್ನು ತಳೆದ ಸುಗಂಧಿಯರು ಕಾಮನ ಮಸೆದ ಹರಿತವಾದ ಕತ್ತಿಯಂತಿದ್ದರು.

ನೀರೆಯರುಗಳಾಯತವೆತ್ತು ಬರಲಾಗಿ
ಬೇರೆಬೇರೆ ಅವರುಗಳ
ಮೋರೆಯ ಸೊಬಗನೀಕ್ಷಿಸುತ ಕೃಷ್ನನ ಮನ
ಸೂರೆ ಹೋಗದೆ ಸುಮ್ಮನಿಹುದೆ ೪೬

ಸುಂದರಿಯರು ಸಿದ್ಧಗೊಂಡು ಬರಲಾಗಿ ಪ್ರತಿಯೊಬ್ಬರ ಮುಖದ ಸೊಬಗನ್ನು ನೋಡುತ್ತಾ ಕೃಷ್ಣನ ಮನಸ್ಸು ಸೂರೆ ಹೋಗದೆ ಇರುವುದೆ?

ಇಂದುವದನೆ ರುಕ್ಮಿಣಿ ಸತ್ಯಭಾಮೆ ಕಾ
ಲಂದುಗೆ ಘಲಿರೆಂಬ ರವದಿ
ಬಂದು ವಸಂತ ಪೂಜೆಯ ಮಾಡಬೇಕೆನ
ಲಂದು ಸಾರ್ಚಿದರು ವಸ್ತುಗಳ ೪೭

ಚಂದ್ರಮುಖಿಯರಾದ ರುಕ್ಮಿಣಿ ಸತ್ಯಭಾಮೆಯರು ಘಲಿರೆನ್ನುವ ಕಾಲಂದುಗೆಯ ಶಬ್ದದೊಂದಿಗೆ ಬಂದು ಓಕುಳಿಪೂಜೆಗೆಂದು ವಸ್ತುಗಳನ್ನು ಕೊಂಡೊಯ್ದರು.

ತೋರತೆಂಗಾಯಿ ನಾನಾ ವಿಧ ಪಣ್‌ಫಲಾ
ಹಾರವ ರಾಸಿ ಮಾಡಿದರು
ಓರಂತೆ ಗಂಧಾಕ್ಷತೆ ಪುಷ್ಪ ನಿಖಿಲೋಪ
ಚಾರ ವಸ್ತುಗಳನಿಕ್ಕಿದರು ೪೮

ದಪ್ಪ ತೆಂಗಿನಕಾಯಿ, ನಾನಾ ಬಗೆಯ ಪಣ್ ಫಲಾದಿಗಳನ್ನು ರಾಸಿ ಮಾಡಿದರು. ಓರಣವಾಗಿ ಗಂಧಾಕ್ಷತೆ, ಹೂ, ಸಕಲೋಪಚಾರದ ವಸ್ತುಗಳನ್ನು ಇಕ್ಕಿದರು.

ತಾಳದಂಡಿಗೆವಿಡಿದ ಮಳಗಾನೆಯರು ಹಿಂ
ದೋಳ ವಸಂತರಾಗದಲಿ
ಆಳಾಪಗೈದುತ್ಸವದಿ ಪಾಡಿದರು ಗೋ
ಪಾಳ ಕೃಷ್ಣನ ಮುದ್ರಿಕೆಯ ೪೯

ತಾಳದಂಡಿಗೆ ಹಿಡಿದ ಗಾಯಕಿಯರು ಹಿಂದೋಳ, ವಸಂತ ರಾಗದಲ್ಲಿ ಆಲಾಪಗೈದು ಗೋಪಾಲ ಕೃಷ್ಣನ ಅಂಕಿತದ ಹಾಡುಗಳನ್ನು ಉತ್ಸಾಹದಿಂದ ಹಾಡಿದರು.

ಬಳಿಕ ರುಕ್ಮಿಣಿ ಸತ್ಯಭಾಮೆಯರುಗಳೋತು
ಪಳಿಕಿನ ಕಲ್ಲ ತಣ್ಗೊಳದಿ
ತಳುಕಿನ ಕಡಗ ಕಂಕಣ ಝಣಝಣರೆನಲು
ತುಳುಕಿದರು ಗಂಧೋದಕವ ೫೦

ಅನಂತರ ರುಕ್ಮಿಣಿ ಸತ್ಯಭಾಮೆಯರು ಪ್ರೀತಿಯಿಂದ ಸ್ಪಟಿಕಶಿಲೆಯ ತಂಗೊಳದಲ್ಲಿ ತಳುಕಿನ ಕಡಗ ಕಂಕಣ ಝಣಝಣ ಸದ್ದು ಮಾಡುವಂತೆ ಗಂಧೋದಕವನ್ನು ತುಳುಕಿದರು.

ನಡುನಡುಗಿಸಿ ನಲ್ಲನೆದೆಯ ಧೈರ್ಯವ ಮೊಲೆ
ಗೊಡದಿಂ ಮೊಗೆವಂತೆ ಮೊಗೆದು
ಅಡರ್ದಬಲೆಯರು ಐತಂದು ಮುತ್ತಿದರು
ಮೃಡ ತಪಧ್ವಂಸಿಯ ಪಿತನ ೫೧

ಗಡಗಡ ನಡುಗುತ್ತ ಪ್ರಿಯಕರನ ಎದೆಯ ಧೈರ್ಯವನ್ನು ಮೊಲೆಗೊಡದಿಂದ ಮೊಗೆಯುವಂತೆ ಮೇಲಕ್ಕೆ ಹತ್ತಿ ಬಂದ ಅಬಲೆಯರು ಶ್ರೀಕೃಷ್ಣನನ್ನು ಮುತ್ತಿದರು.

ನೆಟ್ಟನೆ ವಿಧಿಭವೇಂದ್ರಾದಿ ನಿರ್ಜರರೊಳು
ಕಟ್ಟಾಳು ಕೃಷ್ಣರಾಯಂಗೆ
ಪಟ್ಟಾಭಿಷೇಕವ ಮಾಳ್ಪಂತೆ ತಂದಿಳಿ
ಬಿಟ್ಟರೋಕುಳಿಯ ನೆತ್ತಿಯಲಿ ೫೨

ಬ್ರಹ್ಮ, ಈಶ್ವರ, ಇಂದ್ರಾದಿ ದೇವತೆಗಳಲ್ಲಿ ಕಟ್ಟಾಳು ಕೃಷ್ಣರಾಯನಿಗೆ ಪಟ್ಟಾಭಿಷೇಕವನ್ನು ಮಾಡುವಂತೆ ನೆತ್ತಿಯ ಮೇಲಿಂದ ಓಕುಳಿಯನ್ನು ಇಳಿಬಿಟ್ಟರು

ಎಲೆ ರುಕ್ಮಿಣಿ ಸತ್ಯಭಾಮೆ ನಿಲ್ಲೆನುತ ಕೋ
ಮಲೆಯರ ಕೈಯ್ಯ ಹೊಂಗೂಡನ
ಗಿಲುಬಿಕೊಂಡುರೆ ಮಸ್ತಕದಲ್ಲಿ ಸುರಿದನು
ಮೊಲೆ ಮುಡಿಗಳು ತೊಯ್ವ ತೆರದಿ ೫೩

ಎಲೆ ರುಕ್ಮಿಣಿ ಸತ್ಯಭಾಮೆ ನಿಲ್ಲಿ ನಿಲ್ಲಿ ಎನ್ನುತ್ತಾ, ಕೋಮಲೆಯರ ಕೈಲಿದ್ದ ಹೊಂಗೊಡವನ್ನು ಕಿತ್ತುಕೊಂಡು, ಅವರ ಮೊಲೆಮುಡಿಗಳು ನೆನೆಯುವಂತೆ ತಲೆಯ ಮೇಲೆ ಸುರಿದನು.

ನೀರನು ಬಿಟ್ಟೇನಿರಬಹುದೆ ಮತ್ಸ್ಯಾವ
ತಾರಿ ನೀನೆಂದು ನೀರೆಯರು
ರಾರಾಜಿಸುತಿಪ್ಪ ಕುಂಕುಮ ಜಲದಲ್ಲಿ
ನಾರಾಯಣನನದ್ದಿದರು ೫೪

ಮತ್ಸ್ಯಾವತಾರಿಯಾದ ನೀನು ನೀರಬಿಟ್ಟು ಇರಬಹುದೆ? ಎಂದು ನೀರೆಯರು ನಾರಾಯಣನನ್ನು ಕುಂಕುಮ ಜಲದಲ್ಲಿ ಅದ್ದಿದರು.

ಕಮಲಾಕ್ಷ ನೀರೊಳು ಬಿದ್ದು ನಿಟ್ಟಿಸಲಾ
ಗಮ ಚೋರನಲ್ಲಿಂ ಹೊರಟು
ರಮಣಿಯರ ಬಲ್ಮೊಲೆದೊಟ್ಟಿನ ಕರ್ಬಣ್ಣ
ತಮವೆಂದು ಹಿಡಿದೌಕಿದನು ೫೫

ಕಮಲಾಕ್ಷ ನೀರಿನಲ್ಲಿ ಬಿದ್ದು ನಿಟ್ಟಿಸಲು, ಆಗಮ ಚೋರನು ರಮಣಿಯರ ತೊಲೆದೊಟ್ಟಿನ ಕಪ್ಪುಬಣ್ಣದ ತಮವೆಂದು ಬಗೆದು, ಬಲವಾಗಿ ಹಿಡಿದು ಅಮುಕಿದನು.

ಅಂತಲಸದೆ ರುಕ್ಮಿಣಿ ಸತ್ಯಭಾಮೆಯರು
ಮುಂತಪ್ಪ ಮೀಟುವೆಂಗಳ
ಕುಂತಳ ತಮವೆಂದು ನಿಡುಜಡೆವಿಡಿದು ಶ್ರೀ
ಕಾಂತ ನೀರೊಳಗೆ ನೂಕಿದನು ೩೬

ಅಷ್ಟಕ್ಕೆ ಬಿಡದೆ ರುಕ್ಮಿಣಿ ಸತ್ಯಭಾಮೆ ಮೊದಲಾದ ಸುಂದರಾಂಗಿಯರ ಕೂದಲು ತಮ(ಕಪ್ಪು)ವೆಂದು ಬಗೆದು ನಿಡುಜಡೆಯನ್ನು ಹಿಡಿದು ನೀರಿಗೆ ನೂಕಿದನು.

ಬಿಸಜಾಕ್ಷಿಯರು ತೊಪ್ಪನೆ ತೊಯ್ದು ಪೊರಮಟ್ಟು
ವಸನವ ಮುದುಡಿ ಹಿಂಡಿದರೆ
ಎಸೆವ ನಿರ್ಮಲದೇಹಲಾವಣ್ಯ ಪರಿಪೂರ್ಣ
ರಸ ಸೋರುವಂತೆ ಸೋರ್ದುದು ೩೭

ತೊಯ್ದು ಕಮಲಾಕ್ಷಿಯರು ಹೊರಬಂದು ಸೀರೆಯನ್ನು ಮುದುಡಿ ಹಿಂಡಿದರೆ, ಅವರ ದೇಹ ಲಾವಣ್ಯರಸ ಸೋರುವಂತೆ ಸೋರಿತು.

ಚಂಬಾವುಡ ಉಡೆವಸನವೆಲ್ಲ ತೊಯ್ದು ನಿ
ತಂಬವು ದೃಶ್ಯತೆವಡೆದು
ಪೊಂಬಾಳೆದೊಡೆ ತೋಳು ನುಣ್ಮೊಲೆ ಮೆರೆಯೆ ಪೀ
ತಾಂಬರ ನೋಡಿ ಹಿಗ್ಗಿದನು ೩೮

ಕೆಂಪು ಪಾವುಡ(ಮುಖ ಒರೆಸುವ ತೆಳುವಾದ ವಸ್ತ್ರ), ಉಡೆವಸನ(ಸೊಂಟಕ್ಕೆ ಉಟ್ಟುಕೊಂಡಿರುವ ಬಟ್ಟೆ) ತೊಯ್ದು ನಿತಂಬ (ಕುಂಡಿ)ಹೊಂಬಾಳೆಯಂಥ ತೊಡೆ, ತೋಳು ಮೊಲೆಗಳು ದೃಶ್ಯತೆ ಪಡೆದು ಕಂಗೊಳಿಸಲು ಕೃಷ್ಣ ನೋಡಿ ಹಿಗ್ಗಿದನು.

ಕಿಂಚಿತ್ತಮಕಾರದಿ ಕೃಷ್ಣ ಲಾವಣ್ಯ
ಲಾಂಛಿತ ವರ ವಧೂಟಿಯರ
ಹಂಚಿಕೊಂಡಿರ್ವರೋಕುಳಿಯಾಡಿರೆಂದು ಪ್ರ
ಪಂಚಿಸಿ ಪೇಳ್ದ ಕಮಲಾಕ್ಷ ೩೯

ಕಪ್ಪುವರ್ಣದ ಲಾವಣ್ಯವತಿಯರನ್ನು ಇಬ್ಬರೂ ಸಮವಾಗಿ ಹಂಚಿಕೊಂಡು

ಓಕುಳಿಯಾಟ ಆಡಿರೆಂದು ಕಮಲಾಕ್ಷ ಪ್ರಪಂಚಿಸಿ(ವಂಚಿಸಿ, ತಾರತಮ್ಯ ತಂತ್ರ ಹೂಡಿ)ಹೇಳಿದನು.

ತೋಳಮೂಲಗಳೊಡೆವಂತೆ ಪೆರ್ಮೊಲೆಯ ಚ
ಡಾಳದ ಮಿಂಡಿವೆಣ್ಣುಗಳ
ಆಳ ಹಂಚಿದರು ರುಕ್ಮಿಣಿ ಸತ್ಯೆಭಾಮೆಯರು
ಮೇಳಕೆ ತಕ್ಕ ತಕ್ಕವರ ೬೦

ಕಂಕುಳುಗಳು ಒಡೆಯುವಂತಿರುವ ಭಾರಿ ಮೊಲೆಗಳ ಹೆಣ್ಣಾಳುಗಳನ್ನು ರುಕ್ಮಿಣಿ ಸತ್ಯಭಾಮೆಯರು –ತಮಗೆ ತಕ್ಕವರು ಎನ್ನಿಸಿದವರನ್ನು–ತಮ್ಮ ತಮ್ಮ ಪಕ್ಷಕ್ಕೆ ಹಂಚಿಕೊಂಡರು.

ಸಡಗರದೋರುವ ಸುಲಿಪಲ್ಲ ಪೊಳೆವ ಪೆ
ರ್ಜಡೆಯಲರ್ಮಾಲೆ ಪೊಂಗೆಜ್ಜೆ
ಬಿಡಯವಿಲ್ಲದ ಪೊನ್ನಂಡೆಗಾರ್ತಿಯರು ಬೆಂ
ಗಡೆಯ ಸಾರಿದರು ರುಕ್ಮಿಣಿಯ ೬೧

ಹೊಳಯುವ ಹಲ್ಲುಗಳ, ಹೂಮಾಲೆ ಜಡೆಗಳ, ಹೊಂಗೆಜ್ಜೆಗಳ ಹೊನ್ನಂಡೆಗಾತಿಯರು ಯಾವ ಸಂಕೋಚವೂ ಇಲ್ಲದೆ ಸಡಗರದಿಂದ ರುಕ್ಮಿಣಿಯ ಬೆನ್ನಿಗೆ ನಿಂತರು.

ಅತ್ಯಂತ ರೂಪ ಯೌವನಗಾತಿಯರು ಪೊಂ
ಬುತ್ತಳಿಯೆಡೆಯಾಡುವಂತೆ
ಕೆತ್ತಿದ ರನ್ನ ಜೀರ್ಕೊಳವೆಯ ಕೈಕೊಂಡು
ಸತ್ಯಭಾಮೆಯನು ಸಾರಿದರು ೬೨

ಅತ್ಯಂತ ಸುಂದರಿಯರಾದ ಕಟ್ಟರೆಯದ ಕಮಲಾಕ್ಷಿಯರು ಚಿನ್ನದ ಬೊಂಬೆಗಳ ಹಾಗೆ ರತ್ನಖಚಿತ ಜೀರ್ಕೊಳವೆಯನ್ನು ಹಿಡಿದುಕೊಂಡು ಸತ್ಯಭಾಮೆಯ ಬೆನ್ನಿಗೆ ನಿಂತರು.

ಪಲ್ಲವಾಧರ ದಂತ ಗುರುಕುಚ ತೋರ ಧ
ಮ್ಮಿಲ್ಲದಿ ಮೆರೆವ ಹೆಣ್ಣುಗಳು

ಪುಲ್ಲದಳಾಕ್ಷಗೆ ಪೊಸವೇಟ ಪುಟ್ಟುವಂ
ತೆಲ್ಲರಿಬ್ಬಗೆಯಾದರಾಗ ೬೩

ಚಿಗುರುದುಟಿ, ಹೊಳೆವ ಹಲ್ಲು, ದಪ್ಪಮೊಲೆ, ಭಾರಿ ತುರುಬುಗಳ ಹೆಣ್ಣುಗಳು ಕಮಲಾಕ್ಷ ಕೃಷ್ಣನಿಗೆ ಹೊಸ ರತಿಕ್ರೀಡಾಸಕ್ತಿ ಮೂಡುವಂತೆ ಎರಡು ಭಾಗವಾದರು.

ಉಚ್ಚವದೊಲವೊಂದು ಮನದೊಳು ಮೊನೆದೋರ್ವ
ಮಚ್ಚರವೊಂದು ಕಾಂತನಿಗೆ
ಹೆಚ್ಚಳವಡಿಸಲ್ಕೆ ಕೊಂಬು ಜೀರ್ಕೊಳವೆಯಿಂ
ದೆಚ್ಚಾಡುತಿರ್ದರೋಕುಳಿಯ ೬೪

ಉತ್ಸವದ ಪ್ರೀತಿಯೊಂದು, ಮನದೊಳಗಿರುವ ಮತ್ಸರವೊಂದು, ಮನದನ್ನನಿಗೆ ಸಂತಸಗೊಳಿಸಬೇಕು ಎಂಬ ಆಸೆಯೊಂದು ಅವರು ಜೀರ್ಕೊಳವೆ ಹಿಡಿದು ಪರಸ್ಪರ ಓಕುಳಿಯನ್ನು ಎರಚಾಡುತ್ತಿದ್ದರು.

ಅಂಡೆಯೊಳೊಲಿದು ಕುಂಕುಮ ರಸದುಂಬಿ ಪೂ
ದಂಡೆಯ ಕೊಂಬುಕೊಳವೆ ನೆಗಹಿ
ಮಂಡೆಯ ನಿಡುಜಡೆವಿಡಿದು ಪೊಯ್ದಾಡಿದರು
ಖಂಡೇಂದು ನೊಸಲ ಕಾಂತೆಯರು ೬೫

ಅಂಡೆಯಲ್ಲಿ ಕುಂಕುಮದ ಕೆನ್ನೀರು ತುಂಬಿ, ಹೂದಂಡೆಯ ಕೊಂಬುಕೊಳವೆ ಮೇಲೆತ್ತಿ, ತಲೆಯ ನೀಳ ಜಡೆಯನ್ನು ಹಿಡಿದು, ಹೋಳುಚಂದ್ರನ ಹಣೆಯ ಕಾಂತೆಯರು ಪರಸ್ಪರ ಹೊಯ್ದಾಡಿದರು.

ಭೇದಿಸಲಂಗಜಾತನ ಭದ್ರಗಜ ನೀರ
ಸೇದಿ ಸೊಂಡಿಲೊಳುಗಿವಂತೆ
ವಾದಿ ವಧುಗಳು ಜೀರ್ಕೊಳವೆಗಳಿಂದೆಚ್ಚು
ನಾದಿದರೊರ್ವರೊರ್ವರನು ೬೬

ಮನ್ಮಥನ ಮದದಾನೆ ಸೊಂಡಿಲ ಮೂಲಕ ನೀರ ಸುರಿವಂತೆ ವಾದಿ ಪ್ರತಿವಾದಿ ಹೆಣ್ಣುಗಳು ಜೀರ್ಕೊಳವೆಯಿಂದ ನೀರೆರಚಿ ಒಬ್ಬರೊಬ್ಬರನ್ನು ತೋಯಿಸಿದರು.

ಭೇರಿ ಮದ್ದಳೆ ಶಂಖ ತಟಹ ಡಿಂಡಿಮ ಡೊಳ್ಳು
ಮೌರಿ ತಂಬಟ ಡಮಾಮಿ
ಭೂರಿ ರವದ ಲಗ್ಗೆವರೆ ಮೊಳಗಿದುವಂದು
ನಾರಿಯರು ಪೊಯ್ದಾಡುತಿರಲು ೬೭

ನಾರಿಯರು ಓಕುಳಿಯಿಂದ ಹೊಯ್ದಾಡುವಾಗ ಭೇರಿ, ಮದ್ದಳೆ, ಶಂಖ, ನಗಾರಿ, ಡಿಂಡಿಮ, ಡೊಳ್ಳು, ಮೌರಿ, ತಮ್ಮಟೆ, ಡಮಾಮಿ, ಲಗ್ಗೆವರೆ(ಮುತ್ತಿಗೆ ಹಾಕುವಾಗ ಬಾರಿಸುವ ರಣವಾದ್ಯ) ಮೊಳಗಿದವು.

ನಮ್ಮೊಳು ನಾವೇಕೆ ಪೊಯ್ದಾಡಬೇಕೆಂದು
ಕಮ್ಮಲರ್ಗಂಧಗಂಧಿಯರು
ತಮ್ಮನಾಳುವ ಕೃಷ್ಣರಾಯನ ತುಡುಕಿದ
ಹೆಮ್ಮೆಯನೇನ ಬಣ್ಣಿಪೆನು ೬೮

ನಾವು ನಾವೇ ಏಕೆ ಹೊಯ್ದಾಡಬೇಕೆಂದು ಸುವಾಸನೆಯ ಪುಷ್ಪಗಂಧಿಯರು ತಮ್ಮ ಒಡೆಯನನ್ನು ಗುರಿಯಾಗಿಸಿಕೊಂಡದ್ದನ್ನು ಹೇಗೆ ವರ್ಣಿಸಲಿ?

ಬಂದುಗೆವಾಯ ಭಾಮಿನಿ ಕೇಳು ಹೊಸಹೊನ್ನ
ಬಿಂದಿಗೆದುಂಬಿಯೋ ಕುಳಿಯ
ಇಂದಿಗೆ ಸುಖ ಸಿದ್ಧಿಸಿತೆಂದು ಚೆಲ್ಲಿದ
ರಂದು ಕೃಷ್ಣನ ತೆಕ್ಕೆಗೊಂಡು ೬೯

ಹೊಸ ಹೊನ್ನ ಬಿಂದಿಗೆದುಂಬಿದ ಓಕುಳಿಯನ್ನು ಇಂದಿಗೆ ಸುಖ ಸಿದ್ಧಿಸಿತೆಂದು, ಕೃಷ್ಣನ ಮೇಲೆ ಸುರಿದರು ಬಲವಾಗಿ ಅಪ್ಪಿಕೊಂಡು.

ಶತಪತ್ರದಳನೇತ್ರೆಯರ ಬಲ್ಮೊಲೆಗಳ
ಚ್ಯುತನ ದಿವ್ಯಾಂಗದೊಳಮರ್ದು
ಕೃತಪುಣ್ಯರಾದರು ಮೆಯ್ನವಿರ್ಗಳಿಂ ಪುಳ
ಕಿತರಾದರಾನಂದವೆರಸಿ ೭೦

ಕಮಲಾಕ್ಷಿಯರ ಬಲ್ಮೊಲೆಗಳು ಕೃಷ್ಣನ ದಿವ್ಯಾಂಗದೊಳು ಬೆಸುಗೆಗೊಂಡು ಧನ್ಯರಾದಂತೆ ಮೈನವಿರೆದ್ದು ಹರ್ಷದಿಂದ ಪುಳುಕಿತರಾದರು.

ರಮೆ ಭೂದೇವಿ ಮೂಲೋಕವೆಣ್ಣುಗಳಿಗು
ತ್ತಮೆಯರು ಸಲ್ಲೀಲೆಗೆಯ್ವ
ಸಮಯದಿ ಶ್ರೀಕೃಷ್ಣರಾಯನ ಚಿತ್ತಕೆ
ಬೆಮೆಗೊಳಿಸದೆ ಪೋದರೇಕೆ ೭೧

ಶ್ರೀದೇವಿ ಭೂದೇವಿ ಮೂಲೋಕವೆಣ್ಣುಗಳಿಗಿಂತ ಉತ್ತಮ ಸ್ತ್ರೀಯರು ಸಲ್ಲೀಲೆ ಮಾಡುವಾಗ ಕೃಷ್ಣನ ಚಿತ್ತಕ್ಕೆ ಭ್ರಮೆ ಮೂಡಿಸಲಿಲ್ಲವೇಕೆ?

ಫಣಿತಲ್ಪನ ಸುರಾಸುರರಿಗೆ ಅಮೃತವ
ನುಣಬಡಿಸಲ್ಕೆ ಕೋರಿದರು
ಗಣಿಸಲಚ್ಚರಿಯ ಮೋಹನಮೂರ್ತಿ ನಾರಾ
ಯಣಿಯಾಗಿ ಜಗವ ಮೋಹಿಸಿದ ೭೨

ಸಕಲ ಸುರಾಸುರರಿಗೆ ಅಮೃತವನ್ನು ಬಡಿಸೆಂದು ಶೇಷಶಾಯಿಯನ್ನು ಕೋರಿದಾಗ, ಸೋಜಿಗಗೊಳ್ಳುವಂತೆ ಮೋಹನ ಮೂರ್ತಿ 'ನಾರಾಯಣಿ'ಯಾಗಿ ಜಗದ ಮನಸೆಳೆದ.

ಹೆಂಗಳ ಭ್ರಮಗೊಳಿಸುವುದರಿದಲ್ಲ ವಿಧಿ ಭವರ
ಕಂಗಳಿಗಾಶ್ಚರ್ಯವಡೆದ
ಮಂಗಲ ಪುರುಷಾಕೃತಿ ಮೋಹನ ರೂಪ
ರಂಗನಲ್ಲವೆ ರಾಜವದನೆ ೭೩

ಹೆಂಗಸರನ್ನು ಭ್ರಮೆಗೊಳಿಸುವುದು ಅಸಾಧ್ಯವಲ್ಲ, ಆದರೆ ಬ್ರಹ್ಮ ಈಶ್ವರರ ಕಣ್ಣುಗಳಿಗೆ ಆಶ್ಚರ್ಯವನ್ನುಂಟು ಮಾಡಿದ ಮೋಹನ ರೂಪನಾದ ರಂಗ.

ನಿಜಲೀಲೆಯೊಳಗಿರೆ ಶ್ರೀಕೃಷ್ಣರಾಯನ
ಭಜಕ ನಿಷ್ಠರುಗಳು ತಮ್ಮ
ಗಜಗಮನೆಯರೊಂದುಗೂಡಿ ಕ್ರೀಡಾಕೊಳ
ವ್ರಜದೊಳೋಕುಳಿಯಾಡಿದರು ೭೪

ಹೀಗೆ ನಿಜಲೀಲೆಯಲ್ಲಿರಲು, ಅತ್ತ ಕೃಷ್ಣನನ್ನು ಭಜಿಸುವ ನಿಷ್ಠರುಗಳು ತಮ್ಮ ಮಂದಗಮನೆಯರೊಂದಿಗೆ ಕೂಡಿ ಕ್ರೀಡಾಕೊಳದಲ್ಲಿ ಓಕುಳಿಯಾಡಿದರು.

ಕ್ಷಿತಿಯೊಳಚ್ಚರಿವೆತ್ತ ತಣ್ಗೊಳದೊಳಗುಮಾ
ಪತಿ ತಪಧ್ವಂಸಿ ಮೂಂಕೊಂಡು
ರತಿದೇವಿ ಸಹ ವಸಂತವನಾಡುತಿರ್ದರು
ಮತಿವಂತೆ ಕೆಳದಿ ಚಿತ್ತೈಸು ೭೫

ಹೀಗೆಯೇ ಈಶ್ವರನ ತಪಧ್ವಂಸಿಯಾದ ಮನ್ಮಥನು ರತಿಯೊಡಗೂಡಿ ತಂಗೊಳದಲ್ಲಿ ಓಕುಳಿಯಾಟವನ್ನಾಡಿದರು.

ಶಂಬರಾಸುರನಬ್ಧಿಯೊಳು ತಂದು ಕೆಡಹಿದ
ಪಿಂಬವಣೆಯನು ತೋರಿಸಲು
ಚೆಂಬಣ್ಣ ಗಂಧೋದಕದಲ್ಲಿ ಸ್ಮರ ತನ್ನ
ಕುಂಭ ಕುಚೆಯನು ನೂಂಕಿದನು ೭೬

ತಾನು ಮಗುವಾಗಿದ್ದಾಗ ಶಂಬರಾಸುರ ಸಮುದ್ರಕ್ಕೆಸೆದ ಹಿಂದಿನ ಬವಣೆಯನ್ನು ತೋರಿಸುವಂತೆ ಕೆಂಬಣ್ಣದ ಗಂಧವಾರಿಯಲ್ಲಿ ತನ್ನ ನಾರಿಯನ್ನು ನೂಕಿದನು.

ಉಟ್ಟ ಸಾಲೆಯು ತೊಯ್ದು ಪೇರುರದಲ್ಲಿ
ಬಟ್ಟ ಬಲ್ಮೊಲೆ ಸುಥಾಳಿಸಲು
ನೆಟ್ಟನೆ ನೀರಿಂದ ಬಂದು ಕಾಮಗೆ ಕೈ
ಗೊಟ್ಟಳು ಮುಂಗುರುಳನಿಡಿದು ೭೭

ತೊಯ್ದ ಸಾಲೆಯಲ್ಲಿ ವಿಶಾಲವಕ್ಷದ ಬಟ್ಟ ಬಲ್ಮೊಲೆಗಳು ಕಣ್ಣುಗಳಿಗೆ ರಾಚುವಾಗ ನೀರಿಂದ ನೆಟ್ಟಗೆ ಬಂದ ರತಿದೇವಿ ಮನ್ಮಥನ ಮುಂಗುರುಳಿಗೆ ಕೈಹಾಕಿದಳು.

ಹರನುರಿಗಣ್ಣಿಂದ ಬೆಂದ ಸಂತಾಪ ಪೀ
ವರ ಕುಚಾನ್ವಿತೆಯರ ತಾಪ
ಸ್ಮರ ನಿನ್ನ ಮೈಯೊಳಗಿದೆ ತಂಪುಗೊಳ್ಳೆಂದು
ತರಳೆ ನೂಕಿದಳು ತಂಗೊಳಕೆ ೭೮

ಈಶ್ವರನ ಕೆಂಡಗಣ್ಣಿನಿಂದ ಉರಿದ ತಾಪ, ಕೊಡಮೊಲೆ ಕನ್ಯೆಯರ ತಾಪ, ಮನ್ಮಥ ನಿನ್ನ ಮೈಯೊಳಗಿದೆ, ಆದ್ದರಿಂದ ತಂಪಾಗು ಎಂದು ರತಿದೆವಿ ತಂಗೊಳಕ್ಕೆ ನೂಕಿದಳು

ನೂತನಕಾಮ ಕುಂಕುಮ ರಸದೊಳು ತೊಯ್ದು
ಪೀತಾಂಬರನಾಗಿ ಬರಲು
ನಾಥನ ಕಂಡಮರ್ದಪ್ಪಿ ಲಲ್ಲೆಯಾಡುತ
ಮಾತನಾಡಿದಳು ಮೋಹದಲಿ ೭೯

ಹೊಸ ಮನ್ಮಥ ಕುಂಕುಮರಸದಲ್ಲಿ ತೊಯ್ದು ಪೀತಾಂಬರನಾಗಿ ಹೊರಬರಲು ಮನದನ್ನನ ಮೋಹಕ ಮೈಕಟ್ಟನ್ನು ಅನಾಮತ್ತು ತಬ್ಬಿಕೊಂಡಳು.

ಎನ್ನ ನೀ ಮೊದಲು ನೂಂಕಿದ ಕಾರಣದಿಂದ
ನಿನ್ನ ನಾ ನೂಂಕಿದೆನ್ನೈಸೆ
ಇನ್ನಾವ ತೊಡಕು ಬೇಡೆನುತ ಮನ್ಮಥ ರತಿ
ಪೊನ್ನಂಡೆಗಳ ತುಡುಕಿದರು ೮೦

ನೀನು ಮೊದಲು ನೂಕಿದ ಕಾರಣದಿಂದ ನಿನ್ನನ್ನು ನಾನು ನೂಕಬೇಕಾಯಿತು. ಇನ್ನಾವ ಪೈಪೋಟಿ ಬೇಡವೆಂದು ರತಿಮನ್ಮಥರಿಬ್ಬರೂ ಹೊನ್ನಂಡೆಗಳಿಗೆ ಕೈಹಾಕಿದರು.

ಕುಂಕುಮ ಜಲವ ಹೊನ್ನಂಡೆಯೊಳಮರಿಸಿ
ಮುಂಕೊಂಡು ಪೊಯ್ದಾಡಲವಳ
ರಿಂಕಿದ ಕುಚಯುಗಳ ಬಾಹು ಮೂಲಂಗಳ
ಕುಂಕುಮ ಜಗವ ಮೋಹಿಸಿತು ೮೧

ಕುಂಕುಮ ಜಲವನ್ನು ಹೊನ್ನಂಡೆಯಲ್ಲಿ ತುಂಬಿಕೊಂಡು ಮೊದಲು ರತಿಯ ಮೇಲೆ ಸುರಿಯಲು ಅವಳ ರಿಂಕಿದ(ಉಬ್ಬಿದ) ಜೋಡಿ ಮೊಲೆಗಳ, ಕಂಕುಳುಗಳ ಕೆಂಬಣ್ಣ ಜಗತ್ತನ್ನೆ ಮೋಹಿಸಿತು.

ಹೊಗರುಗುವಂಗೋಪಾಂಗ ವಕ್ಷದೊಳು ಪೊಂ
ಬುಗುರಿಯಂತಿರ್ಪ ನುಣ್ಮೊಲೆಯ
ದೃಗುಯುಗಳದಿ ನೋಡಿ ಹೆರಹಿಂಗಲಾರದೆ
ಮುಗುಳಂಬನಮರ್ದಪ್ಪಿದನು ೮೨

ಕಾಂತಿ ಮುಕ್ಕಳಿಸುವ ಅಂಗೋಪಾಂಗಗಳನ್ನು ಹಾಗೂ ವಕ್ಷಸ್ಥಲದಲ್ಲಿ ಹೊನ್ನ ಬುಗುರಿಗಳಂತೆ ಕಣ್ಸೆಳೆಯುವ ನುಣ್ಮೊಲೆಗಳನ್ನು ಕಣ್ಣಿಂದ ನುಂಗುವಂತೆ ನೋಡಿ ಹಿಮ್ಮೆಟ್ಟಲಾಗದೆ ಮನ್ಮಥ ಬಲವಾಗಿ ಬಾಚಿ ತಬ್ಬಿಕೊಂಡನು.

ಪಲ್ಲವಿಸಿದ ನಿರ್ಜರ ಕಲ್ಪವೃಕ್ಷವನು
ವಲ್ಲರಿ ತೊಡರಿಕೊಂಬಂತೆ
ಸಲ್ಲಿಲಿತಾಂಗಿ ನುರ್ಣ್ದೋಳಿಂದ ರಸದಾಳಿ
ವಿಲ್ಲನ ಬಿಗಿಯಪ್ಪಿದಳು ೮೩

ಚಿಗುರಿದ ದೇವಲೋಕದ ಕಲ್ಪವೃಕ್ಷಕ್ಕೆ ಬಳ್ಳಿ ಹಬ್ಬಿಕೊಂಡು ತಬ್ಬಿಕೊಳ್ಳುವಂತೆ, ರತಿ ತನ್ನ ನುಣ್ ದೋಳಿಂದ ಮನ್ಮಥನನ್ನು ಬಿಗಿಯಾಗಿ ಅಪ್ಪಿದಳು.

ಇನಿವಿಲ್ಲ ರತಿದೇವಿಯರ ಮುಂದೆ ವಿಲಾ
ಸಿನಿಯರು ಹೊನ್ನಂಡೆವಿಡಿದು
ತನಿಮೋಹ ರಸಮೊಸರ್ವಂತೆ ಪೊಯ್ದಾಡಿದ
ರನಿಬರದೇವ ಬಣ್ಣಿಪೆನು ೮೪

ರತಿ ಮನ್ಮಥರ ಮುಂದೆ ವಿಲಾಸಿನಿಯರು ಹೊನ್ನಂಡೆ ಹಿಡಿದು ಮೋಹರಸ ಒಸರುವಂತೆ ಹೊಯ್ದಾಡಿದರು.

ಎಡಬಲದೊಳು ಪಿಂತೆಮುಂತೆ ಶೋಭಿಪ ಪೊಂ
ಗೊಡಮೊಲೆಯವರೋಕುಳಿಯ
ಎಡೆವಿಡದೊಬ್ಬರೊಬ್ಬರ ಮೇಲೆ ಚೆಲ್ಲುವ
ಸಡಗರವೇನ ಪೇಳುವೆನು ೮೫

ಎಡಗಡೆ ಬಲಗಡೆ, ಮುಂಗಡೆ ಹಿಂಗಡೆ ಶೋಭಿಸುವ ಹೊಂಗೊಡಮೊಲೆಯರು ಎಡೆವಿಡದೆ ಒಬ್ಬರ ಮೇಲೊಬ್ಬರು ಚೆಲ್ಲಾಡುವ ಸಡಗರ ಸಂಭ್ರಮ ವರ್ಣಾನಾತೀತ.

ಆಳಿಯರುಗಳೆಣ್ದೆಸೆಯೊಳು ನೂರಾರು
ಜೋಳಿಜೋಳಿಯೊಳೊಂದುಗೂಡಿ
ಊಳಿಟ್ಟು ಪೂಮಾಲೆಗಳಿಂದ ಕಡುಚೆಲ್ವ
ಊಳಿಗರು ಪೊಯ್ದಾಡಿದರು ೮೬

ಎಂಟುದಿಕ್ಕುಗಳಲ್ಲಿ ಸೇವಕಿಯರು ಜೋಡಿ ಜೋಡಿಯಾಗಿ ಊಳಿಟ್ಟು ಹೂಮಾಲೆಗಳಿಂದ ಹೊಯ್ದಾಡಿದರು.

ಕಟ್ಟಲುಜ್ಜುಗವೆತ್ತ ಪೂಚೆಂಡು ಚಂದನ
ಪೊಟ್ಟಣ ಯಕ್ಷ ಕರ್ದಮದಿ
ಬಟ್ಟಕಂತುಕ ಬಲ್ಮೊಲೆ ಬಿದಿರುವಂ
ತಿಟ್ಟಾಡಿದರೋಕುಳಿಯಸು ೮೭

ಕಟ್ಟಲು ಪ್ರಯತ್ನಿಸಿದ ಹೂಚೆಂಡು, ಶ್ರೀಗಂಧ ಪೊಟ್ಟಣ, ಯಕ್ಷಕರ್ದಮ(ಒಂದು ಬಗೆಯ ಸುಗಂಧದ್ರವ್ಯ)ದಿಂದ ದುಂಡಾದ ಚೆಂಡು(ಕಂತುಕ) ಮೊಲೆಗಳು ಅಲ್ಲಾಡುವಂತೆ ಓಕುಳಿಯನ್ನು ಇಟ್ಟಾಡಿದರು.

ಸಿಂಗಾರವಡೆದ ರಾಟಳದುಯ್ಯಾಲೆಯ
ಮಂಗಳ ವಿಭವದಿನಡರ್ದು
ಅಂಗಜ ಚಕ್ರದಿಗ್ವನಿತೆಯರೆಂಬಂತೆ
ತುಂಗ ಯೌವನೆಯರಾಡಿದರು ೮೮

ಉತ್ತುಂಗ ಯುವತಿಯರು ತಾವು ಮನ್ಮಥನ ಚಕ್ರದ ದಿಗ್ವನಿತೆಯರು ಎಂಬಂತೆ ರಾಟಳಿದುಯ್ಯಾಲೆಯನ್ನು ಏರಿ ಸಡಗರದಿಂದಾಡಿದರು.

ಕೂಟ ವಿಷಯಾತುರ ಕಾತುರದ ಪುರುಷರ
ಕೋಟಲೆಗೊಳಿಸಿ ಬಳಲಿಸುತ
ಆಟವಿದೆಂಬಂತೆ ತಿರುಗಿಸುತಿರ್ದರು
ರಾಚಳದುಯ್ಯಾಲೆಗಳನು ೮೯

ಸುಭೋಗಾತುರ ಕಾತುರಗಳ ಪುರುಷರನ್ನು ಇಲ್ಲದ ಕೋಟಲೆ ಕೋಟಲಡಗಳಿಂದ ಬಳಸಿಸುವಂತೆ ರಾಟಳದುಯ್ಯಾಲೆಯನ್ನು ನಿಲ್ಲಿಸದೆ ಆಡಿಸುತ್ತಿದ್ದರು.

ಸರಿಮಿಂಡಿವೆಣ್ಗಳ ಕೊರಲಹಾರದ ಮುತ್ತು
ಪರಿದುದುರಿದ ಮಣಿನಿಚಯ
ಬಿರುವಳೆಯೊಳು ಬೀಳ್ವ ವಾರಿಕಲ್ಲುಗಳಂತೆ
ತುರುಗಿರ್ದವುಉಯ್ಯಾಲೆಯಡಿ ೯೦

ಕಟ್ಟರೆಯದ ಮೋಹಕ ಮೈಕಟ್ಟಿನ ಯುವತಿಯರು ಕೊರಲ ಹಾರ ಹರಿದು ಕೆಳಕ್ಕೆ ಉದುರಿದ ಮುತ್ತುಗಳು ಬಿರುಮಳೆಗೆ ಬೀಳುವ ಆಲಿಕಲ್ಲುಗಳಂತೆ ಉಯ್ಯಾಲೆಯಡಿಯಲ್ಲಿ ರಾಶಿಗೊಂಡಿದ್ದವು.

ಉಡು ವಸನಂಗಳು ತೊಯ್ದು ಪೊಂಬಣ್ಣಕಿ
ಮ್ಮಡಿ ರುಚಿದೋರುತಿರಲು
ಕುಡಿತೆಗಣ್ಣಬಲೆಯರುಗಳು ತಣ್ಣಸವೆತ್ತು
ನಡುಗಿದರು ಮೊಲೆ ನರ್ತಿಸಲು ೯೧

ಉಟ್ಟಬಟ್ಟೆಗಳು ತೊಯ್ದು ಹೊಂಬಣ್ಣಕ್ಕಿಂತ ಎರಡು ಪಟು ಕಾಂತಿ ಸೂಸುತ್ತಿರಲು, ಬೊಗಸೆಗಣ್ಣ ವಿಲಾಸಿನಿಯರು ಶೈತ್ಯದಿಂದ ಗಡಗಡ ನಡುಗಿದರು, ಮೊಲೆಗಳು ನತಿಸುವಂತೆ.

ವೇಡೆಯವಡೆದು ನಿಂದುದು ಹೆಣ್ಣು ಹರಿ ಜಲ
ಕ್ರೀಡೆಯ ನಾಡಿದನಂತರ
ಕೂಡೆ ಸದ್ವಸ್ತ್ರಭೂಷಣ ಗಂದಮಾಲ್ಯವ
ಜೋಡಣೆಗೆಯ್ದನೆಲ್ಲರಿಗೆ ೬೨

ಸ್ತ್ರೀಯರು ಪರಿವೇಷದಂತೆ ಮಂಡಲದಂತೆ ಗುಂಡಗೆ ನಿಂತರು. ಕೃಷ್ಣ ಜಲಕ್ರೀಡೆಯ ನಂತರ ಎಲ್ಲರಿಗೂ ಬಟ್ಟೆ, ಒಡವೆ, ಗಂಧಮೂಲ್ಯಗಳನ್ನು ಜೋಡಿಸಿ ಕೊಟ್ಟನು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೯೩

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಓದಿ, ಬರೆದು, ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಲಕ್ಷ್ಮೀಕಾಂತನು ರಕ್ಷಿಸುವನು.

## ೧೫. ರತಿಕಾಂತನನ್ನು ಮನೆದುಂಬಿಸಿಕೊಂಡುದು

ಮೂರಕ್ಕರದ ಕೀರ್ತನೆಗೋತು ಮುಕುತಿಯ
ತೋರಲುಜ್ಜುಗಿಸಿದ ಹರಿಯ
ನೀರನ ಮಡದಿಯ ಬಲಗೊಂಡು ಕವಿತೆಯ
ಬೀರೆನ್ನ ಕಿವಿಗೆ ಲೇಸೆನಿಸಿ ೧

ಮೂರಕ್ಷರಗಳ ಕೀರ್ತನೆಗೊಲಿದು, ಮೋಕ್ಷ ನೀಡಲು ಮುಂದಾದ ಹರಿಯ ಮಡದಿಯ ಬಲಗೊಂಡು ನನ್ನ ಕಿವಿಗೆ ಲೇಸೆನಿಸುವ ಕಾವ್ಯವನ್ನು ಹೇಳು.

ಅಕ್ಕರಿಗನ ಕುಲವೃದ್ಧನರ್ಧಾಂಗಿಯ
ದಿಕ್ಕರಿಸದೆ ಪೂಜೆಗೆಯ್ದು
ಸಕ್ಕದ ಕನ್ನಡವೆರಸಿ ಸತ್ಕವಿತೆಯ
ನೊಕ್ಕಣಿಸುವೆ ಕೇಳು ಕೆಳದಿ ೨

ಬ್ರಹ್ಮನರ್ಧಾಂಗಿಯ ಧಿಕ್ಕರಿಸದೆ ಪೂಜೆ ಮಾಡಿ ಸಂಸ್ಕೃತ ಕನ್ನಡ ಬೆರಸಿ ಸತ್ಕಾವ್ಯವನ್ನು ಹೇಳುವೆನು ಕೇಳು ಮಡದಿ

ಅರೆಯಟ್ಟಿ ಖಳರ ಖಂಡಿಸಿ ರಕುತದ ಕೆಂ
ದೊರೆಯೊಳು ತೊಳೆದ ಚಕ್ರವನು
ಒರೆಯೊಳು ಕೃಷ್ಣ ಬೈತಿಡುವಂತೆ ಪಡುವೆಟ್ಟ
ಮರೆಗೊಂಡು ರತಿ ಮುಳುಗಿದನು ೩

ಬೆನ್ನಟ್ಟಿ ಹೋಗಿ ಖಳರನ್ನು ತುಂಡರಿಸಿ ರಕ್ತದ ಕೆಂದೊರೆಯಲ್ಲಿ ತೊಳೆದ ಚಕ್ರವನ್ನು ಕೃಷ್ಣ ಒರೆಯಲ್ಲಿ ಬಚ್ಚಿಡುವಂತೆ ಪಡುಬೆಟ್ಟದ ಮರೆಯಲ್ಲಿ ರವಿ ಮುಳುಗಿದನು.

ಕಂಜಬಾಂಧವನಸ್ತಮಿಸೆ ಪಡುವಣವೆಣ್ಣು
ಮುಂಜತನಗುಂದಿ ತನ್ನ

ಮಂಜುಳ ಬಾಯ ತಂಬುಲವುಗುಳ್ದಂತೆ
ಸಂಜೆಗೆಂಪೆಸೆದಿರ್ದುದಾಗ ೪

ಕಮಲಬಾಂಧವನಾದ ಸೂರ್ಯ ಮುಳುಗಲು, ಪಡುವಣ ಹೆಣ್ಣು ಮುಂದಿನ ಸಾಧನೆ ಪ್ರಯತ್ನ ಕುಂದಿದಂತಾಗಿ ತನ್ನ ಸುಂದರ ಬಾಯೊಳಗಿನ ತಂಬುಲವನ್ನು ಉಗುಳಿದಂತೆ ಸಂಜೆಗೆಂಪು ಕಂಗೊಳಿಸಿತು.

ಸುಟಿವೆತ್ತು ಮುಗಿಲಗಲದಿ ಪರಿವಾಕಾಶ
ತಟಿನಿಯ ಬುದ್ಬುದದಂತೆ
ಪಟುವಾಗಿ ನಿಖಿಳನಕ್ಷತ್ರಮಂಡಲ ಸಂ
ಘಟಿಸಿತು ಕೇಳಾಯತಾಕ್ಷಿ ೫

ತೀವ್ರ ವೇಗದಿಂದ ಮುಗಿಲಗಲ ಹರಿಯುವ ಆಕಾಶಗಂಗೆಯ ಬುದ್ಬುದ (ನೀರಗುಳ್ಳೆ) ದಂತೆ ನಿಖಿಲ ನಕ್ಷತ್ರ ಮಂಡಲ ಜಗಮಗಿಸತೊಡಗಿತು.

ಮೀಟಾದ ರೂಪು ಜವ್ವನ ಬೀತು ಹೆಂಗಳ
ಬೇಟವ ಮಾಳ್ಪುದನ್ಯಾಯ
ಕೂಟಕೆ ತರಣಿ ಬಂದರೆ ವೃದ್ಧನೆಂದು ಕ
ವಾಟವ ಮುಗಿದುವಂಬೋಜ ೬

ಸುಂದರ ರೂಪ, ಬಂಧುರ ಯೌವನ ಇಂಗಿ ಹೋದವರು ಹೆಣ್ಣುಗಳ ಸಂಭೋಗ ಬಯಸುವುದು ಅನ್ಯಾಯ. ಸಂಭೋಗಕ್ಕೆ ಸೂರ್ಯ ಬಂದರೆ ಮುದುಕನೆಂದು ಕಮಲಗಳ ದಳಗಳು ಬಾಗಲನ್ನು ಮುಚ್ಚಿದವು

ಕೋವಿದೆ ಕೇಳು ಶ್ರೀ ಕೃಷ್ಣರಾಯನ ಮುಂದೆ
ತೀವಿರ್ದ ಕಮಲವಲ್ಲರಿಯ
ಹೂವಿನ ಗೊಂಚಲೆಂಬಂದದಿ ಬೊಂಬಾಳ
ದೀವಿಗೆ ಮೆರೆದುವಿಕ್ಕೆಲದಿ ೭

ಕೃಷ್ಣನ ಮುಂದೆ ತುಂಬಿದ ಕಮಲದ ಬಳ್ಳಿಯ ಹೂವಿನ ಗೊಂಚಲು ಎಂಬಂತೆ ದೀಪಸ್ತಂಭದ ಮೇಲೆ ಹಣತೆಗಳು ಬೆಳಗಿದವು.

ಸ್ತನವೆ ಬುದ್ದಣಿಗೆ ಮೈ ಲಾವಣ್ಯರಸ ತೈಲ
ವನಜಾಕ್ಷಿಯರ ತೋಳೆ ದಂಡ
ಘನಕಾಂತಿವೆತ್ತ ಮಾಣಿಕ್ಯದುಂಗುರವೆರ
ಲ್ಮಿನುಗಿನ ಸೊಡರೊಪ್ಪಿದವು ೮

ವನಜಾಕ್ಷಿಯರ ಮೊಲೆಗಳೆ ಬುದ್ದಣಿಗೆ(ಎಣ್ಣೆ,ತುಪ್ಪ ತುಂಬುವ ಚರ್ಮದ ಚೀಲ); ಶರೀರ ಸೌಂದರ್ಯ ರಸವೇ ತೈಲ, ತೋಳೇ ದಂಡ(ಸ್ತಂಭ); ಕಾಂತಿಯುಕ್ತ ಉಂಗುರ ಬೆರಳಿನ ಮಿನುಗಿನ ಸೊಡರುಗಳು ಥಳಥಳಿಸಿದವು.

ಪರಿಪೂರ್ಣ ತೇಜೋಮಯ ಕೃಷ್ಣರಾಯನ
ಸಿರಿಮೊಗದ ಕಾಂತಿಗೆ ಮುಂದೆ
ತುರಿಯದಿಂ ತಮ ಹೊದ್ದದಿರಲೆಂದು ನಿಂ
ದುರಿವ ಸೊಡರ್ಗಳೊಪ್ಪಿದುವು ೯

ತೇಜಸ್ಸಿನ ಮೂರ್ತಿಯಾದ ಕೃಷ್ಣನ ಸಿರಿಮೊಗದ ಕಾಂತಿಗೆ ಮುಂದೆ ಕತ್ತಲು ಆವರಿಸದಿರಲೆಂದು ನಿಂತು ಉರಿಯುವ ಜ್ಯೋತಿಗಳು ಕಂಗೊಳಿಸಿದವು.

ನಳಿನಬಾಂಧವನ ಮುಂದೆಸೆಯೊಳು ಮಿಂಚುಂ
ಬುಳುವಿನ ಮಿನುಗು ರಂಜಿಪುದೆ
ದಳಿತ ಪ್ರಕಾಶ ಕೃಷ್ಣನ ಮುಂದೆ ಸೊಡರ್ಗಳು
ಕಳಿತವು ನಸುಕಾಂತಿವೆರಸಿ ೧೦

ಸೂರ್ಯನ ಮುಂದೆ ಮಿಂಚು ಹುಳುವಿನ ಮಿನುಗು ರಂಜಿಸುವುದೆ? ಕೃಷ್ಣನ ವಿಕಸಿತ ಪ್ರಕಾಶದ ಮುಂದೆ ಸೊಡರುಗಳು ನಸುಕಾಂತಿಯಿಂದ ಸೊರಗಿದಂತಿದ್ದವು.

ಎಡಬಲದಿ ರುಕ್ಮಿಣಿ ಸತ್ಯಭಾಮೆಯರ ಹೊಂ
ದೊಡವಿನ ರತ್ನ ದೀಪ್ತಿಗಳ
ಪಡೆದ ತಾಯೆಂಬಂತೆ ಕೌಸ್ತುಭ ರಮ್ಯತೆ
ವಡೆದುದು ಹರಿಯುರಸ್ಥಳದಿ ೧೧

ಎಡಬಲದಲ್ಲಿ ರುಕ್ಮಿಣಿ ಸತ್ಯಭಾಮೆಯರ ಚಿನ್ನದ ಒಡವೆಗಳ ರತ್ನಕಾಂತಿಯನ್ನು ಹೆತ್ತ ತಾಯಿ ಎಂಬಂತೆ ಹರಿಯ ವಕ್ಷಸ್ಥಲದಲ್ಲಿ ಕೌಸ್ತುಭರತ್ನ ಫಳಫಳ ಹೊಳೆಯುತ್ತಿತ್ತು.

ಗಂಧೇಭಗಮನೆಯರಂಘ್ರಿ ಸಂದೊಹ
ಚೆಂದದಿ ಘಲಿರೆಂಬ ರವದಿ
ಬಂದಾಗ ಕೃಷ್ಣನು ವರ ರತ್ನಮಂಟಪ
ಹೊಂದವಗದಲಿ ಮಂಡಿಸಿದ ೧೨

ಗಜಗಮನೆಯರ ಪಾದಗಳಿಂದ ಘಲಿರ್ ಎಂಬ ಗೆಜ್ಜೆನಾದ ಬಂದಾಗ ಕೃಷ್ಣನು ರತ್ನಮಂಟಪದ ಚಿನ್ನದ ಸಿಂಹಾಸನಾಸೀನನಾಗಿದ್ದನು.

ವಿಘ್ನನಿವಾರಕ ಶ್ರೇಷ್ಠನ ಹಲಾಯುಧ ಪ್ರ
ಮಗ್ನ ತಾನೊಡಗೊಂಡು ಬಂದು
ವಿಘ್ನವಿಲ್ಲದೆ ಮನೆದುಂಬಿಸಬೇಕೆಂದು
ಲಗ್ನವ ಪೇಳ್ದನಚ್ಯುತಗೆ ೧೩

ವಿಘ್ನನಿವಾರಕ ಶ್ರೇಷ್ಠನಾದ ಗಣಪತಿಯನ್ನು ಹಲಾಯುಧ(ಬಲರಾಮ) ಕರೆತಂದು, ವಿಘ್ನವಿಲ್ಲದೆ ಮನೆದುಂಬಿಸಬೇಕೆಂದು ಕೃಷ್ಣನಿಗೆ ಒಳ್ಳೆಯ ಮುಹೂರ್ತವನ್ನು ಹೇಳಿದನು.

ದಾನವ ಮದ ಭಂಜನ ಮುಸಲಿಯ ಮಾತಿಗೆ
ಆನಂದವಡೆದಾಕ್ಷಣದಿ
ಮೀನಧ್ವಜ ರತಿದೇವಿಯರಿಗೆ ಮತ್ಪುರ
ಸ್ಥಾನ ಗೇಹವ ತುಂಬಿಸೆಂದ ೧೪

ರಕ್ಕಸ ಮದ ಭಂಜಕನಾದ ಕೃಷ್ಣ ಮುಸಲಿಯ (ಮುಸಲ= ಒನಕೆ ಅದನ್ನು ಹಿಡಿದ ಬಲರಾಮ ಮುಸಲಿ) ಮಾತಿಗೆ ಹರ್ಷಗೊಂಡು ರತಿಮನ್ಮಥರಿಗೆ ಪುರದಲ್ಲಿ ಮನೆದುಂಬಿಸಿ ಎಂದು ಹೇಳಿದ.

ಕಡು ಲೇಸಾದುದಚ್ಯುತ ಕಾಮರತಿಯರ
ಉಡುಗೊರೆ ಬಳುವಳಿಗಳನು
ಪಡಕೊಂಡುಯ್ದು ಮಂದಿರವ ತುಂಬಿಪೆನೆಂದು
ನುಡಿದನು ರಾಮನಚ್ಯುತಗೆ ೧೫

ಒಳ್ಳೆಯದು ಕೃಷ್ಣ, ರತಿಮನ್ಮಥರ ಉಡುಗೊರೆಗಳನ್ನು ಕೊಂಡೊಯ್ದು ಮಂದಿರನವನ್ನು ತುಂಬುವೆನೆಂದು ಬಲರಾಮ ಹೇಳಿದನು.

ರಾರಾಜಿಪ ನವ್ಯವಸ್ತ್ರ ಸಂತತಿ ಸೊನ್ನ
ದಾರದ ಮೆಯ್ದೊಡಿಗೆ ಮುತ್ತಿನ
ಹಾರ ಕಿರೀಟ ಪೆರ್ದುರುಬಿನೊಳೊಪ್ಪುವ
ತೋರ ಮಾಣಿಕ ಪಾಲಿಸಿದ ೧೬

ರಾರಾಜಿಸುವ ಹೊಸ ವಸ್ತ್ರಗಳು, ಚಿನ್ನದೆಳೆಯ ತೊಡಿಗೆ (ಒಡವೆ)ಗಳು, ಮುತ್ತಿನ ಹಾರ, ಕಿರೀಟ, ತುರುಬಿಗೆ ಹಾಕಿಕೊಳ್ಳುವ ದಪ್ಪ ರತ್ನಗಳನ್ನೆಲ್ಲ ಕೊಟ್ಟ

ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ
ಸೊನ್ನದಡ್ಡಣಿಗೆ ಸುಪ್ಪತ್ತಿಗೆ
ರನ್ನವಿಷ್ಟರ ರತ್ನಗಂಬಳಿ ತಲೆದಿಂಬ
ಹೊನ್ನಾಂಬರನಿತ್ತ ಸುತಗೆ ೧೭

ಚಿನ್ನದ ಕಾಲುಗಳ, ಬೆಳ್ಳಿಯ ಕಾಲುಗಳ ಮಂಚ; ಚಿನ್ನದ ಅಡ್ಡಣಿಗೆ(ಊಟದ ತಟ್ಟೆ ಇಟ್ಟುಕೊಳ್ಳಲು ಹಾಕುವ ಮೂರು ಕಾಲಿನ ಮಣೆ); ಸುಪ್ಪತ್ತಿಗೆ; ರತ್ನಸಿಂಹಾಸನ, ರತ್ನಗಂಬಳಿ;ತಲೆದಿಂಬುಗಳನ್ನು ಹೊನ್ನಾಂಬರ (ಪೀತಾಂಬರನಾದ ಕೃಷ್ಣ)ನು ಮಗನಿಗೆ ಕೊಟ್ಟ

ಮಿಗೆ ಶೋಭಿಸುವ ಹೊಂಬರಿದಾಣ ತಳಿಗೆ ತಂ
ಬಿಗೆ ಗಿಂಡಿ ಗಿಣ್ಣಿಲುಗಳನು
ನಗೆಮೊಗದರ್ಪಣ ಹಂಸ ಪುತ್ಥಳಿಯ ದೀ
ವಿಗೆಗಂಬಗಳನಿತ್ತನೊಲಿದು ೧೮

ಹೆಚ್ಚು ಶೋಭಿಸುವ ಚಿನ್ನದ ಹರಿವಾಣ, ತಣಿಗೆ(ಗಂಗಳ, ತಟ್ಟೆ) ತಂಬಿಗೆ (ಚೆಂಬು) ಗಿಂಡಿಗಿಣ್ಣಿಲು(ಚಿಕ್ಕದಾದ ಬಾಯುಳ್ಳ ಪಾತ್ರೆ, ಮಿಳ್ಳೆ) ಕನ್ನಡಿ, ಹಂಸದ ಬೊಂಬೆ, ದೀಪಿಕಾಸ್ತಂಭಗಳನ್ನು ಕೊಟ್ಟನು

ಸೊಡರ್ಗಂಬಗಳ ಹೊಂಬುಜ್ಜಣಿಗೆಗಳ ಪೊಂ
ಗೊಡಪಾನ ಕೊಪ್ಪರಿಗೆಗಳ
ಅಡಲೊಡರ್ಚವ ಬೋನ ಪೊಂಭಾಂಡಗಳ
ಗಡಣವ ಕೊಟ್ಟನುತ್ಸವವದಿ ೧೯

ದೀವಿಗೆಗಂಬಗಳ, ಚಿನ್ನದ ಬುಜ್ಜಣಿಗೆಗಳ (ಬುಟ್ಟಿ ಅಥವಾ ಕುಕ್ಕೆಗಳ)

ಚಿನ್ನದ ಕೊಡಪಾನ (ಕೊಡ) ಕೊಪ್ಪರಿಗೆಗಳ, ಅಡಿಗೆ ಮನೆಗೆ ಬೇಕಾದ ಬೋನದ ಹೊನ್ನ ಪಾತ್ರೆಗಳನ್ನು ಸಂಭ್ರಮದಿಂದ ಕೊಟ್ಟನು.

ನೆಗಳ ಸೊಂಡಿಲ ಚಿನ್ನದಣಸಿನ ಪಲ್ಲಕ್ಕಿ
ಸೊಗಯಿಪ ರತ್ನ ವಿಮಾನ
ಮಿಗೆ ನವಿಲ್ಕುಂಚ ಕಾಳಾಂಜಿ ಮುಂತಾದ ವ
ಸ್ತುಗಳನಿತ್ತ ಕೃಷ್ಣ ಮಗನಿಗೆ ೨೦

ಮೊಸಳೆ, ಆನೆ, ಚಿನ್ನದಣಸಿನ(ಕಳಸದ)ಪಲ್ಲಕ್ಕಿ, ರತ್ನವಿಮಾನ, ನವಿಲಕುಂಚ, ಪೀಕದಾನಿ ಮುಂತಾದ ವಸ್ತುಗಳನ್ನು ಕೃಷ್ಣ ಮಗನಿಗಿತ್ತನು.

ಕಣ್ಮನಂಗಳಿಗೆ ಸೌಖ್ಯವನೆಯ್ದಿಸುತಿರ್ಪ
ನುಣ್ಮೊಲೆಗಳಿಂ ಉರೆ ಮೆರೆವ
ಪೆಣ್ಮಾಣಿಕ ಗಡಣವನಿತ್ತನು ನೆಯ್ದಿಲ
ಗಣ್ಮೆಯ್ಯ ರತಿಕಾಂತನಿಗೆ ೨೧

ಕಣ್ಮನಗಳಿಗೆ ಸೌಖ್ಯವನೀಯುವ ಸ್ತ್ರೀರತ್ನಗಳನ್ನು ಕನ್ನೈದಿಲೆಕಣ್ಣ ಕೃಷ್ಣ ರತಿಕಾಂತನಿಗೆ ಕೊಟ್ಟನು.

ದಂತಿ ಘೋಟಕ ಧೇನು ಮಹಿಷಿ ವತ್ಸಂಗಳ
ತಿಂತಿಣಿಯನು ಸಾಲ್ಗೊಳಿಸಿ
ಇಂತಿವು ಮೊದಲಾದ ಬಳುವಳಿಗಳ ಕೃಷ್ಣ
ಕಂತುವಿಗಿತ್ತನುತ್ಸವದಿ ೨೨

ಆನೆ, ಕುದುರೆ, ಹಸು, ಎಮ್ಮೆ ಕರುಗಳ ಗುಂಪನ್ನು ಮಗನಿಗೆ ಬಳುವಳಿಯಾಗಿ ಕೊಟ್ಟನು.

ತೊಂಡಿಲು ಬಾಸಿಗವನು ಸೂಡಿದರು ಚಂದ್ರ
ಮಂಡಲ ಮೊಗದ ದಂಪತಿಗೆ
ಸೊಂಡಿಲಿನಿಂದೆಸೆವ ದಂತಿಯನೇರಿಸಿದರಾ
ಖಂಡಲ ಶಚಿಯ ಕೀಳ್ಪಡಿಸಿ ೨೩

ತೊಂಡಿಲು(ತಲೆಯಲ್ಲಿ ಧರಿಸುವ ಒಂದು ಆಭರಣ) ಬಾಸಿಗವನ್ನು

ಸೂಡಿದರು, ಚಂದ್ರಮುಖದ ದಂಪತಿಗಳನ್ನು ಸೊಂಡಿಲಿನಿಂದ ಕೂಡಿರುವ ಆನೆಯ ಮೇಲೆ ಕೂಡಿಸಿದರು– ಇಂದ್ರ ಶಚಿಯರನ್ನು ಕೀಳಾದಿಸಿ.

ನಿಚ್ಚಣಿಗೆ ಪಂಜು ವಡಂಜಿಪಂಜು ರವಿಯ
ಮಚ್ಚರಿಸುವ ಮಾಪಂಜು
ಉಚ್ಚಳಿಸಿದವು ಕೃಷ್ಣರಾತ್ರಿಯ ಕಾಲದ
ಕಿಚ್ಚಿನ ಬಳಗವೆಂಬಂತೆ ೨೪

ನಿಚ್ಚಣಿಗೆ(ಏಣಿ)ಪಂಜು, ವಡಂಜಿ(ಒಂದು ಬಗೆಯ ಬಟ್ಟೆ) ಪಂಜು, ರವಿಯನ್ನು ಮತ್ಸರಿಸುವ ಮಹಾಪಂಜುಗಳು ಕಗ್ಗತ್ತಲ ರಾತ್ರಿ ಕಾಲದ ಬೆಂಕಿಯ ಬಳಗವೆಂಬಂತೆ ಚಲಿಸಿದವು.

ಎಡೆಯ ಪಂಜುಗಳಿರ್ದವು ನಾಗನಾಥನ
ಹೆಡೆವಣಿಗಳ ದೀಪ್ತಿಯಲಿ
ಬಿಡೆಯವಿಲ್ಲದೆ ಮಧ್ಯಮಧ್ಯದಿ ಪೆಣ್ವಿಂಡು
ನಡೆಗೊಂಡುದೇನ ಪೇಳ್ವೆನು ೨೫

ನಾಗದೇವನ ಹೆಡೆಮಣಿಗಳ ಕಾಂತಿಯಲ್ಲಿ ಸಂಕೋಚವಿಲ್ಲದೆ ನಡುನಡುವೆ ಹೆಣ್ಣುಗಳ ಹಿಂಡು ನಡೆದಾಡುತ್ತಿದ್ದುದನ್ನು ಬಣ್ಣಿಸುವುದು ಅಸಾಧ್ಯ

ಇಡಿಕಿರಿದ ಬಟ್ಟಮೊಲೆಯ ಹೊಂಗಳಸ ಕ
ನ್ನಡಿಯಂತೆ ನುಣ್ಮೊಗಮೆಸೆಯೆ
ನಿಡಿದಾದ ತೊಳಪುಗಂಗಳ ವಾರನಾರಿಯ
ರಡಿಯಿಟ್ಟರು ಗಜಗಮನದಲಿ ೨೬

ಕಿಕ್ಕಿರಿದ ದುಂಡುಮೊಲೆಯ ಹೊಂಗಳಸ, ನುಣುಪಾದ ಮುಖವೆ ಕನ್ನಡಿಯಂತೆ ಕಂಗೊಳಿಸಲು ನೀಳವಾದ ಹೊಳಪು ಕಣ್ಣುಗಳ ವಾರನಾರಿಯರು ಗಜಗಮನದಲ್ಲಿ ನಡೆದರು.

ಬಾಣಪಂಚಕ ರತಿದೇವಿಯರ್ಗೆ ಪೊಂಬರಿ
ವಾಣದಿಂದಾರತಿ ಬೆಳಗೆ

ಮಾಣದೆ ಧವಳ ಶೋಭನವ ಪಾಡಿದರು ಗೀ
ರ್ವಾಣ ನಾರಿಯರ ಕೀಳ್ಪಡಿಸಿ ೨೭

ರತಿಮನ್ಮಥರಿಗೆ ಚಿನ್ನದ ಹರಿವಾಣದಿಂದ ಆರತಿ ಬೆಳಗಿದಾಗ, ದೇವಸ್ತ್ರೀಯರನ್ನು ಕೀಳು ಮಾಡಿ ಶುದ್ಧ ಸೋಬಾನೆ ಹಾಡುಗಳನ್ನು ಹಾಡಿದರು.

ಕರಣೇಂದ್ರಿಯ ಜಿತಯೋಗಿಗಳೆದೆಯೊಳಿಪ್ಪ
ಸ್ಮರಗೊಳಗಾಗದುಳಿವಂತೆ
ಚರಣಾಭರಣ ದೀಪ್ತಿಯೊಳಂಗೋದ್ಭವ
ಸ್ಮರಣದ ಹೆಂಗಳೊಪ್ಪಿದರು ೨೮

ಎದೆಯೊಳಿರುವ ಕಾಮನಿಗೆ ಜ್ಞಾನೇಂದ್ರಿಯ ಜಿತಯೋಗಿಗಳು ಒಳಗಾಗದೆ ಉಳಿಯುವಂತೆ, ಪಾದದೊಡವೆಯ ಕಾಂತಿಯಿಂದ ಮನ್ಮಥನ ಸ್ಮರಣೆಯ ಹೆಂಗಳಿದ್ದರು.

ದುಸ್ತರ ಗೀತ ಶಬ್ದವ ಕೊಂಬ ಪಾತ್ರ ಸ
ಮಸ್ತ ವಿದ್ವಜ್ಜನರಿಂಗೆ
ಹಸ್ತದಿ ಹೊಮ್ಮಳೆಗರೆದನು ಯಾದವ
ಮಸ್ತಕ ಮಣಿ ಕೃಷ್ಣನೊಲಿದು ೨೯

ಅಸಾಧ್ಯವಾದ ಗೀತಶಬ್ದವ ಗ್ರಹಿಸುವ ಪಾತ್ರ(ಅರ್ಹ)ಸಮಸ್ತ ವಿದ್ವದ್ ಜನರಿಗೆ ಯಾದವ ಶಿರೋರತ್ನ ಕೃಷ್ಣ, ಕೈಯಲ್ಲಿ ಚಿನ್ನದ ಮಳೆ ಸುರಿಸಿದನು.

ಅಗಣಿತ ಕನಕದಂಡದ ಪಲ್ಲವ ಛತ್ರ
ನೆಗಹಿರೆ ರತ್ನ ತೆತ್ತಿಸಿದ
ಸೊಗಯಿಪ ಮಣಿಸೊಡರ್ವೆರಸಿ ನೆರೆ ಮೆರೆದುವು
ಗಗನ ತಾರಕೆಯ ಕೀಳ್ಪಡಿಸಿ ೩೦

ಅಸಂಖ್ಯ ರತ್ನಖಚಿತ ಕನಕದಂಡದ ಚಿಗುರ ಛತ್ರಿಗಳನ್ನು ಮೇಲೆತ್ತಿರುವಾಗ ರನ್ನಸೊಡರುಗಳು ನೆರೆಮೆರೆದವು ಆಕಾಶದ ನಕ್ಷತ್ರಗಳನ್ನು ಕೀಳಾಗಿಸಿ

ಸಿರಿವೆತ್ತ ಕನಕದಂಡದ ಚಾಮರ ಸೀ
ಗುರಿ ನಡೆದೋರಣ ನಿಚಯ

ಪರಿವೇಷ್ಟಿಸಿರ್ದ ನಾನಾ ಬಗೆಯ ಟೆಕ್ಕೆಯ
ತೆರಳಿತು ನಭವನಳ್ಳಿರಿದು ೩೧

ಐಸಿರಿಯ ಚಿನ್ನದ ಹಿಡಿಯ ಚಾಮರ, ಸೀಗುರಿ(ಚವರಿ) ನಡೆತೋರಣ, ಮಂಡಲಗೊಂಡ ನಾನಾ ಬಗೆಯ ಬಾವುಟ ಮುಗಿಲು ಮುಟ್ಟಿ ತೆರಳಿದವು.

ಅಂಗಡಿಯೆಡಬಲದಲಿ ರಮ್ಯವಡೆದ ಹ
ರ್ಮ್ಯಂಗಳ ತುದಿಯ ಮಂಟಪದಿ
ಹೆಂಗಳ ರನ್ನೆಯರ್ನೋಡುತಿರ್ದರು ವಿಮಾ
ನಂಗಳಮರಿಯರ ಜರಿದು ೩೨

ಅಂಗಡಿ ಸಾಲಿನ ಎಡಬಲದಲ್ಲಿ ಸುಂದರ ಸೌಧಗಳ ತುದಿಯ ಮಂಟಪದಲ್ಲಿ ನಿಂತು ಕನ್ನೆರನ್ನೆಯರು ನೋಡುತ್ತಿದ್ದರು. ಪುಷ್ಪಕದ ಅಮರಿಯರನ್ನು ಜರಿಯುವಂತೆ

ಸೌಂದರಮಯವೆತ್ತು ರತಿಕಾಮ ದಂತಿಯ
ಕಂದರದೆಡೆಯಲಿ ಕುಳಿತು
ನಿಂದಲ್ಲಿ ನೃತ್ಯಗೀತಗಳ ನೋಡುತಲೈ
ತಂದರು ರಾಜಮಂದಿರಕೆ ೩೩

ಆನೆಯ ಕುತ್ತಿಗೆಯ ಬಳಿ ಕುಳಿತ ರತಿಮನ್ಮಥರು, ನಿಂತಲ್ಲಿ ಗೀತನರ್ತನಗಳನ್ನು ನೋಡುತ್ತ ರಾಜಮಂದಿರಕ್ಕೆ ಬಂದರು.

ಪರಿವೇಷ್ಟಿಸಿದ ಹೊನ್ನ ಮಗಿಲಗ್ರದಿ ಕಕು
ದ ರಮ್ಯ ರತ್ನಗೋಪುರದಿ
ಸಿರಿವೆತ್ತ ಬಾಗಿಲ ಮುಂದೆಸೆಯಲಿ ಕಂತು
ಕರಿಯ ಕಂದರದಿಂದಿಳಿದ ೩೪

ಸುತ್ತುವರೆದ ಚಿನ್ನದ ಗೋಡೆಯ ತುದಿಯಲ್ಲಿ ವೃಷಭದ ಹಿಣಿಲಿ(ಭುಜ) ನಂತೆ ಕಂಗೊಳಿಸುವ ಗೋಪುರದ ಬಾಗಿಲ ಮುಂಭಾಗದಲ್ಲಿ ಮನ್ಮಥ ಆನೆಯ ಕೊರಳಿಂದಿಳಿದ.

ಬಿಡದೊದರುವ ನಾನಾ ವಾದ್ಯ ಶ್ರುತಿಗೂಡಿ
ಒಡತಿಯ ಧವಳಶೋಭನದಿ

ಸೊಡರಿಟ್ಟು ಮೆರೆವ ರತ್ನಖಚಿತ ಹರಿವಾಣ
ಗಡಣದಾರತಿಯನೆತ್ತಿದರು ೩೫

ನಾನಾ ವಾದ್ಯಗಳ ಶೃತಿಗನುಗುಣವಾಗಿ ಶೋಭನದ ಒಡತಿಗೆ ಸೊಡರುರಿವ ರತ್ನಖಚಿತ ಹರಿವಾಣದಾರತಿ ಬೆಳಗಿದರು.

ಸೊಲ್ಲಿಸಿದರು ಚಾಂಗುಭಲ ಶಬ್ದಗಳ ಕೆಂ
ಬಲ್ಲಿನ ತಳಿಗೆಗಾರ್ತಿಯರು
ಮಲ್ಲಿಗೆ ದಾಸಳ ಕುಮುದ ಸಂಪಿಗೆಯಂತೆ
ಚೆಲ್ಲಿದರು ಬಣ್ಣಗೂಳುಗಳ ೩೬

ಕೆಂಪು ಹಲ್ಲುಗಳ ಹರಿವಾಣ ಹಿಡಿದ ಹರಿಣಿಯರು ಚಾಂಗು ಭಲಾ ಶಬ್ದಗಳನ್ನು ಉಚ್ಚರಿಸುತ್ತ ಮಲ್ಲಿಗೆ, ದಾಸವಾಳ, ಕುಮುದ(ಕೆಂದಾವರೆ)ಸಂಪಿಗೆ ಹೂಗಳಂತೆ ಬಣ್ಣದ ಅನ್ನವನ್ನೂ ಎರಚಿದರು.

ರಥ ಹಸ್ತಿವಾಜಿ ಪಲ್ಲವಛತ್ರ ಟೆಕ್ಕೆಯ
ಶತಕೋಟಿ ಬಾಹ್ಯದಿ ಮೆರೆಯೆ
ಹಿತವಾದ ಯದು ವಧೂಟಿಯರೊಂದಿಗೆ ಮ
ನ್ಮಥ ಹೊಕ್ಕರಾಜ ಮಂದಿರವ ೩೭

ರಥ, ಆನೆ, ಕುದುರೆ, ಹವಳದ ಛತ್ರಿ, ಬಾವುಟ– ಶತಕೋಟಿ ಹೊರಗೆ ಕಿಕ್ಕಿರಿದಿರುವಾಗ ಹಿತವಾದ ಯದುವಂಶ ಲಲನೆಯರೊಂದಿಗೆ ಮನ್ಮಥ ರಾಜಮಂದಿರವನ್ನು ಹೊಕ್ಕನು.

ಶಶಿವದನೆಯರೊಂದುಗೂಡಿ ಸದ್ವಿಧಿಯ ನಿ
ರ್ಮಿಸಿ ಮಹದಾಗಮೋಕ್ತಿಯಲಿ
ಶಶಿಶೇಖರ ತಪಧ್ವಂಸಿಯ ಮನೆಯ ತುಂ
ಬಿಸಿ ಕೃಷ್ಣ ಮರಳ್ದ ಮಂದಿರಕೆ ೩೮

ಚಂದ್ರಮುಖಿಯರೊಡಗೂಡಿ, ಆಗಮಾನುಸಾರ ಸದ್ವಿಧಿ ವಿಧಾನಗಳನ್ನು ನಿರ್ಮಿಸಿ ಮನ್ಮಥನನ್ನು ಮನೆದುಂಬಿಸಿ ಕೃಷ್ಣ ತನ್ನ ಮಂದಿರಕ್ಕೆ ಮರಳಿದನು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೩೯

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ರಕ್ಷಿಸುವನು.

## ೧೬. ರತಿಯ ಗರ್ಭಾದಾನ

ಹೆರೆದಾಳ್ದೆಡೆಯಾಡುವನಡಿಗಳರ್ಚಿಪ
ದೊರೆ ಕೃಷ್ಣದೇವರಾಯನ
ಹೊರೆಯಿಲ್ಲದೆ ಕೂರ್ತು ಕೃತಿವೇಳು ಪುಟದ ಸ
ಕ್ಕರೆಯಂತೆ ಸವಿವಾತುವೆರಸಿ ೧

ಚಂದ್ರನನ್ನು ಧರಿಸಿದವನ ಅಡಿಗಳನ್ನು ಅರ್ಚಿಸುವ ದೊರೆ ಕೃಷ್ಣದೇವರಾಯನನ್ನು ಮೆಚ್ಚಿ ಕಥೆ ಹೇಳು– ಸಕ್ಕರೆಯಂತೆ ಸವಿಮಾತು ಬೆರೆಸಿ.

ಸುತೆಯನಂಗೀಕರಸಿದನಯ್ಯನ ಪುಣ್ಯ
ಕಥೆಯನಾ ವಿಸ್ತಿರಿಸಿದೊಡೆ
ಜತೆಯಗಲದೆ ನಿನ್ನಂತೆ ಕೇಳುವ ಗುಣಾ
ನ್ವಿತೆಯರ ತೋರಾಯತಾಕ್ಷಿ ೨

ಮಗಳನ್ನೇ ಮದುವೆಯಾದವನ ತಂದೆಯ(ಕೃಷ್ಣನ, ವಿಷ್ಣುವಿನ) ಕಥೆಯನ್ನು ನಾನು ವಿಸ್ತರಿಸಿ ಹೇಳಿದಾಗ, ಕಿತ್ತರೆ ಬರದಂತೆ ಕೂತು ನಿನ್ನಂತೆ ಕೇಳುವ ಗುಣವಂತೆಯರ ಕಾಣುವುದು ತೀರ ಅಪರೂಪ

ಮುರಹರ ನಿಖಿಲ ಯಾದವರ ಬೀಳ್ಕೊಟ್ಟು ತ
ನ್ನರಮನೆವುಗಲು ಮೇಣಿತ್ತ
ವರ ಚಂದ್ರಕಾಂತ ಮಂಟಪದಿ ಕಂತು ಸಿಂಹ ವಿ
ಷ್ಟರದಲಿ ಕುಳಿತನೋಲಗದಿ ೩

ಶ್ರೀಕೃಷ್ಣ ಸಕಲ ಯಾದವರನ್ನು ಬೀಳ್ಕೊಟ್ಟು ತನ್ನ ಆರಮನೆಯೊಳಕ್ಕೆ ಹೋಗಲು ಇತ್ತ ಮನ್ಮಥ ಚಂದ್ರಕಾಂತ ಶಿಲೆಯ ಮಂಟಪದಲ್ಲಿರುವ ಸಿಂಹಾಸನದಲ್ಲಿ ಕುಳಿತ.

ವಾಮದಕ್ಷಿಣ ಭಾಗದಲಿ ಮುದ್ದುವೆಂಗಳ
ಸ್ತೋಮ ನಿಂದಿರೆ ಸಾಲಾಗಿ

ಹೇಮದಂಡಾನ್ವಿತೆಯರು ನಿಂದಿರ್ದರು
ಕಾಮನ ಕೈವಾರಿಸುತ್ತ ೪

ಎಡಬಲ ಭಾಗಗಳಲ್ಲಿ ಮುದ್ದು ಹೆಣ್ಣುಗಳ ಗುಂಪು ಸಾಲಾಗಿ ನಿಂತಿರಲು, ಚಿನ್ನದ ದಂಡ ಹಿಡಿದು ನಿಂತಿದ್ದ ವನಿತೆಯರು ಮನ್ಮಥನನ್ನು ಹೊಗಳುತ್ತಿದ್ದರು.

ಜಂಭಭೇದಿಯ ಮಾನಮರ್ದನ ಜಯ ನಿಟಿ
ಲಾಂಬಕ ತಪೋಹರ ಜಯತು
ಪೊಂಬಸಿರನ ಭಾವ ಬೀಯಗ ಜಯತೆಂದು
ಶಂಬರಾರಿಯ ಹೊಗಳಿದರು ೫

ಇಂದ್ರನ ಮಾನಮರ್ದನ ಜಯತು, ಹಣೆಗಣ್ಣನ ತಪಧ್ವಂಸಿ ಜಯತು, ಬ್ರಹ್ಮನ ಭಾವ ಬೀಯಗ ಜಯತು ಎಂದು ಶಂಬರಧ್ವಂಸಿಯನ್ನು ಹೊಗಳಿದರು.

ನೇಸರ ಗರ್ವ ಪರ್ವತ ವಜ್ರ ಜಯತು ಪ
ರಾಶರ ಗೂಢ ವಿಭಾಡ
ದೋಷಾಕರಧರ ತಪೋಭಂಗ ಪರಾಕೆಂದು
ಪೂಸರನನು ಹೊಗಳಿದರು ೬

ಸೂರ್ಯನ ಗರ್ವಪರ್ವತ ವಜ್ರ ಜಯತು, ಪರಾಶರ ಮುನಿಯ ರಹಸ್ಯ ಭೇದಕ ಜಯತು, ಚಂದ್ರಶೇಖರ ತಪೋಭಂಗ ಪರಾಕು ಎಂದು ಹೂಬಾಣನನ್ನು ಹೊಗಳಿದರು.

ನಾಡೊಳು ಹನುಮಂತ, ಶುಕ, ಸಿದ್ಧರಾಮರ
ಕೋಡಗ ಮರುಳ್ಗಳೆಂದುಳಿದು
ರೂಢ ನಿರ್ಜರ ನರೋರಗರ ಭಂಗಿಸುತಿರ್ಪ
ಗಾಡಿಕಾರನ ಹೊಗಳಿದರು ೭

ನಾಡಿನಲ್ಲಿ ಹನುಮಂತ, ಶುಕ,ಸಿದ್ಧಾರಾಮರ ಮಂಗಮರುಳುಗಳು ಎಂದು ಬಿಟ್ಟುಕೊಟ್ಟು, ಪ್ರಸಿದ್ಧ ದೇವರನ್ನು , ನರರನ್ನು, ನಾಗರನ್ನು ಭಂಗಿಸುವ ಸುಂದರನನ್ನು ಹೊಗಳಿದರು.

ಎತ್ತ ಬೀಸಿದ ಗಾಳಿ ಅತ್ತ ಮಲೆತಿರ್ದ
ಮೊತ್ತದ ವರ ಜಿತೇಂದ್ರಿಯರ

ತೊತ್ತಳದುಳಿದ ಧೀರೋದಾತ್ತ ಜಯತೆಂದು
ಚಿತ್ತಜಾತನ ಹೊಗಳಿದರು ೮

ಗಾಳಿ ಎತ್ತ ಬೀಸಿದರೆ ಅತ್ತ ಮಲೆತು ನಿಂತ ಜಿತೇಂದ್ರಿಯರ ಸಮೂಹವನ್ನು ತೊತ್ತಳ ತುಳಿದ ಧೀರೋದಾತ್ತನೆಂದು ಮನಸಿಜನನ್ನು ಹೊಗಳಿದರು.

ಸೆರಗು ಸಂಭಾಳಿಕೆ ಬಹುಭೂಷಣಗಳೆ
ಚ್ಚರಿಕೆ ಮೇಲಷ್ಟಾವಧಾನ
ಹೆರೆನೊಸಲಬಲೆಯರ್ದಿಟ್ಟಿ ಪರಾಕೆಂದು
ಶರ ಪಂಚಕನ ಪೊಗಳಿದರು ೯

ಸೆರಗು ಎಚ್ಚರ, ಒಡವೆಗಳು ಎಚ್ಚರ, ಎಂಟು ಅವಧಾನ(ಎಚ್ಚರಿಕೆ) ಶಶಿನೊಸಲ ಅಬಲೆಯರು ಎಚ್ಚರಿಕೆ ಎಂದು ಪಂಚಬಾಣನನ್ನು ಹೊಗಳಿದರು.

ಗಾಣೆಯರುಗಳ ಚಿತ್ತೈಸು ನರ್ತನದ ಸು
ಜಾಣೆಯರುಗಳ ಚಿತ್ತೈಸು
ವೀಣಾಪಾಣಿಯರುಗಳ ಚಿತ್ತೈಸು ಪೊ
ಬಾಣ ಚಿತ್ತೈಸೆಂದರೊಲಿದು ೧೦

ಗಾನಗಾರ್ತಿಯರನ್ನು ಚಿತ್ತೈದು, ನರ್ತನಗಾತಿಯರನ್ನು ಚಿತ್ತೈಸು, ವೀಣಾಪಾಣಿ ವಿಲಾಸಿನಿಯರನ್ನು ಚಿತ್ತೈಸು ಎಂದು ಹೂಬಾಣನನ್ನು ಹೊಗಳಿದರು.

ಗುತ್ತಿಗೆವಿಡಿದಂತೆ ನೆರೆ ಸಾಧಿಸಿದ ಅರು
ವತ್ತು ನಾಲ್ಕು ಬಿಜ್ಜೆಗುರುಹ
ವೃತ್ತಕುಚಾನ್ವಿತೆಯರ ಪರಿಖೆಯ ನೋಡು
ಚಿತ್ತಯಿಸೆಂದರಂಗಜಗೆ ೧೧

ಗುತ್ತಿಗೆ ಹಿಡಿದವರಂತೆ ಅರುವತ್ತು ನಾಲ್ಕು ವಿದ್ಯೆಗಳನ್ನು ಸಾಧಿಸಿ ಸಿದ್ಧಿ ಪಡೆದ ಬಟ್ಟಮೊಲೆಯಪರ ಕಂದಕದಾಳ ನೋಡಿ ಚಿತ್ತೈಸು ಎಂದರು ಮನ್ಮಥನಿಗೆ

ಸಕಲ ಕಲಾಭಿಜ್ಞೆಯರ ಕುಸ್ತರಿಸುತ್ತೆ
ಮಕರ ಧ್ವಜನು ತನ್ನ ಸತಿಯ
ಮುಖ ಪದ್ಮವ ನೋಡಿ ವಿಷಾಯಾತುರದಿಂ
ಪ್ರಕಟದಿ ಮಾತನಾಡಿದನು ೧೨

ಎಲ್ಲ ಕಲಾಭಿಜ್ಞೆಯರನ್ನು ಉಪಚರಿಸುತ್ತ ಮನ್ಮಥನು ತನ್ನ ಪತ್ನಿಯ ಮುಖಕಮಲವನ್ನು ನೋಡಿ ವಿಷಯಾತುರದಿಂದ ಮಾತನಾಡಿದನು.

ನುಡಿಸಿದ ಕೆಲಬರ ನೋಡಿ ವಿನಯದಿ ತೃಪ್ತಿ
ವಡಿಸಿದ ಪೆಣ್ಮನೋವ್ಯಥೆಯ
ಕೆಡಿಸಿದ ಬೆಮರ್ವನಿಗಳನೆಲ್ಲರಿಗೋತು
ಕೊಡಿಸಿದ ಸಕಲ ಸಂಪದವ ೧೩

ಕೆಲವರನ್ನು ಮಾತನಾಡಿಸಿದ, ಕೆಲವರನ್ನು ನೋಡಿ ವಿನಯದಿಂದ ತೃಪ್ತಿ ಪಡಿಸಿದ, ಹೆಣ್ಣಿನ ಮನೋವ್ಯಥೆಯನ್ನು ಹೋಗಲಾಡಿಸಿದ, ಪ್ರೀತಿಯಿಂದ ಎಲ್ಲರಿಗೂ ಸಂಪದ ನೀಡಿದ

ಸೆಳೆನಡುವಿಂಗೆ ಕಕ್ಕಸವೆತ್ತ ಬಲ್ಮೊಲೆ
ತಳೆದ ಹೆಂಡತಿಯ ಕೈವಿಡಿದು
ಕಳವೆತ್ತ ಕಂದರ್ಪ ಮಣಿಸೊಡರ್ವೆಳಗಿನ
ನಿಳಯವ ಪೊಕ್ಕನರ್ತಿಯಲಿ ೧೪

ಸೆಳೆ(ಕಂಬಿ, ಸರಳು) ನಡುವಿಗೆ ಕಾಠಿಣ್ಯದ ಪೆರ್ಮೊಲೆ ಹೊಂದಿದ ಹೆಂಡತಿಯ ಕೈಯನ್ನು ಹಿಡಿದು, ಕಾಂತಿಯುಕ್ತ ಕಂದರ್ಪ ರತ್ನದೀಪಗಳ ಬೆಳಕುಳ್ಳ ನಿಲಯ ಹೊಕ್ಕನು.

ಚಿತ್ತರಿಸಿದ ಗೋಡೆ ಕಂಬ ಚಾವಡಿ ಹೊನ್ನ
ಪುತ್ತಳಿ ಮದನಕೈ ರತ್ನ
ತೆತ್ತಿಸಿದಮಲ ಬೋದಿಗೆ ಲೋವೆ ಪಲಗೆಯೊ
ಳ್ಮುತ್ತಿನ ಕುಚ್ಚುಗಳ ಮೆರೆದವು ೧೫

ಚಿತ್ರಿಸಿದ ಗೋಡೆ, ಕಂಬ, ಚಾವಡಿ, ಚಿನ್ನದ ಬೊಂಬೆ, ಮದನಕೈ, ರತ್ನ ಕೀಲಿತ ಬೋದಿಗೆ(ಕಂಬದ ಮೇಲೆ ತೊಲೆಯನ್ನು ಕೂಡಿಸಲು ಹಾಕಿರುವ ಆಸರೆಯ ಆಧಾರ) ಲೋವೆ (ಛಾವಣಿಯ ಮಟ್ಟದಲ್ಲಿ ಮಾಳಿಗೆ ಮನೆಯ ಹೊರಭಾಗಕ್ಕೆ ಚಾಚಿಕೊಂಡಿರುವ ಚಪ್ಪಡಿಗಲ್ಲು) ಹಲಗೆಗಳಲ್ಲಿ ಮುತ್ತಿನ ಕುಚ್ಚುಗಳು ಮೆರೆದವು.

ಜಾಜಿ ಮಲ್ಲಿಗೆ ಮೊಲ್ಲೆ ಸುರಹೊನ್ನೆ ಸಂಪಿಗೆ
ಪೂಜೊಂಪೆ ಸುರಗಿ ಸೇವಂತಿ
ರಾಜಿಪ ನಿರ್ಜರ ಸುಮ ಮಾಲೆ ಕಣ್ಣೆದುರು
ರಾಜಿಸಿದವು ರತೀಶ್ವರನ ೧೬

ಜಾಜಿ, ಮಲ್ಲಿಗೆ, ಮೊಲ್ಲೆ, ಸುರಹೊನ್ನೆ, ಸಂಪಿಗೆ, ಸುರಗಿ, ಸೇವಂತಿಗೆಗಳ ಹೂ ಗೊಂಚಲುಗಳು ರತೀಶ್ವರನ ಕಣ್ಣೆದುರು ರಾರಾಜಿಸಿದವು.

ಗಂಧಸಂಯುಕ್ತ ಮಾಲಿಕೆಗಳು ಮೃಗಝುಲ್ಲಿ
ಕುಂದಣ ಮೊಗಪಿನಿಂದೆಸೆವ
ಬಂದಿ ಆಣಿ ಮುತ್ತಿನ ಕುಚ್ಚು ಮೇಲ್ಕಟ್ಟಿ
ನಿಂದ ಚೆಲ್ವಾದುದಾ ನಿಲಯ ೧೭

ಸುಗಂಧದ ಮಾಲಿಕೆಗಳು, ಕಸ್ತೂರಿಯ ಲೇಪನದ್ರವ್ಯ, ಅಪರಂಜಿಯ ಮೋಪಿನಿಂದ (ನಡುಭಾಗದ ತುದಿ) ಕಂಗೊಳಿಸುವ ಬಂದಿ (ತೋಳಬಂದಿ)ಗೆ ಇಳಿಬಿಟ್ಟ ಮುತ್ತಿನ ಕುಚ್ಚುಗಳಿಂದ ಸಿಂಹಾಸನಕ್ಕೆ ಹೊದಿಸಿರುವ ಬಟ್ಟೆಗಳಿಂದ ಮನೆ ಸುಂದರವಾಗಿ ಗೋಚರಿಸತೊಡಗಿತು.

ಕಾಂಚನ ನವರತ್ನ ಕೀಲಿತ ಶಕುನಿಯಾ
ಮಂಚಕೆ ಬಿಗಿದ ಬೆಳ್ವಟ್ಟೆ
ಅಂಚೆದುಪ್ಪಳ ತಲ್ಪ ಮೃದುವಾಸಿನ ಮೇಲೆ
ಪಂಚಾಸ್ತ್ರ ಕುಳಿತನುತ್ಸವದಿ ೧೮

ಚಿನ್ನ, ನವರತ್ನಖಚಿತ ಶಕುನಿ(ಪಕ್ಷಿ ವಿಶೇಷ)ಯ ಮಂಚಕ್ಕೆ ಬಿಗಿದ ಬಿಳಿಬಟ್ಟೆ, ಹಂಸದ ತುಪ್ಪುಳ(ಪುಕ್ಕ)ದ ಹಾಸಿಗೆ, ಕೋಮಲವಾದ ಹಾಸುವಸ್ತ್ರದ ಮೇಲೆ ಪಂಚಬಾಣ ಆಸೀನನಾದ.

ಚೆಂಗಣಿಗಿಲೆ ನಂದ್ಯಾವರ್ತ ದವನ ಬೆ
ಳ್ದಿಂಗಳ ಸಖಿ ಇರವಂತಿ
ಹೊಂಗೇದಗೆ ಅದಿರ್ಗಂತಿ ಕಮ್ಮಲರ್ಗಳ
ತೊಂಗಲು ಮೆರೆದವಗ್ರದಲಿ ೧೯

ಕೆಂಪು ಕಣಗಿಲೆ, ನಂದ್ಯಾವರ್ತ(ನಂದಿಬಟ್ಟಲು ಹೂ), ದವನ(ಜವನ),

ಬೆಳದಿಂಗಳ ಸಖಿ ಇರವಂತಿ (ಮಲ್ಲಿಗೆಯಂಥ ಪುಷ್ಪವಿಶೇಷ), ಹೊಂಗೇದಗೆ(ಹೊಂಬಣ್ಣದ ತಾಳೆಗರಿ) ಅದಿರ್ಗಂತಿ(ಮಾಧವಿ ಪುಷ್ಪ) ಮೊದಲಾದ ಸುಗಂಧ ಪುಷ್ಪಗಳ ಗೊಂಚಲು ಚಿತ್ತಾಕರ್ಷಕವಾಗಿದ್ದವು

ಪೀನ ಕುಚಾನ್ವಿತೆ ಋತು ದೆಸೆಯಿಂದ ಶುದ್ಧ
ಸ್ನಾನವ ಮಾಡಿ ಕೆಯ್ಗೈದು
ಮೀನಧ್ವಜನ ಮಂಚವ ಸಾರ್ದು ನಿಂದಿರ್ದ
ಳೇನೆಂಬೆನವಳ ಚೆಲ್ವಿಕೆಯ ೨೦

ರತಿ ಮುಟ್ಟಾಗಿದ್ದ ಪ್ರಯುಕ್ತ ಸ್ನಾನ ಮಾಡಿ ಅಲಂಕರಿಸಿಕೊಂಡು ಮನ್ಮಥನ ಮಂಚದ ಬಳಿ ನಿಂತಿದ್ದಳು. ಅವರ ಚೆಲ್ವಿಕೆ ಅವರ್ಣನೀಯ.

ಕಡೆಯಾಣಿ ಚಿನ್ನದ ಪ್ರತಿಮೆಗೆ ಮಿಗೆ ಪುಳಿಯ
ತೊಡೆದೊಪ್ಪವಿಕ್ಕಿದಂದದಲಿ
ಬಡನಡು ಬಟ್ಟ ಬಲ್ಮೊಲೆ ಮುದ್ದು ಮೊಗದಿ ರಯ್ಯ
ವಡೆದಿರ್ದಳೇನ ಬಣ್ಣಿಸುವೆ ೨೧

ಅಪರಂಜಿ ಚಿನ್ನದ ಪ್ರತಿಮೆಗೆ ಹುಣಿಸೆಹಣ್ಣಿನ ಹುಳಿಯಿಂದ ಉಜ್ಜಿ ಒಪ್ಪವಿಕ್ಕಿದ ರೀತಿಯಲ್ಲಿ ಬಡನಡು, ದುಂಡುಮೊಲೆ, ಗುಂಡುಮುಖದಿಂದ ಸುಂದರವಾಗಿ ಕಾಣುತ್ತಿದ್ದಳು.

ಭಾರತಿ ಮೊದಲಾದ ಸುರವೆಣ್ಗಳೊಳು ಗಾಡಿ
ಕಾರತಿ ರೂಪ ಯೌವನದಿ
ಕೀರುತಿವಡೆದಿರ್ದ ರತಿ ಜಗನ್ಮೋಹನ
ಮೂರುತಿ ಕಂಗೊಳಿಸಿದಳು ೨೨

ಭಾರತಿ(ಸರಸ್ವತಿ) ಮೊದಲಾದ ದೇವಲೋಕದ ಹೆಣ್ಣುಗಳಲ್ಲಿ ರೂಪ ಯೌವನಗಳಲ್ಲಿ ಸುಂದರಿ ಎಂದು ಹೆಸರು ಪಡೆದಿದ್ದ ರತಿ ಜಗನ್ಮೋಹನ ಸತಿಯಾಗಿ ಕಂಗೊಳಿಸಿದಳು.

ಸಲೆ ಲೋಕತ್ರಯವ ಮೋಹಿಪ ಸತ್ಕಾಮ
ಕಲೆಯಿಂದ ಕಾತನ ಕಣ್ಗೆ

ಮೊಲೆಯ ಸುಧಾಳ ವೃತ್ತತೆಯಿಂದ ದ್ವಿತಿಯ ಸಂ
ಕಲೆಯನಿಕ್ಕಿದಳಾಯತಾಕ್ಷಿ ೨೨

ಮೂರು ಲೋಕಗಳನ್ನು ಮೋಹಿಸುವ ಕಾಮನ ಕಣ್ಣಿಗೆ, ಕಣ್ಣು ಕುಕ್ಕುವ ಕಾಂತಿಯ ಕುಚವೃತ್ತತೆಯಿಂದ ಪತಿಗೆ ಸಂಗಾತಿ ಶೃಂಖಲೆ ತೊಡಿಸಿದಳು ರತಿ.

ತುರುಗೆವೆಗಣ್ಣ ಕಟಾಕ್ಷ ಕೆಂಬಲ್ಗಳ
ಮಿರುಗುವ ತೊಂಡೆವಣ್ದುಟಿಯ
ಬೆರಗಿಂದೆ ಮಾತಾಡಿದಳು ಬಂದುಗೆವಾಯ
ನರುಗಂಪು ಸೂಸಲಂಗಜಗೆ ೨೪

ದಟ್ಟ ರೆಪ್ಪೆಗೂದಲ ಕಟಾಕ್ಷ(ಕಡೆಗಣ್ಣು)ದಿಂದ, ಮಿರುಗುವ ಕೆಂಪು ಹಲ್ಲುಗಳಿಂದ ತೊಂಡೆ ಹಣ್ ತುಟಿಯಿಂದ ಬಂದುಗೆ ಬಾಯಿಯ ನರುಗುಂಪು ಅಂಗಜಗೆ ಸೂಸುವಂತೆ ಮಾತಾಡಿದಳು.

ವನಿತಾಶಿರೋಮಣಿ ಬಿನ್ನವಿಸಿದೊಡಿಕ್ಷು
ಧನುರ್ಧರ ಕೇಳ್ದು ಕಾತರಿಸಿ
ಇನಿವಾತುಗಳಿಂದ ನೆರೆದಿರ್ದ ಸದ್ವಿಳಾ
ಸಿನಿಯರ ಹೋಗೆಂದ ನಗುತ ೨೫

ಸತಿ ಶಿರೋಮಣಿ ವಿನಂತಿಸಿಕೊಂಡಾಗ ಕರ್ಬುಬಿಲ್ಲ ಕೇಳಿ ಕಾತರಿಸಿ ಸಿಹಿಮಾತುಗಳಿಂದಲೇ ನೆರೆದಿದ್ದ ವಿಳಾಸಿನಿಯರನ್ನು ಅಲ್ಲಿಂದ ಹೋಗಲು ಹೇಳಿದ.

ವರನ ವಾಕ್ಯವ ಕೇಳ್ದು ರತಿ ತೋಷಗೊಂಡುಪ
ಚರ ವಿಳಾಸಿನಿಯರೆಲ್ಲರನು
ತರವರಿತುಪಕರಣಂಗಳ ನಿರಿಸೆಂದು
ಕರ ಸಂಜ್ಞೆಯೊಳು ಪೇಳಿದಳು ೨೬

ಗಂಡನ ಮಾತನ್ನು ಕೇಳಿ ರತಿ ಉಪಚಾರದ (ಸೇವೆಯ) ವಿಳಾಸಿನಿಯರಿಗೆ ಅವಶ್ಯ ಉಪಕರಣಗಳನ್ನು ಇರಿಸೆಂದು ಕೈಸಂಜ್ಞೆಯಿಂದ ಹೇಳಿದಳು.

ಪೊಂಬರಿವಾಣದಿ ಪೋಳು ಮಣಿಮಯ ಖಚಿತ
ಸಂಬಳಿಗೆಯಲಿ ಪರ್ಣ ಚೂರ್ಣ
ಕೊಂಬು ಕರ್ಪೂರ ಕರಂಡವ ಸ್ಮರನ ತಲೆ
ಗಿಂಬಿನೊಳು ತಂದಿರಿಸಿದರು ೨೭

ಚಿನ್ನದ ಹರಿವಾಣದಲ್ಲಿ ಹೋಳಡಕೆ, ರತ್ನಖಚಿತ ಪಾತ್ರೆಯಲ್ಲಿ ವೀಳೆಯದೆಲೆ, ಸುಣ್ಣದ ಕೊಂಬು(ಡಬ್ಬಿ) ಕರ್ಪೂರ ಕರಂಡ(ಭರಣಿ) ಮನ್ಮಥನ ತಲೆದೆಸೆಯಲ್ಲಿ ತಂದಿರಿಸಿದರು.

ಗಂಗೋದಕ ಹೊಜೆ ಘನರತ್ನಕೀಲಿತ
ಪಿಂಗಾಣಿ ಗಂಧಲರ್ದಟ್ಟೆ
ಹೊಂಗಾಳಾಂಜಿಯ ಹೊಳೆವ ಬಿಜ್ಜಣಿಗೆಯ
ಹೆಂಗಳು ತಂದಿರಿಸಿದರು ೨೮

ನೀರಿನ ಹೂಜಿ, ರತ್ನಖಚಿತ ಪಿಂಗಾಣಿ ಗಂಥ ಪುಷ್ಪಗಳ ತಟ್ಟೆ, ಉಗುಳುವ ಪಾತ್ರೆ, ಬೀಸಣಿಗೆಗಳನ್ನು ಹೆಣ್ಣುಗಳು ತಂದಿಟ್ಟರು

ಭಿನ್ನವಿಲ್ಲದ ಸಂಭಾರಾನುಕೂಲಕೆ
ಸನ್ನಾಹಗೆಯ್ದು ದೀಪ್ತಿಯ
ಹೊನ್ನಪುತ್ತಳಿಯ ಕೈಯೆಡೆಗೊಟ್ಟು ಬೀಳ್ಕೊಂಡು
ಚನ್ನೆಯರು ಪೊರಮಟ್ಟರಾಗ ೨೯

ಅಭಿನ್ನ ಸಾಮಗ್ರಿಗಳ ಸಹಾಯಕ್ಕೆ ಸಜ್ಜುಗೊಳಿಸಿ, ರಶ್ಮಿಯನ್ನು ಹೊನ್ನ ಬೊಂಬೆಯ ಕೈಯೆಡೆಗೊಟ್ಟು ಬೀಳ್ಕೊಂಡು ಚೆನ್ನೆಯರು ಹೊರಹೊರಟರು.

ಚಂದಿರವದನೆಯರು ಚಾರುಕವಾಟಗಳ
ಬಂಧಿಸಿ ಪೊರಭವಂತಿಯಲಿ
ನಿಂದಿರಲೊಳಗೆ ಕಾಮನ ಕೂಡೆ ಕಸ್ತೂರಿ
ಗಂಧಿ ಕೈಮೇಳವಿಸಿದಳು ೩೦

ಚಂದ್ರಮುಖಿಯರು ಸುಂದರ ಬಾಗಿಲುಗಳನ್ನು ಮುಚ್ಚಿ ಹೊರ ಅಂಗಳದಲ್ಲಿ ನಿಂತಿರಲು, ಒಳಗೆ ಕಾಮನ ಜೊತೆ ಕಸ್ತೂರಿಗಂಧಿ ಕೈಗೆ ಕೈ ಜೋಡಿಸಿದಳು.

ಕುಂದಣ ತಬಕದೊಳಿರ್ಪ ಬೆಳ್ಳೆಲೆಗಳನು
ಒಂದರೊಳೊಂದ ಕೇವಣಿಸಿ
ಹೊಂದಾವರೆಯಂಥ ವಾಮಕರದೊಳಾಂತ
ಚೆಂದವನೇನ ಬಣ್ಣಿಸುವೆ ೩೧

ಚೊಕ್ಕಚಿನ್ನದ ತಟ್ಟೆಯಲ್ಲಿದ್ದ ಬಿಳಿಎಲೆಗಳನ್ನು ಒಂದರೊಳಗೊಂದ ಸೇರಿಸಿ ಹೊಂದಾವರೆಯಂಥ ಸುಂದರ ಕೈಯೊಳು ಹಿಡಿದ ಪರಿ ನಿಜಕ್ಕೂ ಅಚ್ಚರಿ.

ತನ್ನಯ ರೂಪಿಂಗೆ ಸೆಣಸುವ ಹೆಣ್ಣುಗಳ
ಬೆನ್ನ ಪಟ್ಟೆಯನೆತ್ತುವಂತೆ
ರನ್ನದುಂಗುರವ ನಿಡುನಡುವೆರಲುಗುರಿಂದೆ
ಚೆನ್ನೆಲೆಯ ನಾರನೆತ್ತಿದಳು ೩೨

ತನ್ನ ರೂಪಿಗೆ ಸೆಣಸುವ ಅನ್ಯ ಹೆಣ್ಣುಗಳ ಬೆನ್ನಪಟ್ಟೆ (ಚರ್ಮ, ತೊಗಟೆ)ಯನ್ನು ಎತ್ತುವಂತೆ, ರನ್ನದುಂಗುರ ಹಾಕಿದ್ದ ನಿಡಿದಾದ ನಡುಬೆರಳಿನ ಉಗುರಿನಿಂದ ಚಂದದ ಎಲೆಯ ನಾರನೆತ್ತಿದಳು.

ಕೇಳಿಯೊಳಿನಿಯಂಗೆ ಸುಖವನೆಯ್ದಿಸದೆ ಭ
ಡಾಳಿಸದವಳ ಪೇರುರವ
ಬಾಳಿನೊಳು ಸಿಗಿವಂತೆ ಕೂರುಗುರಿನಿಂದ
ಸೀಳಿದಳೊಂದು ಬೆಳ್ಳೆಲೆಯ ೩೩

ರತಿಕ್ರೀಡೆಯಲ್ಲಿ ಮನದನ್ನನಿಗೆ ಸುಖವನ್ನು ಕೊಡದೆ ಉಗ್ರರೂಪ ತಾಳಿದ ಅಗಲವಾದ ಎದೆಯನ್ನು ಕತ್ತಿಯಿಂದ ಸೀಳುವಂತೆ ಹರಿತವಾದ ಉಗುರಿನಿಂದ ಒಂದು ಬೆಳ್ಳೆಲೆಯನ್ನು ಸೀಳಿದಳು.

ಬಣ್ಣದಾವರೆ ಮೊಗ್ಗೆ ಮೊಲೆಯ ಭಾಮಿನಿಯನ್ನ
ಕಣ್ಣಾರೆ ಕಂಡು ಮಚ್ಚರಿಪ
ಹೆಣ್ಣಾವಳವಳ ಮೂಗಿನ ಮೇಲೆ ತೊಡೆವಂತೆ
ಸುಣ್ಣವನೆಲೆಗೆ ಪೂಸಿದಳು ೩೪

ಬಣ್ಣದಾವರೆಯ ಮೊಗ್ಗುಮೊಲೆಯ ಭಾಮಿನಿಯನ್ನು ಕಣ್ಣಾರೆ ಕಂಡು ಮಚ್ಚರಿಸುವ ಹೆಣ್ಣಾವಳಿಹಳು, ಅವಳ ಮೂಗಿನ ಮೇಲೆ ಪಟ್ಟೆ ಎಳೆಯುವಂತೆ ಎಲೆಗೆ ಸುಣ್ಣ ಹಚ್ಚಿದಳು.

ತಿಳಿದು ನೋಡಲು ಮಧ್ಯರಾತ್ರಿಯನೊಂದರೆ
ಗಳಿಗೆಯ ಮಾಡಿ ಕತ್ತುರಿಯ
ಗುಳಿಗೆ ಸೇರಿದ ಹೋಳ ಕಾಂತನ ಸಿರಿಹಸ್ತ
ನಳಿನಕೆ ಕೊಟ್ಟಳಳ್ತಿಯಲಿ ೩೫

ಮಧ್ಯ ರಾತ್ರಿಯನ್ನು ಒಂದರಗಳಿಗೆಯ ಮಾಡಿ, ಕಸ್ತೂರಿ ಗುಳಿಗೆ ಸೇರಿದ ತಾಂಬೂಲದ ಮಡಿಕೆ(ಪೊಟ್ಟಣ)ಯನ್ನು ಇನಿಯನಿಗೆ ಕೊಟ್ಟಳು ಪ್ರೀತಿಯಿಂದ.

ಸಿತಪರ್ಣ ಗಳಿಗೆವಿಡಿದ ಹೋಳ ಕೃಷ್ಣಾ
ರ್ಪಿತವೆಂದು ವದನದೊಳಿಡಿದು
ಕೃತಪುಣ್ಯ ವರವಧೂಟಿಯ ಕೆಯ್ವಿಡಿದು ಮ
ನ್ಮಥ ತೊಡೆಯೆಡೆಗಡರ್ಚಿದನು ೩೬

ಹೋಳನ್ನಿಟ್ಟ(ಅಡಿಕೆ ಇಟ್ಟ) ಬಿಳಿ ಎಲೆಯ ಮಡಿಕೆಯನ್ನು ಕೃಷ್ಣಾರ್ಪಿತವೆಂದು ಬಾಯೊಳಗಿಟ್ಟುಕೊಂಡು, ತನ್ನ ಪುಣ್ಯಸ್ತ್ರೀಯ ಕೈಯನ್ನು ಹಿಡಿದುಕೊಂಡು, ತೊಡೆಯ ಮೇಲಕ್ಕೆಳೆದುಕೊಂಡನು.

ವಾಮಹಸ್ತವ ತುರುಬಿನೊಳಿಟ್ಟು ಬಲಗೈಲಿ
ಪ್ರೇಮದಿಂ ಚುಬುಕಾಗ್ರವಿಡಿದು
ಕೋಮಲವಡೆದ ಬಂದುಗೆವಾಯ್ಗೆ ಪೋಳ್ದುಂಬಿ
ಭ್ರಾಮಕವಡೆದು ಚುಂಬಿಸಿದ ೩೭

ಎಡಗೈಯನ್ನು ತುರುಬಿನಲ್ಲಿಟ್ಟು ಬಲಗೈಯಲ್ಲಿ ಗಲ್ಲವನ್ನು ಹಿಡಿದು ಬಂದುಗೆ ಬಾಯಿಗೆ ತಾಂಬೂಲದ ಹೋಳನ್ನು ತುಂಬಿ ಮನಸೇಚ್ಚೆ ಚುಂಬಿಸಿದ.

ನೆಟ್ಟನೆ ನಿರಿಗಳೆದುದು ಚಂದ್ರಗಾವಿಯ
ಬಟ್ಟಪಾವುಡೆ ಸಹವಾಗಿ
ಕಟ್ಟಾಯವಡೆದಿರ್ದಂಗಜನಲರ್ಗೋಲ
ತೊಟ್ಟ ಮೋಹನ ಶಕ್ತಿಯಂತೆ ೩೮

ಚಂದ್ರಗಾವಿಯ(ಕೆಂಪಂಚಿನ ಸೀರೆಯ)ನೆರಿಗೆಗಳು ಬಿಚ್ಚಿಕೊಂಡವು, ಒಳಗೆ ಹಾಕಿದ್ದ ಲಂಗ ಸಮೇತವಾಗಿ. ಪರಾಕ್ರಮ ಪರಾಕಾಷ್ಠೆಯಲ್ಲಿದ್ದ ಮನ್ಮಥ ಹೂಬಾಣ ತೊಟ್ಟ ಮೋಹನಶಕ್ತಿಯಂತೆ.

ಪೊಸವಗೆವಡೆದಿನಿಯಳ ರೂಪ ಕಂಡು ಸೈ
ರಿಸದೆ ಬರಸೆಳೆದಪ್ಪಿಕೊಂಡು
ವ್ಯಾಸ ಹೊಡೆದಂತೊಯ್ಯನೆ ಪಕ್ಕೆಗೊಳಿಸಿ ಸ
ದ್ವ್ಯಸನಕ್ಕೆ ಪ್ರಾರಂಭಿಸಿದ ೩೯

ಹೊಸಭಂಗಿಯ ಇನಿಯಳ ರೂಪವನ್ನು ಕಂಡು ಸೈರಿಸಲಾರದೆ ಬರಸೆಳೆದಪ್ಪಿಕೊಂಡು ವ್ಯಾಸ(ಗಣಿತದಲ್ಲಿ ವರ್ತುಲವನ್ನು ಸಮವಾಗಿ ವಿಭಜಿಸುವ ರೇಖೆ) ಎದ್ದು ಕಾಣುವಂತೆ ನೆಲೆಗೊಳಿಸಿ ಕಾಮೋದ್ದೀಪನ ಕಾರ್ಯಕ್ಕಿಳಿದನು.

ಪದತಳ ಪೆರ್ಬೆಟ್ಟು ಕಣಕಾಲ್ತೊಡೆ ಪೊಕ್ಕು
ಳೆದೆ ಮೊಲೆ ಭುಜ ತೋಳ್ಗಳ
ಅಧರಾಕ್ಷಿ ಕರ್ಣ ಪಾಲ ಪೆಗಲು ಬೆನ್ಗಳ
ಮದನಾಗಮದಿ ಚುಂಬಿಸಿದ ೪೦

ಅಂಗಾಲು, ಹೆಬ್ಬೆಟ್ಟು, ಕಣಕಾಲು, ತೊಡೆ, ಹೊಕ್ಕುಳ, ಎದೆ, ಮೊಲೆ, ಭುಜ, ತೋಳು, ತುಟಿ, ಕಣ್ಣು, ಕಿವಿ, ಹಣೆ, ಹೆಗಲು, ಬೆನ್ನುಗಳನ್ನು ಮದನಾಗಮದಂತೆ ಚುಂಬಿಸಿದ.

ತೊಂಡೆವಣ್ದುಟಿ ಪೀರ್ದಾಗ ಲೋಚನಯುಗ
ಬೆಂಡೆದ್ದು ನವಿರ್ಗುಡಿಗಟ್ಟಿ
ಪುಂಡರೀಕಾಕ್ಷಿಗೆ ನಾಣ್ಪೊಸರ್ದುದ ಕಂಡು
ಕೊಂಡನು ತವಕೋನ್ನತಿಯ ೪೧

ತೊಂಡೆ ಹಣ್ದುಟಿಯನ್ನು ಹೀರಿದಾಗ, ಕಣ್ಣುಗಳೆರಡೂ ಬೆಂಡಾಗಿ , ಕೂದಲು ನಿಮಿರಿ, ಲಜ್ಜೆ ಜಿನುಗಿದ್ದನ್ನು ಕಂಡು ಮನ್ಮಥ ತವಕಗೊಂಡನು.

ಸುದತಿ ಶಿರೋಮಣಿ ಸುರತಕ್ಕೆ ಈ ಪ್ರಪಂ
ಚದಲಿ ಮೇಲಾದುದ ಕಂಡು
ಹದಗೊಂಡಳೆಂಬ ತಾತ್ಪರ್ಯದಿ ರತಿಗೊ
ಪ್ಪಿದ ಕಾಮ ಕಾಮಿನಿಯೊಡನೆ ೪೨

ಮನದನ್ನೆ ರನ್ನೆ ಸುರತಕ್ರೀಡೆಗೆ ತಾನೇ ಮೇಲೇರಿ ಬಂದುದನ್ನು ಕಂಡು ಹದಗೊಂಡಳು ಎಂಬ ತೀರ್ಮಾನದಿಂದ ತಾನೂ ಅನುಕೂಲವಾಗಿ ವರ್ತಿಸಿದನು.

ಗಾಢಾಲಿಂಗನ ಘನ ಝಣತ್ಕಾರ ಸ
ತ್ಕ್ರೀಡನ ತತ್ಕುಚಯುಗಳ
ಪೀಡಣ ಹಸ್ತವಿನ್ಯಸ್ತದಿ ರತಿಯೊಡ
ನೊಡರ್ಚಿದ ಕಾಮ ಲೀಲೆಯನು ೪೩

ಬಲವಾದ ಅಪ್ಪುಗೆ, ಗೆಜ್ಜೆಯ ಝಣತ್ಕಾರ, ಸುರತ ಕ್ರೀಡೆ, ಕೆಳಗಿಟ್ಟ ಹಸ್ತದಿಂದ ಸ್ತನದ್ವಯದ ಪೀಡಣಗಳಿಂದ ರತಿಯೊಡನೆ ಕಾಮಲೀಲೆಯನಾಡಿದನು.

ಎಂಬತ್ತು ನಾಲ್ಕು ಬಂಧಗಳಿಂ ಮೇಣದ
ಬೊಂಬೆಗಳಂತೆ ಮೈಮಣಿದು
ಮುಂಬರಿವರು ತಾಳ್ವರು ತವಕಿಪರು ಮೇಣ್
ಚುಂಬನಗೈವರರ್ತಿಯಲಿ ೪೪

ಎಂಭತ್ತುನಾಲ್ಕು ಸಂಭೋಗ ಭಂಗಿಗಳಿಂದ ಮೇಣದ ಬೊಂಬೆಗಳಂತೆ ಮೈಮಣಿಸಿ, ಮುನ್ನುಗ್ಗುವರು, ತಾಳುವರು, ತವಕಿಸುವರು ಮತ್ತು ಮುತ್ತಿಕ್ಕುವರು.

ಓರಂತೆ ಪೊಂಬಟ್ಟಲೊಳು ತುಂಬಿ ತೆಂಗಾಯ
ನೀರೊಳಗೆ ಸಕ್ಕರೆವೆರಸಿ
ಪೀರುವ ಸುರುಸುರು ಧ್ವನಿಯಂತೆ ದ್ವಿತಿಯ ಚೀ
ತ್ಕಾರವೊಪ್ಪಿರ್ದುದೇನೆಂಬೆ ೪೫

ಹೊಂಬಟ್ಟಲಲ್ಲಿ ತುಂಬಿದ ಸಕ್ಕರೆ ಬೆರೆಸಿದ ಎಳನೀರನ್ನು ಸುರುಸುರು ಎಂದು ಹೀರುವ ಸದ್ದಿನಂತೆ ಸಂಗಾತಿಯು ಚೀತ್ಕಾರ ಸಂತೃಪ್ತಿಯು ಪ್ರತೀಕವಾಗಿತ್ತು.

ಧಗೆವೆತ್ತು ಹಣಾಹಣಿಯಲಿ ಕೆಲೆವ ಲಾ
ವುಗೆಯಂತೆ ಗಳರವ ದ್ವಿತಿಯ
ಮಿಗೆ ಅರಗಿಳಿಯ ಮೆಲ್ನುಡಿಯಂತೆ ತೊದಳ್ನಾ
ಲಗೆಯಲಿ ಮಾತನಾಡುವರು ೪೬

ಹಣಾಹಣಿ ಜಗಳದಲ್ಲಿ ಧಗೆಯಿಂದ ಚೀರುವ ಲಾವುಗೆ ಪಕ್ಷಿಯಂತೆ ಸಂಗಾತಿಯ ಕೊರಳ ಗೊರಗೊರಸದ್ದು, ಬಳಿಕ ಅರಗಿಳಿಯ ಮೆಲುಮಾತಿನಂತೆ ತೊದಲು ನಾಲಗೆಯಲ್ಲಿ ಮಾತಿಗೆ ತೊಡಗುವರು.

ಕೈಮುಟ್ಟಿದೆಡೆಯೆಲ್ಲ ಕಡುನೇಮ ತಾಣತ
ನ್ನಿಮಿತ್ತ ನವಿರ್ಗುಡಿಗಟ್ಟಿ
ಕಾಮನರ್ಧಾಂಗಿಯ ಮನ ಮೂರ್ಛೆಯನ್ನೈದಿ ವಿ
ರಾಮ ದೊರಕಿತು ದಣಿವಿಂಗೆ ೪೭

ಕೈಮುಟ್ಟಿದ ಸ್ಥಳವೆಲ್ಲ ಬಹಳ ನೇಮದ ಸ್ಥಳ;ಆ ಕಾರಣದಿಂದ ರೋಮಾಂಚಿತಳಾಗಿ ಮೈನವಿರು ನಿಮಿರಿ ಕಾಮನಾರ್ಧಾಂಗಿಯ ಮನ ಮೂರ್ಛೆ ಹೋಗಿ,ದಣಿವಿಗೆ ಕೊಂಚ ವಿರಾಮ ದೊರಕಿತು.

ಹೊಂದೇಹವ ತಾಳ್ವ ನಾಗ ನಾಗಿಣಿ ಸುಪ್ರ
ಬಂಧದಿಂ ದಳೆದುಕೊಂಡಂತೆ
ಕಂದರ್ಪರತಿಯಾದಿ ಮಧ್ಯಾಂತ ಯೋಗಾ
ನಂದದಿ ಮೆರೆದೊರಗಿದರು ೪೮

ನಾಗ ನಾಗಿಣಿಯರು ಒಳ್ಳೆಯ ಬಂಧದಲ್ಲಿ ಪರಸ್ಪರ ಹೊಲಿದುಕೊಂಡಂತೆ ರತಿಮನ್ಮಥರು ಆದಿ ಮಧ್ಯ ಅಂತ್ಯಗಳಲ್ಲಿ ವಿವಿಧ ಹಂತದ ಆನಂದ ಹೊಂದಿದರು.

ಮನಮೂರ್ಛೆ ತಿಳಿದು ಮನ್ಮಥ ತನ್ನಿನಿಯಳ
ಸ್ತನ ಹೊಗರುಗುವ ಕಂಕಣವ
ಘನ ಸೌಭಾಗ್ಯವ ನೋಡಿ ಮುದ್ದಾಡಿ ಚುಂ
ಬನಗೈದ ತೊಂಡೆವಣ್ದುಟಿಯ ೪೯

ಮೂರ್ಛೆ ತಿಳಿದೆದ್ದ ಮನ್ಮಥ ಮನದನ್ನೆಯ ಮೊಲೆಯಿಂದೊಸರುವ ಕಂಕಣ(ನೀರಿನ ಕಣ, ಬೆವರ ಹನಿ)ವನ್ನು ನೋಡಿ ಮುದ್ದಾಡಿ ಮುತ್ತಿಟ್ಟನು.

ತುಡುಕಿದೆರೆಚ್ಚತ್ತು ತುರ್ಯದಿ ರತಿ ತನ್ನ
ಕೊಡಪಾನ ಮೊಲೆಯ ಮನ್ಮಥನ
ಪಿಡಿಗೈಗಡರ್ಚೆ ತನ್ನ ನುಣ್ದುಟಿವಾಯಲಿ
ಮಿಡುಕದೊಲು ಮೊಲೆಗುಡಿದ ರತಿಯ ೫೦

ತಬ್ಬಿ ಹಿಡಿದುಕೊಂಡರೆ ಎಚ್ಚೆತ್ತು ಅತಿ ವೇಗದಿಂದ ತನ್ನ ಕೊಡಮೊಲೆಯನ್ನು ಮನ್ಮಥನ ಹಿಡಿಗೈಗಳಿಗೆ ಕೊಡಲು ಅವನು ಮಿಡುಕದೆ ರತಿಯ ಮೊಲೆಗುಡಿದನು.

ಉದ್ದೀಪನ ತಲೆದೋರಲು ಕಂದರ್ಪ
ನೆದ್ದು ಕೈಕಾಲ್ಗಳ ತೊಳೆದು
ಮುದ್ದು ಮುಖಾನ್ವಿತೆ ರತಿದೇವಿ ಸಹಿತ ಒರ
ಗಿದ್ದನು ಮಣಿಮಂಚದೆಡೆಯಲಿ ೫೧

ಬೆಳಕು ತಲೆದೋರಲು ಮನ್ಮಥನೆದ್ದು ಕೈಕಾಲುಗಳನ್ನು ತೊಳೆದು ರತಿಯೊಡನೆ ರತ್ನಖಚಿತ ಮಂಚದೆಡೆಯಲ್ಲಿ ಒರಗಿದ್ದನು.

ಓಪಳ ಗುರುಕುಚಯುಗಳವ ಪುಂಡ್ರೇಕ್ಷು
ಚಾಪ ಕಣ್ಣಿಟ್ಟು ನಿಟ್ಟಿಸಲು
ಸ್ಥಾಪನೆಗೊಂಡಿರ್ದ ಬಾಲೇಂದುಗೆರೆ ಸ್ಪಷ್ಟ
ರೂಪವಾಗಿರ್ದುದೇನೆಂಬೆ ೫೨

ಪ್ರಿಯತಮೆಯ ದೊಡ್ಡ ಜೋಡಿ ಮೊಲೆಗಳತ್ತ ದೃಷ್ಟಿ ಹರಿಸಲು, ಸಂಸ್ಥಾಪಿತಗೊಂಡ ಅರ್ಧಚಂದ್ರಾಕೃತಿಯ ಉಗುರು ಮತ್ತು ಹಲ್ಲುಗಳ ಗೆರೆ ಸ್ಪಷ್ಟವಾಗಿ ಎದ್ದು ಕಾಣುತ್ತಿತ್ತು.

ಹಳೆಯೊಡಲುರಿದು ನೂತನ ದೇಹವ ಮತ್ತೆ
ತಳೆದುದ ಕಂಡು ಮುಂಕೊಂಡು
ಕೆಳಗೋಸುಗ ಬಂದನೆಂದು ಮನ್ಮಥನಂದು
ಎಳೆವೆರೆಗುಪಚಾರಗೈದ ೫೩

ಹಳೆಯ ದೇಹ ಉರಿದು ಹೋಗಿ, ಹೊಸದೇಹವನ್ನು ಮತ್ತೆ ಪಡೆದುದನ್ನು ಕಂಡು ಸ್ನೇಹಕ್ಕಾಗಿ ಮುಂದಾಗಿ ಬಂದನೆಂದು ಮನ್ಮಥ ಗೆರೆಪೆರೆಗೆ(ಗೆರೆ ರೂಪದ ಎಳೆಚಂದ್ರನಿಗೆ) ಉಪಚಾರ ಮಾಡಿದ.

ಗಂಧಕತ್ತುರಿಯನುಲೇಪನಗೆಯ್ದು ಒಲ
ವಿಂದ ಮನ್ಮಥ ತನ್ನ ಸತಿಯ
ಕುಂದಣ ವರ್ಣದ ಕುಚಗಿರಿಯಲಿ ನಖ
ಚಂದಿರನಿರಲಮರ್ದಪ್ಪಿದನು ೫೪

ಗಂಧ ಕಸ್ತೂರಿಯನ್ನು ಲೇಪಿಸಿ ಪ್ರೀತಿಯಿಂದ ತನ್ನ ಸತಿಯ ಅಪರಂಜಿ ಬಣ್ಣದ ಎದೆಗುಡ್ಡದ ಮೇಲೆ ಮೂಡಿ ಮೆರೆವ ಉಗುರ ಚಂದಿರನನ್ನು ಕಂಡು ಬಾಚಿ ತಬ್ಬಿದನು.

ತನ್ನ ಪ್ರಾರ್ಥನೆಗೆಯ್ದು ರತಿ ಕಾಮರಿಂಗೆ ಪ್ರ
ಸನ್ನತೆವೆತ್ತ ಪೂರ್ಣೇಂದು
ಹೊನ್ನಿನುಪ್ಪರಿಗೆಯ ವಾಟ ಪಂಜರದಲಿ
ಜೊನ್ನವ ಕರೆದನಳ್ತಿಯಲಿ ೫೫

ತನ್ನ ಪ್ರಾರ್ಥನೆ ಮಾಡಿದ ರತಿಮನ್ಮಥರಿಗೆ ಪ್ರಸನ್ನನಾದ ಪೂರ್ಣಚಂದ್ರ ಚಿನ್ನದುಪ್ಪರಿಗೆಯ ಇಳಿಜಾರಿನ ಗೂಡಿನ ಮೂಲಕ ಬೆಳದಿಂಗಳನ್ನು ಕರೆದನು.

ಚಾರಿವರಿದು ಚಂದ್ರ ಸುರಧೇನು ಕೂರ್ತ ಚ
ಕೋರಿ ವತ್ಸಗೆ ಮೊಲೆಗುಡಲು
ಪೂರಿತ ಕಟವಾಯೊಳಿಳಿವ ತಂಬಾಲೆನೆ
ಸೋರಿತು ಬೆಳುದಿಂಗಳಿಳೆಗೆ ೫೬

ಮುಂದುವರಿದು ಚಂದ್ರನೆಂಬ ಕಾಮಧೇನು ಪ್ರೀತಿಯಿಂದ ಚಕೋರಿ(ಬೆಳುದಿಂಗಳನ್ನು ಕುಡಿಯುವ ಹಕ್ಕಿ) ಕರುವಿಗೆ ಮೊಲೆಗುಡಿಸಲು ತುಂಬಿದ ಕಟಬಾಯಿಂದ ಇಳಿಯುವ ತಂಪಾದ ಹಾಲು ಎಂಬಂತೆ ಬೆಳದಿಂಗಳು ಇಳೆಗೆ ಸೋರಿಕ್ಕತೊಡಗಿತು.

ವಾರಿಧಿಸುತನ ರಥಚಕ್ರ ಸಡಿಲಲಿರುಳೋಜ
ಹೋರಾಡಿ ಹೊನ್ನ ಪಟ್ಟೆಯನು
ಸೇರಿಸಿ ಬಲಿದಂತೆ ವರ ಚಂದ್ರ ಪರಿವೇಷ
ರಾರಾಜಿಸಿತು ನೋಳ್ಪರಿಗೆ ೫೭

ಚಂದ್ರನ ರಥದ ಚಕ್ರ ಸಡಿಲಗೊಳ್ಳಲು ಇರುಳಿನ ಕಮ್ಮಾರ ಕಷ್ಟಪಟ್ಟು ಚಿನ್ನದ ಪಟ್ಟೆಯನ್ನು ಅದಕ್ಕೆ ಲಗತ್ತಿಸಿದಂತೆ ಚಂದ್ರನ ಸುತ್ತ ಪರಿವೇಷ ರಾರಾಜಿಸಿತ್ತು. ಗಾಡಿಯ ಚಕ್ರದ ಹೊಟ್ಟೆಮರ ಸವೆಯುತ್ತದೆ ಎಂದು ಚಕ್ರದ ಹೊರಭಾಗದಲ್ಲಿ ಸುತ್ತಲೂ ಕಮ್ಮಾರನಿಂದ ಕಬ್ಬಿಣದ ಪಟ್ಟ(ಪಟ್ಟೆ) ಬಿಡಿಸುವುದನ್ನು ಕನಕದಾಸರು ಇಲ್ಲಿ ಬಳಸಿಕೊಂಡಿದ್ದಾರೆ.

ನೀಲೋತ್ಪಲಗಾಡಿ ವಿರಹಿಗಳೆದೆಗೇಡಿ
ಜ್ವಾಲಾಂಬಿಕ ಪುತ್ರ ಶತ್ರು
ಹಾಲಹಲ ಬಂಧು ತ್ರಿದಶಾಮೃತ ಸಿಂಧು
ಲೋಲಾಕ್ಷಿ ನೋಡು ಪೂರ್ಣೇಂದು ೫೮

ಕನ್ನೈದಿಲೆಯ ಸುಂದರ ಗೆಣೆಕಾರ, ವಿರಹಿಗಳ ಎದೆಗೆಡಿಸುವ ಮೋಡಿಕಾರ, ಶಿವಪುತ್ರನ ಶತ್ರು, ವಿಷದ ಬಂಧು, ಅಮೃತದ ಸಿಂಧು(ಸಮುದ್ರ)ವಾದ ಪೂರ್ಣೇಂದುವನ್ನು ನೋಡು ಎಂದು ಮನ್ಮಥ ರತಿಗೆ ಹೇಳಿದನು.

ಅಚ್ಚವೆಳ್ದಿಂಗಳ ಸಿರಿಯಂತೆ ಮನದೊಳು
ಮಚ್ಚರವಿಲ್ಲದೆನ್ನೊಡನೆ
ಸ್ವಚ್ಛದೊಳಿರಬೇಕೆನುತ ಸಂಪ್ರೀತಿಯಿಂ
ದುಚ್ಚರಿಸಿದಳು ಮನ್ಮಥಗೆ ೫೯

ಅಚ್ಚ ಬೆಳದಿಂಗಳ ಐಸಿರಿಯಂತೆ ಮನಸ್ಸಿನಲ್ಲಿ ರವೆಯಷ್ಟು ಮಚ್ಚರವಿಲ್ಲದೆ ನನ್ನೊಡನೆ ಸ್ವಚ್ಛವಾಗಿರಬೇಕೆಂದು ಸಂಪ್ರೀತಿಯಿಂದ ಮನ್ಮಥನಿಗೆ ಉಚ್ಚರಿಸಿದಳು.

ಪಲ್ಲವಾಧರವ ಕರ್ದುಂಕಿ ಪೊಳೆವ ಕೆಂ
ಬಲ್ಲಿಗೆ ರಸದಂಬುಲವನು
ಮೆಲ್ಲಗೆ ಸಾರ್ಚೆ ನಾಲಗೆಯಿಂದ ರತಿದೇವಿ
ಬಲ್ಲಂತೆ ನಿಕ ಮಾಡಿದಳು ೬೦

ಚಿಗುರಿನ ತುಟಿಯನ್ನು ಕುಕ್ಕಿ ಹೊಳೆಯುವ ಕೆಂಪುಹಲ್ಲಿಗೆ ರಸದಂಬುಲವನ್ನು ಮೆಲ್ಲಗೆ ಇಟ್ಟು ರತಿದೇವಿ ನಾಲಗೆಯಿಂದ ನಿಕ(ನಿಷೇಕ, ಸೋಬನ)ಕಾರ್ಯಕ್ಕೆ ನಾಂದಿ ಹಾಡಿದಳು.

ಈ ತೆರೆದಿಂದಿರ್ವರು ಸಂಭೋಗಕ್ಕೆ
ಪ್ರೀತ್ಯಸ್ಥರಾಗಿ ತೆಕ್ಕೆಯಲಿ
ಭೂತೇಶ ಶಂಬರಾಸುರನ ಪ್ರಸಂಗವ
ಮಾತಾಡತೊಡಗಿದರೊಲಿದು ೬೧

ಈ ರೀತಿಯಲ್ಲಿ ಇಬ್ಬರೂ ಪ್ರೀತಿಯಿಂದ ಕೂಟಸ್ಥರಾಗಿ ಶಂಬರಾಸುರನ ಪ್ರಸಂಗವನ್ನು ಮಾತಾಡತೊಡಗಿದರು.

ಇರಲಾ ಸಮಯದೊಳೆಚ್ಚತ್ತು ನೀಲಕಂ
ಧರ ಕಲಕಂಠ ಕೂಗಿದವು
ಮೊರೆದವು ಷಟ್ಪದ ರಜನಿ ತಾ ಮೆಲ್ಲನೆ
ಸರಿದುದು ಪ್ರಭೆ ಮೂಡಲೊಡನೆ ೬೨

ಆ ಸಮಯದಲ್ಲಿ ಎಚ್ಚೆತ್ತ ನವಿಲುಗಳು ಕೋಗಿಲೆಗಳು ಕೂಗಿದವು, ದುಂಬಿಗಳು ಮೊರೆದವು, ಬೆಳಕು ಹರಿಯುತ್ತಲೇ ಕತ್ತಲು ಜಾರತೊಡಗಿತು.

ರೂಢಿಯೊಳದಿತಿಯ ಪುತ್ತನಂಬುಜಮಿತ್ರ
ನೋಡಲು ಇಟ್ಟು ಕೆಂಬೊಟ್ಟು
ಬೇಡಿದರ್ಗೀವ ಮಾದೇವ ಪೂರ್ವಾದ್ರಿಯೊಳು
ಮೂಡಿದ ನಿತ್ಯನಾದಿತ್ಯ ೬೩

ರೂಢಿಯಲ್ಲಿ ಅದಿತಿಯ ಪುತ್ರನೂ, ಅಂಬುಜ(ಕಮಲ)ಮಿತ್ರನೂ ಕೆಂಪು ಬೊಟ್ಟನ್ನು ಇಟ್ಟುಕೊಂಡಂತೆ ಅರುಣೋದಯದ ಸೂರ್ಯ ಪೂರ್ವಾಚಲದಲ್ಲಿ ಮೈದೋರಿದ.

ಆ ಸಮಯದಿ ತಾಳದಂಡಿಗೆವಿಡಿದು ಸು
ವಾಸಿನಿಯರು ಬಂದು ನಿಂದು
ದೇಶಾಕ್ಷಿ ನಾರಾಯಣಿ ಘೂರ್ಜರಿಯಿಂ ರ
ತೀಶನ ಪಿತನ ಪಾಡಿದರು ೬೪

ಆ ಸಮಯದಲ್ಲಿ ತಾಳದಂಡಿಗೆ ಹಿಡಿದು ವಿಳಾಸಿನಿಯರು ಬಂದು ದೇಶಾಕ್ಷಿ, ನಾರಾಯಣಿ, ಘೂರ್ಜರಿ ರಾಗಗಳಿಂದ ರತೀಶನ ಪಿತನನ್ನು ಸ್ತುತಿಸಿದರು.

ನೂತನ ಯೌವನಾಂಗಿಯರು ಪಾಡುವ ಸುಪ್ರ
ಭಾತ ಕೀರ್ತನೆಯನು ಕೇಳ್ದು
ಶ್ವೇತಾಬ್ಜದಳನೇತ್ರೆ ರತಿದೇವಿ ಜೊತೆ ಮೀನ
ಕೇತು ಮೆಯ್ಮುರಿದೆದ್ದನಾಗ ೬೫

ಯುವತಿಯರು ಹಾಡಿದ ಸುಪ್ರಭಾತದ ಕೀರ್ತನೆಗಳನ್ನು ಕೇಳಿ ರತಿ ಮನ್ಮಥರು ಮೈಮುರಿದು ಮೇಲೆದ್ದರು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೬

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ ಕೇಳಿದ ಜನರನ್ನು ಸೂರ್ಯಚಂದ್ರರು ಇರುವ ತನಕ ಲಕ್ಷ್ಮೀಕಾಂತ ರಕ್ಷಿಸುವನು.

# ೧೭. ಅನಿರುದ್ಧನ ಜನನ

ಮಳೆಗಾಲದ ನೀರು ಶರಧಿಯೊಳಡುಗುವಂ
ತಿಳೆಯ ದೇವಾರ್ಚನೆಗಳನು
ಕಳೆಯದೆ ತಾನೊಪ್ಪುಗೊಂಬ ದೇವನ ದಯೆ
ಮೊಳೆಯಲ್ಕೆ ಪೇಳು ಮೇಲ್ಗತೆಯ ೧

ಮಳೆಗಾಲದ ನೀರೆಲ್ಲವನ್ನೂ ಸಮುದ್ರ ಒಳಗೊಳ್ಳುವಂತೆ ಇಳೆಯ ದೇವಾರ್ಚನೆಗಳೆಲ್ಲವನ್ನು ತಾನೊಳಗೊಳ್ಳುವ ದೇವನ ದಯೆ ಮೊಳೆಯುವಂತೆ ಮೇಲಾದ ಕಥೆಯನ್ನು ಹೇಳು.

ಎನ್ನೆದೆ ಯಲರ್ದುಂಬಿ ಕುರುಳಾಂತ ಪೆಣ್ದಲೆ
ರನ್ನೆ ಕೇಳು ರತಿದೇವಿಗೆ
ಸೊನ್ನಗೇದಗೆಯ ಪೂವೊಡೆಯಂತೆ ಬಸಿರಿನ
ಚಿನ್ನೆದೋರಿದುದು ಮೆಯ್ಯೊಳಗೆ ೨

ದುಂಬಿಗುರುಳ ಹೆಣ್ಣ ಮಂಡೆ ಮಾಣಿಕವೆ ಕೇಳು, ರತಿದೇವಿಗೆ ಹೊಂಗೇದಗೆಯ ಹೊಡೆಯಂತೆ ಬಸಿರಿನ ಚಿಹ್ನೆ ತೋರತೊಡಗಿತು.

ಬಾಲನ ಬಯಕೆಯಿಂದಮಲ ಕರ್ಪೂರ ತಾ
ಬೂಲವ ರುಚಿಗೆಯ್ಯದಿರಲು
ಆ ಲತಾಂಗಿಯ ದಂತ ಮೊಲ್ಲೆಯ ಮುಗುಳ್ಗಳ
ಸಾಲೆನೆ ಕಣ್ಗೆ ರಾಜಿಸಿತು ೩

ಗಂಡುಮಗುವಿನ ಬಯಕೆಯಿಂದ ಕರ್ಪೂರ ತಾಂಬೂಲವನ್ನು ಸೇವಿಸದೆ ಇದ್ದದ್ದರಿಂದ ರತಿಯ ಹಲ್ಲುಗಳು ಮೊಲ್ಲೆಯ ಮುಗುಳುಗಳಂತೆ ಬೆಳ್ಳಗೂ ಬೆಳ್ಳಗೆ ಕಾಣತೊಡಗಿ ಅನ್ಯರ ಕಣ್ಮನ ಸೆಳೆದವು.

ನೆರೆ ಗಂಡುಮಗನೆನಗಾದರೆ ಮೇಲುದ
ಮರೆಮಾಡಿಕೊಂಡಮರ್ದಪ್ಪಿ

ಹೆರಹಿಂಗದೆ ನೋಡಿ ನುಡಿಸುವೆನೆನುತ ಬಾ
ಯ್ನೀರು ಬರಲು ಮುಕ್ಕಳಿಸಿದಳು ೪

ಗಂಡುಮಗನಾದರೆ ಸೆರಗು ಮರೆ ಮಾಡಿಕೊಂಡು ಅಪ್ಪಿಕೊಳ್ಳುತ್ತಾ ಒಂದೇ ಸಮನೆ ನೋಡಿ ನುಡಿಸುವೆನೆಂದು ಬಾಯ್ನೀರು ಬರಲು ಮುಕ್ಕಳಿಸಿದಳು.

ಹುಟ್ಟು ದರಿದ್ರಗೆ ಬಹಳ ಸಂಪದ ಬರಲು
ನೆಟ್ಟನೆ ಕೊಬ್ಬುವಂದದಲಿ
ಕಟ್ಟಾಯತವೆತ್ತ ಸತಿಯ ತಳೋದರ
ಬಟ್ಟಗೆ ಹೊರಹೊಮ್ಮಿತಾಗ ೫

ಹುಟ್ಟು ಬಡವನಿಗೆ ಶ್ರೀಮಂತಿಕೆ ಬರಲು ಕೊಬ್ಬುವಂತೆ ಅತಿಶಯತೆಯಿಂದ ಕೂಡಿದ ಸತಿಯ ತೆಳುಹೊಟ್ಟೆ ಗುಂಡಗೆ ಹೊರಹೊಮ್ಮತೊಡಗಿತು.

ಏಪೇಳ್ವೆ ಗರ್ಭೋತ್ಪತ್ತಿ ಸಂತಸದಿಂದ
ತಾಪತ್ರಯ ಬೀತುದೆನಲು
ಆ ಪದ್ಮ ಪತ್ರಾಯತಾಕ್ಷಿಯ ತ್ರಿವಳಿ ಸ್ವ
ರೂಪ ಮೆಯ್ಗರೆಯ ತೊಡಗಿದುವು ೬

ಗರ್ಭೋತ್ಪತ್ತಿಯ ಹರ್ಷದಿಂದ ತಾಪತ್ರಯಗಳು ಕಳೆದು ಹೋದವು ಎಂಬಂತೆ ಆಕೆಯ ಕೆಳಹೊಟ್ಟೆ ಮೇಲಿದ್ದ ತ್ರಿವಳಿ(ಮೂರು ಮಡಿಕೆಗಳು, ಗೆರೆಗಳು) ಮರೆಯಾಗತೊಡಗಿದವು.

ಮಕ್ಕಳ ಪಡೆಯದ ಮಡದಿಯ ಸಂಸಾರ
ದುಕ್ಕದ ಮಡುವಿನಂತಿರ್ದು
ಹೊಕ್ಕುಳು ಗುಣ್ಪುಗೆಟ್ಟುದು ಒಡಲೊಳು ಶಿಶು
ತೆಕ್ಕನೆ ತೀವಿ ಜೀವಿಸಲು ೭

ಮಕ್ಕಳನ್ನು ಹಡೆಯದ ಹೆಣ್ಣಿನ ಸಂಸಾರ ದುಕ್ಕದ ಮಡುವಿನಂತಿದ್ದರೆ, ಹೊಟ್ಟೆಯಲ್ಲಿ ಮಗು ಬೆಳೆಯ ತೊಡಗಿದ ಹೆಣ್ಣಿನ ಹೊಕ್ಕುಳದ ಆಳ ಇಲ್ಲವಾಗತೊಡಗಿತು.

ನೆಲೆಗೊಂಡ ಪಿಂಡ ಪಜ್ಜತ್ವವೆಂಬ ಕ
ತ್ತಲೆ ತಾಯ ಜಠರದೊಳಿರಲು

ಸಲೆ ಪೊರಮಡಿಸಿದನೆಂಬಂತೆ ರತಿಯ ನು
ಣ್ಮೊಲೆದೊಟ್ಟು ಕಪ್ಪಡರಿದವು ೮

ನೆಲೆಗೊಂಡ ಪಿಂಡ, ತಾಯಿಯ ಜಠರದಲ್ಲಿದ್ದ ಶೂದ್ರತ್ವವೆಂಬ ಕತ್ತಲೆಯನ್ನು ಹೊರಕ್ಕೆ ದಬ್ಬಿತು ಎಂಬಂತೆ ರತಿಯ ಮೊಲೆದೊಟ್ಟು ಕಪ್ಪಾದವು.

ಜಡೆಗನ ತಪಗೇಡಿಯ ಸೂನು ತನ್ನಯ
ಪೊಡೆಯೊಳಗಿರಲು ಬಾಲಕನ
ನಿಡಿದೋಳು ಕಾಲು ಭೂಭಾರವನು ತಾಳ್ದು
ನಡೆಗೆಡಬಹುದೆಂದು ಸುಯ್ದಳು ೯

ಈಶ್ವರ ತಪಧ್ವಂಸಿಯ ಮಗ ನನ್ನ ಹೊಟ್ಟೆಯಲ್ಲಿರಲು, ಬಾಲಕನ ನಿಡಿದೋಳು ಕಾಲು ಭೂಭಾರವನ್ನು ತಾಳಿ ನಡೆಗೆಡಬಹುದೆಂದು ಬಿಸುಸುಯ್ದಳು.

ಸ್ವರ್ಭಾನು ಭಯವಿರಹಿತ ಚಂದ್ರವದನೆ ಕೇ
ಳರ್ಭಕವತಿಯಾಗಮದಂತೆ
ಪೆರ್ಬಯಕೆಯ ಭುಕ್ತಿ ನವ್ಯಾಂಬರಗಳ
ಗರ್ಭಾಂಗನೆಗುಡಿಸಿದರು ೧೦

ರಾಹುಭಯ ವಿರಹಿತ ಚಂದ್ರವದನೆ ಕೇಳು, ಗರ್ಭವತಿಯಾದಾಗಿನ ಶಾಸ್ತ್ರದಂತೆ ಬಯಕೆಯ ಊಟ, ಉಡಿಗೆತೊಡಿಗೆಗಳನ್ನು ಬಸಿರಿಗೆ ಬಡಿಸಿ ಉಡಿಸಿ ತೊಡಿಸಿದರು.

ಕುವಲಯನೇತ್ರೆ ಗರ್ಭವನಾಂತ ಹರುಷದಿಂ
ದವಯವ ತುಂಬಿ ಮಸ್ತಕದಿ
ವ್ಯವಹರಿಸಲು ಸಿರಿಮುಡಿ ನಿಲಲಾರದೆ
ಕವಲೊಡೆದವು ಕೇಶಪಾಶ ೧೧

ಗರ್ಭವತಿಯಾದ ಹರುಷದಲ್ಲಿ ಅವಯವಗಳು ತುಂಬಿಕೊಂಡಂತೆ ತಲೆಯೊಳಗಿನ ಕೂದಲುಗಳು ಕವಲೊಡೆದವು.

ಕುಂಬಿನಿಯೊಳು ರೂಪುವಡೆದಿರ್ದ ಸುಗುಣಾವ
ಲಂಬಿನಿಯರ ಶಿರೋಮಣಿಗೆ

ತುಂಬಿತು ನವಮಾಸ ಮಣಿಮಂಚದೆಡೆಗೆ ನಿ
ತಂಬಿನಿ ತನುವ ಸಾರ್ಚಿದಳು ೧೨

ಜಗತ್ತಿನಲ್ಲಿ ರೂಪವತಿ ಹಾಗೂ ಗುಣವತಿಯಾಗಿದ್ದ ಸ್ತ್ರೀ ರತ್ನಕ್ಕೆ ಒಂಭತ್ತು ತಿಂಗಳು ತುಂಬಿದಾಗ ರತಿದೇವಿ ಮಣಿಮಂಚದ ಮೇಲೆ ತನ್ನ ದೇಹವನ್ನು ಚಾಚಿದಳು.

ಮುತ್ತಿನ ಮುಡಿಯ ವಿಲಾಸಿನಿಯರು ಸೂಲ
ಗಿತ್ತಿಯ ಕರೆದು ಪುರೋಹಿತರ
ಸುತ್ತಿನುಂಗುರ ಮದ್ದು ಮಣಿಯಂತ್ರ ತಂದು
ತೆತ್ತಿಸಿದರು ಕಾಲ್ದೆಸೆಯಲಿ ೧೩

ಸೇವಕಿ ವಿಲಾಸಿನಿಯರು ಸೂಲಗಿತ್ತಿಯ ಕರೆದು, ಪುರೋಹಿತರ ಸುತ್ತಿನುಂಗುರ, ಮದ್ದು, ಯಂತ್ರಗಳನ್ನು ತಂದು ಕಾಲ್ದೆಸೆಯಲ್ಲಿ ಇಟ್ಟರು.

ಅರಗಿಳಿಯಂದದಿ ನುಡಿವಳು ಸಲೆ ಕೋಗಿಲೆ
ಸ್ವರದಿಂದ ಕೂಗುವಳೊಡನೆ
ಮೊರೆವಳು ಪೆಣ್ದುಂಬಿಯೆನೆ ಹೆರಲಾರದೆ
ನರಳುವಳಬುಜಾಯತಾಕ್ಷಿ ೧೪

ಅರೆಗಿಳಿಯಂತೆ ನುಡಿವಳು, ಕೋಗಿಲೆ ಸ್ವರದಿಂದ ಕೂಗುವಳು, ಹೆಣ್ಣುದುಂಬಿಯಂತೆ ಮೊರೆವಳು, ಹೆರಲಾರದೆ ನರಳುವಳು.

ಕೇಶವ, ನಾರಾಯಣ ಕೃಷ್ಣ ಗೋವಿಂದ
ವಾಸುದೇವಾಚ್ಯುತ ತನ್ನ
ಬೇಸರ ಪರಿಹರಿಸುವುದೆಂದು ಬಿಡದೆ ಚೌ
ವೀಸ ನಾಮದಿ ಪೊಗಳಿದಳು ೧೫

ತನ್ನ ಕಷ್ಟವನ್ನು ಪರಿಹರಿಸುವುದೆಂದು ಕೇಶವ, ನಾರಾಯಣ, ಕೃಷ್ಣ, ಗೋವಿಂದ, ವಾಸುದೇವ, ಅಚ್ಯುತ ಎಂದು ಇಪ್ಪತ್ತುನಾಲ್ಕು ನಾಮಗಳನ್ನು ಪಠಿಸುತ್ತಾ ವಿನಂತಿಸಿದಳು.

ಎಡರೆಂಬ ಲವಣಾಬ್ಧಿಯ ನೆರೆ ಈಂಟುತ
ಕೊಡಗೂಸು ಕೃಷ್ಣನಂಘ್ರಿಗಳ

ಬಿಡದುಚ್ಚರಿಸಿ ಸದ್ಭಕ್ತರು ಮೋಕ್ಷವನು
ಪಡೆವಂತೆ ಪಡೆದಳರ್ಭಕನ ೧೬

ಕಷ್ಟತೊಂದರೆಗಳ ಲವಣಾಬ್ಧಿಯನ್ನು ಕುಡಿಯುತ್ತ, ಕೃಷ್ಣನ ಪಾದಗಳನ್ನು ಬಿಡದೆ ಉಚ್ಚರಿಸುತ್ತ, ಸದ್ಭರು ಮೋಕ್ಷವನ್ನು ಪಡೆಯುವಂತೆ ಕನ್ಯೆ ಮಗುವನ್ನು ಹಡೆದಳು.

ಪ್ರಥಮ ದಿಗ್ವನಿತೆಯ ಜಠರದೊಳಿರ್ದು ಸು
ಪ್ರಥಿತ ಸೂರಿಯನುದಿಪಂತೆ
ಸಿತಕಂಜದಳನೇತ್ರೆಯ ಪೊಡೆಯೊಳಗಿರ್ದ
ಸುತ ಪೊರಮಟ್ಟ ರೋದಿಸುತ ೧೭

ಪೂರ್ವ ದಿಗಂತವನಿತೆಯು ಜಠರದೊಳಿದ್ದು ಸುಪ್ರಸಿದ್ಧ ಸೂರ್ಯನುದಿಸುವಂತೆ, ರತಿಯ ಹೊಟ್ಟೆಯೊಳಗಿದ್ದ ಸುತ ಹೊರಬಂದ ರೋದಿಸುತ್ತ.

ಸುತ್ತಣ ರಜನೀಚರ ಕುಮಾರಕರಿ
ನ್ನೆತ್ತ ಸಾರ್ದಪರು ತನ್ನಿಂದ
ಸತ್ತಪರಕಟಕಟ ಎಂಬ ಚಿಂತೆಯ ತಾ
ಳ್ದತ್ತನು ಮರಿಸಿಂಗದಂತೆ ೧೮

ಸುತ್ತಮುತ್ತಲಿನ ನಿಶಾಚರ ಕುಮಾರಕರು ಇನ್ನೆತ್ತ ಹೋಗುವರು, ತನ್ನಿಂದ ಸಾಯುವರು ಎಂಬ ಯೋಚನೆ ಬಂದು ಮರಿಸಿಂಹದಂತೆ ಅತ್ತನು.

ಕಂಡರು ಸೂಲಗಿತ್ತಿಯರಾಗ ಹರುಷದಿ
ಗಂಡಾದುದೆಂದು ಒಕ್ಕಣಿಸೆ
ಪುಂಡರೀಕಾಕ್ಷಿ ರುಕ್ಮಿಣಿ ಇಕ್ಷುಕೋ
ದಂಡಾದಿಗಳು ಹಿಗ್ಗಿದರು ೧೯

ಗಂಡಾದುದನ್ನು ಕಂಡ ಸೂಲಗಿತ್ತಿಯರು ಅದನ್ನು ಪ್ರಕಟಿಸಲು, ರುಕ್ಮಿಣಿ ಮನ್ಮಥಾದಿಗಳು ಹಿಗ್ಗಿದರು.

ಹೊಗರಾಂತ ಹೊಸಹೊನ್ನ ಕಾಯ್ದು ರಸ ತಂದು
ಸಗಣಿಯೊಳೆರೆವಂತೆ ಮೊರದಿ

ಮೃಗಮದಗಂಧಿಯರು ಗೋಮಯದಿಂ ಮುದ್ದು
ಮಗನ ದೇಹವ ಸಾರ್ಚಿದರು ೨೦

ಕಾಂತಿಯುಕ್ತ ಹೊಸಹೊನ್ನಿನ ಕಾಯ್ದ ರಸವನ್ನು ತಂದು ಸಗಣಿಯೊಳಗೆ ಎರೆವಂತೆ, ಕಸ್ತೂರಿಗಂಧಿಯರು ಗೋಮಯ(ಸಗಣಿ)ದಿಂದ ಮುದ್ದುಮಗುವಿನ ದೇಹವನ್ನು ಸಾರಿಸಿದರು.

ಒಳ್ಳೆಯ ಠಾವಿನೊಳು ಪುಟ್ಟಿದೆ ಮರುಜನ್ಮ
ತಳ್ಳಿಯ ತೊಡಕು ಬೇಡೆನುತ
ಬೆಳ್ಳಿಯ ಪಿಡಿಯ ಕತ್ತಿಯ ತಂದು ಹೊಕ್ಕುಳ
ಬಳ್ಳಿಯ ಕೊಯ್ದರರ್ಭಕನ ೨೧

ಒಳ್ಳೆಯ ಸ್ಥಳದಲ್ಲಿ ಹುಟ್ಟಿದ್ದೀಯೆ, ಮರುಜನ್ಮ ತಳ್ಳಿಯ(ಗೊಡವೆಯ) ತೊಡಕುಬೇಡ ಎಂದು ಬೆಳ್ಳಿ ಹಿಡಿಯ ಕತ್ತಿಯಲ್ಲಿ ಮಗುವಿನ ಹೊಕ್ಕುಳ ಬಳ್ಳಿಯನ್ನು ಕೊಯ್ದರು.

ವೃತ್ತ ಕುಚಾನ್ವಿತೆಯೊಡಲ ಮಾಸಿನ ಬೀಜ
ಮತ್ತೊಂದು ಶಿಶುವಾಗಲೆನುತ
ಬಿತ್ತಲುದ್ಯೋಗಿಪ ತೆರದಿಂದ ಪೂಳ್ದರು
ಜತ್ತಾಯತದಿ ಪೊಮ್ಮಗೆಯಲಿ ೨೨

ರತಿಯೊಡಲಿನ ಮಾಸಿನ ಬೀಜ ಮತ್ತೊಂದು ಮಗುವಾಗಲಿ ಎಂಬ ಸದಾಶಯದಿಂದ ಬಿತ್ತುವ ರೀತಿಯಲ್ಲಿ ಚಿನ್ನದ ಮೊಗೆಯಲ್ಲಿ ಬಹು ಜೋಪಾನದಿಂದಿಟ್ಟು ಹೂಳಿದರು.

ಮಜ್ಜನಗೈಸಿ ಸುವರ್ಣ ಶೂರ್ಪದೊಳಾಂತು
ಸೆಜ್ಜೆಗೆ ತಂದರಾ ಶಿಶುವ
ನಿಜ್ಜರವನಿತೆಯ ಪಕ್ಕದೊಳಿಟ್ಟರು ಸಲೆ
ಸಜ್ಜಾತ ಕಂತುವಿನಂತೆ ೨೩

ಸ್ನಾನ ಮಾಡಿಸಿ ಚಿನ್ನದ ಮೊರದಲ್ಲಿಟ್ಟುಕೊಂಡು ಮಗುವನ್ನು ಹಾಸಿಗೆಗೆ ತಂದು ರತಿಯ ಪಕ್ಕದಲ್ಲಿ ಮಲಗಿಸಿದರು ಸುಜಾತ ಮನ್ಮಥನೆಂದು ಭಾವಿಸಿ.

ಕಂದನ ಕಮನೀಯ ಮಣಿಮಂಚದೊಳಗಿಟ್ಟು
ಮಿಂದಳು ವಿಧಿ ಪೂರ್ವಕದಿ
ಬಂದಳು ರತಿದೇವಿ ನವ್ಯತಲ್ಪದೊಳಾ
ನಂದದಿಂದೊರಗಿದಳಂದು ೨೪

ಸುಂದರ ರತ್ನಮಂಚದಲ್ಲಿ ಕಂದನನ್ನು ಇಟ್ಟು, ವಿಧಿಪೂರ್ವಕವಾಗಿ ಮಿಂದು ಬಂದ ರತಿದೇವಿ ಹೊಸ ಹಾಸಿಗೆಯಲ್ಲಿ ಆನಂದದಿಂದ ಮೈಚಾಚಿದಳು.

ಸೂಲಗಿತ್ತಿಯರುತ್ಸವದಿಂದ ಮಿಂದು ದು
ಕೂಲವ ನಿರಿವಿಡಿದುಡಲು
ನೀಲಕುಂತಳೆಯಕ್ಷತೆಗಂಧ ದಿವ್ಯ ತಾಂ
ಬೂಲವನಿತ್ತಳೆಲ್ಲರಿಗೆ ೨೫

ಸೂಲಗಿತ್ತಿಯರು ಸ್ನಾನ ಮಾಡಿ ರೇಷ್ಮೆಸೀರೆಗಳನ್ನು ನೆರಿಗೆ ಹಿಡಿದು ಉಟ್ಟುಕೊಂಡಾಗ, ರತಿದೇವಿ ಎಲ್ಲರಿಗೆ ಅಕ್ಷತೆ, ಗಂಧ, ತಾಂಬೂಲಗಳನ್ನು ಕೊಟ್ಟಳು.

ಸರ್ವರ ಬೀಳ್ಕೊಟ್ಟು ಪಿಚುಮಂದ ರಸವೀಂಟಿ
ಕರ್ವಾಯ ಭರದಿ ತಾಂಬೂಲ
ಚರ್ವಣಗೈದು ದಾದಿಯರಿಂಗೆ ಸುತರಕ್ಷೆ
ನಿರ್ವಹಣೆಗೊಟ್ಟಳರ್ತಿಯಲಿ ೨೬

ಎಲ್ಲರನ್ನು ಬೀಳ್ಕೊಟ್ಟು ಬೇವಿನ ರಸ ಕುಡಿದು, ತರುವಾಯ ಭರದಿಂದ ತಾಂಬೂಲ ಜಗಿದು ದಾದಿಯರಿಗೆ ಸುತನ ರಕ್ಷಾನಿರ್ವಹಣೆಯನ್ನು ವಹಿಸಿದಳು.

ತೋರ ನುಣ್ಮೊಲೆವೆತ್ತ ವನಿತೆಯರುಗಳು ಕು
ಮಾರನ ಪುಟ್ಟ ಬಾಯೊಳಗೆ
ಚಾರು ಜಲವನುರೆ ಮಂತ್ರಿಸಿ ಕಳಿತ ಜಂ
ಬೀರ ರಸವಿಂಡಿ ಕುಡಿಸಿದರು ೨೭

ದಾದಿಯರು ಮಗುವಿನ ಬಾಯೊಳಗೆ ನಿರ್ಮಲ ನೀರನ್ನು ಮಂತ್ರಿಸಿ, ಅದರೊಳಕ್ಕೆ ಕಳಿತ ನಿಂಬೆಹಣ್ಣಿನ ರಸವನ್ನು ಹಿಂಡಿ ಕುಡಿಸಿದರು.

ಪುಟ್ಟನಹಿತಭೂಮಿಪರ ಕುವರರು ಸೋತು
ಬೆಟ್ಟುಗರ್ಚಲು ಕಾವುದೆನುತ

ನೆಟ್ಟನೆ ಮಧು ಶರ್ಕರೆ ಯೊಡೆವೆರೆದಿರ್ಪ
ಬೆಟ್ಟ ಸೀಪಿಸಿದರರ್ಬಕಗೆ ೨೮

ಪುಟ್ಟಕಂದ ಮುಂದೆ ಶತ್ರುರಾಜರ ಕುಮಾರರು ಸೋತು ರಕ್ಷಿಸು ಎಂಬಂತೆ ಬೆಟ್ಟುಗಚ್ಚಲು, ಜೇನುತುಪ್ಪ ಸಕ್ಕರೆ ಬೆರೆಸಿದ ದ್ರವದಲ್ಲಿ ಬೆಟ್ಟನ್ನು ಅದ್ದಿ ಮಗುವಿಗೆ ಚೀಪಿಸಿದರು.

ದಾದಿಯರ್ಬಾಲಂಗೆ ಮೊಲೆಗೊಟ್ಟು ಬೆಣ್ಣೆ
ನಾದಲಿಕೊಳಹೋಗೆ ಹೊರಗೆ
ಮೇದಿನಿಯಮರರ ಕರೆಸಿದ ದೈತ್ಯ ವಿ
ರೋಧಿ ವಿಚಾರ ಪೂರ್ವಕದಿ ೨೯

ದಾದಿಯರು ಮಗುವಿಗೆ ಮೊಲೆಗೊಟ್ಟು ಬೆಣ್ಣೆ ನಾದಲು ಒಳಹೋದಾಗ, ಕೃಷ್ಣ ವಿಚಾರಪೂರ್ವಕವಾಗಿ ಭೂಸುರರನ್ನು ಕರೆಸಿದ.

ತಳಿರುಗಾವಿಯ ಧೋತ್ರ ಬೈರಾಸ ಮೂಗಿನಿಂ
ದಿಳಿದ ನಾಮಗಳ ವೈಷ್ಣವರು
ಗಳಿಲನೆ ನಿಳಯದಿಂ ಬಂದರೊಮ್ಮಗವೆತ್ತ
ನಳಿನಸಂಭವನಂದದಲಿ ೩೦

ಚಿಗುರುಬಣ್ಣದ ಕಾವಿ ಪಂಚೆ, ಉತ್ತರೀಯ, ಮೂಗಿನಿಂದ ಕೆಳಗಿಳಿದ ನಾಮಗಳ ವೈಷ್ಣವರು ಬೇಗ ಮನೆಯಿಂದ ಬಂದರು ಒಮ್ಮೊಗದ ಬ್ರಹ್ಮನಂದದಲ್ಲಿ.

ಆಶೀರ್ವಚಿಸುತ ಹರ್ಷದಿಂ ದೈತ್ಯ ವಿ
ನಾಶಿಯ ಪಾದ ಪಂಕಜವನು
ಸಾಸಿರ ವಿಧದಿ ಕೀರ್ತಿಸೆ ಹರಿ ಕೇಳ್ದ ಗಂಡು
ಗೂಸಿನ ಜನ್ಮಕುಂಡಲಿಯ ೩೧

ಹರ್ಷದಿಂದ ಆಶೀರ್ವದಿಸಿ, ಕೃಷ್ಣನ ಪಾದಪಂಕಜವನ್ನು ಸಾಸಿರ ವಿಧದಲ್ಲಿ ಕೀರ್ತಿಸಲು ಕೃಷ್ಣ ಮಗುವಿನ ಜನ್ಮಕುಂಡಲಿಯನ್ನು ಕೇಳಿದನು.

ಆನಂದ ಸಂವತ್ಸರ ಮಾಘಶುದ್ಧ ವಿ
ಹೀನ ಪಂಚಮಿ ದವಿವಾರ

ಭಾನುವುದಯದ ಸ್ವಾತಿಯ ನಕ್ಷತ್ರದಿ
ತಾನುದಿಸಿದ ಮುದ್ದು ಮಗನು ೩೨

ಆನಂದ ಸಂವತ್ಸರ, ಮಾಘ, ಬಹುಳ ಪಂಚಮಿ, ರವಿವಾರ, ಸೂರ್ಯೋದಯದ ಸ್ವಾತಿಯ ನಕ್ಷತ್ರದಲ್ಲಿ ಮುದ್ದುಮಗ ಉದಿಸಿದ ಎಂದು ಜೋಯಿಸರು ಹೇಳಿದರು.

ಮಾಧವ ಬೆಸಗೊಳಲುಸಿರ್ದರು ಮೊಮ್ಮನ ಜ
ನ್ಮೋದಯ ಲಗ್ನವ ಗುಣಿಸಿ
ಆದಾಯ ವೆಚ್ಚ ಸುಕೃತ ದುಷ್ಕೃತ ಬರೆ
ದೋದಲು ಸೋಜಿಗವಾಯ್ತು ೩೩

ಮಾಧವ ವಿಚಾರಿಸಲು, ಮೊಮ್ಮಗನ ಜನನ ಕಾಲವನ್ನು ಗುಣಿಸಿ ಆದಾಯ ವೆಚ್ಚ ಸುಕೃತ ದುಷ್ಕೃತಗಳ ಮಾಹಿತಿ ನೀಡಿದಾಗ ಕೃಷ್ಣನಿಗೆ ಸೋಜಿಗವಾಯಿತು.

ಜಾತಕದೋಲೆ ಚೆನ್ನಾಗಿದೆಯೆನುತ ಶ್ರೀ
ನಾಥ ಪುರೋಹಿತರ್ಗೊಲಿದು
ನೂತನ ವಸ್ತ್ರಾಭರಣ ದ್ರವ್ಯವನು ಬುಧ
ವ್ರಾತಕೆ ಕೊಟ್ಟನರ್ತಿಯಲಿ ೩೪

ಜನ್ಮಕುಂಡಲಿ ಚೆನ್ನಾಗಿದೆಯೆಂದು ಕೃಷ್ಣ ಪುರೋಹಿತರಿಗೆ ಹೊಸವಸ್ತ್ರ, ಆಭರಣ, ದ್ರವ್ಯವನ್ನು ವಿದ್ವಾಂಸಸಮೂಹಕ್ಕೆಕ್ಕೆ ಕೊಟ್ಟನು.

ನೋಡಲು ದೇವೇಂದ್ರಗೆ ಶಕ್ಯವಲ್ಲ ಕೊಂ
ಡಾಡಲು ಫಣಿರಾಜಗರಿದು
ಷೋಡಶ ಬಗೆಯ ದಾನಂಗಳ ಕುಡುವ ಕೈ
ವಾಡ ಭೂಸುರರ ಸೊಕ್ಕಿಸಿತು ೩೫

ಸಾವಿರ ಕಣ್ಣ ದೇವೇಂದ್ರನಿಗೂ ನೋಡಲು ಶಕ್ಯವಿಲ್ಲ; ಸಾಸಿರ ನಾಲಗೆಯ ಆದಿಶೇಷನಿಗೂ ಕೊಂಡಾಡಲು ಅಳವಿಲ್ಲ; ಹದಿನಾರು ಬಗೆಯ ದಾನ ಕೊಡುವ ಕೈವಾಡ ಬ್ರಾಹ್ಮಣರನ್ನು ಸೊಕ್ಕಿಸಿತು.

ಸುರಧೇನು ಚಿಂತಾಮಣಿ ಕಲ್ಪವೃಕ್ಷವ
ಬರಡಾವು ಕರುಮರಿಯನೆಣಿಸಿ
ಮುರಹರ ತ್ಯಾಗವ ಕೊಡುತಿರ್ದ ಲಕ್ಷ್ಮಿಯ
ವರನಾದ ಕಾರಣದಿಂದ ೩೬

ಕಾಮಧೇನು ಚಿಂತಾಮಣಿ, ಕಲ್ಪವೃಕ್ಷ, ಬರಡು ಹಸು, ಕರುಮರಿಗಳನ್ನೆಣಿಸಿ ಶ್ರೀಕೃಷ್ಣ ದಾನವನ್ನು ಕೊಡುತ್ತಿದ್ದ –ಲಕ್ಷ್ಮೀಕಾಂತನಾದ ಪ್ರಯುಕ್ತ

ತನಯನ ಪುತ್ರೋತ್ಸವದಿಂದ ಬಲುಸೆರೆ
ವನೆಗಳ ತೊಳಸಿದರ್ಮುದದಿ
ನನೆಗೋಲನಾಜ್ಞೆಯಿಂ ಗುಡಿತೋರಣದಿಂ
ವಿನಿಯೋಗ ನೆಗಳ್ದುದಾ ಪುರದಿ ೩೭

ಪುತ್ರೋತ್ಸವದಿಂದ ಸೆರೆಮನೆಗಳನ್ನು ತೊಳೆಸಿ ಶುದ್ಧೀಕರಿಸಿದರು, ಮನ್ಮಥನ ಅಪ್ಪಣೆ ಮೇರೆಗೆ ಗುಡಿತೋರಣಗಳಿಂದ ವಿತರಣೆಯ ಕಾರ್ಯ ಆ ಪುರದಲ್ಲಿ ಜರುಗಿತು.

ಪಾಳೆಯ ಪಾಳೆಯದೊಳಗೆ ಚೆಲ್ಲಿತು ಸೂರೆ
ಹಳೆನಾಣ್ಯ ಹೊನ್ನು ವರಹಗಳ
ಸೂಳೆಯ ವೀದಿಯೊಳು ಕುಂಕುಮವೆರಚಲು
ದೂಳೆದ್ದುದಾಗಸದೆಡೆಗೆ ೩೮

ಶಿಬಿರ ಶಿಬಿರಗಳಲ್ಲಿ ಹಳ್ಳಿಹಳ್ಳಿಗಳಲ್ಲಿ ಹಳೆನಾಣ್ಯ ಹೊನ್ನುವರಹಗಳ ಸೂರೆ(ಕೊಳ್ಳೆ) ಜರುಗಿತು. ಸೂಳೆಗೇರಿಯಲ್ಲಿ ಕುಂಕುಮವೆರಚಲು ಧೂಳೆದ್ದಿತು ಮುಗಿಲವರೆಗೆ

ಕುಂಭಿನಿ ಬೆಸಲಾದುದೆಂಬಂತೆ ಹೊಂಗೊಡ
ಗಂಬಿಯೊಳು ತೈಲ ಹರಿದ್ರ
ತುಂಬಿದ ಪರಿಯಣದಬಲೆಯರ್ಪಾಡುತ
ಮುಂಬರಿದರು ಬೀದಿಯೊಳಗೆ ೩೯

ಭೂಮಿಗೇ ಹೆರಿಗೆಯಾಯಿತು ಎಂಬಂತೆ ಹೊಂಗೊಡದಲ್ಲಿ ಎಣ್ಣೆಯನ್ನು, ಹರಿವಾಣದಲ್ಲಿ ಅರಿಶಿಣವನ್ನು ತುಂಬಿಕೊಂಡು ಅಬಲೆಯರು ಹಾಡುತ್ತಾ ಬೀದಿಯೊಳಗೆ ಸಾಗಿದರು.

ಸರಸಿಜಗಂಧಿಯರು ಧವಳಶೋಭನ ಶ್ರುತಿ
ವೆರಸಿ ಪಾಡುವ ರಾಗದಿಂದ
ಪರಸಿದರು ಮನಸ್ತಾಪವಿನಿತಿಲ್ಲದೊಲು ಎಣ್ಣೆ
ಯರಿಶಿಣವಿತ್ತರೆಲ್ಲರಿಗೆ ೪೦

ಪುಷ್ಪಗಂಧಿಯರು ಧವಳಶೋಭನನ್ನು ಶ್ರುತಿಬಿಡದೆ ಹಾಡುವ ರಾಗದಿಂದ ಹರಸಿದರು. ಮನಸ್ತಾಪ ಕೊಂಚವೂ ಬರದಂತೆ ಎಲ್ಲರಿಗೂ ಎಣ್ಣೆ ಅರಿಶಿಣ ಕೊಟ್ಟರು.

ಪಟ್ಟಣದೊಳು ಸಂಭ್ರಮವೆಡೆವಿಡದೆ ಮು
ಪ್ಪಟ್ಟು ಪೆರ್ಚಿಸಿದರೊಲಿದು
ತೊಟ್ಟಿಲಿಕ್ಕುವೆವೆಂದು ಪನ್ನೆರಡು ಪಗಲಿಗೆ
ನೆಟ್ಟನೆ ಸಾರ್ದರರ್ತಿಯಲಿ ೪೧

ಪಟ್ಟಣದಲ್ಲಿ ಎಡೆಬಿಡದೆ ಸಂಭ್ರಮ ಮುಪ್ಪಟ್ಟು ಹೆಚ್ಚಾಗುವಂತೆ ಮಾಡಿದರು. ಅಲ್ಲದೆ ಹನ್ನೆರಡನೆ ದಿನಕ್ಕೆ ತೊಟ್ಟಿಲಿಕ್ಕುವೆವೆಂದು ಪ್ರೀತಿಯಿಂದ ಸಾರಿದರು.

ಉದ್ಯೋಗಿಸಿದರಾಕ್ಷಣದಲ್ಲಿ ಹವನವ
ತಿದ್ದಿದರು ದಾನದಕ್ಷಿಣೆಯ
ಶುದ್ಧಿಯ ಮಾಡಿದರು ಮನೆಯ ಸಮುಹೂರ್ತವ
ಬದ್ಧಿಸಿದರು ಮುಹೂರ್ತಿಕರು ೪೨

ಆ ಕ್ಷಣದಲ್ಲಿ ಹೋಮಕ್ಕೆ ಉದ್ಯೋಗಿಸಿದರು, ದಾನದಕ್ಷಿಣೆಯ ತಿದ್ದಿದರು(ಹಂಚಿದರು), ಮನೆಯನ್ನು ಶುದ್ಧಿಗೊಳಿಸಿದರು, ಜೋಯಿಸರು ಮುಹೂರ್ತವನ್ನು ನಿಗದಿಪಡಿಸಿದರು.

ಕೊಪ್ಪರಿಗೆಯ ನೀರ ಮಿಂದಳಾಗಮವಿಧಿ
ತಪ್ಪದಾರೋಗಿಸಲೊಡನೆ
ಪುಷ್ಪಬಾಣನ ರಾಣಿಗೆ ನವ್ಯ ವಸ್ತ್ರವ
ಕಪ್ಪವಿಟ್ಟರು ದಾದಿಯರು ೪೩

ಕೊಪ್ಪರಿಗೆಯ ನೀರಿನಲ್ಲಿ ಸ್ನಾನ ಮಾಡಿದಳು, ಆಗಮವಿಧಿ ತಪ್ಪದೆ ಆರೋಗಿಸಿದಳು, ಹೂಬಾಣನ ರಾಣಿಗೆ ಹೊಸ ಬಟ್ಟೆಯ ಕಾಣಿಕೆ ನೀಡಿದರು ದಾದಿಯರು.

ಮಡದಿ ರನ್ನೆಯ ಸಿರಿಮುಡಿಗೆ ಹರಿದ್ರ ಪಾ
ವುಡವ ಬದ್ದಿಸಿ ಕೆಲರ್ದಿಟ್ಟಿ
ನೆಡದಂತೆ ಹಣೆಗೆ ಕಪ್ಪಿನ ಬೊಟ್ಟನಿಟ್ಟರು
ಉಡುಪತಿಯೊಡಲ ಕಂದಿನಿಂತೆ ೪೪

ರತಿಯ ಸಿರಿಮುಡಿಗೆ ಅರಿಶಿಣದ ಪಾವುಡ ಹೊದಿಸಿ, ಕೆಲವರ ದೃಷ್ಟಿ ತಾಕದಂತೆ ಹಣೆಗೆ ಕಪ್ಪಿನ ಬೊಟ್ಟನಿಟ್ಟರು ಚಂದ್ರನೊಡಲ ಪ್ಪಿನಂತೆ

ಗಾಡಿಕಾರನ ತಾವರೆಗೋಲ್ಗೆ ಗಂಧಾಕ್ಷತೆ
ಸೂಡಿ ಪೂರಿತಗೆಯ್ವ ತೆರದಿ
ಖೋಡಿಯಿಲ್ಲದೆ ರತಿದೇವಿಯ ನಯನಕ್ಕೆ
ಕಾಡಿಗೆಯ ಬಿಡದೆಚ್ಚಿದರು ೪೫

ಸುಂದರಾಂಗನ ಹೂಬಾಣಕ್ಕೆ ಗಂಧಾಕ್ಷತೆ ಇಟ್ಟು ಧಾರ್ಮಿಕಾಚರಣೆ ಪೂರ್ತ ಮಾಡಿದಂತೆ, ವಂಚನೆ ಮಾಡದೆ ರತಿದೇವಿಯ ಕಣ್ಣಿಗೂ ಕಾಡಿಗೆಯನ್ನು ಹಚ್ಚಿದರು.

ಅಂಘ್ರಿ ಮಸ್ತಕ ಮೊದಲಾದವಯವದೋಲು
ರಂಗಿತ ರತ್ನಬೂಷಣವ
ನುಮಗಿತು ಲಾವಣ್ಯ ರಸಪೂರಿತ ಕೋಮ
ಬಾಂಗಿಯನೆಂತು ವರ್ಣಿಸುವೆ ೪೬

ಪಾದತಲೆ ಮೊದಲಾದ ಅವಯವದಲ್ಲಿರುವ ರಂಗಿನ ರತ್ನದೊಡವೆಗಳು ಕೋಮಲಾಂಗಿಯ ಸೌಂದರ್ಯ ರಸವನ್ನು ಪೂರ್ತಿ ನುಂಗಿ ಹಾಕಿದ್ದನ್ನು ವರ್ಣಿಸುವುದು ಹೇಗೆ?

ಕ್ಲೋಣಿಯೊಳಾತ್ಮೇ ಶ್ವರನ ದಿಟ್ಟಿಗೆ ರೂಹು
ಗಾಣಿಸಿ ಬಾಯನೊರಸುತ್ತ
ಬಾಣತಿ ರೂಹಿಂದ ಬಂದಳು ಹರಿನೀಲ
ವೇಣಿ ತೊಟ್ಟಿಲ ಕಟ್ಟುವೆಡೆಗೆ ೪೭

ತನ್ನಿನಿಯನ ದೃಷ್ಟಿಗೆ ರೂಪವನ್ನು ತೋರಿಸಿ, ಲೋಕದ ಕಣ್ಣಿಗೆ ಬಾಣತಿ ರೂಪಿಂದ ಬಾಯಿಯೊರಸುತ್ತ ಬಂದಳು, ಸುಂದರ ಕಪ್ಪುಜಡೆಯ ರತಿ ತೊಟ್ಟಿಲಿದ್ದೆಡೆಗೆ.

ಪಡಿಯಿಡಲರಿದು ಮುತ್ತೈದೆವೆಂಗಳು ಸಿರಿ
ಮುಡಿಯ ಪೂದಂಡೆಸಮೇತ
ಉಡಿಯಕ್ಕಿದಳಿದು ಬಂದರು ಮುತ್ತಿನಾರತಿ
ವಿಡಿದಾ ರತಿದೇವಿಯೊಡನೆ ೪೮

'ಪಡಿ' ಇಡಲು ಅಸಾಧ್ಯ; ಮುತ್ತೈದೆಯರು ಹೂದಂಡೆ ಮುಡಿದ ತುರುಬಿನ ಸಮೇತ ಮಡಿಲಕ್ಕಿಯೊಡನೆ ಮುತ್ತಿನಾರತಿ ಹಿಡಿದು ರತಿದೇವಿಯ ಜೊತೆ ಬಂದರು.

ಸುರುಚಿರ ರತ್ನ ಪೊಂದೊಟ್ಟಿಲ ಪೂಜಿಸಿ
ತರಳನ ತುಂಬಿ ಸದ್ವಿಧಿಯಿಂ
ವರ ಮಂದಿರದ ಮೇಲ್ವಲಗೆಯ ಕೊಂಡಿಗೆ
ಸರಪಳಿಗಳ ತೊಡರ್ಚಿದರು ೪೯

ಕಾಂತಿಯುಕ್ತ ರತ್ನದ ಹೊಂದೊಟ್ಟಿಲನ್ನು ಪೂಜಿಸಿ, ವಿಧಿವಿಧಾನದಂತೆ ಮಗುವನ್ನು ಅದರೊಳಗೆ ಮಲಗಿಸಿ, ತೊಟ್ಟಿಲ ಸರಪಳಿಗಳನ್ನು ಮಂದಿರದ ಮೇಲೆ ಚಾವಣಿಯ ಕೊಂಡಿಗೆ ಸಿಕ್ಕಿಸಿದರು.

ದೇಶಕಧಿಕನಾಗಮದಲಿ ಕೃಷ್ಣ ಷೋ
ಡಶ ನಾಮವ ಪರಿಗ್ರಹಿಸಿ
ಹೆಸರನಿಕ್ಕಿದರನಿರುದ್ಧನೆಂದೊಲಿದು ತೂ
ಗಿಸಿ ಹಾಡಿಸಿದರು ಜೋಗುಳವ ೫೦

ಕೇಶವನಿಂದ ಹಿಡಿದು ಕೃಷ್ಣನವರೆಗಿನ ಇಪ್ಪತ್ತು ನಾಲ್ಕು ಹೆಸರುಗಳಲ್ಲಿ ಹದಿನಾರನೆಯದಾದ ಅನಿರುದ್ಧ ಎಂಬ ಹೆಸರನ್ನು ಇಡಲಾಯಿತು. ತೂಗುತ್ತಾ ಜೋಗುಳವನ್ನು ಹಾಡಿಸಿದರು.

ಮಾಧವನಾತ್ಮಸಂಭವ ಸೂನು ಜೋಜೋ
ಯಾದವಕುಲರತ್ನ ಜೋಜೋ
ಶ್ರೀಧರಣೀಧವ ಜೋಯೆಂದು ನಿಬಿಡ ಪ
ಯೋಧರೆಯರು ಪಾಡಿದರು ೫೧

ಮಾಧವನ ಮಗನ ಮಗ ಜೋಜೋ, ಯಾದವ ಕುಲರತ್ನ ಜೋಜೋ, ಭೂದೇವಿಯರಮಣ ಜೋ ಎಂದು ನಿಬಿಡ ಕೊಡಕುಚೆಯರು ಪಾಡಿದರು.

ಬೊಮ್ಮನ ವರ ಸಹೋದರ ಸುತ ಜೋ ನವ್ಯ
ಕಮ್ಮಲರ್ಗೋಲನೆ ಜೋ ಜೋ
ನಿಮ್ಮಳ ಸುಭಗ ಶೈಶವರೂಪ ಜೋಯೆಂದು
ಹೆಮ್ಮಕ್ಕಳೊಲಿದು ಪಾಡಿದರು ೫೨

ಬ್ರಹ್ಮನ ಸೋದರನ ಮಗ ಜೋ, ಹೊಸ ಹೂಬಾಣನೆ ಜೋಜೋ, ನಿರ್ಮಲ ಶಿಶು ರೂಪ ಜೋ ಎಂದು ಹೆಣ್ಮಕ್ಕಳು ಪಾಡಿದರು.

ಅಂಗಜನರ್ಧಾಂಗಿಯ ಸೂನು ಜೋ ದೇವ
ಗಂಗಾ ಜಾಮಾತ ಜೋಜೋ
ಸಿಂಗದ ಮರಿಯೆ ಜೋಜೋಯೆಂದು ಪಾಡಿದ
ರಂಗನೆಯರು ಕುಮಾರಕನ ೫೩

ಮನ್ಮಥನ ಮಡದಿಯ ಮಗ ಜೋ, ದೇವಗಂಗೆಯ ಅಳಿಯ ಜೋಜೋ, ಸಿಂಹದ ಮರಿಯೇ ಜೋಜೋ ಎಂದು ಅಂಗನೆಯರು ಪಾಡಿದರು.

ರತಿದೇವಿ ಬಸಿರಾಂತು ಪಡೆದ ದುಕ್ಕವ ಸುತ
ವತಿಯಾಗಿ ನೋಳ್ಪ ಸಂತಸವ
ಮಿತಿಗೆಯ್ದಪನೆಂದು ತೊಟ್ಟಿಲ ತೂಗಿದ
ಳತಿ ಹರುಷದಿ ಕುಮಾರಕನ ೫೪

ರತಿ ಬಸಿರಾಗಿ ಪಡೆದ ದುಕ್ಕವನ್ನು, ಹಡೆದ ಮಗನನ್ನು ನೋಡುವ ಸಂತಸವನ್ನು ಮಿತಗೊಳಿಸುವೆನೆಂದು ತೊಟ್ಟಿಲು ತೂಗತೊಡಗಿದಳು.

ಬದ್ಧರಾಗಿ ರುಕ್ಮಿಣಿ ಸತ್ಯಭಾಮೆಯರು
ಇದ್ದಂಥ ಗೋಪಕನ್ಯೆಯರು
ಉದ್ಧವ ಕೃತವರ್ಮ ಸಾತ್ಯಕಿ ಬಲರಾಮ
ನದ್ಧಾಂಗಿಯರು ಪಾಡಿದರು ೫೫

ರುಕ್ಮಿಣಿ ಸತ್ಯಭಾಮೆಯರು, ಗೋಪಿಕಾಸ್ತ್ರೀಯರು, ಉದ್ಧವ, ಕೃತವರ್ಮ, ಸಾತ್ಯಕಿ, ಬಲರಾಮರ ಪತ್ನಿಯರು ಪಾಡಿದರು.

ಸಡಗರದಲಿ ಕೃಷ್ಣ ಬಲರಾಮ ಯಾದವ
ಗಡಣಕ್ಕೆ ರತಿ ಪೊಡಮಡಲು
ಉಡುಗೊರೆಯಿತ್ತು ಸಂತಸದಿ ಬೀಳ್ಕೊಂಡು
ನಡೆದರು ತಂತಮ್ಮ ಮನೆಗೆ ೫೬

ಸಂಭ್ರಮದಿಂದ ಕೃಷ್ಣ ಬಲರಾಮ ಹಾಗೂ ಯಾದವ ಸಮುದಾಯಕ್ಕೆ ರತಿ ನಮಸ್ಕರಿಸಿದಾಗ ಉಡುಗೊರೆಗಳನ್ನು ಕೊಟ್ಟು ಸಂತಸದಿಂದ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಕಾಮಂಗೆ ಕುಂಬಿಡಲುಡುಗೊರೆಯಿತ್ತು ಸ
ತ್ಕೋಮಲಾಂಗಿಯ ಪೇರುರದಿ
ಹೇಮಾಂಬುರಹ ಮೊಗ್ಗೆಮೊಲೆ ಬಿಗಿವಡೆದಿರೆ
ಭ್ರಾಮಕವಾಂತು ವೀಕ್ಷಿಸಿದ ೫೭

ಇತ್ತ ಉಡುಗೊರೆಯಿತ್ತು ಕಾಮನಿಗೆ ನಮಿಸಿದಾಗ, ರತಿದೇವಿಯ ವಿಶಾಲವಕ್ಷಸ್ಥಲದಲ್ಲಿ ಹೊಂದಾವರೆ ಮೊಗ್ಗೆಮೊಲೆಗಳು ಇಡಿಕಿರುವುದನ್ನು ಕಂಡು ಭ್ರಮಾಧೀನನಾಗಿ ವೀಕ್ಷಿಸಿದ.

ಶುಭಗುಣವಂತ ನೀ ಮರುಹುಟ್ಟಿ ಮತ್ ಪ್ರಾಣ
ವಿಭುವಾಗಿ ಬಂದೆ ಬಾರೆನುತ
ಚುಬುಕಾಗ್ರವಿಡಿದು ಮುಂಡಾಡಿ ತಕ್ಕೈಸೆ
ಅಬುಜಾಕ್ಷಿಯೊಡನೆ ಕ್ರೀಡಿಸಿದ ೫೮

ಗುಣವಂತ ನೀನು ಮರುಹುಟ್ಟಿ ನನ್ನ ಪ್ರಾಣಪ್ರಭುವಾಗಿ ಬಂದೆ ಬಾರೆಂದು ಅವನ ಗಲ್ಲ ಹಿಡಿದು ಮುದ್ದಾಡಲು, ತಬ್ಬಿಕೊಂಡು ಕ್ರೀಡಿಸಿದ.

ಮಂಗಳ ವಿಗ್ರಹವಡೆದ ಬಾಲನ ದಾದಿ
ವೆಂಗಳು ಸಂರಕ್ಷಿಸಲು
ಅಂಗಜರತಿದೇವಿಯರ ಸಂತಸ ತುಂಬಿ
ತಿಂಗಳಾದುದು ಕುಮಾರಗೆ ೫೯

ಮಂಗಳ ಮೂರ್ತಿಯಾದ ಬಾಲನನ್ನು ದಾದಿಯರು ರಕ್ಷಿಸಲು, ರತಿ ಮನ್ಮಥರ ಸಂತಸ ಮುಗಿಲು ಮುಟ್ಟಿರಲು, ಕಂದನಿಗೆ ಆಡಿದಂತೆ ಒಂದು ತಿಂಗಳಾಗಿಬಿಟ್ಟಿತು.

ಮಾಸೋತ್ಸವಗೈದರು ಕೂಡಲೆ ದ್ವಿತ್ರಯ
ಮಾಸಗಳಾದವು ಒಡನೆಯೆ
ಮಾಸ ನಾಲ್ಕೈದಾರೇಳಾದುವು ಕುವರ
ನೆಸರಂದದಿ ರಂಜಿಸಿದ ೬೦

ತಿಂಗಳ ಉತ್ಸವವನ್ನು ಮಾಡಿದರು. ಅನಂತರ ಎರಡು, ಮೂರು ನಾಲ್ಕು, ಐದು, ಆರು, ಏಳು ತಿಂಗಳುಗಳು ಆದವು. ಕುಮಾರ ಸೂರ್ಯನಂತೆ ಹೊಳೆಯತೊಡಗಿದ

ಪೆಡೆವಣಿದಳೆದ ನಾಗರಮರಿಯೆಂಬಂತೆ
ಹೊಡೆ ಮಗುಳ್ಚುವ ತನಗೆತಾನೆ
ಪೆಡೆಯೆತ್ತುವ ಮುತ್ತಿನರಳಲೆಯಾಂತು ಕೆಂ
ಜೆಡೆ ಮುದ್ದುಮೊಗದಲ್ಲೆಸೆಯೆ ೬೧

ಹೆಡೆಮಣಿ ಹೊಂದಿದ ನಾಗರಮರಿಯಂತೆ ತನಗೆ ತಾನೆ'ಹೊಟ್ಟೆ ಮಕಾಡೆ' ಆಗುವನು. ಮುತ್ತಿನ ಅರಳೆಲೆಯನ್ನು ತಳೆದು ಜಡೆ ಮುಖದಲ್ಲಿ ಕಂಗೊಳಿಸುತ್ತಿರಲು ಮತ್ತೆ ಹೆಡೆಯೆತ್ತುವನು.

ಮಲ್ಲಿಗೆಗೋಲನರ್ಧಾಂಗನೆ ಪುತ್ರ ವಾ
ತ್ಸಲ್ಯದಿ ತೆಗೆದೆತ್ತಿಕೊಂಡು
ಚೆಲ್ಲಿದಳವಯವದಲಿ ಕಣ್ಣ ದಿಟ್ಟಿಯ
ಸೊಲ್ಲಿಸಿದಳು ಮುದ್ದುಗೆಯ್ದು ೬೨

ರತಿದೇವಿ ಪುತ್ರ ವಾತ್ಸಲ್ಯದಿಂದ ಬಾಚಿ ಎತ್ತಿಕೊಂಡು, ಅವಯವಗಳ ಮೇಲೆಲ್ಲ ನೋಟ ಚೆಲ್ಲಿ ಮುದ್ದಿಸಿ ಮಾತನಾಡಿಸಿದಳು.

ಚಿಣ್ಣನ ಮೊಗಗಂಡು ಮುದ್ದಿಪಳು ತರಳಗೆ
ಕಣ್ಣೆಂಜಲೆಂದು ತೂಪಿರಿದು
ಬಿಣ್ಣ ತಾವರೆಮೊಗ್ಗೆ ಮೊಲೆಯ ಬಾಯೊಳಿಟ್ಟು
ಉಣ್ಣೆಂದು ಬೆನ್ದಡಹುವಳು ೬೩

ಕಂದನಿಗೆ ದೃಷ್ಟಿಯಾಯಿತೆಂದು ಇಳಿದೆಗೆದು ಅಂಗೈಯನ್ನು ಉಪ್ಪೆಂದು ಊದುವಳು, ಬಿರಿಯುವಂತಿರುವ ತಾವರೆ ಮೊಗ್ಗೆ ಮೊಲೆಯನ್ನು ಬಾಯೊಳಗಿಟ್ಟು ಉಣ್ಣೆಂದು ಬೆನ್ನನು ಸವರುವಳು.

ಕೊರಳ ಮೂರುಗೆರೆಯ ಮಣ್ಣೊಡೆವಳು ಸಣ್ಣ
ಬೆರಳ ಕೈಗೆರೆಯುಜ್ಜುವಳು
ತರಳನ ಪುಟ್ಟ ಪಾದದೊಳಿರ್ದ ತಾವರೆ
ಯರಳನು ನೊಸಲಿಗೊತ್ತುವಳು ೬೪

ಕೊರಳಿನ ಮೂರುಗೆರೆಯಲ್ಲಿರುವ ಮಣ್ಣನ್ನು ಸೀಟುವಳು, ಕಿರುಬೆರಳಿನ ಗೆರೆಯನ್ನು ಉಜ್ಜುವಳು, ಪುಟ್ಟನ ಪುಟ್ಟ ಪಾದದಲ್ಲಿದ್ದ ಕಮಲದ ಹೂವನ್ನು ಹಣೆಗೆ ಒತ್ತಿಕೊಳ್ಳುವಳು.

ರಾಜಾಧಿಕನೆಂಬೆನೆ ನಷ್ಟಪುಷ್ಟ, ಸ
ರೋಜಾಪ್ತನೆಂಬೆನೆ ಬಿಸಿಗ
ತೇಜೋಮಯ ಕಂದ ಬಾರೆಂದು ರತಿ ಬೃಹ
ದ್ಬೀಜಕ್ಕೆ ಮುತ್ತನಿಕ್ಕುವಳು ೬೫

ಚಂದ್ರನೆನ್ನಲೆ ಅವನದು ಕ್ಷಯವೃದ್ಧಿಯ ಜಾಯಮಾನ:ಸೂರ್ಯನೆನ್ನಲೆ ಸುಡುಬಿಸಿಲ ಜಾಯಮಾನ; ತೇಜಸ್ವಿ ಬಾರೆಂದು ರತಿ ಮಗುವಿನ ಬೀಜಕ್ಕೆ ಮುತ್ತಿಕ್ಕುವಳು.

ತೊರೆದ ನುಣ್ಮೊಲೆಯ ನೀಂಟುತ ಪೆಸರ್ಗಾಯಿ
ಬೆರಲೊಳು ಮೊಲೆದೊಟ್ಟ ಪಿಡಿದು
ಮರಳ್ದುಣೆ ನೆತ್ತಿಗೇರಲು ಉಸಿರೂದುತ
ತರಳಾಕ್ಷಿ ಬೆಚ್ಚುವಳು ಭಯದಿ ೬೬

ಹಾಲು ಜಿನುಗುವ ಮೊಲೆಯನ್ನು ಚೀಪುತ್ತಾ, ಹೆಸರುಕಾಯಿಯಂಥ ಬೆರಳಲ್ಲಿ ಮೊಲೆತೊಟ್ಟನ್ನು ಹಿಡಿದು ಆತುರದಿಂದ ಕುಡಿದಾಗ ನೆತ್ತಿ ಹತ್ತಿದ್ದನ್ನು ಕಂಡು ಭಯಗೊಂಡು ಬೆಚ್ಚಿ ಮತ್ತಮತ್ತೆ ಉಸಿರೂದುವಳು

ಜಕ್ಕುಲಿಗೊಳಿಸುವಳು ಮುನಿದು ನೋಡುವಳು ತಾ
ನಕ್ಕು ತನ್ನೊಳಗೆ ಹಿಗ್ಗುವಳು
ಮುಕ್ಕುಳಿಸುವ ಜೊಲ್ಲುವಾಯಿಗೆ ಕಡುಮೋಹ
ಸೊಕ್ಕಾಂತು ಮುತ್ತನಿಕ್ಕುವಳು ೬೭

ಚಕ್ಕಳಗುಳಿ ಇಕ್ಕುವಳು, ದುರುದುರನೆ ನೋಡುವಳು, ಮರುಕ್ಷಣ ನಕ್ಕು

ತನ್ನೊಳಗೆ ಹಿಗ್ಗುವಳು, ಜೊಲ್ಲು ಮುಕ್ಕುಳಿಸುವ ಬಾಯಿಗೆ ಅತಿಮೋಹದಿಂದ ಮುತ್ತನಿಕ್ಕುವಳು.

ಮಾತಾಡು ಮಜ್ಜನ್ಮ ದುಃಖ ವಿಚ್ಛೇದನ
ಮಾತಾಡು ಮತ್ಪುಣ್ಯನಿಧಿಯೆ
ಮಾತಾಡು ಮತ್ಸುತಕುಂಜರ ನೀ ಮುದ್ದು
ಮಾತನಾಡೆಂದಳರ್ಭಕನ ೬೮

ನನ್ನ ಜನ್ಮದ ದುಃಖವಿನಾಶಕ, ಮಾತಾಡು, ನನ್ನ ಪುಣ್ಯ ನಿಧಿಯೆ, ಮಾತಾಡು; ನನ್ನ ಮರಿಯಾನೆ ಮಗನೆ, ಮಾತಾಡು; ಎಂದು ಮಗನನ್ನು ಮುದ್ದಾಡುವಳು.

ನಿಲ್ಲುವ ನಿಡುವಸನವ ಮೆಟ್ಟಿ ನಲಿದಾಡಿ
ಗಿಲ್ಲುವ ಪುಟ್ಟ ಕೈಗಳಲಿ
ಜೊಲ್ಲು ಸುರಿವ ಮುದ್ದು ಮೊಗದಲಿ ನಗೆಯಾಂತು
ಸೊಲ್ಲಿಸುವನು ತೊದಳ್ನುಡಿಯ ೬೯

ನಿಂತುಕೊಳ್ಳುವನು, ನಲಿದಾಡುತ್ತಾ ಉದ್ದನೆಯ ಬಟ್ಟೆಯನ್ನು ಮೆಟ್ಟಿಕೊಂಡು ಪುಟ್ಟಕೈಗಳಲ್ಲಿ ಸೀಳುವನು, ಜೊಲ್ಲು ಸುರಿಯುವ ಮುದ್ದು ಮುಖದಲ್ಲಿ ನಗೆಯನ್ನು ಚೆಲ್ಲಿ, ತೊದಲು ಮಾತನ್ನು ಆಡುವನು

ಇಳೆಯೊಳು ರತಿಕಾಮದ್ವಯರ ಪರಿತೋಷ
ಬೆಳೆಯಂಕುರಗಳೆಂಬಂತೆ
ಎಳೆಯನ ಪುಟ್ಟ ಬಾಯೊಳು ಮೆಲ್ಲಮೆಲ್ಲನೆ
ಮೊಳೆವಲ್ಲೊಡೆದು ಮೂಡಿದವು ೭೦

ಇಳೆಯಲ್ಲಿ ರತಿ ಮನ್ಮಥರ ಸಂತೋಷದ ಬೆಳೆಯ ಮೊಳಕೆಗಳಂತೆ ಎಳೆಯನ ಪುಟ್ಟಬಾಯಲ್ಲಿ ಮೊಳೆ ಹಲ್ಲುಗಳು ಮೂಡಿದವು.

ಭೂಲೋಕ ಸಿಂಹಾಸನಾರೂಢನಹೆನೆಂಬ
ಲೀಲೆಯೊಳು ಕುಳಿತಾಡ ಕಲಿತ
ಬಾಲಾಭ್ಯಾಸಿ ದಂಡೆಯ ನೊತ್ತುವಂತಂಬೆ
ಗಾಲಿಕ್ಕತೊಡಗಿದನೊಲಿದು ೭೧

ಭೂಲೋಕದಲ್ಲಿ ಸಿಂಹಾಸನವನ್ನೇರುವ ರಾಜನಾಗುವನೆಂದು ಕುಳಿತುಕೊಳ್ಳತೊಡಗಿದನು. ಬಾಲಭ್ಯಾಸಿ ದಂಡೆಂಯೊತ್ತುವಂತೆ ಅಂಬೆಗಾಲಿಕ್ಕತೊಡಗಿದನು.

ದಿಟ್ಟ ತನ್ನಹಿತ ಭೂಭುಜ ಕುಮಾರರನಿಕ್ಕಿ
ಮೆಟ್ಟಬೇಕೆಂಬ ಸತ್ತ್ವದಲಿ
ಪುಟ್ಟ ಪಾದಂಗಳ ಹೊಂಗೆಜ್ಜೆ ಘಲಿರೆನೆ
ದಟ್ಟಡಿಯಿಡತೊಡಗಿದನು ೭೨

ತನ್ನ ಶತ್ರುರಾಜರ ಕುಮಾರರನ್ನು ಇಕ್ಕಿ ಮೆಟ್ಟಬೇಕೆನ್ನುವ ಗತ್ತಿನಲ್ಲಿ ಪುಟ್ಟಪಾದಗಳ ಗೆಜ್ಜೆ ಘಲಿರೆನ್ನುವಂತೆ ದಟ್ಟಡಿ ಇಡತೊಡಗಿದನು.

ತಾಯೊಡನುಂಬ ತಂದೆಜೊತೆ ಭುಂಜಿಸುವ ಕ
ಜ್ಜಾಯ ಪಣ್ಬಲಗಳ ಮೆಲುವ
ಕಾಯ ಕಾಂತಿಯ ಪಸರಿಸಿ ಬಳೆದನು ಕಂತು
ರಾಯನ ವರಕುಮಾರಕನು ೭೩

ತಾಯೊಡನೆ ಉಣ್ಣುವನು, ತಂದೆಯ ಜೊತೆಯೂ ಉಣ್ಣುವನು, ಕಜ್ಜಾಯ ಹಣ್ಣುಹಂಪಲುಗಳನ್ನು ತಿನ್ನುವನು, ದೇಹಕಾಂತಿಯನ್ನು ಪಸರಿಸುತ್ತಾ ಹೆಸರುವಾಸಿಯಾಗಿ ಬೆಳೆದನು.

ವಚ್ಚರವೊಂದೆಡು ಮೂರಾಗಲೊಡರ್ಚಿದ
ರುಚ್ಚವ ನಾಲ್ಕೈದಾಗಲು
ನಿಚ್ಚಲೊಂದೊಂದು ವಿನೋದ ವಿಶೇಷವ
ನಚ್ಚರಿಯೆನೆ ತೋರುತಿರ್ದ ೭೪

ಒಂದು, ಎರಡು, ಮೂರು ವರ್ಷಗಳಾದಾಗ ಜ್ಮತ್ಸವ ಸಮಾರಂಭಗಳನ್ನು ಮಾಡಿದರು. ನಾಲ್ಕೈದು ವರ್ಷಗಳಾದಾಗ ನಿತ್ಯ ಒಂದೊಂದು ವಿನೋದ ವಿಶೇಷವನ್ನು ತೋರುತ್ತಿದ್ದನು. (ವತ್ಸರ>ವಚ್ಚರ=ವರ್ಷ)

ಒಕ್ಕಣಿಸುವ ಬಾಲಭಾಷೆಯ ಕೆಳೆಯರೊಳು
ಕೆಕ್ಕಸ ಕೆಲೆದಾಡಿ ನಗುತ

ಮಕ್ಕಳಾಟದಿ ತನ್ನ ಹಡೆದ ತಾಯ್ತಂದೆಗೆ
ಹೆಕ್ಕಳದೋರ್ಪ ಸಂತಸದಿ ೭೫

ಬಾಲಭಾಷೆಯನ್ನಾಡುವನು, ಗೆಳೆಯರನ್ನು ಗೇಲಿ ಮಾಡಿ ನಗುವನು, ತನ್ನ ಹಡೆದವರಿಗೆ ಮಕ್ಕಳಾಟದಿಂದ ಅಧಿಕ ಉತ್ಸಾಹ ಸಂತಸಗಳನ್ನು ನೀಡುವನು.

ಕಾಗಿನ ಚೊಗೆಯಾಂತು ಬಲರಾಮದೇವನಂ
ತಾಗಿರ್ಪ ಜನರ ಕಣ್ಮನಕೆ
ನಾಗಿಣಿಯಾಣ್ಮನ ಪೆಡೆದುಳಿದವನಂತೆ
ರಾಗಿಪ ಕೇಳಾಯತಾಕ್ಷಿ ೭೬

ನೀಲಿಬಣ್ಣದ ಅಂಗಿತೊಟ್ಟು, ಬಲರಾಮನಂತೆ ಕಾಣುವನು ಜನರ ಕಣ್ಮನಗಳಿಗೆ; ನಾಗಿಣಿ ಗಂಡನ ಹೆಡೆ ತುಳಿದವನಂತೆ ಕುಣಿದಾಡಿ ತಂದೆ ತಾಯಿಗಳನ್ನು ನಗಿಸುವನು.

ಉಡುಗೆಯನುಡಕಲಿತನು ರತ್ನಖಚಿತ ಹೊಂ
ದೊಡಿಗೆಯ ತೊಡಲೊಡಂಬಟ್ಟ
ಹುಡುಗರ ಕೇಳಮೇಳದೊಳಿರುತಿರ್ಪ ಸಂ
ಗಡಿಗರ ಟಿಕ್ಕರಿಗಳೆವನು ೭೭

ಬಟ್ಟೆ ಉಟ್ಟುಕೊಳ್ಳಲು ಕಲಿತನು, ರತ್ನಖಚಿತ ಒಡವೆಗಳನ್ನು ತೊಟ್ಟುಕೊಳ್ಳಲು ಕಲಿತನು, ಮಕ್ಕಳ ಆಟಪಾಟಗಳಲ್ಲಿ ಭಾಗವಹಿಸವನು, ಸಂಗಡಿಗರನ್ನು ಕಡೆಗಣಿಸುವನು.

ಓದಲಿಕ್ಕಿದೊಡೋದುವನು ಮಾಣಿಯರಿಗೆ
ಬೋಧಾರ್ಹನು ಸುಶಿಕ್ಷೆಯಲಿ
ಸಾಧನೆಗೈವ ಸದ್ಗರುಡಿಯೊಳು ಭೇತಾಳ
ನಾದಂತೆ ನೃಪಕುಮಾರರಿಗೆ ೭೮

ಓದಲು ಕೊಟ್ಟರೆ ಓದುವನು, ಹುಡುಗರಿಗೆ ಬೋಧಕನಾಗುವನು, ಸುಶಿಕ್ಷೆಯಲ್ಲಿ ಸಾಧನೆ ಮಾಡುವನು, ಗರುಡಿಯಲ್ಲಿ ರಾಜಕುಮಾರರಿಗೆ ಭೇತಾಳ ಸದೃಶನಾಗುವನು .

ಎಳಗನನೇಳಿಪನು ಘಟ್ಟಣೆಯಲಿ ದಾವಾ
ನಳನಂತೆ ಸುಪ್ರತಾಪದಿ
ತೊಳಗುವ ತುರುಗಾರೋಹಣಗೈವನು ನಿ
ರ್ಮಳ ಶಾಲಿಹೋತ್ರನಂದದಿ ೭೯

ಗುದ್ದಾಟದಲ್ಲಿ ಟಗರನ್ನು ಬೀಳಿಸಿ ಛೇಡಿಸುವನು, ದಳ್ಳುರಿಯಂತೆ ಪರಾಕ್ರಮದಲ್ಲಿ ಪ್ರಜ್ವಲಿಸುವನು, ನುರಿತ ರಾವುತನಂತೆ ಕುದುರೆ ಸವಾರಿ ಮಾಡುವನು.

ಗಜವೈಹಾಳಿಯ ಮಾಡುತ್ತ ನಿಖಿಳ ಭೂ
ಭುಜರ ದೇವೆಂದ್ರನೆಂಬಂತೆ
ನಿಜ ಧನುರ್ವಿದ್ಯೆಯ ಕಲಿತನು ದಶವರೂ
ಥಜನ ಕೈಚಳಕವೆಂಬಂತೆ ೮೦

ಆನೆ ಸವಾರಿಯನ್ನು ಮಾಡುತ್ತ ಸಕಲ ರಾಜರಿಗೆ ದೇವೇಂದ್ರನಂತಾದನು, ದಶರಥನ ಮಗನ ಕೈಚಳಕವೆಂಬಂತೆ ಬಿಲ್ವಿದ್ಯೆಯನ್ನು ಕಲಿತನು.

ಅಧ್ಯಕ್ಷನಾಗಿ ಸಾಧಿಸಿದನು ಚೌಷಷ್ಟಿ
ವಿದ್ಯದಲಿ ಪರಿಣತನಾಗಿ
ಚೋದ್ಯಾಚೋದ್ಯಂಗಳ ಮಾಳ್ಪ ದ್ವಾರಕಿಯ
ಮಧ್ಯದೊಳನಿರುದ್ಧನಿದ್ದ ೮೧

ಅರುವತ್ತನಾಲ್ಕು ವಿದ್ಯೆಗಳಲ್ಲಿ ಪರಿಣತನಾಗಿ, ವಿನೋದ ವೈಚಿತ್ರ್ಯಗಳನ್ನು ಮಾಡುವ ಅಧ್ಯಕ್ಷನಾಗಿ ದ್ವಾರಕಿಯ ಮಧ್ಯದಲ್ಲಿ ಅನಿರುದ್ಧನಿದ್ದನು.

ಪೆಕ್ಕಳ ದ್ವಿತಯ ಲಾವುಗೆ ತೋರ ಗವುಜಲ
ಕುಕ್ಕುಟ ತಗರು ಕೊಣಗಳ
ಸೊಕ್ಕಾನೆಗಳ ಕಾದಿಸುತಿರ್ದ ದೊರೆಗಳ
ಮಕ್ಕಳ ಕೊಡೆ ಬೀದಿಯಲಿ ೮೨

ಪೆಕ್ಕಳ, ದ್ವಿತಯ, ಲಾವುಗೆ, ಭಾರಿ ಗೌಜಲ, ಕೋಳಿ, ಟಗರು, ಕೋಣ, ಆನೆಗಳನ್ನು ದೊರೆಮಕ್ಕಳ ಜೊತೆಯಲ್ಲಿ ನಡುಬೀದಿಯಲ್ಲಿ ಕಾದಾಡಿಸುತ್ತಿದ್ದ.

ಹದಮಾಡಿ ತಳಪಿಕ್ಕಿ ಪೊಳೆವ ಬತ್ತೀಸಾ
ಯುಧವಿಡಿದಭ್ಯಾಸಿಗಳ

ಮದವೆತ್ತ ಜಗಜಟ್ಟಿಗಳ ಕಾದಿಸುವ ಕೋ
ವಿದ ಶಿರೋಮಣಿಯನವರತ ೮೩

ಹದಮಾಡಿದ, ಹೊಳಪಿಕ್ಕಿದ ಮೂವತ್ತೆರಡು ಆಯುಧಗಳನ್ನು ಹಿಡಿದ ಅಭ್ಯಾಸಿಗಳ, ಮದಿಸಿದ ಜಗಜಟ್ಟಿಗಳ ಕಾದಾಡಿಸುವ ಕೋವಿದ ಶಿರೋಮಣಿಯಾಗಿ ಬೆಳದನು.

ಬಾಲಕೇಳಿಯ ತಿರಸ್ಕರಿಸಿ ಯೌವನದಳೆ
ದೋಲೈಪ ಪಿತೃಪಿತಾಮಹರ
ಲೋಲಾಕ್ಷಿಯರೊಳಾಯಿತು ಚಿತ್ತ ಕಮ್ಮ
ಗೋಲನ ವರ ತನೂಜಂಗೆ ೮೪

ಹುಡುಗಾಟಗಳನ್ನು ಬಿಟ್ಟನು, ಪ್ರಾಯಕ್ಕೆ ಹೆಜ್ಜೆಯಿಟ್ಟು ತಂದೆ ತಾಯಿಗಳನ್ನು ಓಲೈಸ ತೊಡಗಿದನು, ಹಾಗೆಯೇ ಚಿತ್ತ ವಿಲಾಸಿನಿಯರನ್ನು ಮುತ್ತಲಾರಂಭಿಸಿತು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೮೫

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರು ಇರುವ ತನಕ ಲಕ್ಷ್ಮೀಕಾಂತ ರಕ್ಷಿಸುವನು.

# ೧೮ ಅನಿರುದ್ಧನ ನಗರ ಶೋಧನೆ

ಪಿಪ್ಪಲದೊಳಗಿರ್ದ ಪತಿವ್ರತೆಯರ ಗೆದ್ದು
ಮುಪ್ಪುರಗೊಂಡ ಮಾಧವನ
ಅಪ್ಪಣೆವಡೆದು ಬಿತ್ತರಿಸುವ ಕೃತಿ ಜೇನು
ತುಪ್ಪದ ತೊರೆಯಾಗಲೆರೆಯ ೧

ಅರಳಿಮರದಲ್ಲಿದ್ದ ಪತಿವ್ರತೆಯರನ್ನು ಗೆದ್ದು ಮುಪ್ಪುರಗಳನ್ನು ಕೊಂಡ ಮಾಧವನ ಅಪ್ಪಣೆ ಪಡೆದು ಬಿತ್ತರಿಸುವ ಕೃತಿ ಜೇನುತುಪ್ಪದ ತೊರೆಯಾಗಲಿ ಎರೆಯ (ಒಡೆಯ) ಎಂದು ಸುಜ್ಞಾನವಧೂಟಿ ಕನಕನನ್ನು ಕೇಳಿದಳು.

ಶಶಿಲಾಂಛನ ಮುಖಾನ್ವಿತೆ ನಿನ್ನ ಪಿರಿದು ಬ
ಣ್ಣಿಸಲಚ್ಚರಿಯ ಶಬ್ದಗಳ
ಬೆಸಲಾದುದೆನ್ನ ನಾಲಗೆಯೆನಲು ಪೇಳ್ವ
ಕುಶಲದಿ ಕೇಳಿ ಚಿತ್ತೈಸು ೨

ಚಂದ್ರಮುಖಿಯೆ ನಿನ್ನನ್ನ ವರ್ಣಿಸಲು ನನ್ನ ನಾಲಿಗೆ ಸೋಜಿಗದ ಶಬ್ದಗಳನ್ನು ಹೆತ್ತಿದೆ ಎಂದ ಮೇಲೆ, ನಾನು ಬಿತ್ತರಿಸು ಕಥೆಯನ್ನು ಕುಶಲದಿಂದ ಕೇಳು ಎಂದ ಕನಕ

ಮೇರುಪರ್ವತವ ಸುತ್ತುವ ಭಾರ ತನಗೆ
ತೀರುವುದಿಲ್ಲೆಂದು ಸೂರ್ಯ
ವಾರುವ ರಥಗೂಡಿ ಪಡುವೆಟ್ಟು ಶಿಖರದಿ
ನೀರೊಟ್ಟಿಲೊಳು ಬಿದ್ದ ಮುಳಿದು ೩

ಮೇರುಪರ್ವತವನ್ನು ಸುತ್ತುವ ಭಾರ ತನಗೆ ತಪ್ಪವುದಿಲ್ಲವೆಂದು ಕೋಪಗೊಂಡು ಸೂರ್ಯ ತನ್ನ ರಥ ಕುದುರೆಗಳೊಡಗೂಡಿ ಪಡುವಣ ಪರ್ವತ ಶಿಖರದಿಂದ ಸಮುದ್ರದೊಳಕ್ಕೆ ಬಿದ್ದನು.

ಮಿತ್ರ ಮಾವುತ ಬೆನ್ನಟ್ಟಿ ನೀರ್ಗೆಡಹಿದ
ಮತ್ತಗಜೇಂದ್ರ ಶೂಲೆಯಲಿ

ಎತ್ತಲೆಂದರಿಯದೆ ಪರಿದಾಡುವಂತೆ ಕ
ರ್ಗತ್ತಲೆ ತೀವಿತುರ್ವಿಯಲಿ ೪

ಮಿತ್ರ ಮಾವುತ ಬೆನ್ನಟ್ಟಿಕೊಂಡು ಹೋಗಿ ನೀರಿಗೆ ಬೀಳಿಸಿದ ಮದಿಸಿದ ಆನೆ ನೋವಿನಿಂದ ಎತ್ತ ಹೋಗಬೇಕೆಂದರಿಯದೆ ಪರದಾಡುವಂತೆ ಕಗ್ಗತ್ತಲೆ ತುಂಬಿ ತುಳುಕಿತು.

ತಡೆಯದೆ ಭಾಸ್ಕರ ಮುಂಪೋಗಲಾಸತ್ತು
ನಡೆಗೆಟ್ಟು ಕಿರಣಸಂದೋಹ
ಕಡೆಗೆಯ್ದಂತೆ ವೀಧಿಯೊಳಿರ್ಪ ಮಣಿದೀಪ
ಸೆಡೆಯದೆ ಮೆರೆದವಾಪುರದಿ ೫

ತಡೆಯದೆ ಸೂರ್ಯ ಮುಂದಕ್ಕೆ ಹೋಗಲು, ಕಿರಣಗಳು ಆಸತ್ತು ಬೇಸತ್ತು ನಡೆಗೆಟ್ಟು ಅಂಚಿಗೆ ಹೋದಂತೆ ಬೀದಿಯಲ್ಲಿರುವ ರತ್ನ ದೀಪಗಳು ಅಂಜದೆ ಬೆಳಗಿದವು.

ಭೂರಿ ಭೂರುಹ ಶಿಖರವ ಸಾರ್ದವು ಪಕ್ಷಿ
ವಾರಿಜ ಮುಗಿದವಲ್ಲಲ್ಲಿ
ಭೇರಿ ಮದ್ದಳೆ ಶಂಖ ನಪಿರಿ ಹೆಗ್ಗಾಳೆ
ಚೀರದವಖಿಲ ದೇಗುಲದಿ ೬

ಪಕ್ಷಿಗಳು ದೊಡ್ಡಮರ ಹಾಗೂ ಶಿಖರಗಳತ್ತ ಸಾಗಿದವು; ಕಮಲಗಳು ಅಲ್ಲಲ್ಲಿ ಮುಚ್ಚಿಕೊಂಡವು, ಭೇರಿ, ಮದ್ದಳೆ, ಶಂಖ, ನಪಿರಿ (ವಾದ್ಯವಿಶೇಷ), ಹೆಗ್ಗಾಳೆ (ದೊಡ್ಡ ಕಹಳೆ) ಗಳು ಎಲ್ಲ ದೇವಸ್ಥಾನಗಳಲ್ಲೂ ಸದ್ದು ಮಾಡಿದವು.

ಗುಡಿಗಳ ನರ್ತನಗಾತಿಯರ ಬಾಯಿ ಬಡ
ಬಡಿಸುವ ಗೀತಶಬ್ದಗಳ
ವಡಿ ತಪ್ಪದೊಲು ಕೋಲಾಚಾರ್ಯರಿಂ ಜ
ಕ್ಕುಡಿ ಮೆರೆದವು ದೇವಾಯದಿ ೭

ಗುಡಿಗಳ ನರ್ತನಗಾರ್ತಿಯರು ಬಡಬಡಿಸುವ ಗೀತಶಬ್ದಗಳ 'ವಡಿ' ತಪ್ಪದಂತೆ ಉಪಾಧ್ಯಾಯರಿಂದ ವಿನೋದ ಮೆರೆದವು ದೇವಾಲಯದಲ್ಲಿ

ಕೇಣವಿಲ್ಲದೆ ಬೀದಿಬೀದಿಯೊಳಗೆ ದೇವ
ಠಾಣ ನೋಟಕರ ಸಂದೋಹ
ಮಾಣದೆ ಮಣಿ ಸೊಡರ್ವೆಳಗಿನೊಳು ಕೃಷ್ಣ ದಿ
ವಾಣದೊಳಿರ್ದನೋಲಗದಲಿ ೮

ಮಾತ್ಸರ್ಯವಿಲ್ಲದೆ ಬೀದಿಬೀದಿಯೊಳಗೆ ದೇವಸ್ಥಾನ, ನೋಟಕರ ಸಮೂಹ;ಕೃಷ್ಣ ತಪ್ಪದೆ ರತ್ನದೀಪಗಳ ಬೆಳಕಿನಲ್ಲಿ ದಿವಾಣದಲ್ಲಿ ಓಲಗಗೊಟ್ಟಿದ್ದನು.

ಶ್ರೀನಾಥನಿರಲು ಮಾಣಿಕಪೀಠದೊಳುಗ್ರ
ಸೇನನಕ್ರೂರ ಕುಲವೃದ್ಧ
ಆನಕ ದುಂದುಭಿ ನೀಲಾಂಬರ ಸುಪ್ರ
ಧಾನರೊಪ್ಪಿದರೋಲಗದಿ ೯

ರತ್ನಪೀಠಗಳಲ್ಲಿ ಉಗ್ರಸೇನ, ಅಕ್ರೂರ, ಕುಲವೃದ್ಧ ಆನಕದುಂದುಭಿ(ವಸುದೇವ)ನೀಲಾಂಬರ (ಬಲರಾಮ) ಸುಪ್ರಧಾನರು ಓಲಗದಲ್ಲಿ ಒಪ್ಪಿದರು.

ನಿರ್ಮಲ ಹೃದಯನುದ್ಧವ ಸಾತ್ಯಕಿ ಕೃತ
ವರ್ಮಾದ್ಯಖಿಳ ಯಾದವರು
ಭರ್ಮ ರತ್ನಾಂಚಿತಾಸನದಲಿ ಕುಳಿತಿರ್ದ
ಪೆರ್ಮೆಯನೇನ ಬಣ್ಣಿಸುವೆ ೧೦

ಉದ್ಧವ, ಸಾತ್ಯಕಿ, ಕೃತವರ್ಮ ಮೊದಲಾದ ಯಾದವರು ಚಿನ್ನದ ರತ್ನಖಚಿತ ಆಸನದಲ್ಲಿ ಕುಳಿತಿದ್ದ ಹಿರಿಮೆಯನ್ನು ಹೇಗೆ ಬಣ್ಣಿಸಲಿ?

ಬಲದಲಿ ಹನುಮ ಜಾಂಬವ ವಿಭೀಷಣ ಧ್ರುವ
ಕೆಲದಲಿ ಸಲೆ ಬಲಿ ಪ್ರಹ್ಲಾದ
ಜಲಜೋದ್ಭವ ಶೌನಕ ಶುಕ ವಿದುರ ಕೇ
ವಲ ವಿಷ್ಣುಭಕ್ತರೊಪ್ಪಿದರು ೧೧

ಬಲದಲ್ಲಿ ಹನುಮಂತ, ಜಾಂಬವಂತ, ವಿಭೀಷಣ, ಧ್ರುವ, ಕೆಲದಲ್ಲಿ(ಪಕ್ಕದಲ್ಲಿ) ಬಲಿ, ಪ್ರಹ್ಲಾದ(ಬಲಿಯ ತಾತ) ಬ್ರಹ್ಮ, ಶೌನಕ, ಶುಕ, ವಿದುರ ಮೊದಲಾದ ವಿಷ್ಣುಭಕ್ತರು ಒಪ್ಪಿದರು.

ಬಾದರಾಯಣ ಭೃಗು ಕಪಿಲ ನಾರದ ವಿ
ಬೋಧ ವಿಶ್ವಾಮಿತ್ರ ಕಣ್ವ
ಬೋಧಾರ್ಹ ಪರಾಶರ ಜಹ್ನು ಧೌಮ್ಯ ಮುಂ
ತಾದ ಸದ್ಭಕ್ತರೊಪ್ಪಿದರು ೧೨

ಬಾದರಾಯಣ(ವೇದವ್ಯಾಸ), ಭೃಗು, ಕಪಿಲ, ನಾರದ, ಜ್ಞಾನಿ ವಿಶ್ವಾಮಿತ್ರ, ಕಣ್ವ, ಪರಾಶರ, ಜಹ್ನು, ದೌಮ್ಯ, ಮುಂತಾದ ಭಕ್ತರು ಇದ್ದರು

ಶೇಷ ಗರುಡ ಬಕದಾಲ್ಭ್ಯ ರೋಮಶ ದೂ
ರ್ವಾಸ ಮಾರ್ಕಂಡ ಗೌತಮರು
ವಾಸಿಷ್ಠ ಅತ್ರಿ ಭರದ್ವಾಜಾದಿ ನಿಖಿಳ ಮು
ನೀಶರೊಪ್ಪಿರ್ದರೋಲಗದಿ ೧೩

ಆದಿಶೇಷ, ಗರುಡ, ಬಕದಾಲ್ಬ್ಯ, ರೋಮಶ, ದೂರ್ವಾಸ, ಮಾರ್ಕಂಡ, ಗೌತಮ, ವಸಿಷ್ಟ, ಅತ್ರಿ, ಭರದ್ವಾಸ ಮೊದಲಾದ ಮುನೀಶರು ಓಲಗದಲ್ಲಿ ಆಸೀನರಾಗಿದ್ದರು.

ಸುಖದ ರಂಭೆಯೂರ್ವಶಿ ಮಂಜುಘೋಷೆ ಮೇ
ನಕೆ ತಿಲೋತ್ತಮೆ ಮೊದಲಾದ
ನಿಖಿಳಾಪ್ಸರ ವಧು ನರವೆಣ್ಗಳೆಸೆಯೆ ದೇ
ವಕಿಯ ಸೂನುವಿನೆಡೆಬಲದಿ ೧೪

ದೇವಕಿಯ ಮಗನ(ಕೃಷ್ಣನ) ಎಡಬಲದಲ್ಲಿ ರಂಭೆ, ಊರ್ವಶಿ, ಮಂಜುಘೋಷೆ, ಮೇನಕೆ, ತಿಲೋತ್ತಮೆ ಮೊದಲಾದ ದೇವಲೋಕದ ಅಪ್ಸರೆಯರು, ಮಾನವಲೋಕದ ಅಪ್ಸರೆಯರು ರಾರಾಜಿಸಿದರು.

ಸುರನದಿಯಣುಗ ಭೀಷ್ಮಕ ಸತ್ರಜಿತು ಯುಧಿ
ಷ್ಠಿರ ಭೀಮಾರ್ಜುನ ಮಾದ್ರಿಜರು
ಸ್ಮರ ಟೆಕ್ಕೆವೆಸರ ಪಾಂಚಾಲ ಮುಂತಾದ ಭೂ
ವರರಿರ್ದರೆಡದ ಭಾಗದಲಿ ೧೫

ಭೀಷ್ಮ, ಭೀಷ್ಮಕ, ಸತ್ರಜಿತ, ಧರ್ಮರಾಯ, ಭೀಮ, ಅರ್ಜುನ ಮಾದ್ರಿಜರು(ನಕುಲ ಸಹದೇವರು) ಸ್ಮರಟಿಕ್ಕವೆಸರ (ಮನ್ಮಥನ ಧ್ವಜದ ಹೆಸರಾದ ಮತ್ಸ್ಯ) ಪಾಂಚಾಲ ಮುಂತಾದ ರಾಜರಿದ್ದರು ಎಡಭಾಗದಲ್ಲಿ

ಮಾಣದೆ ಮದಜಲ ಸುರಿವ ಪೆರ್ಗಜ ತಗರು
ಕೋಣ ಮಾನಿಸ ಪೆರ್ನೆಗಳು
ಏಣ ಘೋಟಕ ನಂದಿ ವಾಹನಿಗಳ ಗೀ
ರ್ವಾಣಕೊಪ್ಪಿರ್ದರೋಲಗದಿ ೧೬

ಆನೆ, ತಗರು, ಕೋಣ, ಮಾನಿಸ, ನೆಗಳು(ಮೊಸಳೆ) ಏಣ(ಜಿಂಕೆ), ಘೋಟಕ(ಕುದುರೆ) ನಂದಿ(ಎತ್ತು) ವಾಹನಗಳನ್ನು ಹೊಂದಿದ್ದ ದೇವತೆಗಳು ಓಲಗದಲ್ಲಿ ವಿರಾಜಮಾನರಾಗಿದ್ದರು.

ಅವರವರುಗಳ ವಿದ್ಯೆಯ ನೋಡಿ ಮೆಚ್ಚಿ ಸ
ದ್ವಿವರದಿಂದುಡುಗೊರೆಯಿತ್ತು
ಜವದಿ ಸುರ ನರೋರಗರ ಬೀಳ್ಕೊಟ್ಟು ಮಾ
ಧವ ಪೊಕ್ಕ ಮಣಿ ಸಜ್ಜೆವನೆಯ ೧೭

ಅವರವರ ವಿದ್ಯೆಗನುಗುಣವಾಗಿ ಮೆಚ್ಚಿನ ಉಡುಗೊರೆ ಕೊಟ್ಟು ಬೇಗ ಸುರ, ನರ, ಉರಗರ ಬೀಳ್ಕೊಟ್ಟು ಮಾಧವ ರತ್ನಖಚಿತ ಶಯ್ಯಾಗೃಹವನ್ನು ಹೊಕ್ಕನು.

ಪೀತಾಂಬರನೋಲಗದಿಂದ ವರ ಮೀನ
ಕೇತನ ನಿಳಯಕೈತಂದು
ಆತುರವಿಲ್ಲದೆ ಸುತಗೂಡಿ ಭುಂಜಿಸಿ
ತಾ ತನ್ನ ಸಜ್ಜೆಗೈದಿದನು ೧೮

ಕೃಷ್ಣನ ಓಲಗಶಾಲೆಯಿಂದ ಮನ್ಮಥ ಮನೆಗೆ ಬಂದು, ಮಗನೊಡನೆ ಊಟ ಮಾಡಿ, ತಾನು ತನ್ನ ಶಯ್ಯಾಗೃಹಕ್ಕೆ ಹೋದನು.

ಸಜ್ಜನ ಹಿತ ಕಂತುಸುತ ಕೊಂಡು ಬಂದನು
ಕಜ್ಜಾಯ ತುಪ್ಪ ಸಕ್ಕರೆಯ
ಕೊಜ್ಜೆಯರಿಗೆ ಮೆಲ್ಲಿಸುತ ಮಿಕ್ಕುದ ಬಾಗಿ
ಲಜ್ಜರುಗಳಿಗೆ ತುತ್ತಿಸಿದ ೧೯

ಸಜ್ಜನ ಹಿತನಾದ ಕಂತುಸುತ(ಮನ್ಮಥನ ಮಗ ಅನಿರುದ್ಧ) ತೆಗೆದುಕೊಂಡು ಬಂದ ಕಜ್ಜಾಯ ತುಪ್ಪ ಸಕ್ಕರೆಯನ್ನು ಖೋಜಗಳಿಗೆ ತಿನ್ನಿಸಿ ಮಿಕ್ಕುದನ್ನು ಬಾಗಿಲು ಕಾಯುವ ಹಿರಿಯರಿಗೆ ತುತ್ತು ಮಾಡಿ ನೀಡಿದ.

ದಾದಿಯರ ಕುಸ್ತರಿಸಿ ಬೊಕ್ಕಸದವರಿಗೆ
ಬೋಧಿಸಿ ಪೊನ್ನ ಪೆಟ್ಟಿಗೆಯ
ಭೇದಿಸಿ ತೆಗೆದು ನಾನಾ ವಸ್ತುಗಳ ಸಂ
ಪಾದಿಸಿಕೊಂಡನರ್ತಿಯಲಿ ೨೦

ಹಿರಿಯರನ್ನು ಉಪಚರಿಸಿ, ಬೊಕ್ಕಸದವರಿಗೆ ಬೋಧಿಸಿ, ಚಿನ್ನದ ಪೆಟ್ಟಿಗೆಯನ್ನು ತೆಗೆದು, ನಾನಾ ವಸ್ತುಗಳನ್ನು ಪ್ರೀತಿಯಿಂದ ಸಂಗ್ರಹಿಸಿದನು.

ನೀಲಾಭರಣಭೂಷಿತನಾಗಿ ಕಾಗಿನ
ಚೇಲವ ಹೊದ್ದು ಸುಗಂಧ
ಮಾಲಾಲಂಕೃತ ಪೊರಮಟ್ಟ ಪ್ರಾಣಾನು
ಕೂಲ ನೇಹಿಗರೊಡಗೂಡಿ ೨೧

ನೀಲರತ್ನಾಭರಣ ಭೂಷಿತನಾಗಿ ನೀಲಿ ವಸ್ತ್ರವನ್ನು ಹೊದ್ದು, ಸುಗಂಧ ಮಾಲೆಯನ್ನು ಧರಿಸಿ, ಪ್ರಾಣಸಹಾಯುಕ ಸ್ನೇಹಿತರೊಡಗೂಡಿ ಹೊರಹೊರಟ.

ಚಿತ್ತಜನಾತ್ಮಸಂಭವ ಬರ್ಪ ವೀಧಿಯೊ
ಳುತ್ತಮ ಜಾರನಾರಿಯರು
ಕತ್ತಲೆಯಭಿಮಾನ ದೇವತೆ ಬಹು ರೂಪು
ವೆತ್ತಂತೆ ಸುಳಿದಾಡುತಿಹರು ೨೨

ಅನಿರುದ್ಧ ಬಂದ ಬೀದಿಯಲ್ಲಿ ವಾರನಾರಿಯರು, ಕತ್ತಲೆಯ ಅಭಿಮಾನ ದೇವತೆ ಬಹುರೂಪ ತಳೆದಂತೆ ಸುಳಿದಾಡುತಿಹರು.

ಕಂಗಾಣಿಸದ ಪಾರಿಯಪಟ್ಟೆ ಕರ್ವಣ್ಣ
ಗೊಂಗಡಿ ಮುಸುಕಿಕ್ಕಿಕೊಂಡು
ಅಂಗಡಿ ಸೊಡರ್ಗೆಟ್ಟ ಗುಡಿಯೆಡೆಯಲಿದು
ಸ್ಸಂಗ ದಂಪತಿಗಳೊಪ್ಪಿದರು ೨೩

ಕಣ್ಣಿಗೆ ಕಾಣಿಸದ ಬಣ್ಣದ ಬಟ್ಟೆ, ಕಪ್ಪು ಬಣ್ಣದ ಗೊಂಗಡಿ(ಕಂಬಳಿ)ಯನ್ನು ಮುಸುಕು ಹಾಕಿಕೊಂಡು ಅಂಗಡಿ, ದೀಪವಿಲ್ಲದ ಗುಡಿಯಲ್ಲಿ ದುಸ್ಸಂಗ ದಂಪತಿಗಳು ರಾಜ್ಯಬಾರ ನಡೆಸುತ್ತಿದ್ದರು.

ಕಳವಿನ ಕಾಮ ವಿನ್ನೆಂತುಟೊ ಮರ್ಮ
ಸ್ಥಳ ಹೊಕ್ಕು ಕೈಮುಟ್ಟಿದೆಡೆ
ಮೊಳೆವ ರೋಮಾಂಚನ ಗದ್ಗದ ರಭಸವ
ತಳೆದಿರ್ದರತಿ ಧೈರ್ಯದಲಿ ೨೪

ಕಳ್ಳತನದ ಕಾಮ ಎಂಥದೆಂದರೆ ಮರ್ಮಸ್ಥಳ ಹೊಕ್ಕು, ಕೈ ಮುಟ್ಟಿದ ಕಡೆಯಲ್ಲೆಲ್ಲ ಮೊಳೆಯುವ ರೋಮಾಂಚನ, ಗದ್ಗದ, ರಭಸಗಳನ್ನು ಧೈರ್ಯದಿಂದ ಬಿಟ್ಟುಕೊಡಲಿಲ್ಲ.

ಗದೆ ಗುದುಗೆಯ ಝಲ್ಲುಝಲ್ಲೆಂಬ ತಳವಾರ
ರಿದೆ ಬಂದರೆಂದು ಕಾತರಿಸಿ
ಬೆದೆಗಾತಿಯರನು ಬಿಟ್ಟಗಲುವ ವಿಟರುಗ
ಳೆದೆಗೇಡನೇನ ಬಣ್ಣಿಸುವೆ ೨೫

ಗದೆ,ಬಡಿಗೆಗಳ ಲಟಲಟ ಸದ್ದು ಕೇಳಿ, ತಳವಾರ ಇದೋ ಬಂದ ಎಂದು ಕಾತರದಿಂದ ಬೆದೆಗಾತಿಯರನ್ನು ಬಿಟ್ಟು ಅಗಲುವ ವಿಟರ ಎದೆಗೇಡನೇನೆಂದು ಬಣ್ಣಿಸಲಿ?

ತೊಲಗಿ ಪೋಪೆವೆಂದು ಪೋಪರು ಕಾಲು ಬರ
ದೊಲವಿಂದ ಮಗುಳ್ದಪ್ಪುವರು
ಜಲಜಾಕ್ಷಿಯರ ಕುಸ್ತರಿಸಿ ವಿಯೋಗದೊ
ಳಲರಂಬಿಗೆರ್ದೆಯನೊಡ್ಡುವರು ೨೬

ತೊಲಗಿ ಹೋಗುತ್ತೇವೆ ಎಂದು ಹೋಗುವರು, ಕಾಲು ಬರದೆ ಒಲವಿಂದ ಹಿಂದಿರುಗಿ ಬಂದು ಅಪ್ಪಿಕೊಳ್ಳುವರು, ಕಮಲಾಕ್ಷಿಯರನ್ನು ಉಪಚರಿಸಿ, ವಿರಹದಲ್ಲಿ ಹೂಬಾಣಕ್ಕೆ ಎದೆಯನ್ನು ಒಡ್ಡುವರು.

ಸೋದರಮಾವ ಭಾವಮೈದನ ತಳವರ
ನಾದರೆ ತಾವಡ್ಡ ಬರಲಿ
ಹಾದರಿಗರನಿಂತು ಪೂಗೋಲೊಳಿಕ್ಕುವು
ದೇದೊರೆತನವೆಂದರಳುತ ೨೭

ಸೋದರಮಾವ, ಭಾವಮೈದುನ ತಳವಾರರಾದರೆ ತಾವಡ್ಡ ಬರಲಿ,

ಆದರೆ ಹಾದರಿಗರನ್ನು ಹೀಗೆ ಹೂಬಾಣದಿಂದ ಹೊಡೆದು ನರಳಿಸುವುದು ಎಂಥ ದೊರೆತನ ಎಂದತ್ತರು.

ಪಂಕೇರುಹಜಾತ ಪಾಪಿಷ್ಠ ಮನೆಗೊರ್ವ
ಮಂಕನ ತೊಡರ್ಚಿದ ತನ್ನ
ಸೋಂಕಲೊಪ್ಪುವ ಕಾಂತನ ವಿವಾಹಕೆ ನವ್ಯ
ಕಂಕಣ ಕಟ್ಟೆಂದರಳುತ ೨೮

ಪಾಪಿಷ್ಟ ಬ್ರಹ್ಮ ಮನೆಗೊಬ್ಬ ಮಂಕಗಂಡನನ್ನು ಗಂಟು ಹಾಕಿದ. ತನ್ನನ್ನು ಮುಟ್ಟಲೊಪ್ಪುವ ಕಾಂತನ ವಿವಾಹಕ್ಕೆ ಹೊಸ ಕಂಕಣ ಕಟ್ಟು ಎಂದು ಅತ್ತರು.

ಉದ್ಯೋಗ ವ್ಯವಹಾರ ನೃಪಸೇವೆಯವರು
ಮಧ್ಯರಾತ್ರಿಗೆ ಬರ್ಪನಕ
ಸದ್ಯ ನಿದ್ದೆಗೆಯ್ಯದೆ ಮನೆಯಲಿ ಹಾದರ
ವಿದ್ಯದಂಗನೆಯರು ಕಾಯ್ವರು ೨೯

ಉದ್ಯೋಗ, ವ್ಯವಹಾರ, ರಾಜಸೇವೆಯಲ್ಲಿ ನಿರತರಾದವರು ಮಧ್ಯರಾತ್ರಿಗೆ ಬಂದರೂ ಅಲ್ಲಿಯವರೆಗೂ ನಿದ್ದೆ ಮಾಡದೆ ಹಾದಾರಾಂಗನೆಯರು ಕಾಯುವರು.

ಖೋಡಿಯಿಲ್ಲದೆ ರಾಜ್ಯವನಾಳಿ ಕಾಲವ
ದೂಡಿ ಸೂರ್ಯ ಮುಳುಗಲೊಡನೆ
ಕ್ರೀಡಿಪ ಜಾರಚೋರರ ಶಿಕ್ಷಿಪೆನೆಂದು
ಮೂಡಿದ ಚಂದ್ರ ತಾರೇಂದ್ರ ೩೦

ದೋಷವಿಲ್ಲದೆ ರಾಜ್ಯವಾಳಿ, ಸೂರ್ಯ ಮುಳುಗಿದ ಕೂಡಲೇ ಕ್ರೀಡಿಸುವ ಜಾರರು ಚೋರರುಗಳನ್ನು ಶಿಕ್ಷಿಸುತ್ತೇನೆಂದು ತಾರೇಂದ್ರ ಚಂದ್ರ ಮೂಡಿದನು.

ನೇರಂದವಾಗಿರ್ದ ಗುರುಪತ್ನಿಗೆ ಸತ್ಕು
ಮಾರನ ಕೊಟ್ಟ ಸಾತ್ವಿಕನು
ಜಾರರ ಕೊಲಬಂದ ನೋಡೆಂದು ನೆಯ್ದಿಲೆ
ನೀರೊಳು ನಸುನಕ್ಕುವಾಗ ೩೧

ನೆಟ್ಟಗಿದ್ದ ಗುರುಪತ್ನಿಗೆ (ಶಿಷ್ಯನಾದ ಚಂದ್ರ ಬೃಹಸ್ಪತಿಯ ಪತ್ನಿಯಾದ ತಾರೆಯನ್ನು ಇಟ್ಟುಕೊಂಡು ಬುಧನ ನಿಜವಾದ ತಂದೆಯಾದ) ಕುಮಾರನನ್ನು

ಕೊಟ್ಟ ಸಾತ್ತ್ವಿಕ ಚಂದ್ರ ಜಾರರನ್ನು ಕೊಲ್ಲಲು ಬಂದ ನೋಡೆಂದು ನೀರಲ್ಲಿ ನೈದಿಲೆಗಳು ನಕ್ಕವು. (ಅರ್ಥಾತ್ ಅರಳಿದವು).

ಒಸರಿತು ಶಶಿಕಾಂತ ಶಿಲೆ ಸೊದೆಗಡಲ ಚುಂ
ಬಿಸಿತು ಚಕೋರಿ ಚಂದ್ರಿಕೆಯ
ಬಿಸುರಹ ರಥವಕ್ಕಿ ತಸ್ಕರ ಜಾರರ್ಗೆ
ಬಿಸವಾದುದಮೃತ ಕಿರಣ ೩೨

ಬೆಳುದಿಂಗಳಿಗೆ ಚಂದ್ರಕಾಂತ ಶಿಲೆ ಜಿನುಗುತೊಡಗಿತು ಚಕೋರ ಪಕ್ಷಿಗಳು ಚಂದ್ರಿಕೆಗೆ ಬಾಯಿತೆರೆದು ಸ್ವೀಕರಸಿದವು. ಆದರೆ ಕಮಲ, ಚಕ್ರವಾಕ ಪಕ್ಷಿ, ಕಳ್ಳ, ವ್ಯಭಿಚಾರಿಗಳಿಗೆ ಅಮೃತಕಿರಣ(ಚಂದ್ರ) ವಿಷವಾದನು.

ಜೊನ್ನ ಬೆಳಗಿನ ಭದ್ರಮಂಟಪ ನಿಚಯದ
ಸೊನ್ನ ಜಗುಲಿಯ ಸಾಲಿನಲಿ
ರನ್ನದೊಡವನಿಟ್ಟ ಜಾರಿಣಿಯ ಕಣ್ಬೆಳ
ಗುನ್ನತವಾಯ್ತು ಬೀದಿಯಲಿ ೩೩

ಬೆಳುದಿಂಗಳ ಬೆಳಕಿನ ಮಂಗಳ ಮಂಟಪ ಸಮೂಹದ ಚಿನ್ನದ ಜಗುಲಿಯ ಸಾಲಿನಲ್ಲಿ ರತ್ನದಾಭರಣ ತೊಟ್ಟ ಜಾರಿಣಿಯ ಕಣ್ಬೆಳಗು ಬೀದಿಯತ್ತ ಕೈಬೀಸಿತು.

ತೋರಿಯ ನಿಖಿಳ ಪೊಂಗಳಸದಿ ಮೆರೆವ ಚೌ
ಬಾರಿಯ ಹರ್ಮ್ಯದ ಮುಂದೆ
ವಾರಿಜದಳಲೋಚನೆಯರೊಪ್ಪುವ ಸೂಳೆ
ಗೇರಿಯ ಸೊಬಗನೀಕ್ಷಿಸಿದ ೩೪

ಹೊಂಗಳಸದಿಂದ ಮೆರೆವ ನಾಲ್ಕು ಕಡೆಗೂ ಬಾಗಿಲಿರುವ ಉಪ್ಪರಿಗೆಯ ಮೊಗಸಾಲೆಯ ಮುಂದೆ ಸೂಳೆಗೇರಿಯ ಸೊಬಗನೀಕ್ಷಿಸಿದ.

ಜಾಣಶಿಲ್ಪಿ ನಿರ್ಮಿತ ಚಂದ್ರಕಾಂತ ಪಾ
ಷಾಣ ವೇದಿಕೆಯ ಸಾಲಿನಲಿ
ಏಣಾಕ್ಷಿಯರ ಮಂದಿರಗಳಿರ್ದುವು ಪಂಚ
ಬಾಣನ ರತಿಗೇಹಗಳಂತೆ ೩೫

ಚಂದ್ರಕಾಂತ ಶಿಲೆಯ ವೇದಿಕೆಯ ಸಾಲಿನಲ್ಲಿ ಜಾಣಶಿಲ್ಪಿಯಿಂದ ನಿರ್ಮಿತವಾದ ವಿಳಾಸಿನಿಯರ ಮಂದಿರಗಳಿದ್ದವು – ಮನ್ಮಥ ಮಡದಿ ರತಿಯ ಮಂದಿರಗಳಿದ್ದಂತೆ

ಚೆನ್ನಾಗಿ ಪುಳಿದೊಡೆದೊಪ್ಪವಿಕ್ಕಿದ ಚೊಕ್ಕ
ಚಿನ್ನದ ಪ್ರತಿಮೆಗಳಂದದಿ
ರನ್ನಕುಂದಣ ಹಾರವ ತೊಟ್ಟ ಸುಗುಣ ಸಂ
ಪನ್ನೆಯರಿರ್ದರಿಕ್ಕೆಲದಿ ೩೬

ಚೆನ್ನಾಗಿ ಹುಳಿಹಚ್ಚಿ ಬೆಳಗಿದ ಚೊಕ್ಕ ಚಿನ್ನದ ಬೊಂಬೆಗಳಂತೆ ರತ್ನಖಚಿತ ಹಾರ ಧರಿಸಿದ ಸುಗುಣ ಸಂಪನ್ನೆಯರು ಎರಡು ಕಡೆಯಲ್ಲಿಯೂ ಇದ್ದರು.

ಬಾಲೆಯೊರ್ವಳು ತಾನಿಹ ಗೇಹದ ಚಂದ್ರ
ಶಾಲೆಯೊಳು ನಿಂದು ನುಣ್ಮೊಲೆಯ
ಮೇಲಿಹ ಸೆರಗನೆತ್ತಿ ನೋಡಿದಳು ರತಿ
ಯೋಲೆಯ ನೋಡಿಕೊಂಬಂತೆ ೩೭

ಯುವತಿಯೊಬ್ಬಳು ತಾನಿರುವ ಮನೆಯ ಮೊಗಸಾಲೆ (ಪಡಸಾಲೆ)ಯಲ್ಲಿ ನಿಂತು ಎದೆಯ ಮೇಲಿನ ಸೆರಗನ್ನೆತ್ತಿ , ರತಿಪತ್ರವನ್ನು ನೋಡುವಂತೆ ನೋಡಿದಳು.

ಮಡಚೆಲ್ವ ಮೃದು ಪಾದ ಜಾನು ಜಂಘೆ ನು
ಣ್ಪಡಸಿರ್ದ ಕರಿಕುಂಭಜಘನ
ಬಡನಡು ಬಟ್ಟಬಲ್ಮೊಲೆ ಕಂಬುಕಂಧರ
ಉಡುರಾಜ ಮುಖವು ಪದ್ಮಿನಿಗೆ ೩೮

ಪದ್ಮಿನಿಗೆ ಚೆಲುವಾದ ಮಡ(ಹಿಮ್ಮಡಿ), ಮೃದುವಾದ ಪಾದ(ಹೆಜ್ಜೆ), ಜಾನು(ಮೊಣಕಾಲು), ಜಂಘೆ(ಕಣಕಾಲು), ಕರಿಕುಂಭ ಜಘನ(ಆನೆಯ ನೆತ್ತಿಯಾಕಾರದ ನಿತಂಬ), ಬಡನಡು(ಸಣ್ಣಸೊಂಟ) ಬಟ್ಟ ಬಲ್ಮೊಲೆ (ದುಂಡಗಿರುವ ಮೊಲೆ), ಕಂಬುಕಂಧರ(ಶಂಖದಂಥ ಕೊರಳು), ಉಡುರಾಜ ಮುಖ(ಚಂದ್ರನಂಥ ಗುಂಡಾದ ಮುಖ) ಎದ್ದು ಕಾಣುವ ಅಂಶಗಳು.

ಮಾತನಾಡುವ ಠಾವಲಿ ಬೆಮರುವೆಡೆಯಲಿ
ಶ್ವೇತ ನಾಣೊರೆವ ಠಾವಲಿ
ನೂತನ ಕ್ರಮುಕ ಯೌವನ ಜೋಳ ಪೊಂಬಾಳೆ
ನಾತ ಸರ್ವಾಂಗ ಶಂಖಿನಿಗೆ ೩೯

ಬಾಯಿಯಲ್ಲಿ, ಕಂಕುಳಲ್ಲಿ, ಯೋನಿಯಲ್ಲಿ ಹೊಸ ಅಡಿಕೆ, ಸೀಮೆಜೋಳಗಳ ಹೊಂಬಾಳೆ ವಾಸನೆ ಶಂಖಿನಿಗೆ

ನೆತ್ತಿಯೊಳಿಟ್ಟ ಪೆರ್ದುರುಬು ಕಂಧರದಲಿ
ಮುತ್ತಿನ ಸರ ಕುಂಭಕುಚದಿ
ಒತ್ತಿ ಕಲ್ಲೆದೆಯವರ ಮನವನಿರ್ಕುಳಿಗೊಂಬ
ಚಿತ್ತಿನಿಯರುಗಳೊಪ್ಪಿದರು ೪೦

ನೆತ್ತಿಯ ಮೇಲಿನ ದೊಡ್ಡ ತುರುಬು, ಕೊರಳಲ್ಲಿ ಮುತ್ತಿನಸರ, ಕೊಡಮೊಲೆಗಳಿಂದ ಕಲ್ಲೆದೆಯವರನ್ನು ಬಲವಾಗಿ ಒತ್ತಿ ಮನವನ್ನು ಕರಗಿಸುವ, ದ್ರವಿಸುವಂತೆ ಮಾಡುವ ಚಿತ್ತಿನಿಯರು ಇದ್ದರು.

ವಸ್ತಿಯೊಳೊಲಿದು ಸಂಚರಿಸುವ ರತ್ನ ಗ
ಭಸ್ತಿ ಭೂಷಣ ಸದ್ವಿಟರಿಗೆ
ಸ್ವಸ್ತಿ ಸತಿಯರ ಮೇಲಣ ಭ್ರಾಂತ ಬಿಡಿಸುತ
ಹಸ್ತಿನಿಯರುಗಳೊಪ್ಪಿದರು ೪೧

ಸಿರಿತನದಿಂದ ಸಂಚರಿಸುವ ರತ್ನಪ್ರಭೆಯ ಆಭರಣಧಾರಿ ವಿಟರುಗಳಿಗೆ ತಮ್ಮ ಒಳ್ಳೆಯ ಹೆಂಡತಿಯರ ಮೇಲಿನ ಭ್ರಾಂತನ್ನು ಬಿಡಿಸುವ ಹಸ್ತಿನಿಯರು ಮಿಂಚಿದರು.

ಸೋತ ಸೋಲಕೆ ಶಿವನೊಳು ಸೆಣೆಸುವ ಮೀನ
ಕೇತನ ಪರಿವಾರದಂತೆ
ನೂತನಾವಯವ ಸದ್ಗುಣ ರೂಪು ನಾಲ್ಕು
ಜಾತಿಯಂಗನೆಯರೊಪ್ಪಿದರು ೪೨

ಸೋತರೂ ಶಿವನೊಡನೆ ಸೆಣೆಸುವ ಮನ್ಮಥನ ಪರಿವಾರದಂತೆ ಹೊಸ ಅಂಗಾಂಗ, ಒಳ್ಳೆಯ ಗುಣ ರೂಪಗಳುಳ್ಳ ನಾಲ್ಕು ಜಾತಿಯ (ಪದ್ಮಿನಿ, ಶಂಖಿನಿ,ಚಿತ್ತಿಸಿ, ಹಸ್ತಿನಿ) ಅಂಗನೆಯರು ರಾರಾಜಿಸಿದರು.

ತರಳಾಕ್ಷಿ ತನ್ನೊಳು ಪಾಡುವರಿಲ್ಲೆಂದು
ಕೊರಲೊಳಿಟ್ಟಳು ಕಂಠಸರವ
ಪೆರತೊರ್ವಳು ವೀಣೆಗಾರ್ತಿಯರಿಲ್ಲೆನುತ
ಬೆರಲೊಳಿಟ್ಟಳು ಮುದ್ರಿಕೆಯ ೪೩

ಹೆಣ್ಣೊಬ್ಬಳು ತನ್ನಲ್ಲಿ ಹಾಡುವವರು ಇಲ್ಲವೆಂದು ತನ್ನ ಕೊರಳಿಗೆ ಕಂಠಸರ (ಕೊರಳ ಹಾರ) ತೊಟ್ಟುಕೊಂಡಳಂತೆ; ಇನ್ನೊಬ್ಬಳು ವೀಣೆಗಾತಿಯರು ಇಲ್ಲವೆಂದು ಬೆರಳಿಗೆ ಉಂಗುರವನ್ನು ಇಟ್ಟುಕೊಂಡಳಂತೆ.

ಆಯತವಿಡುಪು ಸುಸ್ವರ ಷಡ್ಜ ಪಂಚಮ
ಸ್ಥಾಯಿ ಸಂಚರ ಠಾಯಿ ನೇಮ
ಬಾಯಿದೆರೆಯ ಸಲೆ ಆಯ ತಪ್ಪದ ಗೀತ
ಗಾಯಕಿಯರುಗಳೊಪ್ಪಿದರು ೪೪

ಸಂಗೀತರಲ್ಲಿ ಆಯತ, ವಿಡುಪು, ಸುಸ್ವರ, ಷಡ್ಜ, ಪಂಚಮ, ಸ್ಥಾಯಿ, ಸಂಚರ, ಠಾಯಿ ನಿಯಮಗಳನ್ನು ಕೊಂಚವೂ ಕ್ರಮತಪ್ಪದೆ ಪಾಲಿಸುವ ಗೀತಗಾಯಿಕಿಯರು ಶೋಭಿಸಿದರು

ರಂಭೆಯನೇಡಿಸಿ ಗೀತವನು ಕಡಕೊಟ್ಟು
ಕೊಂಬರು ಶುದ್ಧ ಚಾರಿಯರು
ಜಂಭಭೇದಿಯ ಮುದ್ದು ಊರ್ವಶಿಯ ಗೆದ್ದು
ಬೊಂಬೆಯ ಕಾಲಿಗೆ ಕಟ್ಟಿಹರು ೪೫

ರಂಭೆಯನ್ನು ಗೇಲಿಮಾಡಿ ಗೀತವನ್ನು ಸಾಲ ಕೊಟ್ಟು ಕೊಂಬುವರು ಅಪ್ಪಟ ತಂತ್ರಗಾತಿಯರು; ಇಂದ್ರನ ಮುದ್ದು ಊರ್ವಶಿಯನ್ನು ಗೆದ್ದು ಅವಳನ್ನು ಗೊಂಬೆ ಮಾಡಿ ಕಾಲಿಗೆ ಕಟ್ಟಿಕೊಂಡಿಹರು.

ಹಸ್ತವಾವುಜ ವೀಣೆ ಮದ್ದಳೆ ರಾವಣ
ಹಸ್ತ ಕಿನ್ನರಿ ಜಂತ್ರ ಉಡುಕು
ದುಸ್ತರ ಸ್ವರಮಂಡಲ ವಾದ್ಯ ವಿದ್ಯಾಪ್ರ
ಶಸ್ತ ಸ್ತ್ರೀಯರಿದ್ದರಲ್ಲಿ ೪೬

ಹಸ್ತವಾವುಜ,ವೀಣೆ, ಮದ್ದಳೆ, ರಾವಣಹಸ್ತ, ಕಿನ್ನರಿ ಜಂತ್ರ, ಉಡುಕು, ಸ್ವರಮಂಡಲ ಮೊದಲಾದ ವಾದ್ಯವಿದ್ಯಾ ಪ್ರವೀಣೆಯರು ಇದ್ದರು.

ಎಲ್ಲಾ ಕಲೆಗಳ ಆಮೂಲಾಗ್ರವ ನೆರೆ
ಬಲ್ಲಂಥ ವಾರನಾರಿಯರು
ಪುಲ್ಲಶರನ ರೂಪವನೇಡಿಸುತಿಹ ಪ್ರಾಣ
ವಲ್ಲಭರೊಡನೆ ಕ್ರೀಡಿಪರು ೪೭

ಎಲ್ಲ ಕಲೆಗಳ ಆಮೂಲಾಗ್ರವನ್ನು ತಿಳಿದಂಥ ವಾರನಾರಿಯರು, ಮನ್ಮಥನ ರೂಪವನ್ನು ಗೇಲಿ ಮಾಡುವಂಥ ಸುರೂಪಿಗಳೊಡನೆ ರತಿಕ್ರೀಡೆಯನಾಡುವರು.

ಕೂಟದಿ ನಾಗರಿಕನ ಮರೆದೊರಗಿಸಿ ನೆರೆ
ಪೀಠ ಮರ್ದಕನ ಸೊಕ್ಕಿಪರು
ಕೋಟಲೆಗೊಳಿಪರು ವಿಟವಿದೂಷಕರ ಕ
ಣ್ಬೇಟದಿ ಮರುಳು ಮಾಡುವರು ೪೮

ಸಂಭೋಗದಲ್ಲಿ ನಾಗರಿಕರನ್ನು ಮೈಮರೆದು ಮಲಗುವಂತೆ ಮಾಡುವರು, ರಾಜನ ನಮರಾ ಸಚಿವರನ್ನು ಸುಸ್ತುಮಾಡಿ ಸೊರಗಿಸುವರು, ವಿಟವಿದೂಷಕರನ್ನು ಕಣ್ಣುಕಣ್ಣುಗಳ ನೋಟಬೇಟದಿಂದಲೇ ಮರುಳು ಮಾಡಿ ಕೋಟಲೆಗೊಳಿಸುವರು.

ಲೇಸಿನ ವಿಟರುಗಳವಯವದಲಿ ಮೋದದಿ
ಚೌಶೀತಿ ಬಂಧದಿ ಕೂಡಿ
ಗಾಸಿವಡೆದು ಚಂದ್ರಶಾಲೆಯಲಿ ತಂಗಾಳಿ
ಬೀಸಿದರೆದೆಯನೊಡ್ಡುವರು ೪೯

ಒಳ್ಳೆಯ ವಿಟರೊಂದಿಗೆ ಎಂಭತ್ತುನಾಲ್ಕು ಸಂಭೋಗ ಭಂಗಿಗಳಲ್ಲಿ ಸಂತಸದಿಂದ ಸುಖಿಸಿ, ಸುಸ್ತಾಗಿ ಗಾಸಿಗೊಂಡು ಪಡಸಾಲೆಗೆ ಬಂದು ತಂಗಾಳಿ ಬೀಸಿದರೆ ಎದೆಯೊಡ್ಡಿ ಹಾಯೆಂದು ಮುದಗೊಳ್ಳುವರು.

ವಕ್ಷದ ವೃತ್ತಕುಚ ದರ್ಶನದ ಉರು ತಪ
ಪಕ್ಷಪಾತವ ನಿವಾರಿಸಿತು
ಕಕ್ಷ ವಿಲೋಮ ಸೌಖ್ಯವ ಕಂಡ ಯತಿಗಳು
ಭಕ್ಷ್ಯವ ತೊರೆದು ದುಕ್ಕಿಪರು ೫೦

ಇಲ್ಲಿ ಮುಂಡಿಗೆಯ (ಒಗಟಿನ) ಅಭಿವ್ಯಕ್ತಿಯ ಮೂಲಕ ಅಶ್ಲೀಲ ಎನ್ನಿಸದ ಹಾಗೆ ವಿಲೋಮಸಂಭೋಗ ಭಂಗಿಯನ್ನು ಕವಿ ವರ್ಣಿಸಿದ್ದಾರೆ; ವಕ್ಷಸ್ಥಲದ

ದುಂಡುಮೊಲೆಗಳ ದರ್ಶನ ಪಕ್ಷಪಾತವನ್ನು(ಕೆಳಗೆ ಬಿದ್ದ ಕೈಗಳನ್ನು) ನಿವಾರಿಸಿತು.(ಮೇಲ್ಕಕೆ ಆನಿಸುವಂತೆ ಮಾಡಿತು). ವಿಲೋಮ ಯೋನಿ ಸಂಪರ್ಕದ ಸುಖವನ್ನು ಅನುಭವಿಸಿದ ಯತಿಗಳು ಊಟ ವರ್ಜಿಸಿ ದುಕ್ಕಿಸುವರು.

ಗಾಡಿಗಾರ್ತಿಯರ ಯೌವನ ರೂಪ ವಿಭವ
ನೋಡಿದ ವರ ಜಿತೇಂದ್ರಿಯರು
ಸೂಡಿದ ಜಡೆಯನಿಳುಹಿ ತಲೆಗಳನು ಬೋಳು
ಮಾಡಿಕೊಂಡುದನೆಂತುಸುರಲಿ ೫೧

ಸುಂದರಿಯರ ಯೌವನ, ರೂಪ, ವೈಭವಗಳನ್ನು ನೋಡಿದ ಜಿತೇಂದ್ರಿಯರು ಕಟ್ಟಿದ ಜಡೆಯನ್ನು ಬಿಚ್ಚಿ ತಲೆ ಬೋಳಿಸಿಕೊಂಡದ್ದನ್ನು ಹೇಗೆ ವರ್ಣಿಸಲಿ?

ಮೊಡವಿಯ ಮೊಳೆಯನೊತ್ತುತ ಕಕ್ಷಸೊನೆ ಬೆಮ
ರ್ವಡೆದ ಸೊಗಡ ವಾಸಿಸುತ
ಬಿಡೆಯವಿರದೆ ಕುಚ ಬಿಗುವೇರಿ ಋತುಗಾಲ
ವಡೆದ ಪುಷ್ಪಿಣಿಯರೊಪ್ಪಿದರು ೫೨

ಮೊಡವೆಯ ಮೊಳಕೆಯನ್ನು ಒತ್ತುತ್ತಾ ಕಂಕುಳಿನ ಸೊನೆಬೆವರ ಸೊಗಡನ್ನು ವಾಸಿಸುತ್ತಾ, ಸಂಕೋಚಿಸದೆ ಮೊಲೆಗಳು ಬಿಮ್ಮಗೆ ಬಿರಿದು ಮುಟ್ಟಾದ ಪುಷ್ಪವತಿ (ಮೈನೆರೆದವರು)ಯರು ಇದ್ದರು.

ಮುಟ್ಟದಿರಾಳ್ದ ಮುಟ್ಟುವೆನಾತ್ಮೇಶ್ವರಿ
ಮುಟ್ಟಲಾಯುವು ಕ್ಷೀಣಿಪುದು
ಮುಟ್ಟದೊಡಸು ನಿಲ್ಲದೆನುತೊರ್ವನು ಬಳಸಿ
ಬಟ್ಟ ಜವ್ವನೆಯನಪ್ಪಿದನು ೫೩

ಮುಟ್ಟದಿರು ಒಡೆಯ, ಮುಟ್ಟುವೆನು ನನ್ನ ಜೀವಿತೇಶ್ವರಿ; ಮುಟ್ಟಿದರೆ ಆಯಸ್ಸು ಕ್ಷೀಣವಾಗುವುದು, ಮುಟ್ಟದಿದ್ದರೆ ಪ್ರಾಣ ನಿಲ್ಲದು ಎಂದು ಒಬ್ಬನು ದುಂಡುದುಂಡಾಗಿರುವ ಪ್ರಾಯಸ್ಥೆಯನ್ನು ಬಾಚಿ ಅಪ್ಪಿಕೊಂಡನು.

ಮಂಗಳಾಚಾರವಂತರ ಮೇಲೆ ಕುಸುಮ ಶ
ರಂಗಳ ಕರೆದ ಮನ್ಮಥನು

ಹೆಂಗಳ ಮೊಲೆಯ ಕಣ್ಬಲೆಗೆ ಬೀಳಿಸಿ ದುಷ್ಕೃ
ತಂಗಳ ಮಾಡಿಸುತಲಿಹನು ೫೪

ಆಚಾರವಂತರ ಮೇಲೆ ಹೂಬಾಣಗಳನ್ನು ಬಿಟ್ಟ ಮನ್ಮಥನು, ಹೆಣ್ಣುಗಳ ಮೊಲೆಯ ಕಣ್ಬಲೆಗೆ ಬೀಳಿಸಿ ಕೆಟ್ಟಕೃತ್ಯಗಳನ್ನು ಮಾಡಿಸುತ್ತಿರುವನು.

ಸೊಗಯಿಪ ಚಂದ್ರಕಾಂತದ ಭಿತ್ತಿಯೊಳು ತನ್ನ
ಯುಗಳ ಸ್ವರೂಪ ಬಿಂಬಿಸಲು
ಅಗಲ್ದಿನಿಯನ ತೋರಿಸು ಬಾಯೆಂದೊರ್ವನ
ಮುಗುದೆ ಬಿದ್ದಳು ಚರಣದಲಿ ೫೫

ಸುಂದರವಾದ ಚಂದ್ರಶಿಲೆಯ ಭಿತ್ತಿ(ಗೋಡೆ)ಯಲ್ಲಿ ತನ್ನ ಜೋಡಿ ಸ್ವರೂಪ ಕಂಡು ಬರಲು ತನ್ನನ್ನು ಅಗಲಿದ ಪ್ರಿಯತಮನನ್ನು ತೋರಿಸು ಬಾ ಎಂದು ಒಬ್ಬನ ಪಾದಕ್ಕೆ ಮುಗ್ಧೆಯೊಬ್ಬಳು ಬಿದ್ದಳು.

ರಂಭಾಮೂಲ ಪಲ್ಲವಯೋಗ ಕದಳೀ
ಸ್ತಂಭ ರಥಾಂಗ ತತ್ಸಂಗ
ಕೆಂಬಲ್ಗಳಜ್ಜರ ಕೂಟದಿ ದುಗುಡಾವ
ಲಂಬಿ ಮಾನಿನಿಯರೊಪ್ಪಿದರು ೫೬

ಬಾಳೆಯ ಬೇರಿಗೂ ಚಿಗುರಿಗೂ ಸರಿಯಾದ ಸಂಯೋಗ ಸಾಧ್ಯವೆ? ಬಾಳೆಯ ದಿಂಡಿಗೂ ಎಣೆವಕ್ಕಿಗೂ(ಯುಗಳ ಚಕ್ರವಾಕ) ಸಂಯೋಗ ಸಾಧ್ಯವೆ? ಕೆಂಪು ಹಲ್ಲುಗಳ ಮುದುಕರ ಕೂಟದಿಂದ ಅತೃಪ್ತಗೊಂಡ ಮಾನಿನಿಯರು ದುಕ್ಕದಿಂದ ನರಳಿದರು.

ಕತ್ತಲೆ ಪೆರೆ ಕಾರ್ಮುಗಿಲು ಸೂರ್ಯ ತೋರ
ಮುತ್ತು ದಾಡಿಮ ಶಂಖಚಕ್ರ
ವೃತ್ತಸಿಂಹಾದ್ರಿಯ ಪೊಂಬಾಳೆ ಮಾಂದಳಿ
ರ್ಮೊತ್ತದಂತಿರ್ದುವಲ್ಲಲ್ಲಿ ೫೭

ಕತ್ತಲೆ–ಚಂದ್ರ, ಕಾರ್ಮುಗಿಲು–ಸೂರ್ಯ, ದಪ್ಪ ಮುತ್ತು ದಾಳಿಂಬೆಬೀಜ, ಶಂಖ–ಚಕ್ರ, ಹೊಂಬಾಳೆ–ಮಾವಿನ ಚಿಗುರು– ಹೀಗೆ ಅಸಮಾನ ಜೋಡಿಗಳು ಕಂಡು ಬಂದವು.

ಪಿಂತಣಲೋಕದ ನಳಕೂಬರ ಮೇಣ್ ಜ
ಯಂತಾದಿಗಳನು ಕೀಳ್ಪಡಿಸಿ
ಸಂತತ ವಿಟರು ಜಾರೆಯರ ಪಕ್ವ ವಶ್ಯಾ
ಕ್ರಾಂತರಾಗಿ ಸುಳಿದಾಡುವರು ೫೮

ಹಿಂದಿನ ನಳಕೂಟರ ಜಯಂತಾದಿಗಳನ್ನು ಕೀಳ್ಪಡಿಸಿ, ಇಂದಿನ ವಿಟರು ಜಾರೆಯರ ಪರಿಪಕ್ವ ವಶವರ್ತಿಯಾದವರಂತೆ ಸುಳಿದಾಡುತ್ತಿರುವರು.

ತುಂಗಸ್ತನೆಯರನೇಕ ದೇಶದ ಸದ್ಭು
ಜಂಗರೊಳು ಕೊರಚಾಡುತಿರ್ದು
ಅಂಗಜನಾತ್ಮಸಂಭವನ ಲಾವಣ್ಯವ
ಕಂಗಳಿಂ ನೋಡಿದರೊಲಿದು ೫೯

ಅನೇಕ ದೇಶಗಳ ವಿಟರೊಡನೆ ಕಿರುಚಾಡುತ್ತಿದ್ದ ವಾರನಾರಿಯರು ಮನ್ಮಥನ ಮಗನಾದ ಅನಿರುದ್ಧನ ಸೌಂದರ್ಯವನ್ನು ಕಣ್ತುಂಬಿ ನೋಡತೊಡಗಿದರು.

ಕಾಣಬರದು ಪುಂಡ್ರೇಕ್ಷು ಕೋದಂಡವದು
ಮೇಣು ಪೂಬಾಣಗಳಿಲ್ಲ
ಏಣನೇತ್ರೆಯರ ಮನವನಿರ್ಕುಳಿಗೊಂಬ
ಜಾಣನಾರೆಂದು ನೋಡಿದರು ೬೦

ಕಬ್ಬಿನ ಬಿಲ್ಲು ಕಾಣುವುದಿಲ್ಲ, ಹಾಗೆಯೇ ಹೂಬಾಣಗಳೂ ಕಾಣುವುದಿಲ್ಲ. ಜಿಂಕೆಗಣ್ಣಿನ ಜಾರೆಯರ ಮನವನ್ನು ದ್ರವಿಸುವಂತೆ ಮಾಡುವ ಜಾಣನಿವನಾರು ಎಂದು ನೋಡಿದರು.

ಸೋಮನಾದರೆ ಕುಂಡ ಕುಂದಿಲ್ಲ ಮೇಣ್ ಸು
ತ್ರಾಮನಾದರೆ ಭಂಗವಿಲ್ಲ
ಕಾಮನಾದರೆ ಕಿಳಿವರಿಯಿಲ್ಲ ಸದ್ಗುಣ
ಧಾಮನಾರೆಂದು ನೋಡಿದರು ೬೧

ಚಂದ್ರ ಎನ್ನುವುದಾದರೆ ಹೊಟ್ಟೆಯಲ್ಲಿ (ಕುಂಡ) ಕಲೆ(ದೋಷ)ಯಿಲ್ಲ, ಇಂದ್ರ ಎನ್ನುವುದಾದರೆ ಮೈಯಲ್ಲಿ ರಂಧ್ರವಿಲ್ಲ, ಕಾಮ ಎನ್ನುವುದಾದರೆ ಅವನ ರಥದ ಕುದುರೆ ಗಿಳಿಯಿಲ್ಲ– ಈ ಸದ್ಗುಣ ಸಂಪನ್ನ ಯಾರೆಂದು ನೋಡಿದರು.

ನೊಸಲ ಕತ್ತುರಿ ಬಾಗಿದ ಪುರ್ಬು ತಾವರೆ
ಎಸಳನೇಳಿಪ ನಿಡುಗಣ್ಣು
ಪಸರಿಪ ತಿಲಪುಷ್ಪ ನಾಸಿಕ ಸತ್ಕರ್ಣ
ಪೊಸರೂಪ ನೋಡಿ ಹಿಗ್ಗಿದರು ೬೨

ಹಣೆಯ ಕಸ್ತೂರಿ, ಬಾಗಿದ ಹುಬ್ಬು, ಕಮಲದ ಎಸಳನ್ನು ಹೀಗಳೆವ ನೀಲಕಣ್ಣು, ನೀಳವಾದ ಕಾವುಳ್ಳ ಎಳ್ಳು ಹೂವಿನ ಮೂಗು, ಒಳ್ಳೆಯ ಕಿವಿ– ಹೊಸ ರೂಪವನ್ನು ನೋಡಿ ಹಿಗ್ಗಿದರು.

ಗಂಡಸ್ಥಲ ಪನ್ನೇ ಕೊನರುವ ಕರ್ಮೀಸೆ
ತೊಂಡೆವಣ್ದುಟಿ ಕೋರೆವಲ್ಲು
ಮಂಡಳಿಸುವ ಕಂಠಸರದ ನುಣ್ಗೊರಲನ
ಕಂಡಾಕ್ಷಣ ಸೋತರೊಲಿದು ೬೩

ಕೆನ್ನೆಯ ಮೇಲಿರುವ ಪನ್ನೆ(ಕಲಾತ್ಮಕವಾಗಿ ಕತ್ತರಿಸಿದ ಕೂದಲು) , ಚಿಗುರುವ ಕರಿಮೀಸೆ, ತೊಂಡೆ ಹಣ್ಣಿನ ತುಟಿ, ಕೋರೈಸುವ (ಥಳಥಳಿಸುವ)ಹಲ್ಲು, ಸುತ್ತವರಿದ ಕಂಠಸರದ ಕೊರಳುಳ್ಳ ಸುಂದರನನ್ನು ಕಂಡು ಸೋತು ಹೋದರು.

ಈತನೊಳೊಡಗೂಡದಿದ್ದರೆ ಪೆಣ್ ಜನ್ಮ
ವೇತರದೆಂದು ಮೆಲ್ಲೆದೆಯಲಿ
ಕಾತುರದಿ ಆಲ್ವರಿಯುತ ಬಾರದಿರೆ ಮೀನ
ಕೇತನಗೊಳಗಾದರಾಗ ೬೪

ಈತನೊಂದಿಗೆ ಒಡಗೂಡದಿದ್ದರೆ ಹೆಣ್ಣುಜನ್ಮ ಯಾತರದು ಎಂದು ಕೋಮಲ ಎದೆಯಿಂದ ಕಾತುರದಿಂದ ಆಲ್ವರಿದರೂ ಬಾರದಿದ್ದಾಗ ಮನ್ಮಥಬಾಧೆಗೆ ಒಳಗಾದರು.

ಇಕ್ಕೆಲದಬಲೆಯರಂದುಕೊಂಡರು ತಮ್ಮ
ಪಕ್ಕೆಗೆ ಬರಿಸಿಕೊಂಡವನ
ತೆಕ್ಕೆಯೊಳೆರ್ದೆಗಡರ್ಚದ ಮೊಗ್ಗೆ ಮೊಲೆಗಳು
ಮೆಕ್ಕೆಯ ಕಾಯ್ಗಳೆಂದೆನುತ ೬೫

ಅವನನ್ನು ತಮ್ಮ ಪಕ್ಕೆಗೆ ಬರಿಸಿಕೊಂಡು, ಆಲಿಂಗನದಿಂದ ಎದೆಗೆ

ಅವುಚಿಕೊಳ್ಳದಿದ್ದರೆ ತಮ್ಮ ಮೊಗ್ಗೆ ಮೊಲೆಗಳು ಮೆಕ್ಕೆ ಕಾಯಿಗೆ ಸಮಾನ ಎಂದು ಎರಡೂ ಕಡೆಯ ಹೆಂಗಸರು ಅಂದುಕೊಂಡರು.

ಕಾಂತ ಬಾ ಕಮನೀಯ ರೂಪ ಬಾ ಪ್ರಾಣ
ಕಾಂತ ಮದ್ಗೃಹಕೆ ಬಾರೆಲವೊ
ಇಂತಪ್ಪ ಸತ್ಕುವರ ಸೋಲಾಂತವರನು
ಸಂತವಿಸದೆ ಪೋಗಬಹುದೆ ೬೬

ಕಾಂತನೆ ಬಾ, ಕಮನೀಯ ರೂಪನೆ ಬಾ, ಪ್ರಾಣಕಾಂತನೆ ನಮ್ಮನೆಗೆ ಬಾ, ನಿನ್ನಂಥ ಸಾತ್ವಿಕ ಕುಮಾರ ಸೋತು ಹೋದ ಸೊಬಗಿಯರನ್ನು ಸಮಾಧಾನಪಡಿಸದೆ ಹೋಗಬಹುದೆ?

ಕಚ ಪೂವ ತೆಗೆವೆನೆಂದು ನುಣ್ದೋಳೆತ್ತಿ
ಕುಚ ವೃತ್ತತೆಯ ತೋರಿಸುತ
ಸಚಲಾನ್ವಿತ ವಾರನಾರಿಯರುಗಳ ನಿ
ರ್ವಚನವ ಕುವರನಾಲಿಸಿದ ೬೭

ತಲೆಗೂದಲ ಹೂವನ್ನು ತೆಗೆಯುವ ನೆಪದಲ್ಲಿ ಬಳ್ಳಿದೋಳುಗಳನ್ನೆತ್ತಿ ದುಂಡುಮೊಲೆಗಳ ಗಾತ್ರ ತೋರಿಸುತ್ತ ಸಂಚಲನದ ವಾರಾಂಗನೆಯರ ಮಾತನ್ನು ಅನಿರುದ್ಧನಾಲಿಸಿದನು.

ಸಲೆ ಮೆಚ್ಚಿದಬಲೆಯರ ಮೆಲ್ಲೆರ್ದೆಯ ಸ
ತ್ಕಲೆಯರಿದೊಡಗೂಡದಿರ್ಪ
ಕೊಲೆಗೇಡಿಯ ಸೃಜಿಸಿದ ಪಾಪಿ ವಿಧಿ ನಿನ್ನ
ತಲೆ ಪೋದುದನ್ಯಾಯವಲ್ಲ ೬೮

ಮೆಚ್ಚಿದ ಅಬಲೆಯರ ಸತ್ಕಲೆಯನ್ನು ಅರಿತು ಒಡಗೂಡದಿರುವ ಕೊಲೆಗಾರನನ್ನು ಸೃಷ್ಟಿಸಿದ ಓ ಬ್ರಹ್ಮನೇ ನಿನ್ನ ನಾಲ್ಕನೆಯ ತಲೆ ಆಹುತಿಯಾದದ್ದು ಅನ್ಯಾಯವಲ್ಲ.

ಕೇಳಿದವನರ ಮೆಲ್ನುಡಿಯನು ಹರುಚವನು
ತಾಳಿದನನಿರುದ್ಧ ತನ್ನ

ಊಳಿಗದವರ್ಗೆ ಬೇಡಿದ ವಸ್ತುವನಿತ್ತು
ಬೋಳೈಸಿದನು ಪೆಣ್ಜನವ ೬೯

ಅವರ ಮೆದುನುಡಿಗಳನ್ನು ಕೇಳಿದ ಅನಿರುದ್ಧ ಹರ್ಷಗೊಂಡು ತನ್ನ ಸೇವಕರಿಗೆ ಬೇಡಿದ ವಸ್ತುಗಳನ್ನು ಕೊಟ್ಟು ಸ್ತ್ರೀಸಮುದಾಯವನ್ನು ಸಮಾಧಾನ ಪಡಿಸಿದನು.

ದಂಪತಿಗಳ ಮಾಡಿ ಕೆಳೆಯರ ಬೀಳ್ಕೊಂಡು
ಮುಂ ಪೋಗಲನಿರುದ್ಧನೊಡನೆ
ಚಂಪಕಗಂಧ ಕೋಮಲೆಯರು ಮರುಳ್ಗೊಂಡು
ಮುಂಪೋದುದೇನ ಪೇಳುವೆನು ೭೦

ದಂಪತಿಗಳನ್ನಾಗಿಸಿ ಗೆಳೆಯರನ್ನು ಬೀಳ್ಕೊಂಡು ಅನಿರುದ್ಧ ಮುಂದೆ ಹೋದ ತಕ್ಷಣ ಸಂಪಿಗೆ ಪುಷ್ಪಗಂಧಿಯರು ಹುಚ್ಚು ಹಿಡಿದವರಂತೆ ಮುಂದೆ ಹೋದುದನ್ನು ಹೇಗೆ ವರ್ಣಿಸುವುದು?

ನಿರಿಗಳೆವುದು ನಾಣ್ಸೊಸರ್ವುದು ರೋಮಾಳಿ
ನೆರೆನಿಂತವವಯವದೊಳಗೆ
ಮರಿ ಮೀಂಗಣ್ಣು ಬೆಂಡೆರ್ದು ಮುರ್ಛೆಯ ತಾ
ಳ್ದರವರು ಪೋಪೆವೆಂದೊಡನೆ ೭೧

ಕಳಚಿಕೊಳ್ಳುವ ನೆರಿಗೆ, ದ್ರವಿಸುವ ಯೋನಿ, ನೆಟ್ಟಗೆ ನಿಂತ ರೋಮ, ಮೀನು ಕಣ್ಣಿನ ಅವರು ಅವನು ಹೋಗುತ್ತೇವೆ ಎಂದಾಗ ಬೆಂಡಾಗಇ ಮೂರ್ಛೆ ಹೋದರು.

ತೊಂಡೆವಣ್ದುಟಿ ರಸವರತು ಮಾತಾಡುವ
ಪುಂಡರೀಕಾಯತಾಕ್ಷಿಯರ
ಕಂಡನಿರುದ್ಧ ಕುಸ್ತರಿಸಿ ಪ್ರೀತಿಯಲಿ ಬೀ
ಳ್ಕೊಂಡೈದಿದನು ಬೀದಿಯಲಿ ೭೨

ತೊಂಡೆ ಹಣ್ ತುಟಿಗಳು ಒಣಗಿ ಮಾತಾಡಿದ ಕಮಲಾಕ್ಷಿಯರನ್ನು ಉಪಚರಿಸಿ, ಸಮಾಧಾನಪಡಿಸಿ, ಬೀಳ್ಕೊಂಡು ಬೀದಿಗಿಳಿದನು.

ಗುಣವ ತೋರಿಸಿ ನೀರನ ನೆರೆ ಮೆಚ್ಚಿಸಿ
ಹಣ ಒತ್ತೆಗೊಂಡು ಢಾಳಕರ
ಕ್ಷಣದೊಳೆಬ್ಬಟ್ಟು ಮೆಚ್ಚದಿರೆಂದು ಮಗಳಿಗೆ
ಬಣಗು ವೃದ್ಧೆ ಬುದ್ಧಿವೇಳ್ದಳು ೭೩

ಗುಣವನ್ನು ತೋರಿಸಿ, ಗಿರಾಕಿಯನ್ನು ಪೂರಾ ಮೆಚ್ಚಿಸಿ ಹಣವನ್ನು ಕಿತ್ತುಕೊಂಡು, ವಂಚಕರನ್ನು ಮೊದಲು ಹೊರಗಟ್ಟು, ಎಂದು ವೃದ್ಧೆಯೊಬ್ಬಳು ಮಗಳಿಗೆ ಬುದ್ಧಿ ಹೇಳಿದಳು

ತಾಯಿ ಮಾತದು ಸೊಗಸದೆ ನುಡಿದಳು ಪಾಪಿ
ಸಾಯದೆ ಬದುಕುವವರುಂಟೆ
ಪ್ರಾಯವೇನಿದು ನಿತ್ಯವಲ್ಲ ಹಣವ ಸುಡು
ಪ್ರೀಯನೊಳ್ಳೆಯವನೆಂದಳು ೭೪

ತಾಯಿ ಮಾತು ಹಿಡಿಸದೆ ಮಗಳು ಹೇಳಿದಳು; ಮನುಷ್ಯರು ಸಾಯದೆ ಶಾಶ್ವತವಾಗಿ ಇರುವುದಿಲ್ಲ, ಪ್ರಾಯ ನಿತ್ಯವಲ್ಲ, ಹಣವನ್ನು ಸುಡು, ಪ್ರಿಯಕರ ಒಳ್ಳೆಯವನೆಂದಳು.

ಹೊಸ ಹರೆಯದಲಿ ದ್ರವ್ಯವನು ನೆರೆ ಕೂಡಿಸು
ಹೆಸರಾಗು ವಸ್ತ್ರಭೂಷಣದಿ
ವ್ಯಸನಕ್ಕೆ ಪ್ರೌಢರೊಳೆರಗದಿರೆಂದು ರ
ಕ್ಕಸಿ ಮುಂಡೆ ಮಗಳ ಹಿಂಡಿದಳು ೭೫

ಹೊಸ ಪ್ರಾಯದಲ್ಲಿ ಹಣವನ್ನು ಹೆಚ್ಚಾಗಿ ಸಂಪಾದಿಸು, ವಸ್ತ್ರ ಒಡವೆಗಳಲ್ಲಿ ಶ್ರೀಮಂತೆಯಾಗು, ವಯಸ್ಸಾದವರೊಡನೆ ಸಂಭೋಗಕ್ಕೆ ಇಳಿಯಬೇಡ ಎಂದು ರಕ್ಕಸಿ ತಾಯಿ ಮಗಳಿಗೆ ಒಳಸುಂಟಿ ಹಿಂಡಿದಳು.

ಠಿಂಕಿದ ಕುಚ, ತೋಳು, ಗಳ ಗಲ್ಲದೆಡೆಯ ನ
ಖಾಂಕಿತ ಪಲ್ಲರ್ಚಿದೇಕೆ
ಕೊಂಕಿನ ಖೂಳನದಾವನೊ ತೋರೆಂದು
ಝಂಕಿಸಿದಳು ತಾಯಿ ಮಗಳನು ೭೬

ಮೊಲೆ, ತೋಳು, ಕೊರಳು, ಗದ್ದದಲ್ಲಿ ಊತಬಂದಿರುವ ಉಗುರುಗಳ

ಹಲ್ಲುಗಳ ಮುದ್ರೆ ಇದೇಕೆ? ಕೊಂಕಿನ ನಡೆಯ ಖೂಳನನ್ನು ನನಗೆ ತೋರಿಸು ಎಂದು ಮಗಳನ್ನು ಝಂಕಿಸಿ ಕೇಳಿದಳು.

ಖೂಳ ಕುಂಟಣಿ ಮುಂಡೆ ಎನಗೆ ನೀ ಪೇಳ್ದಪೆ
ಹಾಳಾದ ಕುಚಯುಗಳದಲಿ
ಬಾಳರಕ್ತವನೀಂಟಿದ ಜಿಗುಳೆಯೊಲಿರ್ಪ
ತೋಳಮೇಗಳ ಸೀಳ್ಗಳೇನೆ ೭೭

ದುಷ್ಟ ತಲೆಹಿಡುಕಿ, ನೀನು ನನಗೆ ಬುದ್ಧಿ ಹೇಳುತ್ತಿದ್ದೀಯೆ, ಆದರೆ ನಿನ್ನ ಕುಚಗಳಲ್ಲಿ ತೋಳುಗಳಲ್ಲಿ ರಕ್ತ ಕುಡಿದ ಜಿಗಣೆಯಂತಿರುವ ಸೀಳುಗಳೇನು?

ತಲೆಯಲಿ ಕರಿದು ಕೂಂದಲುಗಳೌಷಧಿಗಿಲ್ಲ
ಸಲೆ ಕುಚಯುಗಳವಿಂಗಿದುವು
ಹೊಲೆಗೆಟ್ಟು ಹೊಸಬೇಟಗೆಯ್ವ ದುಷ್ಟೆ ಮೊಗ್ಗೆ
ಮೊಲೆವೆಂಗಳಿಗೆ ಪೇಳ್ದಪರೆ ೭೮

ತಲೆಯಲ್ಲಿ ಕರಿಕೂದಲು ಔಷಧಿಗೆ ಬೇಕೆಂದರೂ ಇಲ್ಲ, ನಿನ್ನ ಕುಚದ್ವಯಗಳು ಇಂಗಿ ಹೋಗಿವೆ. ಮುಟ್ಟು ನಿಂತಿದ್ದರೂ ಹೊಸ ಬೇಟೆಗೆ ಸದಾ ಸನ್ನದ್ಧಳಾಗಿರುವ ನೀನು ಮೊಗ್ಗೆ ಮೊಲೆಯ ಹೆಣ್ಣುಗಳಿಗೆ ನೀತಿ ಹೇಳುವುದೆ?

ಪಚ್ಚೆಕರ್ಪೂರ ಜೇನುತುಪ್ಪ ಹೊಮ್ಮುಗುಳಿನೊ
ಳಚ್ಚ ನಿಂಬೆಯ ಹುಳಿವೆರಸಿ
ನಿಚ್ಚಲು ಮದನ ಮಂದಿರದಲ್ಲಿ ಪೂಸಲು
ಮೆಚ್ಚದೆ ಪೋಪರದಾರು ೭೯

ಪಚ್ಚೆ ಕರ್ಪೂರ, ಜೇನುತುಪ್ಪ, ಸಂಪಿಗೆ ಹೂವಿನೊಳಗೆ ನಿಂಬೆಹುಳಿ ಬಿಟ್ಟು ಕಲಸಿ, ಆ ಮಿಶ್ರಣವನ್ನು ನಿತ್ಯ ಮದನ ಮಂದಿರಕ್ಕೆ ಲೇಪಿಸಲು ಮೆಚ್ಚದೆ ಹೋಗುವವರಾರು?

ಜಗಳವಾಡುವರು ಕೆಲರು ಮಾತೆಯರಿಕ್ಕಿ
ದುಗುಳ ದಾಂಟದವರು ಕೆಲರು
ಹೊಗಳಲಚ್ಚರಿವೆತ್ತ ಚಕಿತ ನಾರಿಯರನು
ಮುಗುಳಂಬನಣುಗನೀಕ್ಷಿಸಿದ ೮೦

ಕೆಲವರು ತಾಯಿಯೊಡನೆ ಜಗಳ ಆಡುವರು, ಕೆಲವರು ತಾಯಿ ಉಗುಳಿದ ಉಗುಳನ್ನು ದಾಟದವರು, ಹೊಗಳಿಕೆಗೆ ಸೋಜಿಗ ಪಡುವ ಚಕಿತ ನಾರಿಯರನ್ನು ಅನಿರುದ್ಧ ಈಕ್ಷಿಸಿದನು.

ಗಾನವೇತ್ತರು ಕೆಲಬರು ಕಾಮಶಾಸ್ತ್ರ ವಿ
ಧಾನ ತಜ್ಞರು ಹಲ ಕೆಲಬರು
ನಾನಾ ದ್ಯೂತ ವಿದ್ಯದಿ ಕೆಲರಿಹ ಮದ್ಯ
ಪಾನ ಗೋಷ್ಠಿಯನೀಕ್ಷಿಸಿದ ೮೧

ಕೆಲವರು ಸಂಗೀತಗಾರರು, ಕೆಲವರು ಕಾಮಶಾಸ್ತ್ರ ಪರಿಣತರು, ಕೆಲವರು ನಾನಾ ಬಗೆಯ ದ್ಯೂತವಿದ್ಯಾ ತಜ್ಞರು ಭಾಗವಹಿಸಿದ ಮದ್ಯಪಾನಗೋಷ್ಠಿಯನ್ನು ಈಕ್ಷಿಸಿದ.

ಮನೆಯ ಸಾರಿಸಿ ರಂಗವಲ್ಲಿಯನಿಕ್ಕಿ ಭೋಂ
ಕನೆ ಭಕ್ಷ್ಯಭೋಜ್ಯವ ಸವಿದು
ನನೆಯಕ್ಕಿ ಕಡಲೆ ಪಣ್ಯಾರದಿ ನಿಖಿಳಾ
ರ್ಚನೆಯ ವಸ್ತುಗಳ ಸಾರ್ಚಿದರು ೮೨

ಮನೆಯನ್ನು ಸಾರಿಸಿ, ರಂಗೋಲೆಯನ್ನಿಕ್ಕಿ, ತಕ್ಷಣವೆ ಭಕ್ಷಭೋಜ್ಯಗಳನ್ನು ತಂದರು

ತಂಡುಲ ರಾಶಿಯೊಳು ಕೊಡನಿಟ್ಟು ಬೇವಿನ
ದಂಡೆಯ ಕೊರಲ್ಗಿಟ್ಟು ಗಂಧ
ಭಂಡಾರವನಿಟ್ಟು ಧೂಪದೀಪಾರತಿ
ಕೆಂಡವ ಸುಳಿಸಿದರ್ಮುದದಿ ೮೩

ಅಕ್ಕಿಯ ರಾಶಿಯಲ್ಲಿ ಕೊಡವನ್ನಿಟ್ಟು, ಬೇವಿನ ದಂಡೆಯನ್ನು ಕೊರಳಿಗಿಟ್ಟು, ಗಂಧ ಭಂಡಾರವನ್ನು ಹಚ್ಚಿ, ಧೂಪ ದೀಪ ಆರತಿ ಕೆಂಡವನ್ನು ಸುಳಿದಾಡಿಸಿದರು.

ರುಚಿವೆತ್ತು ಪರಮಶಕ್ತಿಯ ಪಾದಪೂಜೆಯ
ರಚಿಸಿದರಾಗಮೋಕ್ತದಲಿ
ವಚಿಸಿ ಮಂತ್ರ ವಿದ್ಯವ ಹೇಮ ರತ್ನ
ಖಚಿತ ಪಾತ್ರೆಯೊಳೀಂಟಿದರು ೮೪

ಪರಮ ಶಕ್ತಿದೇವತೆಯ ಪಾದಪೂಜೆಯನ್ನು ಆಗಮೋಕ್ತ ರೀತಿಯಲ್ಲಿ ರಚಿಸಿ, ಮಂತ್ರಗಳನ್ನು ವಚಿಸಿ, ಹೇಮ ರತ್ನಖಚಿತ ಪಾತ್ರೆಯಲ್ಲಿ ಈಂಟಿದರು.

ರಂಬೆ ಕೋ ರತಿಯ ಸ್ವರೂಪೆ ಕೋ ಹೊಸ ಹೊನ್ನ
ಬೊಂಬೆ ಕೋ ನೆರೆವೆರೆಮೊಗದ
ತುಂಬಿಗುರುಳ ತುರುಗೆವೆಗಣ್ಣ ಕೆಳದಿ ಕೊ
ಳ್ಳೆಂಬ ಮಾತಲೀಂಟಿಸಿದರು ೮೫

ರಂಬೆ ಕೋ, ರತಿಸ್ವರೂಪೆ ಕೋ, ಹೊಸ ಹೊನ್ನ ಬೊಂಬೆ ಕೋ, ತುಂಬು ಚಂದಿರಮೊಗದ, ದುಂಬಿಗುರುಳ, ದಟ್ಟರೆಪ್ಪೆಗಣ್ಣ ಗೆಳತಿ ಕೋ ಎಂದು ಹೇಳುತ್ತಾ ಕುಡಿಸಿದರು.

ನಲ್ಲಕೊಳ್ಳೊ ನಾಗರಿಕ ಕೊಳ್ಳೊ ರಸದಾಳಿ
ವಿಲ್ಲನ ರೂಪ ಕೊಳ್ಳೆಲವೊ
ಒಲ್ಲದೊಡೆನ್ನ ಕೊಂದಪೆಯೆನುತೀಂಟಿಸಿ
ಪಲ್ಲವಾಧರೆಯೀಂಟಿದಳು ೮೬

ನಲ್ಲ ಕೊಳ್ಳೊ, ನಾಗರಿಕ ಕೊಳ್ಳೊ, ಮನ್ಮಥನ ಸದೃಶ ರೂಪನೆ ಕೊಳ್ಳೊ, ಒಲ್ಲೆ ಎಂದು ಹೇಳುವ ಬದಲು ನನ್ನನ್ನು ಕೊಲ್ಲೋ ಎಂದು ಹೇಳುತ್ತಾ ಕುಡಿಸಿ, ಅಮೇಲೆ ತಾನು ಕುಡಿದಳು.

ಸಂಡಿಗೆ ಸಂಬಾರಗಡಲೆ ಪಾಕದ ಕುಕ್ಕು
ಟಾಂಡವನವಲಕ್ಕಿಗಳನು
ದುಂಡರಳ್ಗಡಲೆ ಭಕ್ಷ್ಯಗಳ ಬಾಡಿಸಿಕೊಳು
ತುಂಡು ಕುಡಿದರು ಸೊಕ್ಕುವನಕ ೮೭

ಸಂಡಿಗೆ, ಮಸಾಲೆ ಬೆರಸಿದ ಕಡಲೆ, ಬೇಯಿಸಿದ ಮೊಟ್ಟೆ, ಅವಲಕ್ಕಿ, ದುಂಡರಳುಗಡಲೆ ಭಕ್ಷ್ಯಗಳನ್ನು ನಂಜಿಕೊಳ್ಳುತ್ತಾ ಕುಡಿದು ಉಂಡರು ಸೊಕ್ಕುವತನಕ

ಅಪ್ಪಕೊಳ್ಳೆಲವೊ ಅಗ್ರಜಕೊಳ್ಳೊ ಹಿಂಡಿಯ
ಸೊಪ್ಪಕೋ ಸುಲಿವಣ್ಗಳ ಕೋ

ಚಿಪ್ಪಕೋ ಕುಡಿಯೆಂದು ಕುಡಿಸಿ ಕುಡಿದು ಕೈ
ಚಪ್ಪಳೆಯಿಕ್ಕುತಾಡುವರು ೮೮

ಅಪ್ಪ ಕೊಳ್ಳೋ, ಅಣ್ಣ ಕೊಳ್ಳೋ, ಹಿಂಡಿಯ ಸೊಪ್ಪನ್ನು ಕೊಳ್ಳೋ, ಸುಲಿವಣ್ಣುಗಳ ಕೊಳ್ಳೋ, ಚಿಪ್ಪ(ಕುಡಿಯಲು ಬಳಸುವ ತೆಂಗಿನಕಾಯಿ ಚಿಪ್ಪು) ಕೊಳ್ಳೋ ಕುಡಿಯೆಂದು ಕುಡಿಸಿ, ತಾವೂ ಕುಡಿದು ಕೈಚಪ್ಪಾಳೆ ಹೊಡೆದು ಕೇಕೆ ಹಾಕುವರು.

ಕೋಪದಿ ಗಜರುವರೊಡನೆ ಮುದ್ದಿಪರು ಪ್ರ
ಲಾಪವ ಮಾಳ್ಪರು ರತಿಗೆ
ದೀಪನಗವಳವಿದೆನುತ ಚೆಂದುಟಿಯ ಪ್ರಾ
ಣೋಪನ ಬಾಯೊಳಿಕ್ಕುವರು ೮೯

ಕೋಪದಿಂದ ಗರ್ಜಿಸುವರು, ಒಡನೆ ಮುದ್ದಿಸುವರು, ಪ್ರಲಾಪಿಸುವರು, ರತಿಕ್ರೀಡೆಗೆ ಇದು ಉದ್ದೀಪನ ತಂಬುಲವೆಂದು ಹೇಳುತ್ತಾ ಚೆಂದುಟಿಯನ್ನು ಪ್ರಾಣಪ್ರಿಯನ ಬಾಯೊಳಗೆ ಇಕ್ಕುವರು.

ಏಳೆನ್ನ ವಕ್ಷ ಮಾನಸದಿ ಕ್ರೀಡಿಪ ಮ
ರಾಳ ಗಮನೆ ನೀನೇಳೆನುತ
ತೋಳೆರಡರೊಳಪ್ಪಿ ತೊರೆದು ತೊಟ್ಟಿಡುವ ಪ್ರ
ವಾಳಾಧರವ ಚುಂಬಿಸಿದ ೯೦

ಏಳು, ನನ್ನ ಎದೆ ಮನಸ್ಸಿನಲ್ಲಿ ಆಟವಾಡುವ ಹಂಸಗಮನೆ, ನೀನು ಮೇಲೇಳು ಎನ್ನುತ್ತ ಎರಡು ತೋಳುಗಳಿಂದ ಬಳಸಿ ಅಪ್ಪಿಕೊಂಡು, ಜಿನುಗುವ, ತೊಟ್ಟಿಕ್ಕುವ ಚಿಗುರು ತುಟಿಯನ್ನು ಚುಂಬಿಸಿದನು.

ಕಾನನದೊಳಗಿರ್ದ ಬೆಟ್ಟ ಕಣಿವೆ ಕಾಡು
ಜೇನೆನ್ನ ಮರೆದೊರಗಿಸಿತು
ಪೀನಕುಚಾನ್ವಿತೆ ನಿನ್ನ ಮಧುರ ಅಧರಾಮೃತ
ಪಾನ ಸೊಕ್ಕಿಸದೆ ಮಾಣ್ದಪುದೆ ೯೧

ಕಾನನದಲ್ಲಿರುವ ಬೆಟ್ಟ ಕಣಿವೆ ಮರಗಿಡಗಳ ಜೇನು ನನ್ನನ್ನು ಮೈಮರಸಿ ಮಲಗಿಸಿದುವು. ಕುಂಭ ಕುಚದ ರಂಭೆಯೆ, ನಿನ್ನ ಮಧುರ ಅಧರಾಮೃತ ನನ್ನನ್ನು ಸೊಕ್ಕಿಸದೆ ಬಿಡುವುದೆ?

ಮೆಚ್ಚಿದಳಿನಿಯನಾಡಿದ ಮುದ್ದು ಮಾತಿಗೆ
ಮುಚ್ಚಿದ ದೃಗುಯುಗಳವನು
ಬಿಚ್ಚಿ ವಿಸ್ತರದಿ ನಿಟ್ಟಿಸಿ ಪಾದಕೆ ಬಿದ್ದು
ಕಚ್ಚಿದಳುಂಗಷ್ಟವ ಚೀಪುತ ೯೨

ಪ್ರಿಯತಮನಾಡಿದ ಮುದ್ದು ಮಾತಿಗೆ ಮೆಚ್ಚಿದಳು, ಮುಚ್ಚಿದ ಕಣ್ಣುಗಳನ್ನು ಬಿಚ್ಚಿ, ನಿಡಿದಾಗಿ ನಿಟ್ಟಿಸಿ, ಪಾದಕ್ಕೆ ಬಿದ್ದು, ಹೆಬ್ಬೆರಳನ್ನು ಕಚ್ಚುತ್ತಾ ಚೀಪತೊಡಗಿದಳು.

ಮೊರೆಯಿಟ್ಟು ಮಾತಾಡುವರು ಪಾಡುವರು ಕೈ
ಪರೆ ತಾಳಗತಿಗೆ ಜಗ್ಗುವರು
ಪೆರೆನೊಸಲೊಳು ನೊಸಲಿಟ್ಟು ಮುಂಡಾಡಿ ಕ
ಣ್ದೆರೆಯದೆ ಮರೆದೊರಗಿಹರು ೯೩

ಮೊರೆಯಿಟ್ಟು ಮಾತಾಡುವರು, ಕೈ ಹರೆ ತಾಳಗತಿಗೆ ಹಾಡುವರು, ಸೆಳೆದಾಡುವರು, ಹಣೆಗೆ ಹಣೆಯಿಟ್ಟು ಮುದ್ದಾಡಿ ಕಣ್ಣುಬಿಡದೆ ಮೈಮರೆತು ಮಲಗುವರು.

ಮಲಯಜಗಂಪ ಮೆಯ್ಯೊಳಗೆ ಪರ್ಬಿಸಿದ ಕೋ
ಮಲೆಯರು ತಮ್ಮ ಜವ್ವನವ
ಬೆಲೆಗಟ್ಟಲು ತಂದಿರಿಸಿದಂದದಿ ಬಟ್ಟ
ಮೊಲೆಯ ಉಡಿದೆರೆದು ಬಿದ್ದಿಹರು ೯೪

ಶ್ರೀಗಂಧದ ಸುವಾಸನೆಯನ್ನು ಮೈಗೆ ಹಬ್ಬಿಸಿದ ಕೋಮಲೆಯರು ತಮ್ಮ ಯೌವನದ ಬೆಲೆಗಟ್ಟಲು ಅನುವಾಗುವ ಹಾಗೆ ದುಂಡುಮೊಲೆಗಳ ಮೇಲಿನ ಸೆರಗನ್ನು ತೆಗೆದು ಮಲಗಿರುವರು.

ದಪ್ಪಕ ಮಡಗಿರ್ದ ದ್ರವ್ಯಭರಿತ ಹೊನ್ನ
ಕೊಪ್ಪರಿಗೆಯ ಕೊಂಡಿಬಳೆಯೆನೆ
ಒಪ್ಪವಡೆದ ವೃತ್ತಕುಚ ತೋರಿದುವು ತೋರ
ದಿಪ್ಪವು ಮಿಕ್ಕ ವಸ್ತುಗಳು ೯೫

ಮನ್ಮಥ ಮಡಗಿದ ಅಪಾರ ಐಶ್ವರ್ಯದ ವಕ್ಷಸ್ಥಳದ ಕೊಪ್ಪರಿಗೆಯ ಕೊಂಡಿ ಬಳೆ ಎನ್ನುವಂತೆ ಒಪ್ಪವಿಟ್ಟ ದುಂಡುಮೊಲೆಗಳು ತೋರಿದವು –ಮಿಕ್ಕವಸ್ತುಗಳು ತಲೆಮರೆಸಿಕೊಂಡಿದ್ದವು.

ದಾಷ್ಟೀಕತನ ಬಿಟ್ಟು ದರಹಾಸ ಮುಖಿ ಪರಿ
ವೇಷ್ಟಿಸಿದಮಳ ಸೌಂದರದಿ
ಚೇಷ್ಟಿಪ ವೇಶ್ಯಾಭುಜಂಗರ ಮಧುಪಾನ
ಗೋಷ್ಠಿಯ ಸೊಬಗನೀಕ್ಷಿಸಿದ ೯೬

ದಾರ್ಷ್ಟ್ಯ ಬಿಟ್ಟು ಮಂದಹಾಸ ಮುಖಿಯನ್ನು ಸುತ್ತುವರಿದ ಸೌಂದರ್ಯ ದೀಪ್ತಿಯಿಂದ ಚಲನೆಯ ಜಾರಜಾರೆಯರ ಮಧುಪಾನ ಗೋಷ್ಠಿಯ ಸೊಬಗ ನೀಕ್ಷಿಸಿದನು.

ಅಂಗಡಿ ಬೀದಿ ಬೀದಿಯಲಿ ನಾನಾ ವಿಷ
ಯಂಗಳ ನೋಡುತ್ತೈತಂದು
ಸಂಗಡಿಗರ ಬೀಳ್ಕೊಟ್ಟು ಕುಮಾರನಂತ
ರಂಗದಿ ಹೊಕ್ಕನಾಲಯವ ೯೭

ಅಂಗಡಿ ಬೀದಿ ಬೀದಿಗಳಲ್ಲಿ ನಾನಾ ದೃಶ್ಯಗಳನ್ನು ನೋಡುತ್ತಾ ಅನಿರುದ್ಧ ಕೊನೆಗೆ ಸಂಗಡಿಗರನ್ನು ಬೀಳ್ಕೊಟ್ಟು ಒಂಟಿಯಾಗಿ ಮಂದಿರವನ್ನು ಹೊಕ್ಕನು.

ಬಾಗಿಲ ಬೀಗ ಮುದ್ರೆಯ ಮಾಡಿಸಿಕೊಂಡು
ಪೋಗಿ ತೆತ್ತಿಗರ ಬೀಳ್ಕೊಂಡು
ರಾಗಿಸಿ ಮಣಿಸೆಜ್ಜೆವನೆಯೊಳು ಭ್ರಾಮಕ
ವಾಗಿ ಮಂಚದಲಿ ಮಂಡಿಸಿದ ೯೮

ಬಾಗಲಿಗೆ ಬೀಗ ಹಾಕಿಸಿ, ಸೇವಕರನ್ನು ಬೀಳ್ಕೊಂಡು, ರತ್ನಶಯ್ಯಾಗಾರದ ಮಂಚದ ಮೇಲೆ ಮಂಡಿಸಿದನು.

ಮಿಂಡಿಯರು ಪೊಂಬಡಿಗವ ಸಾರ್ಚಿ ಬಿಸಿನೀರ
ಗಿಂಡಿಯೊಳು ತಂದು ಕಾಲ್ದೊಳೆಯೆ
ಪಂಡಿತವಕ್ಕಿಗಳ ಮಾತನಾಡಿಸುತಲೆ
ಚಂಡ ವಿಕ್ರಮನೊರಗಿದನು ೯೯

ಯುವತಿಯರು ಪೀಕದಾನಿಯನ್ನು ತಂದಿಟ್ಟು, ಗಿಂಡಿಯಲ್ಲಿ ತಂದ ಬಿಸಿನೀರಿನಿಂದ ಕಾಲ ತೊಳೆದರು. ಅನಿರುದ್ಧನು ಗಿಳಿಗಳನ್ನು ಮಾತಾಡಿಸುತ್ತಲೇ ಮಲಗಿದನು.

ನಾರಿಯರು ನಿಖಿಲೋಪಚಾರವ ಮಾಡಿ ಕೈ
ವಾರಿಸಿ ಬಡಿ ಕುಟ್ಟಲೊಡನೆ
ಪಾರಿಯ ವಾದ್ಯ ಘೋಷಣಿಸಲು ದಿವ್ಯಾಗ್ನಿ
ಬೇರಿಯ ಪೊಡೆದರೂರೊಳಗೆ ೧೦೦

ಎಲ್ಲ ಉಪಚಾರಗಳನ್ನು ಮಾಡಿದ ನಾರಿಯರು ಹೊಗಳಿ ಬಡಿಗೆ ಕುಟ್ಟಲು, ಕೂಡಲೇ ಪಹರೆ ವಾದ್ಯ ಘೋಷಣಿಸಲು, ಊರೊಳಗೆ ಭೇರಿಯನ್ನು ಬಾರಿಸಿದರು.

ಕ್ಷೀರಾರ್ಣವದೊಳು ನಿಖಿಳ ನೀರ್ಮನುಜರು
ಪಾರವ ಬೆದುಕುವಂದದಲಿ
ಪೂರಾಯ ಬೆಳ್ದಿಂಗಳೊಳು ಬೇಡರೊಗ್ಗಾಗಿ
ದ್ವಾರಾವತಿಯ ಸುತ್ತಿದರು ೧೦೧

ಹಾಲ್ಗಡಲ ತೀರದಲ್ಲಿ ನೀರ್ಮನುಜರು ತೀರವನ್ನು ಬೆದಕುವಂತೆ ಬೆಳ್ದಿಂಗಳಿನಲ್ಲಿ ಬೇಡರು ಒಟ್ಟುಗೂಡಿ ದ್ವಾರವತಿಯ ಸುತ್ತಿದರು.

ಅಲ್ಲಿಯದಲ್ಲಡಗಿತ್ತು ಹಲವು ಮಳಿಗೆಯೊ
ಳಲ್ಲಲ್ಲಿ ಮಂದಿ ಸಂತವಿಸೆ
ಮಲ್ಲಿಗೆಯರಳ್ಗೂಡಿ ಪಾಲ್ದಳಿದಂದದಿ
ಚೆಲ್ಲಿತು ಬೆಳುದಿಂಗಳಿಳೆಗೆ ೧೦೨

ಹಲವಾರು ಮಳಿಗೆಗಳಲ್ಲಿ ಅಲ್ಲಲ್ಲಿ ಮಂದಿ ಸಂತವಿಸಲು ಮಲ್ಲಿಗೆ ಹೂವಂತೆ ಹಾಲು ತಳಿದಂತೆ ಬೆಳುದಿಂಗಳು ಇಳೆಗೆ ಚೆಲ್ಲಿತು

ಹೊಳೆವಕಠಾರಿ ಕೈಗೆತ್ತಿ ತೋಮರ ಬಿಲ್ಲು
ಬಲುದಡಿ ಪಟ್ಟೆಯ ಚಕ್ರದಲಿ
ಕಳಬಂಟ ಕಂಠ ವಿಚ್ಛೇದ ವಿನೋದದ
ತಳವರರೂರ ಕಾದಿಹರು ೧೦೩

ಕಠಾರಿ, ಕೈಗತ್ತಿ, ಈಟಿ, ಬಿಲ್ಲು, ಉದ್ದವಾದ ಕತ್ತಿ, ಮೊದಲಾದ ಆಯುಧಧಾರಿಗಳು ಕಳ್ಳರ ಕಂಠವಿಚ್ಛೇದನ ಅಧಿಕಾರಿಗಳು ಆದ ತಳವಾರರು ಊರನ್ನು ಕಾದಿರುವರು.

ಮೆಟ್ಟಿದ ಕೆರ್ಪುಗಳುಡೆಯ ಬದ್ದುಗೆ ದಾರ
ದಟ್ಟಿಯ ಮೇಲೆ ವಂಕುಡಿಯ
ಕಟ್ಟಿದ ಹೆದೆಯೇರಿಸಿದ ಬಿಲ್ಗೋಲಿನ
ಗಟ್ಟಿವಾಳರು ತಿರುಗಿದರು ೧೦೪

ಮೆಟ್ಟಿದ ಎಕ್ಕಡ, ಉಟ್ಟುಕೊಂಡ ಬಟ್ಟೆಯಂಚಿನ ದಾರ, ಕಟ್ಟಿದ ದಟ್ಟಿ(ನಡುಪಟ್ಟಿ)ಗೆ ಸಿಕ್ಕಿಸಿದ ಕಠಾರಿ, ಹದೆಯೇರಿಸಿದ ಬಿಲ್ಲು ಬಾಣಗಳ ಧೀರರು ತಿರುಗಿದರು.

ಗುತ್ತಿಗೆವಿಡಿದ ವೇಶ್ಯಾಕಾಂತ ವ್ಯಭಿಚಾರ
ವೃತ್ತಿಯವರ ಕರ್ಣ ದ್ವಯವನು
ಕಿತ್ತ ಕಠಾರಿಯೊಳು ತಿವಿದಂತೆ ಸುಸ್ವರ
ವೆತ್ತಿ ಮುಂಗೋಳಿ ಕೂಗಿದವು ೧೦೫

ಗುತ್ತಿಗೆ ಹಿಡಿದ ವ್ಯಭಿಚಾರ ವೃತ್ತಿಯವರ ಕಿವಿಗಳನ್ನು ಕಠಾರಿಯಲ್ಲಿ ತಿವಿದಂತೆ ಧ್ವನಿಯೆತ್ತಿ ಮುಂಗೋಳಿ ಕೂಗಿದವು.

ಆವಾಗ ತನ್ನದೆಯಡಗ ಕೊಯ್ದು ತಿಂಬ
ದೇವರ್ಕಳಟ್ಟುಳಿಯಿಂದ
ಸಾವುದೆ ಸುಖವೆಂದು ಪಶ್ಚಿಮಾಂಬುಧಿಯೊಳು
ಜೀವವ ತೊರೆದ ಚಂದ್ರಮನು ೧೦೬

ತನ್ನ ದೇಹದ ಮಾಂಸವನ್ನು ಭಕ್ಷಿಸುವ ದೇವತೆಗಳ ಉಪಟಳವನ್ನು ಸಹಿಸುವುದಕ್ಕಿಂತ ಸಾಯುವುದೇ ಲೇಸೆಂದು ಚಂದ್ರ ಪಡುಗಡಲಲ್ಲಿ ಜೀವ ತೊರೆದನು.

ಆಗಲಾಣ್ಮನ ಕೂಡೆ ನಕ್ಷತ್ರ ನಿಶೆವೆಣ್ಣು
ಸಾಗಮನವನೆ ಮಾಡಿದವು
ಪೋಗಲಾರದೆ ನೆಯ್ದಿಲ ಮುಂಡ ಮೋಚಿತು
ಮೂಗಾಯ್ತು ಜೊನ್ನವಕ್ಕಿಗಳು ೧೦೭

ಆಗ ಪತಿಯ ಜೊತೆ ಅಸಂಖ್ಯ ಚುಕ್ಕೆ ಸತಿಯರು ಸಹಗಮನವನ್ನು ಕೈಗೊಂಡು ನೆಯ್ದಿಲೆಯ ಮುಂಡಮೋಚಲಾಯಿತು(ತಲೆ ಬೋಳಿಸಲಾಯಿತು). ಜೊನ್ನವಕ್ಕಿ (ಚಕೋರ ಪಕ್ಷಿ)ಗಳು ಮೂಕವಾದವು.

ಪರಿಣಮಿಸಿದವು ಪಂಕಜದೊಳು ಪೊಕ್ಕ ಷ
ಟ್ಚರಣ ರಥಾಂಗ ಪಕ್ಷಿಗಳು
ತರುಣಾರ್ಕ ಗರುಡಿಯ ಕೆಮ್ಮಣ್ಣಿನಿಂದಲೆ
ಅರುಣೋದಯವಾಯಿತಾಗ ೧೦೮

ಕಮಲಗಳಲ್ಲಿ ಅಡಗಿದ್ದ ದುಂಬಿಗಳು, ಎಣೆವಕ್ಕಿಗಳು ಹರ್ಷಿಸಿದುವು. ತರುಣ ಸೂರ್ಯನ ಗರಡಿಮನೆಯ ಕೆಮ್ಮಣ್ಣಿನಲ್ಲಿ ಅರುಣೋದಯವಾಯಿತು.

ಮಡಿವಸ್ತ್ರವನುಟ್ಟು ಪೂರ್ವ ದಿಗ್ವನಿತೆಯ
ಮುಡಿಯೊಳು ಪೊತ್ತ ಪೊಂಗಳಸ
ವಿಡಿದು ರಥದ ಮೇಲಡರ್ದ ರನ್ನಗ
ನ್ನಡಿಯಂತೆ ಸೂರ್ಯ ಮೂಡಿದನು ೧೦೯

ಮಡಿಬಟ್ಟೆಯನ್ನು ಉಟ್ಟು, ಪೂರ್ವ ದಿಗಂತ ವನಿತೆಯ ತಲೆಯ ಮೇಲೆ ಹೊತ್ತ ಕಳಸವನ್ನು ಹಿಡಿದು, ರಥದ ಮೇಲೆ ಹತ್ತಿದ ರನ್ನಗನ್ನಡಿಯಂತೆ ಸೂರ್ಯ ಮೂಡಿದನು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೧೧೦

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ ಕೇಳಿದ ಜನರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

# ೧೯. ಅನಿರುದ್ಧನ ಬೇಟೆ

ನಾರಾಯಣ ನಾಮಾಮೃತ ರಸಜಂ
ಬೀರ ನಿನ್ನಯ ಸವಿವಾತು
ಆರಾದೊಡಂ ಕಿವಿಗೊಟ್ಟು ಕೇಳ್ಕೊಡೆ ಸಂ
ಸಾರ ಭ್ರಾಂತಿಯ ತೊರೆಸುವುದು ೧

ನಾರಾಯಣನ ನಾಮಾಮೃತದ ನಿಂಬೆಹಣ್ಣಿನ ರಸದಂಥ ನಿನ್ನ ಸವಿಮಾತನ್ನು ಯಾರಾದರೂ ಕೇಳಿದರೆ ಸಂಸಾರ ಭ್ರಾಂತಿಯನ್ನು ತೊರೆಯುವಂತೆ ಮಾಡುವುದು.

ಕೆಂಚೆ ನೀ ಕೆಳು ಕೇವಲ ಜಾಣೆ ರಹಿತ ಪ್ರ
ಪಂಚೆ ಮತ್ಕೃತಿ ರಸವರತ
ಬೆಂಚೆಯೆಂದೆನಬೇಡ ಶೃಂಗಾರ ರಸಪೂರ್ಣ
ಅಂಚೆನಡೆಯಳೆ ವಿಶ್ರವಿಸು ೨

ಕೆಂಪು ಬಣ್ಣದ ಹೂಗಂಪಿನ ರಾಣಿ ಕೇಳು, ನೀನು ಲೌಕಿಕಕ್ಕಿಂತ ಅಲೌಕಿಕ ಆಸಕ್ತಿಯುಳ್ಳ ಸುಜ್ಞಾನಿ, ನನ್ನ ಕೃತಿ ರಸವಿಲ್ಲದ ಒಣಗಿದ ಹೊಂಡ ಎಂದು ತಿಳಿಯಬೇಡ, ಅದು ಶೃಂಗಾರ ರಸದಿಂದ ತುಂಬಿ ತುಳುಕುವಂಥದು, ಹಂಸಗಮನೆ ಗಮನವಿಟ್ಟು ಕೇಳು.

ವೇದಘೋಷಣೆ ವಿಪ್ರನಿಲಯದಿ ಸಂಗೀತ
ಸಾಧನಾಶೀಲರಾಲಯದಿ
ಆದುದನೇಕ ದೇವಸ್ಥಾನದಿ ವಾದ್ಯ ಸು
ನಾದ ಪೂಜೆಗಳೊಪ್ಪಿದವು ೩

ವಿಪ್ರರ ಮನೆಗಳಲ್ಲಿ ಸಂಗೀತ ಸಾಧಕರ ಮನೆಗಳಲ್ಲಿ ವೇದಘೋಷಣೆಗಳು ಜರುಗಿದವು. ದೇವಸ್ಥಾನಗಳಲ್ಲಿ ವಾದ್ಯಗಳ ನಾದ ಪೂಜೆಗಳು ಕಣ್ಮನಗಳನ್ನು ಸೆಳೆದವು.

ಉದಯದ ಸತ್ಕರ್ಮ ದೇವಾರ್ಚನೆಗೆಯ್ದು
ಸದುಹೃದಯ ವಿಪ್ರ ನಿಯೋಗಿಗಳು
ಪದಶ್ರೇಷ್ಠರಾಗಿ ಬಂದರಮನೆವಾಗಿಲ
ಕದ ಬೀಯಗವ ತೆಗೆಸಿದರು ೪

ಪ್ರಾತಃಕಾಲದ ಆಚಾರವಿಚಾರಗಳನ್ನು ದೇವಾರ್ಚನೆಯನ್ನು ನೆರವೇರಿಸಿ ವಿಪ್ರ ನಿಯೋಗಿಗಳು ಶ್ರೇಷ್ಠ ಪದವಿಯ ಅಧಿಕಾರದಿಂದ ಅರಮನೆ ಬಾಗಲಿನ ಕದದ ಬೀಗವನ್ನು ತೆಗೆಸಿದರು.

ಉಪ್ಪವಡಿಸಿದರು ಕೃಷ್ಣ ಬಲರಾಮ ಕಂ
ದಪ್ಪಾದ್ಯಖಿಲ ಯಾದವರು
ತಪ್ಪದೆ ನಾಮಕೀರ್ತನ ಮಾಡಿಕೊಂಡು ಕಂ
ದಪ್ಪನಸುತ ಬಂದ ಹೊರಟು ೫

ಕೃಷ್ಣ, ಬಲರಾಮ, ಮನ್ಮಥಾದಿ ಸಕಲ ಯಾದವರು ನಿದ್ರೆಯಿಂದ ಮೇಲೆದ್ದರು. ಮನ್ಮಥನ ಮಗನಾದ ಅನಿರುದ್ಧ ತಪ್ಪದೆ ನಾಮಸಂಕೀರ್ತನೆ ಮಾಡಿಕೊಂಡು ಹೊರಟು ಬಂದನು.

ಹೊಗಳಲದಾರ ಜಿಹ್ವೆಗೆ ಸಾಧ್ಯ ಗ್ರಾಮಸಿಂ
ಹಗಳ ಕಂಧರ ಪಾಶವಿಡಿದು
ನಿಗಳವ ತಾಳ್ದ ಕಾಲ್ವೆಂಟೆಕಾರರು ಕೂಡಿ
ಮೃಗ ಯಾತ್ರೆಗೆ ತೆರಳಿದರು ೬

ಕಾಲಸರಪಳಿ ಹಾಕಿದ ಕಾಲಬೇಂಟೆಕಾರರು ನಾಯಿಗಳ ಕೊರಳಿಗೆ ಹಾಕಿದ ಹಗ್ಗವನ್ನು ಹಿಡಿದು ಬೇಟೆಗೆ ಹೊರಟ ಸಡಗರ ಸಂಭ್ರಮವನ್ನು ಹೊಗಳಲು ಯಾರ ನಾಲಿಗೆಗೆ ಸಾಧ್ಯ?

ದ್ವಾರಾವತಿಯಲ್ಲಿ ಹೆಸರಾಂತ ರಾಜ ಕು
ಮಾರ ಸಮೂಹ ಸಂದಣಿಸಿ
ವಾರುವ ಧರ್ಮದ ಹಯವೇರಿ ತೆರೆಳೆ ಕಾಂ
ತಾರ ತೀವಿತು ವಾದ್ಯರವದಿ ೭

ದ್ವಾರಾವತಿಯ ರಾಜಕುಮಾರರ ಸಂದೋಹ ಕುಪ್ಪಳಿಸುವ ಕುದುರೆಗಳನ್ನೇರಿ ಹೊರಟಾಗ ವಾದ್ಯರವದಿಂದ ಕಾಂತಾರ ತುಂಬಿ ತುಳುಕಿತು.

ಎಡಬಲದಲಿ ಹೊಂಗಟ್ಟಿನ ಧೀರ ಭಿಲ್ಲರ
ಗಡಣ ಚಾಮರ ಛತ್ರ ವೆರಸಿ
ಕಡೆಯ ಪೆಂಡೆಯ ಸರಪಳಿ ಗಂಟೆಯುಲುಹಿಂದ
ನಡೆದರು ಮುಂದೆ ಬೊಬ್ಬಿಡುತ ೮

ಎಡಬಲದಲ್ಲಿ ಧೀರ ಭಿಲ್ಲರು ಛತ್ರ ಚಾಮರ ಸಮೇತ ಕಾಲಕಡಗ, ಕಾಲಂದುಗೆ ಸರಪಳಿ ಗಂಟೆಯ ಶಬ್ದದಿಂದ ಬೊಬ್ಬೆ ಹಾಕುತ್ತಾ ನಡೆದರು.

ಮಾಣಿಕ್ಯರಚಿತ ಪೊಂಬಟ್ಟೆ ಪೊಂಬಾಸ
ನೇಣಿನ ಚತುಷ್ಪಾದಿಗಳ
ಪಾಣಿಯೊಳಾಂತ ಪೆರ್ಬಡಿಗೋಲ ಲುಬ್ಧಕ
ಶ್ರೇಣಿ ಬೊಬ್ಬಿಡುತಲೈದುದು ೯

ರತ್ನಖಚಿತ ಪೊಂಬಟ್ಟೆ ಪೊಂಬಾಸ(ಪೊನ್ +ಪಾಶ=ಹೊಂಬಣ್ಣದ ಬಲೆ) ಹಾಗೂ ಹಗ್ಗದ ಚತುಷ್ಪಾದಿಗಳನ್ನು ಕೈಯಲ್ಲಿ ಹಿಡಿದು ಬಡಿಗೆಗಳ ಬೇಡರು ಬೊಬ್ಬೆ ಹಾಕುತ್ತಾ ಬಂದರು.

ಮೇಲುತರದ ಪಟ್ಟೆ ವರ ಸೂಪು ಸಕಲಾತಿ
ಜೂಲುಗಳಿಂದ ರಂಜಿಸುವ
ಕಾಲುವೇಗದ ಶ್ವಾನಪಿಡಿದ ಕಿರಾತರು
ಸಾಲಿಟ್ಟು ನಡೆದರೊಗ್ಗಿನಲಿ ೧೦

ಮೇಲ್ತರಗತಿಯ ಪಟ್ಟೆ(ರೇಷ್ಮೆ) ಸೂಪು (ವಸ್ತ್ರ ವಿಶೇಷ) ಸಕಲಾತಿ(ನಕ್ಕಿ ಮಾಡಿದ ವಸ್ತ್ರ) ಜೂಲು(ಗೌಸು) ಗಳಿಂದ ರಂಜಿಸುವ ನಾಯಿಗಳನ್ನು ಹಿಡಿದ ಕಿರಾತರು ಸಾಲಾಗಿ ನಡೆದರು.

ಹಮ್ಮುಗೆ ವರ ಹನುಮನ ಬಾಲ ಹೊಂಗಂಟೆ
ಹೊಮ್ಮೇಳಿಯ ಕಠಾರಿಗಳು
ಚಿಮ್ಮುವ ಕನಕದಂಡದ ಚಮರದ ಬೇಡ
ರಿಮ್ಮೈಯೊಳೊದಗಿತೊಗ್ಗಿನಲಿ ೧೧

ಹಗ್ಗ, ಡೊಂಕುಬಾಲ, ಗಂಟೆ, ಮೇಳಿ(ಮೇಣಿ=ಹಿಡಿ)ಯ ಕಠಾರಿಗಳ, ಕನಕದಂಡ ಚಾಮರಗಳ ಬೇಡರು ಗುಂಪಾಗಿ ಐತಂದರು.

ಉಡು ಮೊಲ ನರಿ ಹುಲ್ಲೆ ಮರೆ ಸಾರಗವ ಕಂ
ಗೆಡಿಸುವ ಜಂಘಾಲಿಗಳು
ನಡುವಿನ ರತ್ನ ಮೇಖಲೆಯಾಂತು ಬಾಲವ
ಬಡಿಯುತ ನಡೆದುವೊಗ್ಗಿನಲಿ ೧೨

ಉಡು, ಮೊಲ, ನರಿ, ಹುಲ್ಲೆ(ಜಿಂಕೆ)ಮರೆ(ಜಿಂಕೆಯ ಪ್ರಭೇದ) ಸಾರಗ(ಮೈಮೇಲೆ ಚುಕ್ಕೆಗಳಿರುವ ಜಿಂಕೆ)ಗಳನ್ನು ಕಂಗೆಡಿಸುವ ನಾಯಿಗಳು, ಸೊಂಟದ ನಡುಪಟ್ಟಿಯೊಡನೆ ಬಾಲವಲ್ಲಾಡಿಸುತ್ತಾ ಸಾಗಿದವು.

ಆಗುಳಿಸುತ ಬಾಯ ಸವರಿಯೊಗ್ಗಿಸುತ ಕ
ರ್ಮೂಗಿಂದ ನೆಲನ ವಾಸಿಸುತ
ಮೇಗಾಳಿಯನಾರೈವ ಚತುಷ್ಪದಿಗಳು
ವೇಗದಿ ನಡೆದುವಾಕ್ಷಣಡಿ ೧೩

ಆಕಳಿಸುತ್ತ, ಬಾಯ ಸವರಿ ಯಥಾಸ್ಥಿತಿಗೆ ಒಗ್ಗಿಸಿಕೊಳ್ಳುತ್ತ, ಕಪ್ಪು ಮೂಗಿನಿಂದ ನೆಲವನ್ನು ವಾಸಿಸುತ್ತ ಮೇಗಾಳಿ ಹಿಡಿದು ನಾಯಿಗಳು ವೇಗದಿಂದ ಸಾಗಿದವು.

ಢಗೆ ಹೊಡೆದಳ್ಳೆ ಹೊಯ್ಯುತೆ ಬಿಸಿಲಿಂಗೆ ನಾ
ಲಗೆ ನೀರು ತಟಗುಟ್ಟಿ ಸುರಿಯೆ
ಮಿಗೆ ಪಿಡಿದವರು ಮುಗ್ಗಿ ಬೀಳಲೆಳೆವ ನಾ
ಯಿಗಳಡಸಿರ್ದುವೆಡಬಲದೆ ೧೪

ಧಗೆಯಿಂದ ಅಳ್ಳೆ(ಪಕ್ಕೆ)ಗಳು ಏರಿಳಿಯುತ್ತಿದ್ದವು, ಬಿಸಿಲಿಗೆ ನಾಲಗೆಯಿಂದ ನೀರು ತೊಟ್ಟಿಕ್ಕುತ್ತಿತ್ತು. ಆದರೂ ಹಿಡಿದುಕೊಂಡಿದ್ದವರು ಮುಗ್ಗರಿಸಿ ಬೀಳುವಂತೆ ಎಳೆಯುವ ನಾಯಿಗಳು ಎಡಬಲದಲ್ಲಿ ತುಂಬಿದ್ದವು.

ಗಗನದೊಳಗೆ ಹುಣ್ಣಿಮೆ ಹೋದ ಮರುದಿನ
ಪಗಲೆಸೆದಿರಲಾತನೊಡಲ
ಮೃಗ ಮೊಲಗಂಡು ಮಿಗೆ ಜಗ್ಗಿಸುವಂದದಲಿ
ಮೊಗವೆತ್ತಿ ಬಗುಳುತ್ಯೆದಿದುವು ೧೫

ಹುಣ್ಣಿಮೆಯಾದ ಮರುದಿನದ ಹಗಲ ಆಕಾಶದಲ್ಲಿದ್ದ ಚಂದ್ರನ

ಒಡಲಲ್ಲಿರುವ ಜಿಂಕೆ ಮೊಲಗಳನ್ನು ಕಂಡು ಜಗ್ಗಿಸೆಳೆಯುವಂತೆ ಮುಖವೆತ್ತಿ ಬಗುಳತೊಡಗಿದವು.

ಸಿಡಿವಲೆ ಸೆಳೆವಲೆ ಕಾಲ್ವಲೆ ಕೊರಲ್ವಲೆ ಬಲು
ನಿಡಿವಲೆ ಪಾಜಿ ಬೆಳ್ವಾರ
ಬಡಿವಲೆ ಬಲುವಲೆಗಾರರು ಕೂಗಿ ಬೊ
ಬ್ಬಿಡುತಲ್ಯೆದಿದರು ಮುಂಗಡೆ ೧೬

ಸಿಡಿಬಲೆ, ಸೆಳೆಬಲೆ, ಕಾಲಬಲೆ, ಕೊರಳಬಲೆ, ನಿಡಿದಾದಬಲೆ, ಪಾಜಿಬೆಳ್ವಾರ(ಸಣ್ಣಬಲೆ) ಬಡಿ ಬಲೆಗಳ ಬಲಾಢ್ಯ ಬೇಟೆಗಾರರು ಬೊಬ್ಬೆ ಹಾಕುತ್ತಾ ಮುಂದಕ್ಕೆ ಬಂದರು.

ಮುಟ್ಟುವ ಫಣಿ ಹುಲಿ ಕರಡಿ ಸಿಂಹದ ಬಾಯ
ಕಟ್ಟು ಬೇಂಟೆಯ ಪಡೆ ಮುರುಹೆ
ಬೆಟ್ಟುವ ಕಾಲ್ಗಟ್ಟಿಗೆ ಕೌಟ್ಲೆದಾಳ್ದಡ್ಡ
ಗಟ್ಟುವ ಬೇಡರ್ಯೆದಿದರು ೧೭

ಹಾವು ಹುಲಿ ಕರಡಿ ಸಿಂಹಗಳ ಬಾಯಕಟ್ಟು, ಬೇಟೆಯ ದಂಡು ಹಿಂದಿರುಗಲು ಹೆಟ್ಟುವ ಕಾಲಕಟ್ಟಿಗೆ ಕೌಟ್ಲೆ(ಕೌಟಿಲ್ಯ ತಂತ್ರ) ತಾಳಿ ಅಡ್ಡಗಟ್ಟುವ ಬೇಡರು ಬಂದರು.

ಬೇಸರದುಲಿವ ಬೇಂಟೆಯ ಬೊಬ್ಬೆ ಬಹುವಾದ್ಯ
ಗೋಸಣೆಯಿಂದ ಕಂಗೆಟ್ಟು
ಆ ಸಾರಗಮುಖ್ಯ ಮೃಗವೊಡಲು ನಾಯ
ಹಾಸವನು ಕಳಚಿದರಾಗ ೧೮

ಬೇಟೆಗಾರರ ಬೊಬ್ಬೆ, ಬಹುವಾದ್ಯಗಳ ಘೋಷಣೆಗಳಿಂದ ಜಿಂಕೆಯ ಬೇರೆಬೇರೆ ತಳಿಗಳು ಓಡತೊಡಗಿದಾಗ ನಾಯಿ ಕೊರಳ ಹಾಸ(ಪಾಶ=ಹಗ್ಗ)ವನ್ನು ಕಳಚಿಬಿಟ್ಟರು.

ಅರೆಯಟ್ಟಿ ಬರ್ಪ ನಾಯಿಗೆ ಮೃಗನಿಚಯ ಕೈ
ಸೆರೆಗೊಟ್ಟು ಪೋಪಂತೆ ಭಯದಿ

ನೆರೆ ಗರ್ಭದ ಕೂಸುಗಳುರ್ಚಿ ಬೀಳ್ವಂತೆ
ಮುರಿದವು ಮಿಳ್ತುಗಳೆನಿಸಿ ೧೯

ಬೆನ್ನಟ್ಟಿ ಬರುವ ನಾಯಿಗಳಿಗೆ ಜಿಂಕೆಗಳು ಹೊಟ್ಟೆಯಲ್ಲಿದ್ದ ಮರಿಗಳನ್ನು ಸೆರೆಕೊಟ್ಟು ಹೋದವು ಎಂಬಂತೆ ಭಯದಿಂದ ಓಡುವ ಅವುಗಳನ್ನು ಮೃತ್ಯುವಿನಂತೆ ಮುರಿದವು, ಹೊಟ್ಟೆಯಲ್ಲಿದ್ದ ಮರಿಗಳು ಕೆಳಕ್ಕೆ ಉರ್ಚಿ ಬೀಳುವಂತೆ.

ಪಿಡಿದ ಮಿಗಂಗಳ ಬಿಡದಿರೆ ಬಾಯಲ್ಲಿ
ಬಡಿಗೋಲ್ಗಳನಿಕಿ ಕಿವಿಯ
ಒಡಮುರುಹಿದೊಡೊದರುವ ಶಬ್ದ ವಿಪಿನದೊ
ಳೆಡೆಗೊಂಡುದೇನ ಬಣ್ಣಿಸುವೆ ೨೦

ನಾಯಿಗಳು ಹಿಡಿದ ಜಿಂಕೆಗಳನ್ನು ಬಿಡದಿದ್ದಾಗ ಬೇಟೆಗಾರರು ನಾಯಿಗಳ ಬಾಯಿಗೆ ಬಡಿಗೋಲನ್ನಿಕ್ಕಿ ಕಿವಿಯನ್ನು ಹಿಂಡಿದಾಗ ಅವುಗಳ ಕಿರಿಚಾಟ ಅರಚಾಟ ಅಗಾಧ ಕಾಡನ್ನು ಆವರಿಸಿತು.

ಕಾಬಾಳೆ ದ್ವೀಪದ್ರಾಕ್ಷೆ ಕೇತಕಿ ತೋರ
ಸೀಬಾಂತ ಬಿದಿರ್ವೆತ್ತಗಳ
ಲೋಬಾನ ಚಂದನಗಾಡಿನೊಳ್ಪಂದಿ ಮ
ತ್ತೇಭಂಗಳಿರೆ ಕಂಡರವರು ೨೧

ಕಾಡುಬಾಳೆ, ದ್ರಾಕ್ಷಿ, ಕೇದಗೆ, ದಪ್ಪ ಸೀಬುಗಳನ್ನುಳ್ಳ ಬಿದಿರುಬೆತ್ತಗಳ, ಲಫಬಾನ(ಒಂದು ಬಗೆಯ ಸುಗಂಧ ದ್ರವ್ಯ) ಶ್ರೀಗಂಧದ ಕಾಡಿನಲ್ಲಿ ಹಂದಿ ಆನೆಗಳಿರುವುದನ್ನು ಕಂಡರು.

ತೊಡೆಗಿಕ್ಕಿ ಬಿಲ್ಗಳನೇರಿಸಿ ಹೆದೆಯ ಜೇ
ವೊಡೆಯಲು ಮಿಗವಿಂಡು ಬೆದರಿ
ಹೊಡೆಮಗ್ಗಿದೊಡಲನಡ್ಡೈಸಿ ಕೂರ್ಗಣೆಯಿಂ
ಕೆಡೆಯೆಂದು ಬೀಳಲಿಕ್ಕಿದರು ೨೨

ಬಿಲ್ಲುಗಳನ್ನು ತೊಡೆಗೆ ಹೂಡು ಮಾಡಿಕೊಂಡು, ಹೆದೆಯನ್ನು ಏರಿಸಿ, ಜೋವೊಡೆಯಲು ಜಿಂಕೆಯ ಹಿಂಡಿನ ಹೊಟ್ಟೆ ಕುಗ್ಗಿದ ಒಡಲನ್ನು ಹರಿತವಾದ ಬಾಣದಿಂದ ಕೆಳಕ್ಕೆ ಬೀಳುವಂತೆ ಹೊಡೆದರು.

ಎಚ್ಚಡುಚ್ಚಳಿಸಿದ ಬೋಳೆ ಹೆಬ್ಬಿದಿರ್ಗಳ
ಕೊಚ್ಚಲು ವನಲಕ್ಷ್ಮಿ ಭಟರ್ಗೆ
ಮೆಚ್ಚಿಕೊಟ್ಟಂತೆ ಮುತ್ತುಗಳುದುರಿತು ಪೇಳ
ಲಚ್ಚರಿ ಕೇಳಾಯತಾಕ್ಷಿ ೨೩

ಹಾಗೆ ಹೊಡೆದಾಗ ಮಿಗದ ಮೈಯಿಂದ ಹೊರನುಗ್ಗಿದ ಬಾಣ ಹೆಬ್ಬಿದರನ್ನು ಕೊಚ್ಚಲು ವನಲಕ್ಷ್ಮಿ ಭಟರಿಗೆ ಮೆಚ್ಚಿಕೊಟ್ಟಂತೆ ಮುತ್ತುಗಳು(ಬಿದಿರಕ್ಕಿ)ಉದುರಿದವು.

ಅಂಗಜನಣುಗನನಿದಿರ್ಗೊಂಬ ವನಲಕ್ಷ್ಮಿ
ರಂಗವಾಲಿಯನಿಕ್ಕಿದಂತೆ
ತುಂಗವಿಕ್ರಮರಂಬುಗಡಿಯಿಂ ಸಿಡಿದ ರ
ತ್ನಂಗಳೊಪ್ಪಿರ್ದುವಾ ಬನದಿ ೨೪

ಮನ್ಮಥನ ಮಗನನ್ನು(ಅನಿರುದ್ಧ) ಎದುರುಗೊಳ್ಳುವ ವನಲಕ್ಷ್ಮಿ ರಂಗವಲ್ಲಿಯನಿಕ್ಕಿದಂತೆ ಸಮರ್ಥರ ಬಾಣಗಳ ಕಡಿತದಿಂದ ಸಿಡಿದ ರತ್ನಗಳು ಕಂಗೊಳಿಸಿದವು.

ತಡೆಯದೆ ಮಗುಳೊರ್ವ ಶಾರ್ದೂಲವನೆಚ್ಚೆ
ಹೊಡೆ ಹಾಯ್ದುಉರುಚಂದನವ
ತಡೆಗಡಿಯಲು ಸುತ್ತಿಕೊಂಡಿರ್ದ ನಾಗರ
ಹೆಡೆಮಣಿ ಸುರಿದುವೇನೆಂಬೆ ೨೫

ಮತ್ತೊಬ್ಬ ಹುಲಿಗೆ ಬಾಣ ಪ್ರಯೋಗಿಸಿದಾಗ ಅದು ಹೊಟ್ಟೆಯ ಮೂಲಕ ಶ್ರೀಗಂಧ ಮರಕ್ಕೆ ತಾಕಲು, ಅದಕ್ಕೆ ಸುತ್ತಿಕೊಂಡಿದ್ದ ನಾಗರಹಾವಿನ ಹೆಡೆಯಿಂದ ಮಣಿ ಸುರಿದವು.

ಚಂದಿರವೆರೆ ಬಾಣದಿಂದೊಬ್ಬ ಕೊಬ್ಬಿದ
ಹಂದಿಯನೆಚ್ಚಲು ಕೋಡುಡಿದು
ಮುಂದುರುಳಿದವು ವರಾಹ ಬೆಳ್ಳಿಯ ತೋಳ
ಬಂದಿಯನುರ್ಚಿಕೊಂಡಂತೆ ೨೬

ಚಂದ್ರಬಾಣದಿಂದ ಒಬ್ಬ ಕೊಬ್ಬಿದ ಹಂದಿಗೆ ಹೊಡೆಯಲು, ಅದರ ಕೋರೆಹಲ್ಲು ಮುರಿದು ಹಂದಿ ಕೆಳಗುರುಳಿತು, ಬೆಳ್ಳಿಯ ತೋಳಬಂದಿ ಕಳಚಿಕೊಂಡಂತೆ.

ಸೊಕ್ಕಾನೆಗಳಿದಿರ್ವಂದೊಡೆ ತಲೆಗಳ
ಚಕ್ಕನೆ ಕಡಿದ ಲುಬ್ಧಕನು
ಹೆಕ್ಕಳದಿಂದ ಹೊತ್ತನು ವಿಘ್ನರಾಜನ
ಮಕ್ಕಳ ಬಳಗವೆಂಬಂತೆ ೨೭

ಸೊಕ್ಕಾನೆಗಳು ಎದುರು ಬಂದಾಗ ಲುಬ್ಧಕ(ಬೇಡ)ನೊಬ್ಬನು ಚಕ್ಕನೆ ತಲೆಗಳನ್ನು ಕಡಿದನು. ಬಳಿಕ ಉತ್ಸಾಹದಿಂದ ವಿಘ್ನೇಶ್ವರನ ಮಕ್ಕಳ ಬಳಗದವಿದೆಂದು ಹೊತ್ತನು.

ಕುಂತಳಮಯವಾಗಿರ್ದ ಪೆರ್ಗರಡಿಯ
ಕೊಂತದಿ ಕಡಿದ ಪೆರ್ದಲೆಯ
ಸಂತಸಬಿಡದೆ ಹೊತ್ತಿರ್ದರು ಆ ಜಾಂಬ
ವಂತನ ಮೊಮ್ಮಕ್ಕಳಂತೆ ೨೮

ಕೂದಲುಮಯವಾಗಿದ್ದ ದೊಡ್ಡ ಕರಡಿಯನ್ನು ಕಡಿದಾಗ ಅದರ ದೊಡ್ಡ ತಲೆಯನ್ನು ಸಂತೋಷದಿಂದ ಹೊತ್ತಿದ್ದರು ಜಾಂಬವಂತನ (ಕರಡಿಗಳ ಒಡೆಯ) ಮೊಮ್ಮಕ್ಕಳಂತೆ

ಭಾಸುರವಡೆದ ಕಾಳ್ಕೋಣನ ತಲೆಗಡಿ
ದೋಸರಿಸದೆ ಹೊತ್ತುಕೊಂಡು
ಬೇಸರದೈತರ್ಪ ಬೇಡರಿರ್ದರು ಮಹಿ
ಷಾಸುರ ಬಹುರೂಪಿನಂತೆ ೨೯

ಮಿರಿಮಿರಿ ಮಿಂಚುವ ಕಾಡುಕೋಣನನ್ನು ಕಡಿದು ಬಹುರೂಪಿ ಮಹಿಷಾಸುರನಂತೆ ಅದರ ತಲೆಯನ್ನು ಬೇಸರದಿಂದ ಹೊತ್ತುಕೊಂಡು ಬರುವ ಬೇಡರಿದ್ದರು.

ಕೆಂಗಿಡಿಗಣ್ಣ ಕೇಸರಿಯ ಮಸ್ತಕವ ಬಾ
ಣಂಗಳಿಂದಿಳುಹಿ ಹೊತ್ತವರು
ಕಂಗೊಳಿಸಿದರು ಕಾಂತಾರದಿ ಸಿರಿ ನರ
ಸಿಂಗನ ಲೆಂಕರೆಂಬಂತೆ ೩೦

ಕೆಂಪುಗಣ್ಣಿನ ಸಿಂಹದ ತಲೆಯನ್ನು ಕಡಿದು ತಲೆಯ ಮೇಲೆ ಹೊತ್ತವರು ನರಸಿಂಹನ ಸೇವಕರಂತೆ ಕಂಡುಬಂದರು.

ಬೇಡರ ಬಿಗಿದ ಬಿಲ್ಗೋಲಿಂದಿಸುವ ಕೈ
ವಾಡವ ಕಂಡು ತನ್ನದಟ
ನೋಡಬೇಕೆಂದು ವಾಜಿಯನಿಳಿದನುವಾದ
ಕಾಡತರಳೆಯ ಕಾಂತನಂತೆ ೩೧

ಬೇಡರು ಬಿಲ್ಲಬಾಣದಿಂದ ಹೊಡೆಯುವ ಕೈವಾಡವನ್ನು ಕಂಡು ತನ್ನ ಅದಟನ್ನು ತೋರಬೇಕೆಂದು ಕುದುರೆಯಿಂದ ಇಳಿದು ಅನುವಾದ– ಕಾಡತರಳೆಯ ಕಾಂತನಂತೆ.

ಚರಣದೊಳೆಸೆವ ಚಮ್ಮಾವುಗೆ ಬಿಗಿದುಟ್ಟ
ಮರಕತವಟ್ಟೆ ಮಾಂದಳಿರು
ಶಿರದಲಿ ಮೆರೆಯೆ ಸಿಂಜಿನಿಗೆಯ್ದು ಬಲುಬಿಲ್ಲ
ಕರದೊಳಗಾಂತು ಜೋವೊಡೆದ ೩೨

ಪಾದದಲ್ಲಿ ಪ್ರಕಾಶಿಸುವ ಚಮ್ಮಾವುಗೆ(ಚರ್ಮ+ಪಾದುಕೆ), ಬಿಗಿದುಟ್ಟ ಮರಕತ ಬಟ್ಟೆ, ತಲೆಯಲ್ಲಿ ಮಾವಿನತಳಿರು ಮೆರೆಯುತ್ತಿರಲು ಬಿಲ್ಲನ್ನು ಹಿಡಿದು ಸಿಂಜನಿ ಎಳದು ಜೀವೊಡೆದ.

ಬಿಲ್ಲ ಝೇಂಕಾರವ ಕೇಳಿ ಜೀವಾದಿಗ
ಳೆಲ್ಲವು ನಿಲ್ಲದೋಡಿದುವು
ಪುಲ್ಲಶರಾತ್ಮಸಂಭವನ ಕಣ್ಗೆಸೆದುದು
ಹೊಲ್ಲೆಹ ಮೃಗವೆನ್ನ ಹೊನ್ನೆ ೩೩

ಬಿಲ್ಲಿನ ಝೇಂಕಾರವನ್ನು ಕೇಳಿ ಜೀವಾರಿಗಳೆಲ್ಲ ನಿಲ್ಲದೆ ಓಡಿದವು. ಅನಿರುದ್ದನ ಕಣ್ಣಿಗೆ ಬಿದ್ದದ್ದು ದುಷ್ಟ ಮೃಗಗಳು ಮಾತ್ರ

ಹೇರಾನೆಯ ತಲೆಯಡಗ ಭಕ್ಷಿಸುವ ಕಂ
ಠೀರವನೊಡಲ ನೆಗ್ಗೊತ್ತಿ
ಘೋರಾಕೃತಿವೆತ್ತು ಹಿರಿತಿಂಬ ಶರಭ ಹೂಂ
ಕಾರದಿಂದಿದಿರ್ವಂದುದು ೩೪

ದೊಡ್ಡ ಆನೆಯ ಮಾಂಸವನ್ನು ಭಕ್ಷಿಸುವ ಸಿಂಹದ ಒಡಲನ್ನು ನೆಗ್ಗಿ ತಿನ್ನುವ ಶರಭ ಹೂಂಕಾರದಿಂದ ಎದಿರು ಬಂದಿತು.

ಹೊಳೆವ ಕೂರ್ಗಣೆಯಿಂದ ಇಕ್ಕಲದರ ಪೆ
ರ್ಗಳದೊಳು ಸುರಿವ ರೋಹಿತದ
ನೆಳಲೊಳು ಕಣ್ಣೆ ಕಾಣಿಸ ಬಂತು ಗಗನ
ಸ್ಥಳದಲಿ ಹೊಳೆವಂತೆ ವಿಹಗ ೩೫

ಹರಿತವಾದ ಬಾಣದಿಂದ ಹೊಡೆದಾಗ, ಅದರ ಕೊರಳಿನಿಂದ ಸುರಿವ ನೆತ್ತರ ನೆಳಲಲ್ಲಿ ಕಣ್ಣಿಗೆ ಕಾಣಿಸಿತು–ಗಗನದಲ್ಲಿ ಹೊಳೆವಂತೆ ವಿಹಗ(ಪಕ್ಷಿ)

ಸೊಂಡಿಲ ಮೊನೆವೆತ್ತ ಮದಹಸ್ತಿಗಳ ಕಚ್ಚಿ
ಕೊಂಡಿರ್ದ ಕೇಸರಿಗಳನು
ತುಂಡದೊಳೆರಡು ಕಾಲೊಳಾಂತ ಗಂಡ ಭೇ
ರುಂಡನ ಬೀಳಲಿಕ್ಕಿದನು ೩೬

ಮದಹಸ್ತಿಗಳ ಸೊಂಡಿಲನ್ನು ಕಚ್ಚಿಕೊಂಡಿದ್ದ ಸಿಂಹಗಳನ್ನು, ಕೊಕ್ಕಿನಿಂದ ಎರಡು ಕಾಲುಗಳಿಂದ ಹಿಡಿದ ಗಂಡಭೇರುಂಡನನ್ನು ಬೀಳುವಂತೆ ಹೊಡೆದನು.

ಬಿದ್ದುದು ವೃಕ್ಷ ವೃಕ್ಷದ ಮೇಲೆ ಮದಹಸ್ತಿ
ಬಿದ್ದುದು ಕೇಸರಿಯೊಡನೆ
ಬಿದ್ದುದು ವಿಹಗೇಶ ಬೀಳುವ ನೆಲದಿ ನಿಂ
ತಿದ್ದ ಕಿರಾತರೋಡಿದರು ೩೭

ವೃಕ್ಷ ಬಿದ್ದಿತು, ವೃಕ್ಷದ ಮೇಲೆ ಮದಹಸ್ತಿ ಬಿದ್ದಿತು, ಸಿಂಹದೊಡನೆ ವಿಹಗೇಶ ಬಿದ್ದಿತು, ಬೀಳು ನೆಲದಿಂದ ಕಿರಾತರು ಓಡಿದರು.

ಭಟ್ಟರ ಗುರುಗಳೆಂದೆನಿಸಿ ಕುಮಾರನ
ಬೊಟ್ಟೆತ್ತಿ ಪೊಗಳ್ದ ಲುಬ್ಧಕರು
ಕೊಟ್ಟರೊಂದೊಂದು ಕೂರ್ಗಣೆಗಳನದು ಪೆ
ರ್ಬೆಟ್ಟಕೆ ಮಿಗಿಲಾದುದೆನಿಸಿತು ೩೮

ವೀರರ ಗುರು ಎಂದು ಕುಮಾರನನ್ನು ಬೆಟ್ಟು ತೋರಿ ಹೊಗಳಿದ ಬೇಡರು ಒಂದೊಂದು ಹರಿತವಾದ ಬಾಣಗಳನ್ನು ಕೊಟ್ಟರು. ಅದು ದೊಡ್ಡ ಬೆಟ್ಟಕ್ಕೆ ಮಿಗಿಲೆನಿಸಿತು.

ತೋರಿದ ಕೈಚಳಕವನು ಮೇದಿನಿಯ ಬಿ
ಲ್ಲಾರರಿಗಾಶ್ಚರ್‍ಯವೆನಿಸಿ
ಏರಿದ ದಿವ್ಯವಾಜಿಯ ನೇಜಯವಾಂತು
ಹಾರಿಸುತಿರ್ದ ನಾಲ್ದೆಸೆಗೆ ೩೯

ಲೋಕದ ಬಿಲ್ಲುಗಾರರಿಗೆ ಸೋಜಿಗವಾಗುವಂತೆ ಕೈಚಳಕವನ್ನು ತೋರಿದರು. ನೇಜಯ(ಆಯುಧ ವಿಶೇಷ) ಹಿಡಿದು ಕುದುರೆಯನ್ನೇರಿ ನಾಲ್ಕು ದಿಕ್ಕಿಗೆ ಹಾರಿಸಿದನು.

ದೂರದಿಂದೋಡಿದ ಚಮರೀ ಖಡ್ಗ ಸ
ದ್ವರಾಹಂಗಳನು ಕೈಮಗುಚಿ
ತೋರ ಭಲ್ಲೆಯದಿ ತಿವಿದು ಹೊಮ್ಮಿಗವ ಕಾಂ
ತಾರದೊಳು ಚರಿಯ ಕುಟ್ಟಿದನು ೪೦

ದೂರದಿಂದೋಡಿದ ಚಮರಿ ಮೃಗ, ಘೆಂಡಾಮೃಗ, ವರಾಹಗಳನ್ನು ದೊಡ್ಡ ಭರ್ಜಿಯಿಂದ ತಿವಿದು, ಜಿಂಕೆಯನ್ನು ಕಾಡಿನಲ್ಲಿ ಇಲ್ಲವಾಗುವಂತೆ ಮಾಡಿದನು.

ಕೋಣನೊಂದುಳಿದುದು ಜವನಿಂದ ಸಲೆಜಗ
ತ್ರಾಣ ಚಂದ್ರ ಧೂರ್ಜಟಿಯಿಂದ
ಏಣನಂದಿ ಮೂರುಳಿದುವು ಮಿಕ್ಕ ಮೃಗಗಳ
ಗೋಣ ಖಂಡಿಸಿದ ಖಂಡೆಯದಿ ೪೧

ಯಮನಿಂದ ಕೋಣ ಉಳಿಯಿತು, ಚಂದ್ರ ಮತ್ತು ಶಿವನಿಂದ ಜಿಂಕೆ ಮತ್ತು ನಂದಿ ಉಳಿದವು. ಮಿಕ್ಕ ಮೃಗಗಳ ಕೊರಳು ಕತ್ತರಿಸಿದನು.

ಮಕರಕುಂಡಲ ಪರಮೇಷ್ಠಿ ನಾರದ ಷ
ಣ್ಮುಖವಾಹನಂಗಳನುಳಿದು
ಪ್ರಕಟಿತವಾಗಿರ್ದ ಖಗನಿಚಯವ ಕುಮಾ
ರಕ ಬೇಂಟೆಯೊಳಗೆ ನೆಗ್ಗಿಸಿದ ೪೨

ಬ್ರಹ್ಮ, ನಾರದ, ಷಣ್ಮುಖರ ವಾಹನಗಳನ್ನು ಬಿಟ್ಟು ಉಳಿದ ಪಕ್ಷಿಸಮೂಹವನ್ನು ಅನಿರುದ್ಧ ಧ್ವಂಸ ಮಾಡಿದನು.

ಉದುರಿತು ಮೃಗ ಪಕ್ಷಿ ಕುವರನ ಬೇಂಟೆಗಿ
ನ್ನಿದಿರಿಲ್ಲ ವಿಪಿನಾಂತರದಿ
ಬೆದರಿಸಿ ಕೊಳಬೇಕೆಂದು ಭಾಸ್ಕರ ಬಿಸಿ
ಲ್ಗುದುರೆಯ ಪೌಜನಟ್ಟಿದನು ೪೩

ಕಾಡಿನಲ್ಲಿ ಅನಿರುದ್ಧನ ದೆಸೆಯಿಂದ ಮೃಗಪಕ್ಷಿಗಳು ತರಗೆಲೆಗಳಂತೆ ಉದುರಿದವು. ಬೆದರಿಸಲೋಸ್ಕರ ಸೂರ್ಯ ಬಿಸಿಲ್ಗುದುರೆಯ (ಮರೀಚಿಕೆಯ) ಸೈನ್ಯವನ್ನು ಕಳಿಸಿದನು.

ದಪ್ಪಗನಣುಗನ ಬಲದ ಮಸ್ತಕದ ಮೇ
ಲಪ್ಪಳಿಸಿದ ಬಿಸಿಲ್ಕಿಡಿಗೆ
ಕಪ್ಪಟೆಯಾದುದುರುವೀರುಹ ತಳಿರು
ತೊಪ್ಪಲು ತರಗೆಲೆಯಾಯ್ತು ೪೪

ಅನಿರುದ್ಧನ ತಲೆಯ ಮೇಲೆ ಅಪ್ಪಳಿಸಿದ ಬಿಸಿಲ ಕಿಡಿಗೆ ಭೂಜಾತ ಮರಗಿಡಗಳು ಕಪ್ಪಟ್ಟೆ ಕರ್‍ರಗಾದವು, ಚಿಗುರು ಸೊಪ್ಪುಸೆರೆ ತರಗಲೆಗಳಾದವು.

ಕ್ಷೋಣಿಯೊಳೀ ಬಲ್ಬಿಸಿಲಿಂದ ಕಡುಗಾದ
ಬಾಣಲಿಯೆಣ್ಣೆಯಂತಬುಧಿ
ಹೂಣಿಸಿ ಕುದಿಗೊಂಡು ಮರಳ್ದುದು ಜಲಚರ
ಶ್ರೇಣಿ ಬೆಂಡೆದ್ದು ತೇಲಿದುವು ೪೫

ಭೂಮಿಯಲ್ಲಿ ಬಲವಾದ ಬಿಸಿಲಿನಿಂದ ಸಮುದ್ರ ಕಾದ ಬಾಣಲಿ ಎಣ್ಣೆಯಂತೆ ಕುದಿದು ಮರಳತೊಡಗಿತು, ಜಲಚರಗಳು ಸೀದು ಕರಕಲಾಗಿ ತೇಲಿದವು.

ಗಾಳಿ ಘರ್ಮಾಂಬುವೆತ್ತುದು ಭೂಮಿ ಸರ್‍ರನೆ
ಸೀಳಿತು ಕೂರ್ಮನ ಬೆನ್ನು
ಹೋಳಿಗೆವಡೆದುದು ಬಿರುಬಿಸಿಲ ಝಳದ ಚ
ಡಾಳಿಕೆ ಜಗವ ಭಂಗಿಸಿತು ೪೬

ಗಾಳಿ ಬೆವರ ಹನಿಯಿಂದ ತೊಯ್ದಿತು, ಭೂಮಿ ಸೀಳಿಕೊಂಡಿತು, ಆಮೆಯ ಬೆನ್ನು ಹೊಪ್ಪಳ(ಬೊಬ್ಬೆ) ಹೊಡೆಯಿತು, ಬಿರುಬಿಸಿಲ ಉಗ್ರತೆ ಜಗತ್ತನ್ನು ಭಂಗಿಸಿತು.

ಛಿಟಿ ಛಿಟಿಲೆಂಬ ಮಧ್ಯಾಹ್ನದ ಬಿಸಿಲಿಂಗೆ
ನಿಟಿಲಾಕ್ಷ ಭೀತಸ್ಥನಾಗಿ
ಕುಟಿಲವರ್ಜಿತ ನಿಡುಜಡೆಯೊಳಗಾಕಾಶ
ತಟನಿಯ ನೆಲೆಗೊಳಿಸಿದನು ೪೭

ಚಿಟಿಚಿಟಿಲೆಂದು ಸಿಡಿದು ಅವಲಾಗುತ್ತಿರುವ ಮಟಮಟ ಮಧ್ಯಾಹ್ನದ ಬಿಸಿಲಿಗೆ ನಿಟಿಲಾಕ್ಷ(ಹಣೆಗಣ್ಣ) ಭೀತಿಗೊಂಡು ನಿಡುಜಡೆಯೊಳಗೆ ಆಕಾಶಗಂಗೆಯನ್ನು ನೆಲೆಗೊಳಿಸಿದನು.

ಆರ ಬಿಟ್ಟಿತೀ ಬಿರುಬಿಸಿಲು ವೈಕುಂಠದಿ
ನಾರಾಯಣ ನಿಲ್ಲಲಂಜಿ
ನೀರೊಳು ಮಿಡುಕಿ ಮೀನಾದ ಮಿಕ್ಕಿನ ದೇಹ
ಧಾರಕರಿಗೆ ಶಕ್ಯವಹುದೆ ೪೮

ಈ ಬಿರುಬಿಸಿಲು ಯಾರನ್ನು ತಾನೆ ಬಿಟ್ಟಿತು? ವೈಕುಂಠದಲ್ಲಿ ನಾರಾಯಣ ನಿಲ್ಲಲಾಗದೆ ಸಮುದ್ರದ ನೀರೊಳಕ್ಕೆ ಬಿದ್ದು ಮೀನಾದ(ಮತ್ಸವತಾರಿಯಾದ);ಮಿಕ್ಕ ದೇಹಧಾರಕರ ಪಾಡೇನು?

ಹರನುರಿಗಣ್ಣ ಚಡಾಳ ವಿದಾರಣ ಉಗ್ರ
ನರಸಿಂಹನಕ್ಷಿ ಕೆಂಗಿಡ
ಉರವಣೆಗಿಮ್ಮಡಿ ಬಿಸಿಲಿಂದ ಭಟರು ಪೆ
ರ್ಮರ ಗಿಡುನೆಳಲ ಸೇರಿದರು ೪೯

ಈಶ್ವರನ ಉರಿಗಣ್ಣ ಆಧಿಕ್ಯ ನಾಶಮಾಡುವ ನರಸಿಂಹನ ಕಣ್ಣಿನ ಕೆಂಗಿಡಿಯ ಆಧಿಕ್ಯಕ್ಕೆ ಇಮ್ಮಡಿಯಾದ ಬಿಸಿಲನ್ನು ತಾಳಲಾರದೆ ವೀರರು ದೊಡ್ಡಮರಗಿಡಗಳ ನೆಳಲನ್ನು ಆಶ್ರಯಿಸಿದರು.

ಬಳಲಿದ ರತಿರಾಜನಾತ್ಮಸಂಭವ ಪಾಯ
ದಳದೊಳು ತೇಜಾಢ್ಯರಿಗೆ
ಹೊಳೆವ ಸುವರ್ಣ ಕರಂಡದ ಕಡುಶೈತ್ಯ
ದಳೆದ ಕಪ್ಪುರವ ವಿತರಿಸಿದ ೫೦

ಬಳಲಿ ಬೆಂಡಾದ ಅನಿರುದ್ಧನ ಕಾಲಾಳುಗಳಲ್ಲಿ ಬಲಾಢ್ಯರಿಗೆ ಚಿನ್ನದ ಭರಣಿಯಲ್ಲಿದ್ದ  ಶೈತ್ಯ ಕರ್ಪೂರವನ್ನು ವಿತರಿಸಿದ!

ಬಿಸಿಲ ಚಡಾಳದಿ ಮೆಯ್ ಬೆಮರ್ದಡೆ ಧೂ
ಪಿಸಿದ ಮಹಾತ್ಮರ ಕಂಡು
ಮಸಿವಣ್ಣದ ಬೇಡರಡವಿಯೊಳು ಪೊಕ್ಕು ಇ
ಟ್ಟಿಸಿದರು ನೀರಜವನವ ೫೧

ಬಿಸಿಲಿನ ಆಧಿಕ್ಯದಲ್ಲಿ ಶರೀರ ಬೆವತು ಬೊಬ್ಬೆ ಹೊಡೆದಾಗ ಅದಕ್ಕೆ ಧೂಪ ಹಾಕಿದ ಮಹಾತ್ಮರನ್ನು ಕಂಡು ಮಸಿಬಣ್ಣದ ಬೇಡರು ಅಡವಿಯೊಳಗಿನ ನೀರಜನವನ(ಕಮಲಾಕರ=ಕೊಳ)ವನ್ನು ನಿಟ್ಟಿಸಿದರು.

ಗಿರಿಶಿಖರದೊಳಿರ್ದು ನಿರ್ಝರಜಲವುಕ್ಕಿ
ಪರಿದು ಸಾಲ್ಮಡುಗಟ್ಟಿಗೊಂಡು
ಸಿರಿವೆತ್ತ ಬನ ಕಣ್ಗೆಸೆದುದ ಕಂಡು ಕಾ
ತರಿಗರ ಢಗೆಯು ತೀರ್ಕಣಿಸಿತು ೫೨

ಗಿರಿಶಿಖರದಲ್ಲಿದ್ದ ಝರಿ, ಜಲಪಾತಗಳು ಹರಿದು ಸಾಲು ಸಾಲು ಮಡುಗಟ್ಟಿ ಸುಂದರ ವನದ ಅವಿರ್ಭಾವಕ್ಕೆ ಕಾರಣವಾದುದನ್ನು ಕಂಡು ಕಾತರಿಗರ ಧಗೆಯು ಕೊನೆಗೊಂಡಿತು.

ತೇಜಾಢ್ಯರುಗಳು ಮುಂಪೋಗಿ ವಿಮಲ ಸ
ರೋಜ ಪತ್ರಿಕೆಯ ಪೊಟ್ಟಣದಿ
ರಾಜಾಮೃತವೆನೆ ತಣ್ಣೀರ ತಂದಿತ್ತ
ರಾ ಜಿತಕಂತು ನಂದನಗೆ ೫೩

ತೇಜಾಢ್ಯರು ಮುಂದೆ ಹೋಗಿ ಕಮಲದ ಎಲೆಯ ಪೊಟ್ಟಣದಲ್ಲಿ(ದೊನ್ನೆ) ಚಂದ್ರಾಮೃತ ಎನ್ನಿಸುವ ತಣ್ಣೀರನ್ನು ಅನಿರುದ್ಧನಿಗೆ ತಂದುಕೊಟ್ಟರು.

ತೊಡೆಯೆರ್ದೆ ಕೊರಲುದ್ದ ಪೊಕ್ಕು ಸಲಿಲವನು
ಉಡಿಯಲಿ ಬೆದಕಿ ನೀರ್ಗುಡಿದು
ಪೊಡವಿಗೆ ಪೊರಮಟ್ಟು ಕಳಿವಣ್ಣಳ ತಿನ್ನ
ತೊಡಗಿದರೇನ ಹೇಳುವೆನು ೫೪

ತೊಡೆಯುದ್ದ, ಎದೆಯುದ್ದ, ಕೊರಳುದ್ದ, ಇಳಿದು ಬಟ್ಟೆಯಲ್ಲಿ ಶೋಧಿಸಿ ನೀರ್ಗುಡಿದು, ಮೇಲಕ್ಕೆ ಬಂದು ಕಳಿತ ಹಣ್ಣುಗಳನ್ನು ತಿನ್ನುತ್ತಾ ಸಂಸತಗೊಂಡರು ಜನ

ಮಾದಲ ಪಲಸು ದಾಡಿಮ ದ್ರಾಕ್ಷಿ ಖರ್ಜೂರ
ಸೀಳ್ದಿಳೆ ಕಾಬಾಳೆ
ಮೋದ ಸಕ್ಕರೆ ಮಾವು ನೇರಿಲವಣ್ಣಳ
ಯಾದವರ್ತಂದರಾಳ್ದನಿಗೆ ೫೫

ಮಾದಲ, ಹಲಸು, ದಾಳಿಂಬೆ, ದ್ರಾಕ್ಷಿ, ಖರ್ಜೂರ, ಸೀತಾಳಿದ ಈಳೆ, ಕಾಡುಬಾಳೆ, ಸಿಹಿಮಾವು, ನೇರಿಲೆಹಣ್ಣುಗಳನ್ನು ಯಾದವರು ಅನಿರುದ್ಧನಿಗಾಗಿ ತಂದರು.

ಬೆಳಲು ಬಿಲ್ವ ಘೋಟಕ ಬಿಕ್ಕೆ ನೇಮಿ ಹೆ
ಗ್ಗಳವಡಸಿದ ಕಾರೆಬೋರೆ
ಗುಳವತ್ತಿ ತುಂಬುರ ನಗರೆ ಮುಂತಾದ ಪ
ಣ್ಣಳ ತಂದರಾಳ್ದನ ಬಳಿಗೆ ೫೬

ಬೇಲ, ಬಿಲ್ವ, ಘೋಟಕ, ಬಿಕ್ಕೆ, ನೇಮಿ, ಕಾರೆ, ಬೋರೆ, ಗುಳವತ್ತಿ, ತುಂಬುರ(ಕಾಡುಮಾವು), ನಗರೆ ಮೊದಲಾದ ಹಣ್ಣುಗಳನ್ನು ತಮ್ಮ ಒಡೆಯನಿಗಾಗಿ ತಂದರು.

ಪಾದರಿ ಕಾಡುಮಲ್ಲಿಗೆ ಮೊಲ್ಲೆ ಸಲೆ ಹೊಂ
ಗೆದಗೆ ಎಲ್ಲ ಹೂವುಗಳ
ಸ್ವಾದ ಸೋರುವ ಜೇಂಗೊಡವ ಸದ್ಭಟರು ವಿ
ನೋದದೆ ತಂದರಾಳ್ದನಿಗೆ ೫೭

ಪಾದರಿ, ಕಾಡುಮಲ್ಲಿಗೆ , ಮೊಲ್ಲೆ, ಹೊಂಗೇದಗೆ ಹೂಗಳ ಜೊತೆಗೆ ತೊಟ್ಟಿಕ್ಕುವ ಜೇಂಗೊಡವನ್ನು ತಮ್ಮ ಒಡೆಯನಿಗೆ ಸೈನಿಕರು ತಂದುಕೊಟ್ಟರು.

ತಡೆಯದೆ ಗಜಮಸ್ತಕವೆಚ್ಚು ಹಾವಿನ
ಹೆಡೆಯನಂತರದಿ ಸೀಳ್ದಿಕ್ಕಿ
ಬಿಡೆಯವಿಲ್ಲದೆ ತಂದ ದ್ವಿತಯ ರತ್ನಂಗಳ
ತಡೆಯದೆಲ್ಲವ ಕೊಟ್ಟರವಗೆ ೫೮

ತಡೆಯದೆ ಆನೆಯ ತಲೆಗೆ ಎಚ್ಚಿ, ಹಾವಿನ ಹೆಡೆಯನ್ನು ಸೀಳಿ, ಸಂಕೋಚವಿಲ್ಲದೆ ತಂದ ಜೋಡಿ ರತ್ನಗಳನ್ನು ಅನಿರುದ್ಧನಿಗೆ ಕೊಟ್ಟರು.

ಅನಿರುದ್ಧನಖಿಳ ಸೇನೆಗೆ ಪರಿಮಳದಲರು
ತನಿವಣ್ಣನಿತ್ತು ತಾ ಸವಿದು
ಪನಿನೀರನೀಂಟುತೆ ದಿವ್ಯ ತಾಂಬೂಲವ
ನನಿಬರಿಗಿತ್ತ ಸಂತಸದಿ ೫೯

ಅನಿರುದ್ಧ ತನ್ನ ಸೇನೆಗೆ ಪರಿಮಳದ ಹೂ ಹಾಗೂ ತನಿವಣ್ಣನ್ನು ಕೊಟ್ಟು, ಪನ್ನೀರನ್ನು ಈಂಟುತ್ತಾ ತಾಂಬೂಲವನ್ನು ಎಲ್ಲರಿಗೂ ವಿತರಿಸಿದನು.

ಹಸಿವು ನೀರಡಿಕೆ ತಾಪವನು ನೆರೆ ನಿವಾ
ರಿಸಿಕೊಂಡು ಬಲಗೂಡಿ ತೆರಳ್ದು
ರಸಿಕ ರಾಜೇಂದ್ರ ಮುಂಬನದಲಿ ಕಂಡ ರಂ
ಜಿಸುವ ಚೆಂಚಿತಿಯರಾಟಗಳ ೬೦

ಹಸಿವು ಬಾಯಾರಿಕೆಗಳನ್ನು ನಿವಾರಿಸಿಕೊಂಡು ಸೈನ್ಯಸಮೇತ ಮುಂದಿನ ವನಕ್ಕೆ ತೆರಳಿ, ಅಲ್ಲಿ ಮನವನ್ನು ರಂಜಿಸುವ ಚೆಂಚಿತಿಯರ ಆಟಗಳನ್ನು ನೋಡಿದನು.

ಚಿತ್ತಜ ವಿಧಿ ನಿರ್ಮಿಸಿದ ರತ್ನ ನೀಲದ
ಪುತ್ತಳಿಗಳಿಗೆ ಚೇತನವ
ಇತ್ತ ಬಳಕೀ ಬನಕೆ ಬಂದೆರೆಂಬಂತೆ ಪೆ
ಣ್ಮೊತ್ತವೊಪ್ಪಿರ್ದುದಲ್ಲಲ್ಲಿ ೬೧

ಮನ್ಮಥ ಬ್ರಹ್ಮ ನಿರ್ಮಿಸಿದ ನೀಲ ರತ್ನದ ಪುತ್ಥಳಿಗಳಿಗೆ ಚೈತನ್ಯವನ್ನು ನೀಡಿದ ಬಳಿಕ ಈ ಬನಕೆ ಬಂದರೆಂಬಂತೆ ಪೆಣ್ ಸಮೂಹವಿತ್ತು.

ತಿಣ್ಣ ಜವ್ವನದ ಚೆಂಚಿತಿಯರ ಮೆಯ್ ಕಾ
ರ್ಬಣ್ಣದ ಚೆಲ್ವು ನೋಳ್ಪರಿಗೆ
ಹುಣ್ಣಿಮೆಯಾಳ್ದ ತನ್ನೆಸಕವನವರೆಸ
ಳ್ಗಣ್ಣೊಳು ಸಾರ್ಚಿದಂತಿಹುದು ೬೨

ಕಟ್ಟರೆಯದ ಚೆಂಚಿತಿಯರ ಕರಿಬಣ್ಣದ ಚೆಲುವು ನೋಡುವವರಿಗೆ ಹುಣ್ಣಿಮೆ ಚಂದ್ರ ತನ್ನ ಕೈಮಾಟವನ್ನು ಅವರ ಎಸಳುಗಣ್ಣಲ್ಲಿ ಕಂಡರಿಸಿದ್ದಾನೆ ಎನ್ನಿಸದಿರದು.

ಮದನ ಮಂದಿರದ ಬಾಗಿಲಿಗೆ ತೋರಣಗ
ಟ್ಟಿದವೊಲು ತಳಿರುಡೆ ಮೆರೆಯಲು
ಹೃದಯ ಮಂಟಪ ಶಿಖರದ ಜೋಡಿಗಳಸದಂ
ತೆದೆಯೊಳಿರ್ದವು ಕುಚಯುಗಳ ೬೩

ಮದನಮಂದಿರದ(ಯೋನಿಯ) ಬಾಗಿಲಿಗೆ ತೋರಣಕಟ್ಟಿದಂತೆ ತಳಿರ ಉಡುಗೆ ಕಂಗೊಳಿಸಲು, ಹೃದಯ ಗೋಪುರದ ಜೋಡಿ ಕಳಶಗಳಂತೆ ಎದೆಯಲ್ಲಿದ್ದವು ಜೋಡಿ ಕುಚಗಳು

ಲೆಕ್ಕಪರಾರು ಕಲ್ಲರೆಗಳ ಮೇಲೆ ಧು
ಮ್ಮಿಕ್ಕಿ ನೃತ್ಯವಾಡುವಂತೆ
ಸೊಕ್ಕಿದ ಗಜದಂತ ಮುಸಲದಲಿ ಪೆರ್ಬಿದಿ
ರಕ್ಕಿಯ ಮಿದಿವ ಹೆಣ್ಣುಗಳ ೬೪

ಕಲ್ಲರೆಗಳ ಮೇಲೆ ನೆಗೆದು ನರ್ತಿಸುವಂತೆ ಮದಿಸಿದ ಆನೆಯ ದಂತದ ಒನಕೆಯಿಂದ ಬಿದಿಲಕ್ಕಿಯ ಕುಟ್ಟುವ ಹೆಣ್ಣುಗಳನ್ನು ರಕ್ಷಿಸುವವರಾರು?

ಕದಲುವ ಚರಣ ಕಂಪಿಸುವ ನುಣ್ದೊಡೆಗಳು
ಬಿದಿರುವ ಜಘನ ತೆಳ್ವಸಿರು
ಅದಿರುವ ಮೊಲೆಗಳಾಡುವ ತೋಳ್ದುರುಬೆಯರು
ಮಧುರ ಸುಸ್ವರದೆ ಪಾಡಿದರು ೬೫

ಚಲಿಸುವ ಚರಣಗಳ, ಕಂಪಿಸುವ ತೊಡೆಗಳ, ಹೊಯ್ದಾಡುವ ತೆಳುಬಸಿರು ತೋರ ನಿತಂಬಗಳ, ಅಲ್ಲಾಡುವ ಮೊಲೆಗಳ, ಆಡುವ ತೋಳುಗಳ, ತುರುಬಿನ ಸೊಬಗಿಯರು ಮಧುರ ಸ್ವರದಲ್ಲಿ ಹಾಡಿದರು.

ಸುವ್ವಿ ಪೂರಿತ ಕಾಮ ಸುವ್ವಿ ಸದ್ಗುಣಧಾಮ
ಸುವ್ವಿ ಸುರೇಂದ್ರ ಲಲಾಮ
ಸುವ್ವಿ ಸಾರ್ವಭೌಮ ಸುವ್ವಿ ರಾಘವ ರಾಮ
ಸುವ್ವಿ ಸಾಸಿರ ಪುಣ್ಯನಾಮ ೬೬

ನೂರಕ್ಕೆ ನೂರುಪಾಲು ಯಥಾವತ್ ಮನ್ಮಥನಿಗೆ ಸುವ್ವಿ, ಸದ್ಗುಣಧಾಮ(ಸದನ)ನಿಗೆ ಸುವ್ವಿ, ಸುರಶ್ರೇಷ್ಠನಿಗೆ ಸುವ್ವಿ, ಸುರಸಾರ್ವಭೌಮನಿಗೆ

ಸುವ್ವಿ, ರಘುರಾಮನಿಗೆ ಸುವ್ವಿ, ಸಾಸಿರ ಪುಣ್ಯನಾಮನಿಗೆ ಸುವ್ವಿ ಎಂದು ಬಿದಿರಕ್ಕಿಯನ್ನು ಥಳಿಸುತ್ತಾ ಹಾಡಿದರು.

ನಿಗಮದುರ್ಲಭ ಸುವ್ವಿ ನಿರ್ಜರಾರ್ಚಿತ ಸುವ್ವಿ
ಅಘಹರ ಭವದೂರ ಸುವ್ವಿ
ಗಗನಚರಣ ಸುವ್ವಿ ಗರುಡಗಮನ ಸುವ್ವಿ
ಜನದಧಿಪತಿ ಕೃಷ್ಣ ಸುವ್ವಿ ೬೭

ವೇದಗಳಿಗೆ ದುರ್ಲಭ ಸುವ್ವಿ, ದೇವತೆಗಳಿಂದ ಪೂಜಿತ ಸುವ್ವಿ, ಪಾಪನಿವಾರಕನಿಗೆ ಜನನ ಮರಣಾತೀತನಿಗೆ ಸುವ್ವಿ, ಆಕಾಶ ಪಾದನಿಗೆ ಸುವ್ವಿ, ವೈನತೇಯ ಗಮನನಿಗೆ ಸುವ್ವಿ, ಜನದಧಿಪತಿ ಕೃಷ್ಣಮೂರುತಿಗೆ ಸುವ್ವಿ ಎಂದು ಸುವ್ವೊನಕೆಯ ಹಾಡನ್ನು ಹಾಡಿದರು.

ಪರಮಾತ್ಮಕ ಸುವ್ವಿ ಪ್ರದ್ಯುಮ್ನಪಿತ ಸುವ್ವಿ
ವರ ಚತುರ್ಮುಖ ಪಿತ ಸುವ್ವಿ
ಹರನ ಬಾಂಧವ ಸುವ್ವಿ ಹವ್ಯ ಪೋಷಕ ಸುವ್ವಿ
ನರ ನಾರಾಯಣ ಸುವ್ವಿ ೬೮

ಪರಮಾತ್ಮನೆ ಸುವ್ವಿ, ಪ್ರದ್ಯುಮ್ನ ಪಿತನೆ ಸುವ್ವಿ, ನಾಲ್ಮೊಗನ ತಂದೆಯೆ ಸುವ್ವಿ, ಶಿವನ ಬಂಧುವೇ ಸುವ್ವಿ, ಯಜ್ಞದಲ್ಲಿ ಅಗ್ನಿಗೆ ಬಲಗೊಡುವ ವಸ್ತುಗಳ ಪೋಷಕನೇ ಸುವ್ವಿ ನರನಾರಾಯಣನೆ ಸುವ್ವಿ ಎಂದು ಶ್ರೀಹರಿಯ ಗುಣಗಾನ ಮಾಡಿದರು.

ಮಂದರಧರ ಸುವ್ವಿ ಮಾಮನೋಹರ ಸುವ್ವಿ
ವೃಂದಾವನ ವಿಭು ಸುವ್ವಿ
ನಂದನಂದನ ಸುವ್ವಿ ನತಜನಹಿತ ಸುವ್ವಿ
ಎಂದವರೊಲಿದು ಪಾಡಿದರು ೬೯

ಮಂದರ ಪರ್ವತವನ್ನು ಹೊತ್ತವನೆ ಸುವ್ವಿ, ಮಹಾಸುಂದರನೆ ಸುವ್ವಿ, ಬೃಂದಾವನ ಪ್ರಭುವೆ ಸುವ್ವಿ, ನಂದನ ಮಗನೆ ಸುವ್ವಿ, ನತಜನ ಹಿತನೆ (ದೀನದಲಿತರ ಹಿತ ಕಾಯುವವನೆ) ಸುವ್ವಿ ಎಂದು ಅವನ ಗುಣಗಾನ ಮಾಡುತ್ತಾ ಹಾಡಿದರು.

ಪಾಡುವರು ಕೆಲರು ಪೆರ್ಮೊರದೊಳಕ್ಕಿಯನಿಕ್ಕಿ
ಮಾಡುವರು ಕೆಲರು ಬೇಂಟೆಗಳ
ನೋಡುವರು ಕೆಲರು ಬಿಲ್ಗೋಲಾಂತು ನಿಂದರು
ಕಾಡುವೆಣ್ಗಳು ಕಂಗೊಳಿಸಿ ೭೦

ಕೆಲವರು ಹಾಡುವರು, ಕೆಲವರು ಮೊರದಲ್ಲಿ ಅಕ್ಕಿಯನ್ನು ಹಾಕಿ 'ಮಾಡುವರು'(ಮಣ್ಣು ಕಸ ಕಡ್ಡಿಗಳನ್ನು ಇಲ್ಲವಾಗುವಂತೆ ಶುದ್ಧೀಕರಿಸುವರು) ಕೆಲವರು ಬೇಟೆಗಳನ್ನು ನೋಡುವರು. ಕೆಲವರು ಬಿಲ್ಲುಬಾಣಗಳನ್ನು ಹಿಡಿದು ನಿಂತುಕೊಂಡರು. ಇಂಥ ಬಗೆಬಗೆಯ ಭಂಗಿಗಳಲ್ಲಿ ಕಾಡಿನ ಹೆಣ್ಣುಗಳು ಕಂಗೊಳಿಸಿದರು.

ಗಂಡನ ಮೇಲಣಪೇಕ್ಷೆ ತಕ್ಷಣ ಮೂರು
ತುಂಡಾದುದೀ ಕುಮಾರಕನ
ಕಂಡ ಮಾತ್ರದಿ ಚಿಂಚಿತಿಯರು ಇಕ್ಷು ಕೋ
ದಂಡನ ಸರಲ್ಗಿತ್ತರೆದೆಯ ೭೧

ಅನಿರುದ್ಧನನ್ನು ಕಂಡ ಮಾತ್ರದಲ್ಲಿ ಮನ್ಮಥನ ಬಾಣಕ್ಕೆ ಎದೆಯೊಡ್ಡಿದ್ದರಿಂದ ತಮ್ಮ ತಮ್ಮ ಗಂಡಂದಿರ ಮೇಲಿನ ಪ್ರೀತಿ ಮುರಿದು ಮೂರು ತುಂಡಾಯಿತು.

ಓರಂತೆ ಮರುಳಾಯ್ತು ಕಣ್ಣವೇಟಕೆ ಕಾಂ
ತಾರದ ಮೃಗವೆಣ್ಣುಗಳು
ತೋರ ನುಣ್ಮೊಲೆಯೆದೆ ದಿಗಿಲಾಂತು ಪತ್ರೋಪ
ಹಾರವ ತಂದಿತ್ತರವಗೆ ೭೨

ಒಂದೇ ಸಮನೆ ಕಣ್ಣಿನ ಬೇಟೆಗೆ ಸಿಕ್ಕಿ ಭ್ರಾಂತರಾದ ಕಾಡಿನ ಜಿಂಕೆವೆಣ್ಣುಗಳು, ತಮ್ಮ ಕುಚಗಳು ದಿಗಿಲುಗೊಂಡು ಅಲುಗಾಡುತ್ತಿದ್ದರೂ ಎಲೆಯಲ್ಲಿ ಉಪಹಾರವನ್ನು ತಂದು ಕುವರನಿಗೆ ಕೊಟ್ಟರು.

ಬಿದಿರಕ್ಕಿ ಇನಿಜೇನುತುಪ್ಪ ಖರ್ಜುರ ದ್ರಾಕ್ಷಿ
ಬದರಿ ಮುಂತಾದ ಸತ್ಫಲವ
ಉದುರಿದ ಕಳಿವಣ್ಣ ಪೊಟ್ಟಣಗಳ ತಂದು
ಇದಿರಿಕ್ಕಿದರು ಮೇಲ್ಮೇಲೆ ೭೩

ಬಿದಿರಕ್ಕಿ, ಸವಿಜೇನುತುಪ್ಪ, ಖರ್ಜೂರ, ದ್ರಾಕ್ಷಿ, ಬದರಿ(ಎಲಚಿಹಣ್ಣು, ಬೋರೆಹಣ್ಣು) ಮೊದಲಾದ ಹಣ್ಣುಗಳನ್ನು ಹಾಗೂ ಕೆಳಕ್ಕೆ ಉದುರಿದ ಕಳಿತ ಹಣ್ಣುಗಳನ್ನು ಪೊಟ್ಟಣ ಕಟ್ಟಿ ಅನಿರುದ್ಧನಿಗೆ ತಂದುಕೊಟ್ಟರು.

ಕಾಡೆಮ್ಮೆಯ ಕೋಡು ವರಾಹದಂತಿಯ ಕೋರೆ
ದಾಡೆ ಶಾರ್ದೂಲ ಸಿಂಹಗಳ
ಗೂಡ ಪಾದಾಂಗುಳಿ ನಖ ಭೇರುಂಡನಾ
ರೂಢ ಪೆರ್ಗರಿಯಿತ್ತರೊಲಿದು ೭೪

ಕಾಡೆಮ್ಮೆಯ ಕೊಂಬು, ಹಂದಿ ಮತ್ತು ಆನೆಗಳ ಕೋರೆಹಲ್ಲು, ಹುಲಿಸಿಂಹಗಳ ಪಾದಗಳ ಬೆರಳಿನ ಉಗುರು, ಗಂಡಬೇರುಂಡನ ಗರಿಗಳನ್ನು ತಂದುಕೊಟ್ಟರು.

ಕರಿಯ ನಖ ಝುಲ್ಲಿಗಳು ಬೆಳ್ಜವಾದಿ ಕ
ತ್ತುರಿ ಮೇಣ್ ಪುಣುಗಿನ ಚಟ್ಟು
ಹರಿಣ ಗೋರೋಜನ ಕೃಷ್ಣಾಜಿನ ಪುಲಿಚರ್ಮ
ಮರೆಗೊಂಬುಗಳನಿತ್ತರೊಲಿದು ೭೫

ಆನೆಯ ಕಾಲುಗುರಿನ ಗೊಂಚಲುಗಳು, ಜವಾಜಿ, ಕಸ್ತೂರಿ, ಪುನುಗು ಮತ್ತು ಗೋರೋಜನಗಳ ಸುಗಂಧದ್ರವ್ಯ, ಕೃಷ್ಣಾಜಿನ (ಜಿಂಕೆಚರ್ಮ) ಹುಲಿಚರ್ಮ ಮತ್ತು ಜಿಂಕೆಕೊಂಬುಗಳನ್ನು ತಂದುಕೊಟ್ಟರು.

ತುರುಬಿಗೆ ನವಿಲು ಬಲ್ಮೊಲೆಗಳಿಗೆಣೆವಕ್ಕಿ
ಕಿರುನಡುವಿಗೆ ತೋರಸಿಂಹ
ಮಿರುಗವ ಮೆಲ್ಲಡಿ ನಡೆಗಳ್ಗೆ ಹಂಸೆಯ
ಮರಿಗಳ ಕೊಟ್ಟರುತ್ಸವದಿ ೭೬

ತುರುಬಿಗೆ ನವಿಲನ್ನು, ಜೋಡಿ ಮೊಲೆಗಳಿಗೆ ಜೋಡಿ ಎಣೆವಕ್ಕಿ(ಚಕ್ರವಾಕ ಪಕ್ಷಿ)ಗಳನ್ನು, ಸಣ್ಣ ನಡುವಿಗೆ ದಪ್ಪ ಸಿಂಹವನ್ನು, ಮೆಲ್ಲಡಿ ನಡೆಗೆ ಹಂಸೆಯ ಮರಿಗಳನ್ನು ಕೊಟ್ಟರು.

ಪಾಡುವಿಂಚರಕೆ ಕೋಗಿಲೆ ತೊದಲ್ನುಡಿ ಮಾ
ತಾಡುವುದಕೆ ರಾಜಕೀರ
ನೋಡುವುದಕೆ ಹುಲ್ಲೆಯ ಹೆಣ್ಣುಮರಿಗಳ
ಜೋಡಿಸಿಕೊಟ್ಟರುತ್ಸವದಿ ೭೭

ಹಾಡುವ ಸವಿದನಿಗೆ ಕೋಗಿಲೆಯನ್ನು, ತೊದಲುಮಾತಿಗೆ ಅರಗಿಳಿಯನ್ನು, ನೋಡುವುದಕ್ಕೆ ಜಿಂಕೆಯ ಹೆಣ್ಣುಮರಿಗಳನ್ನು ಜೋಡಿಸಿ ಕೊಟ್ಟರು.

ಮರೆಯದೆ ಮನೆಯೊಳಗಿರ್ದುದೆಲ್ಲವ ಜಗ
ದೆರೆಯನ ಪೌತ್ರಗೆ ಸಾರ್ಚಿ
ನೆರೆಯದ ಕಡವೆಗೆ ತಮ್ಮ ಕಣ್ಮನವ ಕೈ
ಸೆರೆಗೊಟ್ಟರಡವಿವೆಂಗಳು ೭೮

ಮನೆಯೊಳಗಿದ್ದುದೆಲ್ಲವನ್ನು ಮರೆಯದೆ ಜಗದೊಡೆಯನ ಮೊಮ್ಮಗನಿಗೆ (ಅನಿರುದ್ಧನಿಗೆ) ತಲುಪಿಸಿ, ತಮ್ಮೊಡನೆ ಕೂಡಿ ಸುಖಿಸದ ಗಂಡುಗುದುರೆಗೆ ಕಣ್ಣು ಮತ್ತು ಮನಸ್ಸುಗಳನ್ನು ಸೆರೆಗೊಟ್ಟರು ಕಾಡಿನ ಹೆಣ್ಣುಗಳು.

ಆ ಸಮಯದೊಳೈತಂದರು ತಪ ವಿ
ನ್ಯಾಸ ಮುದ್ರೆಯ ಮಹೋನ್ನತರು
ಪೂಸರನಾತ್ಮಸಂಭವಗೆ ಕಾಣಿಕೆಯಿತ್ತು
ಲೇಸಾಗಲೆಂದು ಪರಸಿದರು ೭೯

ಆ ಸಮಯದಲ್ಲಿ ತಪಸ್ವಿಗಳು ಬಂದು ಮನ್ಮಥ ಕುಮಾರನಿಗೆ ಕಾಣಿಕೆಕೊಟ್ಟು ಒಳ್ಳೆಯದಾಗಲೆಂದು ಹರಸಿದರು.

ಏಕಮುಖದ ರುದ್ರಾಕ್ಷಿ ಪನ್ನಂಗವೆತ್ತ
ಕಾಕುಮೃತ್ತಿಕೆ ಬಲಶಂಖ
ಬೇಕಾದ ದಿವ್ಯೌಷಧಗಳ ಮುನಿವರ
ರಾ ಕುವರನಿಗೆ ನೀಡಿದರು ೮೦

ರುದ್ರಾಕ್ಷಿ, ಮೇಲು ಹೊದಿಕೆ, ಬೆತ್ತ, ದೇಸಿ ಮೃತ್ತಿಕೆ(ಪವಿತ್ರ ಮಣ್ಣು)ಶಂಖ, ಬೇಕಾದ ದಿವ್ಯ ಔಷಧಿಗಳನ್ನು ಮುನಿವರರು ಕುವರನಿಗೆ ನೀಡಿದರು.

ಅನಿರುದ್ಧನ ಸಮ್ಮುಖದಿ ಚಂದನಗಂಧಿ
ವನಿತೆಯರು ನಿಂದಿರಲವರ
ತನುರುಚಿ ನುಣ್ಮೊಲೆಗಳ ಮೇಲೆ ನಟ್ಟುದು
ಮುನಿಗಳ ಕಡೆಗಣ್ಣ ನೋಟ ೮೧

ಅನಿರುದ್ಧದ ಎದುರಗಡೆ ಗಂಧವತಿಯರು ನಿಂದಿರಲು ಮುನಿಗಳ ಕಡೆಗಣ್ಣ ನೋಟ ಸುಗಂಧವತಿಯರ ಮೈಕಟ್ಟಿನ ಅಂದ ನುಣ್ಮೊಲೆಗಳ ಚಂದದತ್ತ ನೆಟ್ಟಿತು.

ಅಚ್ಚರಿವಡೆದು ಭ್ರೂಲತೆ ಸಿಂಗಾಡಿಗಳ
ಲೊಚ್ಚೇರೆಗಣ್ಣ ಪೂಸರದಿ
ಎಚ್ಚರು ವರ ಜಿತೇಂದ್ರಿಯರೆರ್ದೆಯ ತ
ಟ್ಟುಚ್ಚಲು ವನವಧೂಟಿಯರು ೮೨

ಕಾಡಿನ ಬೆಡಗಿಯರು ತಮ್ಮ ಕಣ್ಣು ಹುಬ್ಬಿನ ಬಿಲ್ಲಿಗೆ ಒಂದು ಸ್ಯಾರೆ(ಸೇರೆ=ಒಂದು ಅಂಗೈ ಅಗಲ)ಅಗಲದ ಕಣ್ಣಿನ ಹೂಬಾಣ ಹೂಡಿ ಜಿತೇಂದ್ರಿಯರ ಎದೆಯ ಮೇಲಿನ ವಸ್ತ್ರ ಕೆಳಕ್ಕೆ ಬೀಳುವಂತೆ ಹೊಡೆದರು.

ಜತಿಗಳು ಜಡೆಮುಡಿಯ ತಾಳ್ದಿರಲು ತನ್ನ
ಪತಿಯ ವೈರಿ ಶಿವನೆಂದರಿದು
ರತಿ ವಿಶ್ವರೂಪಾಂತು ಜಯಿಸಿ ಬಂದಂತೆ ಚಿಂ
ಚಿತಿಯರೊಪ್ಪಿದರು ಬಿಲ್ವಡಿದು ೮೩

ಯತಿಗಳು ಜಟಾಧಾರಿಗಳಾಗಿರಲು ತನ್ನ ಪತಿಯ ಹಗೆಯಾದ ಹಣೆಗಣ್ಣನೆ ಎಂದು ನಿರ್ಧಾರಕ್ಕೆ ಬಂದ ರತಿ, ವಿಶ್ವರೂಪ ತಾಳಿ ಜಯಿಸಿ ಬಂದಂತೆ ಚಿಂಚಿತಿಯರು ಕಂಡುಬಂದರು.

ಪಟ್ಟಣದೊಳಗಿರ್ದ ವನಿತೆಯರಿಗೆ ಬೆರ್ಚಿ
ಬೆಟ್ಟವ ಮರೆಗೊಂಡೊಡಿಲ್ಲಿ
ಬಟ್ಟಬಲ್ಮೊಲೆಯ ಚಿಂಚಿತಿಯರಟ್ಟುಳಿ ಬೆನ್ನ
ಬಿಟ್ಟುದಿಲ್ಲೆಂದಳಲಿದರು ೮೪

ಪಟ್ಟಣದಲ್ಲಿ ಪತ್ನಿಯರಿಗಂಜಿ ಬೆಟ್ಟ ಮರೆ ಮಾಡಿಕೊಂಡು ಇಲ್ಲಿ ನಿರುಮ್ಮಳವಾಗಿ ಇರಬಹುದು ಎಂದು ಬಂದರೆ, ದುಂಡುಮೊಲೆಯ ಚಿಂಚಿತಿಯರ

ದಂಡು ಕೊಡುವ ತೊಂದರೆ ತಾಪತ್ರಯ ತಮ್ಮ ಬೆನ್ನು ಬಿಟ್ಟಿಲ್ಲ ಎಂದು ಅಳತೊಡಗಿದರು.

ಆ ಮುನಿಗಳ ಬೀಳ್ಕೊಟ್ಟು ನೀಲೋತ್ಪಲ
ಶ್ಯಾಮಲಾಂಗಿಯರ ಕುಸ್ತರಿಸಿ
ಕಾಮನ ವರ ಕುಮಾರಕ ಬೇಂಟೆಯಿಂದ ಸು
ಕ್ಷೇಮದಿ ಬಂದ ಪಟ್ಟಣಕೆ ೮೫

ಆ ಮುನಿಗಳನ್ನು ಬೀಳ್ಕೊಟ್ಟು ಕನ್ನೈದಿಲೆಯ ಕರಿಬಣ್ಣದಬಲೆಯರನ್ನು ಉಚಿತವಾಗಿ ಸತ್ಕರಿಸಿ, ಸಮಾಧಾನ ಪಡಿಸಿ, ಮನ್ಮಥ ಪುತ್ರ ಕ್ಷೇಮದಿಂದ ಪಟ್ಟಣಕ್ಕೆ ಹಿಂದಿರುಗಿದನು.

ಹಿಡಿದ ಮಿಗವಕ್ಕಿಯ ತಂಡತಂಡಗಳನು
ಸಡಿಲದೆ ಸೊಪ್ಪೊಳ್ಪುದುಗಿಸಿ
ದಡಿಯಿಕ್ಕಿ ಹೊತ್ತವರನಿತಿನಿತೆಂಬುದನು
ಪಡಿಗಾಂಬೊಡೆ ಶಕ್ಯವಲ್ಲ ೮೬

ಹಿಡಿದ ಪ್ರಾಣಿ ಪಕ್ಷಿಗಳ ಸಮೂಹವನ್ನು ಸೊಪ್ಪಿನಲ್ಲಿ ಹುದುಗಿಸಿ, ದಡಿಯನ್ನು ಅದರ ಕೆಳಗಿಟ್ಟು ಹೆಗಲ ಮೇಲೆ ಹೊತ್ತವರು ಅಷ್ಟು ಇಷ್ಟು ಎಂದು ಊಹಿಸಲು ಸಾಧ್ಯವಿಲ್ಲ.

ನೆಲ ಬಿರಿವಂತೆ ನಾನಾ ವಾದ್ಯ ರಭಸದಿ
ಕುಲಗಿರಿ ನಡನಡುಗಿದವು
ಜಲನಿಧಿ ತಳಮಳಗೊಂಡವೊಲನಿರುದ್ಧ
ಬಲಗೂಡಿ ಬಂದ ಪಟ್ಟಣಕೆ ೮೭

ನಾನಾವಾದ್ಯಗಳ ರಭಸದಿಂದ ನೆಲ ಸೀಳುಗೊಳ್ಳುವಂತೆ, ಸಪ್ತ ಕುಲ ಪರ್ವತಗಳು ಗಡಗಡ ನಡುಗಿದಂತೆ, ಸಮುದ್ರ ಕುದಿಕುದಿದು ಮರಳುವಂತೆ ಅನಿರುದ್ಧ ತನ್ನ ಸೈನ್ಯಸಮೇತ ಪಟ್ಟಣಕ್ಕೆ ಬಂದ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ

ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೮೮

ವರಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರು ಇರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೨೦. ಬಾಣಾಸುರನ ಶೋಣಿತಪುರ

ಅಕಲಾಬ್ಧಿಯೊಳಡಗಿದ್ದ ಆಮ್ನಾಯ ಚೋ
ರಕನ ಮರ್ದಿಸಿ ವೇದಗಳನು
ಮುಖಚತುಷ್ಟಯಗಿತ್ತ ದೇವನ ಕೃಪೆವೆತ್ತು
ಪ್ರಕಟಿಸು ನನಗೆ ಮೇಲ್ಗತೆಯ ೧

ಅಖಂಡ ಸಮುದ್ರದಲ್ಲಿ ಬಚ್ಚಿಟ್ಟುಕೊಂಡಿದ್ದ ವೇದ ತಸ್ಕರನನ್ನು ಸಂಹರಿಸಿ ಬ್ರಹ್ಮನಿಗೆ ವೇದಗಳನ್ನು ವಾಪಸ್ಸು ತಂದುಕೊಟ್ಟ ದೇವೋತ್ತಮನ ಕೃಪೆಯಿಂದ ನನಗೆ ಮೇಲ್ಗತೆ ಹೇಳು.

ಏಸು ಜನ್ಮದ ತಪಸಿನ ಫಲವಿರ್ದುದೊ
ವಾಸುದೇವನ ಪುಣ್ಯಕಥೆಯ
ಲೇಸು ಬರ್ಪಂತೆ ನಿನಗೆ ವಿಸ್ತರಿಪೆ ಹೆಂ
ಗೂಸುಗಳಧಿದೇವಿ ಕೇಳು ೨

ಎಷ್ಟು ಜನ್ಮಗಳ ತಪಸ್ಸಿನ ಫಲವೋ, ವಾಸುದೇವನ(ಕೃಷ್ಣನ) ಪುಣ್ಯ ಕಥೆಯನ್ನು ನಿನಗೆ ಲೇಸು ಲಭಿಸುವಂತೆ ಹೇಳುವ ಅವಕಾಶ ಒದಗಿದೆ, ಹೆಣ್ಣುಗಳ ಅಧಿದೇವಿ ಆಸಕ್ತಿಯಿಂದ ಆಲಿಸು.

ಪರಮೋತ್ಸವದೊಳೂರ ಪೊಕ್ಕು ಪಿತನೊಡನ
ನಿರುದ್ಧನಿರಲಿತ್ತ ಅತ್ತ
ಹರಪಾದ ಪಂಕೇರುಹ ಭೃಂಗ ಬಾಣಾ
ಸುರನಿದ್ದ ಶೋಣಿತಪುರದಿ ೩

ಇತ್ತ ಪರಮ ಸಂತೋಷದಿಂದ ಊರನ್ನು ಪ್ರವೇಶಿಸಿ ಅನಿರುದ್ಧ ತಂದೆಯೊಡನೆ ಇರಲು, ಅತ್ತ ಶಿವನ ಪಾದ ಪದ್ಮ ಭೃಂಗವೆನಿಸಿದ ಬಾಣಾಸುರ ಶೋಣಿತಪುರದಲ್ಲಿದ್ದ.

ಸ್ಮರಹರ ಭಕ್ತನಾಳುವ ದುರ್ಗ ಶೋಣಿತ
ಪುರವೆಂಬುದೇಕಾದುದೆರೆಯ
ಸರಸಿಜದಳಲೋಚನೆ ಕೇಳು ನಿನಗೆ ವಿ
ಸ್ತರಿಸುವೆನದರವಸ್ಥೆಯನು ೪

ಮನ್ಮಥ ಧ್ವಂಸಿಯ ಭಕ್ತನಾಳುವ ಈ ದುರ್ಗಕ್ಕೆ ಶೋಣಿತಪುರ ಎಂಬ ಹೆಸರು ಏಕೆ ಬಂತು ಎಂದು ಕನಕನ ಪತ್ನಿ ಪ್ರಶ್ನಿಸಿದಾಗ, ಕನಕ ಅದರ ಅವಸ್ಥೆಯನ್ನು ವಿವರಿಸುತ್ತೇನೆ ಕೇಳು ಎಂದನು.

ಕಾಣಿಸಕೊಂಬ ಕಂಡವರ ಕಾಣದ ರಿಪು
ಶ್ರೇಣಿಯ ತರಿದ ರೋಹಿತದಿ
ಹೂಣಿಸಿ ಕೆಸಗೂಡಿ ಕೋಟೆಯ ರಚಿಸಲ್ಕೆ
ಶೋಣಿತಪುರವೆಂಬುದಾಯ್ತು ೫

ಕಾಣಿಸಿಕೊಳ್ಳುವ, ಕಂಡ, ಕಾಣದ ಶತ್ರುಗಳನ್ನು ಸಂಹರಿಸಿದ ರಕ್ತದಲ್ಲಿ ಹೂಳಿ ಆ ಕೆಸರಿನಲ್ಲಿ ಕೋಟೆ ಕಟ್ಟಿದ್ದರಿಂದ ಶೋಣಿತಪುರವೆಂಬ ಹೆಸರು ಬಂದಿತು.

ಸಂತತ ಪ್ರಥಮ ಕೂರ್ಮನ ಬೆನ್ನ ಬಳಸಿದ
ನಂತನಂತಿರ್ದುದಾಕೋಂಟೆ
ಪಂತದಿಂದವನಿಯ ಹೊತ್ತ ದಿಗ್ಗಜದಂತೆ
ನಿಂತ ಕೊತ್ತಲಗಳೊಪ್ಪಿದುವು ೬

ಸತತವೂ ಆಮೆಯನ್ನು ಬಳಸಿದ ಅನಂತ (ಆದಿಶೇಷ)ನಂತೆ ಆ ಕೋಟೆ ಇತ್ತು. ಪಂಥ ಕಟ್ಟಿ ಭೂಮಿಯನ್ನು ಹೊತ್ತ ದಿಗ್ಗಜಗಳಂತೆ ಕೋಟೆಯ ಬುರುಜುಗಳಿದ್ದವು.

ಸಕಲ ಲೋಕವ ನಿರ್ಮಿಸಿ ವಿಧಿ ಕುಳಿತಿರ್ದ
ವಿಕಸಿತಾಂಬುಜದೆಸಳಂತೆ
ಅಕಳಂಕ ಶೋಣಿತಪುರದ ಕೋಟೆಯ ತೆನೆ
ನಿಕರಮೊಪ್ಪಿತು ನೀಲವೇಣಿ ೭

ಎಲ್ಲ ಲೋಕಗಳನ್ನು ನಿರ್ಮಿಸಿ ನಿರುಮ್ಮಳದಿಂದ ಬ್ರಹ್ಮ ಮಂಡಿಸಿದ ವಿಕಸಿತ ಕಮಲದೆಸಳಂತೆ ಕೋಟೆಯ ಮೇಲ್ಭಾಗ ಕಾಣತೊಡಗಿತು.

ಬೆಟ್ಟವ ಕಿತ್ತು ತಂದಿರಿಸಿದಂದದಿ ಮುಗಿ
ಲಟ್ಟಣೆ ತೆನೆಗಳಗ್ರದಲಿ
ಬಟ್ಟರನ್ನಗಳ ತೆತ್ತಿಸಿದ ಹೊಂಗಲಸಗ
ಳಿಟ್ಟಣಿಸಿರ್ದವೇನೆಂಬೆ ೮

ಬೆಟ್ಟವನ್ನು ಕಿತ್ತು ತಂದು ಇರಿಸಿದ ರೀತಿಯಲ್ಲಿ ಮುಗಿಲೆತ್ತರದ ವೇದಿಕೆ ಬುರುಜಗಳ ತುದಿಯಲ್ಲಿ ದುಂಡಾದ ರತ್ನಗಳನ್ನು ಕೀಲಿಸಿದ ಚಿನ್ನದ ಕಳಶಗಳು ಕಂಗೊಳಿಸುತ್ತಿದ್ದವು.

ಅಂಕಕ್ಕೆ ಬರ್ಪ ರಾಯರ ಗಂಡನೆಂದೆಂಬ
ಡೆಂಕಣಿ ಮರುಳ್ಗೆಯ್ಗಳೊಡನೆ
ಭೋಂಕೆನೆ ಮಿಡಿವ ಲಾಳಿಯ ಬಿಲ್ಲು ಪೆಟಲ್ಗಳ
ಸಂಕುಲವಿರ್ದುದಲ್ಲಲ್ಲಿ ೯

ಯುದ್ಧಕ್ಕೆ ಬರುವ ರಾಯರ ಗಂಡನೆಂಬವನ ವಿಶೇಷ ಆಯುಧಗಳೊಡನೆ ಮಿಡಿಯುವ ಲಾಳಿಕಡ್ಡಿಯ ಬಿಲ್ಲು ಹಾಗೂ ಪೆಟಲಂಬುಗಳ ಸಮೂಹ ಅಲ್ಲಲ್ಲಿ ಇದ್ದುವು.

ಗುಟ್ಟಳಿದುದು ಮುನಿವರನಿಂದ ಕ್ಷೇತ್ರವ
ಬಿಟ್ಟುದು ಭಾರ್ಗವ ಸರಳ್ಗೆ
ಕಟ್ಟುಗೊಂಡುದೂರು ಭಂಗವೆಂದಬುಧಿಯ
ಬಿಟ್ಟೋಡಿತಾ ಪುರದಗಳು ೧೦

ಮುನಿವರನಿಂದ ಗುಟ್ಟು ರಟ್ಟಾಯಿತು. ಪರಶುರಾಮ ಕ್ಷೇತ್ರ (ಪಶ್ಚಿಮ ಕರಾವಳಿ ಪ್ರದೇಶ) ಕೈಬಿಟ್ಟಿತು. ಪರಶುರಾಮಾಸ್ತ್ರಕ್ಕೆ ಕಟ್ಟುಗೊಂಡು ಊರು(ಗ್ರಾಮ,ತೊಡೆ) ಭಂಗವೆಂದು ಪುರದ ಕಂದಕ ಸಮುದ್ರ ಬಿಟ್ಟು ಓಡಿತು.

ನೆಗಳು ನೀರಾನೆ ಪಾಠೀನ ಕಚ್ಛಪ ಕರ
ಯುಗಳ ಕರ್ಕಾಟಕ ನಿಚಯ
ಜಗಳಕ್ಕೆ ಬಪ್ಪ ಶತ್ರುಗಳ ಖಂಡಿಪೆವೆಂ
ದಗಳೊಳು ಘಳುಘಳಿಸಿದುವು ೧೧

ನೆಗಳು(ಮೊಸಳೆ), ನೀರಾನೆ, ಪಾಠೀನ (ಮೀನು) ಕಚ್ಛಪ(ಆಮೆ)

ಕರಯುಗಳ(ಎರಡು ಕೊಂಡಿ ಇರುವ) ಕರ್ಕಾಟಕ(ನಳ್ಳಿ, ಏಡಿ) ಸಮೂಹಗಳು ಕದನಕ್ಕೆ ಬರುವ ಹಗೆಗಳನ್ನು ತುಂಡರಿಸುತ್ತೇವೆಂದು ಕಂದಕದಲ್ಲಿ ಗೊಂದಲವೆಬ್ಬಿಸಿದವು.

ಪಿಕ ಪುಚ್ಛ ಪಾದ ಚತುಷ್ಪಯಗೂಡಿ ಆ
ನಕವಡೆದುಭಯ ವ್ಯಾಘ್ರಗಳು
ಪ್ರಕಟಿಸಿ ನಿಂದಂತೆ ದ್ವಿತಿಯ ಕೊತ್ತಳ ಹುಲಿ
ಮುಖವಿರ್ದುದೇನ ಬಣ್ಣಿಸುವೆ ೧೨

ಪಿಕ(ಕೋಗಿಲೆ), ಪುಚ್ಛ (ಉದ್ದನೆಯ ಗರಿಯುಳ್ಳದ್ದು;ನವಿಲು) ಪಾದ ಚತುಷ್ಪಯ (ಚಷ್ಪಾದಿತುಪ್ರಾಣಿಗಳು)ಗಳ ಆನಕ(ನಗಾರಿ)ಶಬ್ದದಿಂದಾಗಿ ಜೋಡಿ ಕೋಟೆ ಬುರುಜುಗಳ ಮೇಲಿನ ಜೋಡಿ ಹುಲಿಗಳು ಕಣ್ಣಿಗೆ ರಾಚುವಂತೆ ಎದ್ದು ಕಂಡವು.

ಮದಹಸ್ತಿ ಕೈಲಿ ನೂಂಕಿ ಬಂದಿಪ ಪೆ
ರ್ಗದ ವಜ್ರ ಲಾಳವಿಂಡಿಗೆಯ
ಅದಟಿನ ದ್ವಾರಾಷ್ಟಕವ ವರ್ಣಿಸುವೊಡೆ
ಪದಕವಿಗಳಿಗೋಚರವು ೧೩

ಮದದಾನೆಯ ಸೊಂಡಿಲಿನಿಂದ ನೂಕಿಸಿ, ಬಂಧಿಸುವ ಧಡೂತಿ ಕದ, ವಜ್ರದ ಅಗುಳಿಯನ್ನು ಶಕ್ತ ಅಷ್ಟದ್ವಾರಗಳನ್ನು ವರ್ಣಿಸಲು ಪಕ್ವಕವಿಗಳಿಗೂ ಅಸಾಧ್ಯ.

ಪದಿನಾರು ದಿಡ್ಡಿ ಬತ್ತೀಸ ಬಿಲದ್ವಾರ
ವಿಧುಮಿತ್ರರುಪಲದಿಂ ಬಿಗಿದ
ರುಧಿರಾಪುರದಾಳುವೇರಿಯ ಸೌಭಾಗ್ಯ
ದುದಯವನೇನ ಬಣ್ಣಿಸುವೆ ೧೪

ಹದಿನಾರು ಸಣ್ಣಬಾಗಿಲು, ಮುವತ್ತೆರಡು ಬಿಲದ ಮಾರ್ಗ ಅಥವಾ ಸುರಂಗ ಮಾರ್ಗ, ಸೂರ್ಯಕಾಂತಶಿಲೆ ಮತ್ತು ಚಂದ್ರಕಾಂತಶಿಲೆಗಳಿಂದ ಕಟ್ಟಿದ ಶೋಣಿತಪುರದ ಆಳುವೇರಿ (ಸುತ್ತಲೂ ಕಂದಕವಿರುವ ರಕ್ಷಣಾಗೋಡೆ)ಯ ರಚನೆ ಬಾಯಿ ಮೇಲೆ ಬೆರಳಿಟ್ಟುಕೊಳ್ಳುವಂತೆ ಮಾಡುತ್ತದೆ.

ಏನ ಹೇಳುವೆ ವೀಧಿವೀಧಿಗಳೊಳು ಶಿವ
ಸ್ಥಾನದಿ ಕವಡು ಕಂಸಾಳೆ
ನಾನಾ ವಾದ್ಯ ಘೀಳಿಡುತಿರ್ದುವಂಬುಧಿ
ಧ್ವಾನ ಘೋಷಣೆಯೆಂಬ ತೆರದಿ ೧೫

ಬೀದಿಬೀದಿಗಳಲ್ಲಿ ಶಿವನ ದೇವಸ್ಥಾನದಲ್ಲಿ ಜೋಡಿ ಕಂಸಾಳೆ ಮೊದಲಾದ ನಾನಾ ವಾದ್ಯಗಳು ಘೀಳಿಡುತ್ತಿದ್ದವು –ಸಮುದ್ರದ ಮೊರೆತದ ಹಾಗೆ.

ವಿಳಸಿತ ಸೋಮ ಸೂರಿಯ ವೀಧಿ ವೀಧಿಯೊ
ಳಳವಟ್ಟ ನಿಖಿಲ ಗೋಪುರದಿ
ತೊಳಗುವ ನವರತ್ನಗಳು ತೆತ್ತಿಸಿದ ಹೊಂ
ಗಳಸಂಗಳೆಸೆದುವಗ್ರದಲಿ ೧೬

ಸೂರ್ಯ ಬೀದಿ ಚಂದ್ರಬೀದಿಗಳಲ್ಲಿ ರಚಿತವಾಗಿರುವ ಎಲ್ಲ ಗೋಪುರಗಳ ತುದಿಯಲ್ಲಿ ಹೊಳೆಯುವ ರತ್ನಗಳನ್ನು ಕೀಲಿಸಿದ ಹೊಂಗಳಸಗಳು ಕಂಗೊಳಿಸುತ್ತಿದ್ದವು.

ಬೆಲೆಗಟ್ಟಲಾಗದ ಮುತ್ತು ರತ್ನಂಗಳ
ಮೊಲೆಗಟ್ಟು ಕಾಸೆ ಕಾಲ್ಗೆಜ್ಜೆ
ಸಲೆ ಶುದ್ಧಗೀತ ಚಾರಿಗೆ ಬಲು ಬಿರುದಾಂತ
ಕಲೆಯ ನರ್ತಕಿಯರೊಪ್ಪಿದರು ೧೭

ಶುದ್ಧ ಗೀತದ ಆಲಾಪಕ್ಕೆ, ಬೆಲೆಗಟ್ಟಲಾಗದ ಮುತ್ತುರತ್ನಗಳ ಮೊಲೆಗಟ್ಟು, ನಡುಕಟ್ಟು ಕಾಲ್ಗೆಜ್ಜೆಗಳನ್ನು ಹೊಂದಿದ ನರ್ತನ ಕಲಾವಿದೆಯರು ಕಣ್ಸೆಳೆದರು.

ಇಂತೆಸೆದಿರ್ದ ವೈಭೋಗಸಮೇತಮೇ
ಕಾಂತಾಲಯ ಕೋಟಿಕೋಟಿ
ಜಂತದುಪ್ಪರಿಗೆಯೊಳೆಸೆವ ಸಿರಿಭವನವ
ನಂತವೊಪ್ಪಿರ್ದುವಿರ್ಕೆಲದಿ ೧೮

ವೈಭವ ಸಮೇತವಾದ ಏಕಾಂತ ನಿಲಯಗಳು ಕೋಟಿ ಕೋಟಿ ಕಂಗೊಳಿಸಿದ್ದರೆ, ದಂತದ ಉಪ್ಪರಿಗೆಯಲ್ಲಿ ಅನಂತ ಐಸಿರಿ ಭವನಗಳು ಮನಸೆಳೆಯುತ್ತಿದ್ದವು.

ನುಡಿಗೆ ಗೋಚರಿಸದ ನಾನಾ ವಸ್ತುಗ
ಳಿಡಿಕಿರಿದೈಶ್ವರ್ಯವಡೆದ
ಪಡಿಗಟ್ಟಬಾರದ ರತ್ನಂಗಳಡಸಿದಂ
ಗಡಿಗಳೊಪ್ಪಿರ್ದುವಿಕ್ಕೆಲದಿ ೧೯

ಮಾತಿಗೆ ನಿಲುಕದ ಐಸಿರಿಯ ನಾನಾ ವಸ್ತುಗಳು ಗಿಟಕರಿಯುತ್ತಿರುವ, ಪ್ರತಿಬೆಲೆ ಕಟ್ಟಲಾಗದ ರತ್ನಗಳು ತುಂಬಿದ ಅಂಗಡಿಗಳು ಎರಡೂ ಕಡೆಯೂ ಇದ್ದವು.

ಕುಂದಣ ನವರತ್ನ ಖಚಿತ ಚೌಭಾರಿಯ
ಮುಂದಣ ನಾಲ್ದೆಸೆಗಳಲಿ
ಸಂದಣಿಸಿದರು ಛಪ್ಪನ್ನ ದೇಶದ ಜನ
ವೃಂದ ಜೂದಿನ ವಿಷಯದಲಿ ೨೦

ನವರತ್ನ ಖಚಿತ ಅಪರಂಜಿಯ ಉಪ್ಪರಿಗೆ ಮೊಗಸಾಲೆಯ ಮುಂದಿನ ನಾಲ್ಕು ಕಡೆ ಐವತ್ತಾರು ದೇಶಗಳ ಜನವೃಂದ ಜೂಜಿನ ಸಂಬಂಧ ಸಂದಣಿಸಿದರು.

ಭಂಗ ಬಾಣವ ಕೂಡ ಸೆಣಸಿದವರ್ಗಲ್ಲದೆ
ಭಂಗ ಬಾಣನ ಪುರಕಹುದೆ
ಭಂಗ ಬಾಳೆಯ ಹನಣ ತೆಗೆಯೆಂದು ಸುಭಟೋ
ತ್ತುಂಗ ಛೇದಿಸಿದ ಜೂಜಿನಲಿ ೨೧

ಭಂಗ ಬಾಣನ ಕೂಡ ಕದನ ಮಾಡಿದವರಿಗಲ್ಲದೆ, ಬಾಣನ ಪುರಕ್ಕೆ ಭಂಗ ಆಗುವುದೆ? ಭಂಗ ಬಾಳೆಯ ಹಣ್ಣು ಎಂದು ಉತ್ತುಂಗ ವೀರನೊಬ್ಬ ಜೂಜಿನಲ್ಲಿ ಛೇದಿಸಿದನು.

ಭಾಳಾಕ್ಷನ ರೂಹು ನಿನಗೇಕೆನುತ ನಾರಿ
ಕೇಳವ ಮರಕೆ ಕಟ್ಟಿ ತೂಗಿ
ಬಾಳಲಿ ಕಡಿವಂತೆಸೆಗಲ್ಲಿಂ ತೆಂಗಿನಕಾಯ
ಹೋಳ ಮಾಡಿದರು ಜೂಜಿನಲಿ ೨೨

ಶಿವನಿಗಿರುವಂತೆ ಮೂರು ಕಣ್ಣು ನಿನಗೇಕೆ ಎಂದು ಮರಕ್ಕೆ ಜೋತು ಬೀಳುವಂತೆ ಕಟ್ಟಿದ ತೆಂಗಿನಕಾಯನ್ನು ಕೆಳಗೆ ನಿರ್ದಿಷ್ಟ ದೂರದಲ್ಲಿ ನಿಂತು

ನಿಂಬೆಹಣ್ಣಿನ ಗಾತ್ರದ ಎಸೆಗಲ್ಲಿನಿಂದ ಅದನ್ನು ಹೋಳು ಮಾಡಿ ಜೂಜಿನಲ್ಲಿ ಗೆದ್ದು ಸಂಭ್ರಮಿಸಿದರು.

ನಳಿನ ನೇತ್ರೆಯರೊಳು ನೇಹಗಲಹವಾಂತು
ಮುಳಿದರೆ ಸ್ಮರ ತಮ್ಮನೆಸಲು
ಬಿಳಿಗಬ್ಬಗಳೆ ಬಿಲ್ಲಹವೆಂದು ಮಸೆದ ಕಂ
ದಳಿಯಿಂ ಕಡಿದರ್ಜೂಜಿನಲಿ ೨೩

ನಳಿನಾಕ್ಷಿಯರೊಡನೆ ಸ್ನೇಹ ಕಲಹ ಉಂಟಾದಾಗ ಮನ್ಮಥ ತಮ್ಮನ್ನು ಬಾಣದಿಂದ ಹೊಡೆಯಲು ಕಬ್ಬುಗಳನ್ನೇ ಬಿಲ್ಲಾಗಿ ಬಳಸಿಕೊಳ್ಳುವನೆಂದು ಮಸೆದ ಮಚ್ಚಿನಿಂದ ಕಡಿದರು ಜೂಜಿನಲ್ಲಿ

ಬೆಲ್ಲವೆ ನೀ ಮುದ್ದುವೆಂಗಳ ಮೃದುವಾಯ
ಬೆಲ್ಲವಾಗಿರದೆ ಬಂದಿಲ್ಲಿ
ಹೊಲ್ಲೆಹ ನೊಣನ ಮುತ್ತಿಸಿಕೊಳ ಬೇಡೆಂದು
ಬೆಲ್ಲವನೊಡೆಯೆ ಗುದ್ದಿದರು ೨೪

ಬೆಲ್ಲವೆ, ನೀನು ಮುದ್ದಾದ ಹೆಣ್ಣುಗಳ ಬಾಯ ಬೆಲ್ಲವಾಗಿರದೆ, ಇಲ್ಲಿ ಬಂದು ಕೊಳಕು ನೊಣಗಳಿಂದ ಮುತ್ತಿಸಿಕೊಳ್ಳಬೇಡೆವೆಂದು ಮುಷ್ಟಿಯಿಂದ ಗುದ್ದಿ ಹೋಳಾಗಿಸಿದರು.

ಲೆತ್ತ ಪಗಡೆ ರಾಯಬೊಗರಿ ಸೊಲ್ಲೆಹ ಬಾರು
ಗುತ್ತ ದೊಪ್ಪಿಯ ಸರಿಬೆಸದಿ
ವಿತ್ತನಾಶನ ಮಾಡುವ ಜೂದುಗಾರರ
ಮೊತ್ತವಿರ್ದುದು ಮನೆಮನೆಗೆ ೨೫

ಲೆತ್ತ, ಪಗಡೆ, ಬೊಗರಿ, ಸೊಲ್ಲೆಹ, ಬಾರುಗುತ್ತ, ಟೋಪಿಯ ಸರಿಬೆಸ ಆಟಗಳಿಂದ ಹಣ ದೋಚಿಕೊಳ್ಳುವ ಹಾಗೂ ನೀಚಿಕೊಳ್ಳುವ ಜೂಜುಗಾರರ ಮೊತ್ತವಿದ್ದುದು ಮನೆಮನೆಯಲ್ಲಿ

ಜೂಜಾಟಿಕೆ ಸೂಳೆಗಾರಿಕೆ ಋಣದ ಸಂ
ವಾಜ ಪೆರ್ಗುಡಿಗಳಡರ್ಚಿ

ರಾಜವೀಧಿಯೊಳಿದಾಡುವ ಸಂದಣಿ
ಮಾಜದು ನಿತ್ಯಕೃತ್ಯದಲಿ ೨೬

ದೊಡ್ಡ ವಂಶಸ್ಥರು ಜೂಜಾಟಿಕೆ, ಸೂಳೆಗಾರಿಕೆ, ಸಾಲಸೋಲದ ಸಂವಾದಗಳ ದೆಸೆಯಿಂದ ರಾಜಬೀದಿಗಳಲ್ಲಿ ಪರಸ್ಪರ ಹೊಡೆದಾಡುವ ಗುಂಪು ತಮ್ಮ ನಿತ್ಯಕೃತ್ಯವನ್ನು ಮರೆಮಾಚದು.

ಸಂಭ್ರಮವಡೆದಿರ್ದ ರಥ ಹಸ್ತಿ ಹಯ ನಿಕು
ರುಂಬ ಪದಾತಿ ಸಂದೋಹ
ಕುಂಭಾಂಡ ಮಂತ್ರಿವರ್ಯನ ಸದ್ಭಾವನಾವ
ಲಂಬನ ಮಾಡಿಕೊಂಡಿಹವು ೨೭

ಸಡಗರದ ರಥ, ಆನೆ, ಕುದುರೆಗಳ ಸಮೂಹ ಮತ್ತು ಕಾಲ್ನಡೆಯ ಸೈನಿಕರ ಸಂದೋಹಗಳು ಮಂತ್ರಿ ಕುಂಭಾಂಡನನ್ನು ಅವಲಂಬಿಸಿಕೊಂಡರಿವುವು.

ವರ ಮದಧಾರೆ ಸೋರುವ ಭದ್ರಗಜ ರಥ
ತುರಗ ತತಿಯನಿನಿತೆಂದು
ಬರೆದು ಲೆಕ್ಕಿಪೊಡೆ ಬೊಮ್ಮಂಗರಿದು ಬಾಣನ
ಪುರವನು ಕಾಯ್ದುಕೊಂಡಿಹವು ೨೮

ಮದ ಸೋರುವ ಆನೆಗಳ ಹಾಗೂ ರಥಗಳ ಕುದುರೆ ಸಮೂಹವನ್ನು ಇಷ್ಟೆಂದು ಲೆಕ್ಕಮಾಡಿ ಹೇಳುವುದು ಬ್ರಹ್ಮನಿಗೂ ಸಾಧ್ಯವಿಲ್ಲ. ಅವುಗಳೆಲ್ಲ ಬಾಣನ ಪುರದ ರಕ್ಷಣೆಗಿರುವುವು.

ಮಂಡಳಿಸಿದ ಹೊನ್ನ ಮುಗಿಲ ಮಧ್ಯದಲಿ ಶ್ರೀ
ಖಂಡ ಹರ್ಮ್ಯಗಳ ಹೊಂಗಳಸ
ಚಂಡ ಉತ್ತರ ದಕ್ಷಿಣ ವೀಧಿಯಲಿ ಬ್ರ
ಹ್ಮಾಂಡವ ತೀವಿ ನಾಂಟಿಹವು ೨೯

ಮಂಡಲಾಕಾರದಲ್ಲಿ ಆವರಿಸಿರುವ ಹೊಂಬಣ್ಣದ ಮುಗಿಲ ಮಧ್ಯದಲ್ಲಿ ಶ್ರೀಗಂಧದ ಸೌಧಗಳ ಹೊಂಗಳಸಗಳು ಉತ್ತರ ದಕ್ಷಿಣ ಬೀದಿಗಳಲ್ಲಿ ಬಹ್ಮಾಂಡವನ್ನು ತುಂಬಿಕೊಂಡಂತೆ ನಾಟಿಕೊಂಡಿರುವುವು.

ಒಪ್ಪವಡೆದ ಯಾಗಶಾಲೆ ಸದ್ಗಳಿಹಾರ
ದುಪ್ಪರಿಕೆಯೊಳು ಜೋಯಿಸರು
ತಪ್ಪದೆ ಗಳಗೆಗೊಮ್ಮೊಮ್ಮೆ ಭೇರಿಯ ಹೊಯ್ಯು
ತಿಪ್ಪರದೊಂದು ಬಾಗಿಲಿಲಿ ೩೦

ಒಪ್ಪದಿಂದಿರುವ ಯಾಗಶಾಲೆ, ಗಡಿಯಾರದ ಉಪ್ಪರಿಗೆಯಲ್ಲಿ ಜೋಯಿಸರು ಗಳಿಗೆಗಳಿಗೆಗೂ ತಪ್ಪದೆ ಭೇರಿಯ ನಾದ ಹೊರಹೊಮ್ಮಿಸುತ್ತಿದ್ದರು.

ಕಂಗೊಳಿಸುವ ರಮ್ಯರತ್ನಕೀಲಿತ ನವ
ರಂಗ ಕೂಟಸ್ಥ ಚಾವಡಿಯ
ಸಿಂಗವಿಷ್ಟರದೊಳೊಡ್ಡೋಲಗಗೊಟ್ಟಿರ್ದ
ಲಿಂಗಾರ್ಚಕ ಜಾಣಬಾಣ ೩೧

ಕಂಗೊಳಿಸುವ ಸುಂದರ ರತ್ನಖಚಿತ ಸಭಾಮಂಟಪದ ತುದಿಯಲ್ಲಿರುವ ಓಲಗಶಾಲೆಯಲ್ಲಿ ಸಿಂಹಾಸನದಲ್ಲಿ ಕುಳಿತು ಬಾಣ ಒಡ್ಡೋಲಗ ನಡೆಸುತ್ತಿದ್ದ

ಬಾಣನ ಮಹದಾಸ್ಥಾನ ದುಗ್ಧಾಬ್ಧಿಯ
ಕೇಣವಿಲ್ಲದೆ ಪೆರ್ಚಿಸುವ
ಏಣಾಂಕ ತಾನೆಂಬಂತೆ ಕುಂಭಾಂಡ
ಜಾಣ ಮಂತ್ರೀಶನೊಪ್ಪಿದನು ೩೨

ಬಾಣನ ಅಸ್ಥಾನದ ಹಾಲುಗಡಲನ್ನು ಉಕ್ಕೇರಿಸುವ ಚಂದ್ರ ತಾನು ಎನ್ನುವಂತೆ ಕುಂಭಾಂಡ ಮಂತ್ರಿ ವಿರಾಜಮಾನನಾಗಿದ್ದನು.

ರಜನೀಚರ ಮಂತ್ರಿಗುಂಪಿನ ಕೆಲರು ಸ
ದ್ದ್ವಿಜ ಮಂತ್ರಿ ಗುಂಪಿನ ಕೆಲರು
ನಿಜ ಮಾಗಣಿ ಮನ್ನೆಯ ಗುಂಪಿನ ಕೆಲರು ಭೂ
ಭಜರಿರ್ದರೊಡ್ಡೋಲಗದಿ ೩೩

ದರ್ಬಾರಿನಲ್ಲಿ (ಒಡ್ಡೋಲಗ)ಕೆಲವರು ರಾಕ್ಷಸರಾಜರು, ಕೆಲವರು ಬ್ರಾಹ್ಮಣ ರಾಜರು ಕೆಲವರು ತಾಲ್ಲೂಕು ಹೋಬಳಿಯ ಮನ್ನೆಯ ರಾಜರುಗಳಿದ್ದರು.

ಪೊಸಬಗೆವೇಳ್ವ ಕಬ್ಬಿಗರು ವಾಗ್ಮಿ ಮೇಣ್ ಜೋ
ಯಿಸರಾಮ್ನಾಯ ಶಾಸ್ತ್ರಿಗಳು
ವಿಷಯ ತಾರ್ಕಿಕರು ವಿನೋದಾರ್ಥಿಗಳು ಕ
ಣ್ಣೆಸೆದಿರ್ದರೊಡ್ಡೋಲಗದಿ ೩೪

ದರ್ಬಾರಿನಲ್ಲಿ ಕವಿಗಳು, ವಾಗ್ಮಿಗಳು, ಜೋಯಿಸರು, ವೇದಪಾರಂಗತರು, ತರ್ಕಶಾಸ್ತ್ರಜ್ಞರು, ವಿನೋದಾರ್ಥಿಗಳು ತುಂಬಿ ತುಳುಕುತ್ತಿದ್ದರು.

ಸುಗುಣ ಗುಣಾಢ್ಯ ಭೂಪತಿಗಳೇಕಾಂತದಿ
ಮಗುಟಗಳನೊಂದೊಂದೊರಸಿ
ಉಗುವ ಮಾಣಿಕ ಹೇಮರಜ ಮೂರುಕೋಟಿಗೆ
ಮಿಗಿಲು ಕೊಟ್ಟಿಹರು ವೈಶ್ಯರಿಗೆ ೩೫

ಗುಣಾಢ್ಯ ದೊರೆಗಳು ಏಕಾಂತದಲ್ಲಿ ಒಂದೊಂದು ಕಿರೀಟವನ್ನು ಒರೆಸಿ, ಉದುರಿದ ರತ್ನ ಚಿನ್ನದ ಧೂಳನ್ನು ಮೂರು ಕೋಟಿಗೂ ಮಿಗಿಲಾಗಿ ವೈಶ್ಯರಿಗೆ ಕೊಟ್ಟಿರುವರು.

ಮಲ್ಲರು ಮಾರಾವುತ ರಮ್ಯ ರಥಿಕರು
ಬಲ್ಲಿದ ಆನೆ ವಾಹಕರು
ಬಿಲ್ಲಿನ ಅಡ್ಡಣದಡಟರು ಮುಂತಾದವ
ರೆಲ್ಲರೊಪ್ಪಿದರೊಲಗದಿ ೩೬

ಶೂರರು ರಾವುತರು (ಕುದುರೆ ಸವಾರರು) ಮಾವುತರು(ಆನೆ ಸವಾರರು), ರಥಿಕರು(ರಥದಲ್ಲಿ ಕುಳಿತು ಯುದ್ಧಮಾಡುವವರು)ಬಿಲ್ಲುಗಳ , ಗುರಾಣಿಗಳ ಸಮರ್ಥರು ಓಲಗದಲ್ಲಿದ್ದರು

ಕಡೆಯ ಪೆಂಡೆಯದ ನಟ್ಟುವರು ಮದ್ದಳಿಗರು
ಗ್ಗಡಣೆಯ ತಾಳಧಾರಿಗಳು
ಬಿಡಯವಿಲ್ಲದ ಗೀತವಾದ್ಯ ವಿದ್ಯಾಧಿಕ
ಪಡೆಯಿರ್ದುದೇನ ಬಣ್ಣಿಸುವೆ ೩೭

ಕಡಗ, ಕಾಲಂದುಗೆಗಳ ನಟ್ಟುವರು(ನರ್ತಕರು) ಮದ್ದಳೆ ಬಾರಿಸುವವರು, ಘೋಷಣೆಯ ತಾಳಧಾರಿಗಳು, ಸಂಕೋಚವಿಲ್ಲದೆ ಗೀತ ವಾದ್ಯ ಪಾರಂಗತರು ಓಲಗದಲ್ಲಿದ್ದರು.

ಮನುಮಥನರ್ಧಾಂಗಿಯ ರೂಪಿಗಿಮ್ಮಡಿ
ತನರುಚಿ ತೋರ ನಣ್ಮೊಲೆಯ
ಮಿನುಗುವ ದಾಳಿಂಬ ಬೀಜರದದ ವಾರ
ವನಿತೆಯರಿರ್ದರಿಕ್ಕೆಲದಿ ೩೮

ಮನ್ಮಥನರ್ಧಾಂಗಿಯ ರೂಪಿಗೆ ಇಮ್ಮಡಿಯಾದ ರೂಪದ, ಮಿನುಗುವ ದಾಳಿಂಬೆ ಬೀಜದಂಥ ಹಲ್ಲುಗಳ ವಾರನಾರಿಯರು ಎರಡೂ ಕಡೆ ಇದ್ದರು.

ಸೊವಡೆಯರೆನಿಸಿದ ವೀರರ ಮೂಗಿಗೆ
ಕವಡೆಯ ಕಟ್ಟಿ ನೀರ್ತರಿಸಿ
ಡವುಡೆ ಜಾಗಟೆ ಮಲ್ಲಹರೆಯ ಜಾಡಿಸಿಕೊಂಬ
ಪ್ರವುಡೆಯರಿರ್ದರಿಕ್ಕೆಲದಿ ೩೯

ವೀರರ ಮೂಗಿಗೆ ಕವಡೆ ಕಟ್ಟಿ, ನೀರನ್ನು ತರಿಸಿ, ಜೊತೆಗೆ ಅವರ ಕೈಯಿಂದ ಡವುಡೆ ಜಾಗಟೆ ಮಲ್ಲಹರೆಗಳನ್ನು ಬಲವಾಗಿ ಬಡಿಸುವ ಪ್ರೌಢ ಸುವಾಸಿನಿಯರು ಇಕ್ಕಡೆಗಳಲ್ಲೂ ಇದ್ದರು.

ನಾಟಕ ನವ ವೃತ್ತ ಕಂದ ವಚನ ಪೂರ್ವ
ಚಾಟಕದಲ್ಲಿ ಕೇಳಿದರೆ
ಕೋಟಲೆಗೊಳ್ಳದುಚ್ಚರಿಸುವ ಸರ್ವಜ್ಞ
ಪಾಠಕರಿರ್ದರಿಕ್ಕೆಲದಿ ೪೦

ನಾಟಕ, ವೃತ್ತ, ಕಂದ, ಮೋಡಿ ವಿದ್ಯೆಗಳನ್ನು ಕೇಳಿದರೆ ಕೊಂಚವೂ ತಬ್ಬಿಬ್ಬಾಗದ ಗಲಿಬಿಲಿಗೊಂದಲಕ್ಕೀಡಾಗದ ಸರ್ವಜ್ಞರಿದ್ದರು ಎರಡೂ ಕಡೆಗಳಲ್ಲಿ

ಬಲಿ ಚಕ್ರವರ್ತಿ ಕುಮಾರ ಹಮ್ಮೀರ ನಿ
ರ್ಮಲಾಂತರಂಗ ಸತ್ಸಂಗ
ಕಲಿಗಳ ಕರ್ತ ಸಮರ್ಥ ಎಂದಾಶ್ರಿತ
ರೊಲಿದು ಕೊಂಡಾಡಿದರು ಖಳನ ೪೧

ಬಲಿ ಚಕ್ರವರ್ತಿಯ ಪುತ್ರ, ಶೂರ, ನಿರ್ಮಲ ಅಂತರಂಗೂ, ಸತ್ಸಂಗ, ಶೂರರನ್ನು ರೂಪಿಸುವ ಸಮರ್ಥ ಎಂದು ಬಾಣನ ಆಶ್ರಿತರು ಕೊಂಡಾಡಿದರು.

ರುದ್ರ ಪಾದಾಂಬುಜ ರಸಸೇವ್ಯ ಮಧುಪ ಸ
ಮುದ್ರಾಂತ ಭುವನಾಧೀಶ
ಭದ್ರ ಸಿಂಹಾಸನಾರೂಢ ಸತ್ಕ್ರೀಡ ದಾ
ರಿದ್ರ ವಿದ್ರಾವಣ ಜಯತು ೪೨

ಶಿವನ ಪಾದ ಕಮಲ ಮಕರಂದ ಸೇವಿಸುವ ಭ್ರಮರ, ಸಾಗರಾಂತ್ಯದವರೆಗೂ ರಾಜ್ಯವಿರುವ ರಾಜ, ಸುಭದ್ರ ಸಿಂಹಾಸನಾರೂಡ, ಸತ್ಕ್ರೀಡ, ದಾರಿದ್ರ ವಿದ್ರಾವಣ(ಬಡತನ ಧ್ವಂಸಕ) ಎಂದು ಜಯಕಾರ ಹೇಳಿದರು.

ಬಾಣ ಸುಮೇರು ಬಾಣಾಸನಧರ ಭಕ್ತ
ಬಾಣಪಂಚಕ ಸಮರೂಪ
ಬಾಣ ಗೀರ್ವಾಣಸೇವಿತ ಪಾದಪಂಕಜ
ಬಾನ ಭಾಸ್ಕರ ತೇಜ ಜಯತು ೪೩

ಬಾಣ ಮೇರು ಸದೃಶನು, ಪಿನಾಕ ಎಂಬ ಧನುಸ್ಸನ್ನು ಧರಿಸಿದ ಪಿನಾಕಿಯ ಭಕ್ತನಿವನು, ಪಂಚಬಾಣನಾದ ಮನ್ಮಥನ ಸಮರೂಪನು, ಗಿರ್ವಾಣ(ದೇವತೆ)ಸೇವಿತ ಪಾದಪಂಕಜನು, ಸೂರ್ಯ ತೇಜನು ನಿನಗೆ ಜಯವಾಗಲಿ ಎಂದು ವಂದಿಮಾಗಧರು ಹೊಗಳಿದರು.

ಕಕ್ಕಸವೆತ್ತು ಕಾದುವ ನೃಪೋತ್ತಮರೆಲ್ಲ
ರೊಕ್ಕವ ಸಲೆ ತೆತ್ತುತೆತ್ತು
ಒಕ್ಕಲ ನಿನ್ನೂರೊಳಗಿಟ್ಟು ತೊತ್ತಿನ
ಮಕ್ಕಳಂತೋಲೈಸುವರು ೪೪

ಬಹಳ ರಭಸದಿಂದ ಯುದ್ಧ ಮಾಡುವ ರಾಜರುಗಳೆಲ್ಲ ರೊಕ್ಕವನ್ನು ಕೊಟ್ಟೂ ಕೊಟ್ಟೂ, ಒಕ್ಕಲುಗಳನ್ನು ನಿನ್ನ ಊರೊಳಗೆ ಇಟ್ಟು, ತೊತ್ತಿನ ಮಕ್ಕಳಂತೆ ನಿನ್ನನ್ನು ಓಲೈಸುವರು.

ಶಿವ ನಿನ್ನ ಬಾಗಿಲ ಕಾದಿಹ ಕಮಲ ಸಂ
ಭವ ನಿನ್ನ ಮನೆಯ ಬ್ರಾಹ್ಮಣನು
ಜವನಿಂದ್ರೋಪೇಂದ್ರಾದಿಗಳು ನಿನ್ನೊಳಿಗ
ದವರಂತೆ ಕಟ್ಟಿ ಕಾದಿಹರು ೪೫

ಶಿವ ನಿನ್ನ ಮನೆಯ ಬಾಗಿಲ ಕಾವಲುಗಾರ, ಬ್ರಹ್ಮ ನಿನ್ನ ಮನೆಯ ಬ್ರಾಹ್ಮಣನು, ಯಮ, ಇಂದ್ರ, ಉಪೇಂದ್ರಾದಿಗಳು ನಿನನ್ ಊಳಿಗದವರಂತೆ ಕಾದಿಹರು.

ಭಾಳಾಕ್ಷನ ಭಜನೆಯ ಮಾಡಿ ಸಾಸಿರ
ತೋಳ ಪಡೆದಿರ್ದರೇನು
ಕಾಳೆಗದೊಳಗೆ ನಿನ್ನಿದಿರಾಗಿ ನಿಲುವ ಕ
ಟ್ಟಾಳೊರ್ವನಿಲ್ಲೆಂದು ನುಡಿದ ೪೬

ಹಣೆಗಣ್ಣನ ಭಜನೆ ಮಾಡಿ ಸಾವಿರ ತೋಳುಗಳನ್ನು ಪಡೆದಿದ್ದರೇನು? ಯುದ್ಧದಲ್ಲಿ ನಿನ್ನ ಎದುರು ತಾಕಿ ನಿಲ್ಲುವ ಒಬ್ಬ ಕಟ್ಟಾಳುವೂ ಇಲ್ಲವೆಂದನು.

ಭಟ್ಟನ ಮಾತು ಬಾಣನ ಕರ್ಣ ಯುಗಳದಿ
ನಟ್ಟುದು ನಾಗಾಭರಣನು
ಕಟ್ಟಳವಿಯಲಿ ನಿಂದಿದಿರಾಡುವಹಿತರ
ಕೊಟ್ಟುದಿಲ್ಲೆಂದು ಚಿಂತಿಸಿದ ೪೭

ಭಟ್ಟನ ಮಾತು ಬಾಣನ ಕಿವಿಗಳಿಗೆ ನಾಟಿಕೊಂಡಿತು. ನಾಗಭರಣನು (ಶಿವನು)ಕಡುಸಾಮರ್ಥ್ಯದಿಂದ ಎದುರು ತಾಕಿ ನಿಲ್ಲುವ ಅಹಿತರನ್ನು ಕೊಡಲಿಲ್ಲವೆಂದು ಚಿಂತಿಸಿದ.

ಮಥನವ ಪಡೆವೆ ಮತ್ಪಿತನಿಂದೆನುತಮಾ
ಗತಲಿಂಗ ಬಟ್ಟಲೊಳಗಿಟ್ಟು
ಸಿತಪರ್ಣ ಹಿತವೂಗವನಿತ್ತ ದ್ವಯ ಪಂಚ
ಶತಬಾಹು ಬಲವಂತ ನಗುತ ೪೮

ನನ್ನ ತಂದೆಯಿಂದ ಸಂಘರ್ಷವನ್ನು ಪಡೆವೆನು ಎಂದು ಸಾವಿರ ತೋಳಿನ ಸರದಾರ ಲಿಂಗವನ್ನು ಬಟ್ಟಲೊಳಗಿಟ್ಟು ಬಿಳಿಎಲೆ ಕಳಿಯಡಕೆಯನ್ನು ಜೊತೆಗಿಟ್ಟನು.

ಉಭಯಪಕ್ಷದೊಳೋರಣಿಸಿದ ವಿದ್ವ
ತ್ಸಭೆಗೆ ಸಪ್ತಾಂಗವನಿತ್ತು

ಅಭಯವನಹಿತರ್ಗೆ ಕುಡಲಾಗಿ ಗಳಿಹಾರ
ದಭಯಗಂಟೆ ನಿನಾದಿಸಿತು ೪೯

ಉಭಯ ಪಕ್ಷದಲ್ಲಿ ಓರಣಗೊಂಡ ವಿದ್ವತ್ ಸಭೆಗೆ ಸಪ್ತಾಂಗ(ಸ್ವಾಮಿ, ಅಮಾತ್ಯ, ಜನಪದ, ದುರ್ಗ, ಕೋಶ, ಸೈನ್ಯ ಮತ್ತು ಮಿತ್ರ ಎಂಬ ರಾಜ್ಯಾಡಳಿತದ ಏಳು ಅಂಗಗಳು)ಗಳನ್ನು ಕೊಟ್ಟು ಅಭಯವನ್ನು ನೀಡಿದ್ದರಿಂದ ಗಡಿಯಾರ ಅಭಯಗಂಟೆ ನಿನಾದಿಸಿತು.

ಷೋಡಶ ಘಟಿಕೆ ಸಂದುದು ಮಹದಾಸ್ಥಾನ
ವೇಡೈಸಿದೆ ಶಿವಾರ್ಚನೆಯ
ಮಾಡಬೇಕೆಂದು ಕಟ್ಟಿಗೆಕಾರರು ಕೊಂ
ಡಾಡಲ್ಕೆ ಬಾಣ ಚೇಷ್ಟಿಸಿದ ೫೦

ಹದಿನಾರು ಘಳಿಗೆಗಳಾದುವು, ಆಸ್ಥಾನ ಸುತ್ತುವರಿದಿದೆ. ಶಿವಾರ್ಚನೆಯನ್ನು ಮಾಡಬೇಕೆಂದು ಕಟ್ಟಿಗೆಕಾರರು (ಕೋಲಕಾರರು) ಕೊಂಡಾಡಲು ಬಾಣ ಸಂಚಲಗೊಂಡ.

ನಿಗಳದ ಕೆಯ್ಯ ಕಟ್ಟಿಗೆಕಾರರೊಡೆಯನ
ಮೊಗನೋಡಿ ಸನ್ನೆಯನರಿದು
ಸುಗುಣಶೇಖರ ಚಿತ್ತೈಸೆನುತೊಡ್ಡೋ
ಲಗವ ಬೀಳ್ಕೊಳಿಸದರೊಲಿದು ೫೧

ಸರಪಳಿ(ಚೈನು) ಆಭರಣದ ಕೋಲಕಾರರು ತಮ್ಮೊಡೆಯನ ಮುಖವನ್ನು ನೋಡಿ, ಸನ್ನೆಯನ್ನು ಅರಿತು, ಒಡ್ಡೋಲಗದಿಂದ ದಯಮಾಡಿರೆಂದು ಕರೆತಂದರು.

ಈ ನಜವೈಷ್ಣವ ಶಾಕ್ತ್ಯ ಗಾಣಪತ್ಯ ಮೊದಲಾದ
ದಿನಕರಾರ್ಚಿತರ ಚಿತ್ತೈಸು
ಮನಗೊಂಬ ನಿಖಿಳ ಹೊನ್ನಣಸಿನಂದಣದ
ಘನಮಾನ್ಯರುಗಳ ಚಿತ್ತೈಸು ೫೨

ಜೈನ, ವೈಷ್ಣವ, ಶಾಕ್ತ, ಗಾಣಪತ್ಯ ಮೊದಲಾದ ಸೂರ್ಯಾರಾಧಕರ ಚಿತ್ತೈಸು, ಮನಸ್ಸನ್ನು ಸೆಳೆಯುವ ಚಿನ್ನದ ಕಳಶದ ಪಲ್ಲಕ್ಕಿಯ ಮಾನ್ಯರನ್ನು ಚಿತ್ತೈಸು.

ಮಕರಧ್ವಜ ಮಾನಮರ್ಧನ ವಿಷಯದಿ
ಸುಖರಹಿತಾತ್ಮ ವಿಚಾರವ
ಪ್ರಕಟದಿ ನಮಗೀಗ ಹಸುಗೆಗೆಯ್ಯುವ ಶಿವಾ
ರ್ಚಕರ ಚಿತ್ತೈಸೆಲೆ ಜೀಯ ೫೩

ಮನ್ಮಥನ ಮಾನಮರ್ಧನ ವಿಷಯದಲ್ಲಿ ಆತ್ಮವಿಚಾರವನ್ನು ವಿತರಿಸುವ ಶಿವನ ಆರಾಧಕರನ್ನು ಚಿತ್ತೈಸು

ಜೋಡು ಸೀಸಕವಾಂತ ಸಬಳಿಗರೊತ್ತಂಡ
ಚೂಡಾಯತದ ಬಿಲ್ಲವರು
ಖೇಡಯವಡೆದ ರಾವುತ ಜೋದ ರಥಿಕರ
ನೋಡಲು ಚಿತ್ತೈಸು ದೇವ ೫೪

ಜೋಡು(ರಕ್ಷಕವಚ) ಸೀಸಕ(ಶಿರಸ್ತ್ರಾಣ)ಧರಿಸಿದ ಸಬಳಿಗರದು (ಈಟಿ ಹಿಡಿದವರು) ಒಂದು ತಂಡ,ವಿಶಾಲವಾದ ನೆತ್ತಿಶಿಖೆಯ ಬಿಲ್ಲವರು, ಖೇಡೆಯ (ಗುರಾಣಿ) ಹಿಡಿದ ರಾವುತ ಮಾವುತ ಹಾಗೂ ರಥಿಕರನ್ನು ಚಿತ್ತೈಸು.

ವಾರನಾರಿಯರ ಚಿತ್ತೈಸು ಕುವರ ಕಂ
ಠೀರವಾದಿಗಳ ಚಿತ್ತೈಸು
ತೋರ ಧನಾಢ್ಯ ಶ್ರೇಷ್ಠಿಗಳ ಚಿತ್ತೈಸು ಮ
ಯೂರ ಧ್ವಜನ ಚಿತ್ತೈಸು ೫೫

ವಾರಾಂಗನೆಯರನ್ನು ಚಿತ್ತೈಸು, ಕುಮಾರ ಕಂಠೀರವ ಮೊದಲಾದವರನ್ನು ಚಿತ್ತೈಸು, ದೊಡ್ಡ ಧನಾಢ್ಯರಾದ ಶ್ರೇಷ್ಠಿಗಳನ್ನು ಚಿತ್ತೈಸು, ಮಯೂರ ಧ್ವಜ(ಷಣ್ಮುಖ)ನನ್ನು ಚಿತ್ತೈಸು.

ಜಂಭಾರಿ ಮುಖ್ಯ ನಿರ್ಜರ ದೈತ್ಯ ನರ ನಿಕು
ರುಂಬ ಭೂಭುಜರ ಚಿತ್ತೈಸು
ಕುಂಭಾಂಡ ಮಂತ್ರೀಶ್ವರನ ಚಿತ್ತೈಸೆಂದು
ಪೊಂಬಾರಿಕರು ಪೊಗಳಿದರು ೫೬

ಇಂದ್ರ ಮೊದಲಾದ ಸುರಾಸುರ ನರೋರಗ ರಾಜರನ್ನು ಚಿತ್ತೈಸು, ಕುಂಭಾಂಡ ಮಂತ್ರೀಶ್ವರನನ್ನು ಚಿತ್ತೈಸು ಎಂದು ಹೊಗಳುಭಟ್ಟರು ಹೊಗಳಿದರು.

ಕನಕ ರತ್ನಾಂಚಿತದು ಪಕರಣಗಳ ಸ
ದ್ವಿನಿಯೋಗದವರ ಚಿತ್ತೈಸು
ಧನದತ್ತ ಮಾಗಣಿಕಾರ ನಿಯೋಗ ಸ
ಜ್ಜನರ ಚಿತ್ತೈಸಲೆ ದೇವ ೫೭

ಚಿನ್ನರನ್ನದ ಉಪಕರಣಗಳ ನಿಯೋಗದವರನ್ನು ಚಿತ್ತೈಸು, ಹಣ ನೀಡು ಹೋಬಳಿಗಳ ನಿಯೋಗದ ಸಜ್ಜನರನ್ನು ಚಿತ್ತೈಸು.

ಗಟ್ಟಿಚಿನ್ನದ ಬೆಳ್ಳಿಯ ಗುದಿಗೆಯ ಕೆಯ್ಯ
ಜಟ್ಟಿಗಳಖಿಳ ಬೋಳೆಕಾರ
ಕಟ್ಟಿಗೆಕಾರರಬ್ಬರದುಗ್ಗಡಣೆ ಬೊ
ಬ್ಬಿಟ್ಟುದು ರಾಯನೇಳ್ಗೆಯಲಿ ೫೮

ಬೆಳ್ಳಿ ಚಿನ್ನಗಳ ಬಡಿಗೆ ಹಿಡಿದ ಕೈಗಳ ಜಟ್ಟಿಗಳ, ಬಾಣ ಹಿಡಿದವರ ಕೋಲಕಾರರ ಅಬ್ಬರದ ಘೋಷಣೆ ಮುಗಿಲು ಮುಟ್ಟಿತು.

ಕೋಣಪ ಸು ರನರೋರಗ ಕುಂಭಾಂಡರು
ಮಾಣದೆ ಮನೆಗೆ ಸಾರಿದರು
ಬಾಣಾಸುರ ಪೊಂಬಾವುಗೆವೆರಸಿ ದಿ
ವಾಣವ ಪುಗಲೊಡರ್ಚಿದನು ೫೯

ಸುರಾಸುರ ನರೋರಗ(ದೇವತೆಗಳು, ರಾಕ್ಷಸರು, ಮನುಷ್ಯರು, ನಾಗರು) ಕುಂಭಾಂಡರು ಮನೆಗೆ ಹೋದರು. ಬಾಣಾಸುರ ಮಾತ್ರ ಹೊನ್ನ ಪಾದುಕೆ ಧರಿಸಿ ಓಲಗಶಾಲೆಗೆ ಪ್ರವೇಶಿಸತೊಡಗಿದನು.

ಸ್ಥೂಲದೇಹವಾಂತ ಕೊಜ್ಜೆಯರ ಚಿತ್ತೈಸು
ಕೋಲ ಗೊಲ್ಲರ ಚಿತ್ತೈಸು
ಶೂಲ ಮುದ್ಗರ ಪಟ್ಟೆಯ ಮುಸಲಾಂಕಿತ ದ್ವಾರ
ಪಾಲಕಾದಿಗಳ ಚಿತ್ತಯಿಸು ೬೦

ಸ್ಥೂಲದೇಹದ ಕೊಜ್ಜೆ(ಖೋಜ)ಯರನ್ನು ಚಿತ್ತೈಸು, ಕೋಲಕಾರ ಗೊಲ್ಲ(ಕುರುಬ)ರನ್ನು ಚಿತ್ತೈಸು, ಶೂಲ(ಈಟಿ) ಮುದ್ಗರ(ಗದೆ) ಪಟ್ಟೆಯ(ಉದ್ದವಾದ ಕತ್ತಿ) ಮುಸಲ(ಒನಕೆ, ಗದೆ)ಧಾರಿ ದ್ವಾರಪಾಲಕರನ್ನು ಚಿತ್ತೈಸು.

ಜೋಳಿ ಜೋಳಿಯೊಳೆರಗುವ ಭೃತ್ಯರ ಮಕು
ಬಾಳಿ ಮಾಣಿಕ್ಯ ದೀಪ್ತಿಗಳ
ಏಳಿಪ ರನ್ನವಾವುಗೆವಜ್ಜೆ ಜತನ ಸಂ
ಭಾಳಿಕೆ ಬಹು ಪರಾಕಯ್ಯ ೬೧

ಗುಂಪು ಗುಂಪಾಗಿ ಬರುವ ಸಚಿವರ ಕಿರೀಟಗಳ ರತ್ನಕಾಂತಿಯನ್ನು ಅಪಹಾಸ್ಯಗೈಯುವ ನಿಮ್ಮ ರತ್ನಪಾದುಕೆಯ ಪಾದ ಜತನ, ಸಂರಕ್ಷಣೆ ಜತನ

ನಿಟ್ಟುಸಿರಿಂದ ಕೀರ್ತಿಪ ಹೊನ್ನ ಸೆಳೆಗೆಯ್ಯ
ಗಟ್ಟಿವಾಳರ ಸನ್ನೆಯಲಿ
ಮುಟ್ಟೊಳಿಗದ ಬೋಳುಕರನೆಲ್ಲರ ಬೀಳು
ಕೊಟ್ಟೊಳಪ್ಪೊಕ್ಕನುತ್ಸವದಿ ೬೨

ನಿಡಿದಾದ ಉಸುರಿನಿಂದ(ಉಬ್ಬಸದಿಂದ) ಕೀರ್ತಿಸುವ ಚಿನ್ನದ ಕಂಬಿಯ ಗಟ್ಟಿವಾಳರ (ಗಂಧ ತೇಯುವವರ)ಸನ್ನೆಯ ಮೂಲಕ ಬರಿಗೈಯ ಸಲಕರಣೆ ಸೇವಕರ ಬೀಳುಕೊಟ್ಟು ಒಳಹೊಕ್ಕನು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೩

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ , ಕೇಳುವ ಜನರನ್ನು ಸೂರ್ಯ ಚಂದ್ರರು ಇರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೨೧. ಬಾಣಾಸುರನ ಶಿವಪೂಜೆ

ಹೊಂದಾವರೆಗೊಳ ಹೊದರೆದ್ದ ತುಲಸಿಯ
ನಂದನ ನಾಟ್ಯಕೀರ್ತನದಿ
ಸಂದರ್ಶನದೊಳುಬ್ಬುವ ಸ್ವಾಮಿಯ ಕೂರ್ತು
ಮುಂದಣ ಕಥೆಯ ವಿಸ್ತರಿಸು ೧

ಹೊಂದಾವರೆ ಕೊಳ, ಪೊದೆಗೊಂಡ ತುಲಸಿಯ ತೋಟ, ನರ್ತನ ಕೀರ್ತನಗಳ ಸಂದರ್ಶನದಿಂದ ಉಬ್ಬಿದ ಸ್ವಾಮಿಯನ್ನು ಕುರಿತು ಮುಂದಿನ ಕಥೆಯನ್ನು ಬಿತ್ತರಿಸು.

ಲೀಲೆಗಾತಿಯರ ಮಸ್ತಕದಲಿ ಮೆರೆವ ಪೂ
ಮಾಲೆ ಮದ್ವಲ್ಲಭೆ ಕೇಳು
ಬಾಲೆಯ ಕೈಲಾಗಿನಲಿ ಬಾಣ ಮಜ್ಜನ
ಶಾಲೆಯ ಸಾರ್ದನಳ್ತಿಯಲಿ ೨

ಸೌಂದರ್ಯವತಿಯರ ಮಸ್ತಕದಲ್ಲಿ ಮೆರೆವ ಮಾಣಿಕ್ಯ ಸದೃಶ ಮದ್ವಲ್ಲಭೆ(ನನ್ನ ಹೆಂಡತಿಯೆ) ಕೇಳು, ಯುವತಿಯ ಕೈಯಾಸರೆಯಲ್ಲಿ ಬಾಣ ಸ್ನಾನ ಗೃಹವನ್ನು ಪ್ರವೇಶಿಸಿದನು.

ಹೊಂಗೆಲಸದ ಬಜ್ಜ ಪದುಮ ವಿಷ್ಟದೊಳು
ಮಂಗಲ ಮಜ್ಜನಗೆಯ್ದು
ಅಂಗ ಸುವಸ್ತ್ರಭೂಷಿತನಾಗಿ ಶಿವಪೂಜಾ
ರಂಗಸ್ಥಳವ ಸಾರಿದನು ೩

ಚಿನ್ನದ ಕೆಲಸದ ಕಂಡರಣೆಯ ಪದ್ಮಪೀಠದಲ್ಲಿ ಕುಳಿತು ಮಂಗಳ ಸ್ನಾನವನ್ನು ಮಾಡಿ, ಒಳ್ಳೆಯ ವಸ್ತ್ರಗಳಿಂದ ಅಲಂಕೃತನಾಗಿ ಶಿವಪೂಜಾ ಮಂದಿರವನ್ನು ಸಾರಿದನು.

ಮೀಟಾರ ರಮ್ಯರತ್ನಗಳಡಸಿದ ಹೊನ್ನ
ಪೀಠದಿ ಕುಳಿತು ನಿಟ್ಟಿಸಲು
ನೋಟಕಚ್ಚರಿವೆತ್ತ ಸೊಡರ್ಗಂಬದಲಿ ವಿ
ರಾಟ ದೀಪ್ತಿಗಳೊಪ್ಪಿದವು ೪

ಸುಂದರ ರತ್ನಗಳನ್ನು ಅಳವಡಿಸಿದ ಸುಂದರ ಪೀಠದಲ್ಲಿ ಕುಳಿತು ನಿಟ್ಟಿಸಲು, ನೋಟಕ್ಕೆ ಸೋಜಿಗ ಮೂಡಿಸುವಂತೆ ದೀಪದ ಕಂಬದಲ್ಲಿ ಅತಿವ್ಯಾಪ್ತಿಯ ದೀಪ್ತಿಗಳು ಬೆಳಗಿದವು

ಕತ್ತುರಿಯಿಂದ ಸಮ್ಮಾರ್ಜನೆಗೆಯ್ದು ಪೆ
ರ್ಮುತ್ತುಗಳೊಡನೆ ಮಾಣಿಕವ
ಪತ್ತುಗೆಗೊಳಿಸಿ ಸಚಿತ್ರ ರಂಗವಾಲಿಯ
ಬಿತ್ತಿರಿಸಿದರು ಬಿನ್ನಣದಿ ೫

ಕಸ್ತೂರಿಯಿಂದ ತೊಳೆದು, ಮುತ್ತುಗಳೊಡನೆ ರತ್ನವನ್ನು ಜೊತೆಗೊಳಿಸಿ ಸಚಿತ್ರ ರಂಗವಾಲಿಯನ್ನು ಬಿನ್ನಾಣದಿಂದ ಬಿತ್ತರಿಸಿದರು.

ಗಾಡಿಕಾರ್ತಿಯ ರೀಶ್ವರ ಪೂಜೆಗೆಲಸವ
ಮಾಡಲು ನಿಂದಿಹರೆಡಬಲದಿ
ನೋಡಿದ ಮಾತ್ರದೊಳುಪಕರಣಂಗಳ
ನೀಡುವದೆಂಥ ಸೂಕ್ಷ್ಮಪ್ರಜ್ಞೆ ೬

ಈಶ್ವರನ ಪೂಜೆಗೆಲಸಕ್ಕೆ ಆಸರೆಯಾಗಿ ಎಡಬಲದಲ್ಲಿ ಸುಂದರಿಯರು ನಿಂದಿರುವರು. ಬಾಣ ನೋಡಿದ ಮಾತ್ರದಲ್ಲಿ ಉಪಕರಣಗಳನ್ನು ನೀಡುವುದೆಂಥ ಸೂಕ್ಷ್ಮಪ್ರಜ್ಞೆ ಎಂದು ಅಚ್ಚರಿಯಾಗುವುದು.

ಜಲರುಹದಳಲೋಚನೆಯ ನೋಡಲು ಸ್ವೇದ
ಜಲಬಿಂದು ನಿಟಿಲದಿ ಪೊಳೆಯೆ
ಜಲನಿಧಿಯಭಿಮಾನದೇವಿಯಂದದಿ ಸ್ವರ್ಣ
ಜಲಪಾತ್ರೆಯನು ಸಾರ್ಚಿದಳು ೭

ಕಮಲಾಕ್ಷಿಯನ್ನು ನೋಡಿದಾಗ ಬೆವರಿನ ಹನಿ ಹಣೆಯಲ್ಲಿ ಹೊಳೆಯಲು, ಸಮುದ್ರದಧಿದೇವತೆಯಂತೆ ಸುವರ್ಣ ಜಲಪಾತ್ರೆಯನ್ನು ಪಕ್ಕಕ್ಕೆ ಇಟ್ಟಳು.

ಕುಂಭಸ್ತನೆಯ ನಿಟ್ಟಿಸಲು ತನ್ನಯ ಕುಚ
ಕುಂಭ ಸಮಾನವೆಂದೆನಿಪ
ಕುಂಭೋದಕವ ಸೋದಿಸಿ ತುಂಬಿದ ದ್ವಯ ಹೇಮ
ಕುಂಭವ ತಂದು ಸಾರ್ಚಿದಳು ೮

ಗಡಿಗೆ ಮೊಲೆಯವಳನ್ನು ನೋಡಿದಾಗ, ತನ್ನ ಮೊಲೆ ಗಡಿಗೆಗೆ ಸದೃಶವಾದ ಗಡಿಗೆ ನೀರನ್ನು ಶೋಧಿಸಿ ತುಂಬಿದ ಜೋಡಿ ಚಿನ್ನದ ಕುಂಭ(ಗಡಿಗೆ)ಗಳನ್ನು ತಂದಿರಿಸಿದಳು.

ಗಂಧ ಸುಗಂಧಗಂಧಿಯ ಮೊಗ ನೋಡಲು
ಗಂಧ ಕುಂಕುಮರಸಭರಿತ
ಗಂಧವ ಗಂಧೋದಕದಿಂದ ಹದಮಾಡಿ
ಗಂಧವಟ್ಟಲ ಸಾರ್ಚಿದಳು ೯

ಪುಷ್ಪಗಂಧಿಯ ಮುಖ ನೋಡಲು ಕುಂಕುಮ ರಸಭರಿತ ಗಂಧವನ್ನು ಗಂಧದ ನೀರಿಂದ ಹದಮಾಡಿ ಗಂಧದ ಬಟ್ಟಲನ್ನು ಹತ್ತಿರಕ್ಕೆ ಸರಿಸಿದಳು.

ಅಕ್ಷಯ ರೂಪವತಿಯ ನಿಟ್ಟಿಸಲು ತ್ರಿ
ಯಕ್ಷನ ದೇಹದ ದ್ವಿತೀಯೆಗೆ
ಅಕ್ಷತೆಯೊಳು ಕುಂಕುಮದಲರ್ಗೂಡಿ ಶೋ
ಭಾಕ್ಷತೆ ವಟ್ಟಲಿಟ್ಟಿಹಳು ೧೦

ಕ್ಷಯಿಸದ ಅಕ್ಷಯ ರೂಪವತಿಯನ್ನು ನೋಡಿದಾಗ, ಮುಕ್ಕಣ್ಣನ ದೇಹದಲ್ಲಿರುವ ಪತ್ನಿಗೆ ಅಕ್ಷತೆಯಲ್ಲಿ ಕೆಂಪು ಹೂವನ್ನು ಸೇರಿಸಿ ಶುಭ ಅಕ್ಷತೆಯ ಬಟ್ಟಲನ್ನಿಟ್ಟಳು.

ಬಟ್ಟ ಚಂದಿರ ಮುಖದವಳ ನಿಟ್ಟಿಸಲಾಗಿ
ಬಟ್ಟಜವ್ವನದೊನಪಿನಲಿ
ಬಟ್ಟ ಘೋಟಕ ಚೂರ್ಣ ವೀಟಿಕೆಯ ಪೊಂ
ಬಟ್ಟಲನು ತಂದಿರಸಿದಳು ೧೧

ತುಂಬು ಚಂದಿರವದನೆಯನ್ನು ನಿಟ್ಟಿಸಿದಾಗ, ತುಂಬು ಯೌವನದ ಬನಪ್ಪ ಒಯ್ಯಾರದಲ್ಲಿ ಬಟ್ಟ ಘೋಟಕ(ಉಂಡಡಿಕೆ) ಚೂರ್ಣ(ಸುಣ್ಣ) ವೀಟಿಕೆ(ವೀಳೆಯದೆಲ)ಯ ಚಿನ್ನದ ಬಟ್ಟಲನ್ನು ತಂದಿರಿಸಿದಳು.

ಮಂದಸ್ಮಿತ ಮುಖದವಳ ನಿಟ್ಟಿಸಲಾಗಿ
ಮಂದಾರ ಜಾಜಿಮಲ್ಲಿಗೆಯ
ಕುಂದ ಸೌರಭ್ಯಸಂಪಿಗೆಯ ಕುಸುಮ ಸಂ
ಬಂಧದ ಪಾತ್ರೆಯನಿರಿಸಿದಳು ೧೨

ಮುಗುಳುನಗೆಯವಳನ್ನು ನೋಡಲಾಗಿ ಮಂದಾರ, ಜಾಜಿ, ಮಲ್ಲಿಗೆ, ಸಂಪಿಗೆ, ಹೂಗಳಿಗೆ ಸಂಬಂಧಿಸಿದ ಪಾತ್ರೆಗಳನ್ನು ಇರಿಸಿದಳು.

ಏಕಾದಶ ವತ್ಸರ ಪ್ರಾಯದಿಂದಲ
ನೇಕ ಹೆಂಗಳ ತಿರಸ್ಕರಿಸಿ
ಏಕಸ್ವರೂಪಿ ತಾನಲ್ಲದಿನ್ನಿಲ್ಲೆಂದು
ಏಕಾರತಿಯನಿಕ್ಕಿದಳು ೧೩

ಹನ್ನೊಂದು ವರ್ಷದ ಪ್ರಾಯದಿಂದ ಅನೇಕರನ್ನು ತಿರಸ್ಕರಿಸಿ ಏಕಸ್ವರೂಪಿ ತಾನಲ್ಲದೆ ಇನ್ನಿಲ್ಲವೆಂದು ಏಕಾರತಿಯ ತಂದಿಕ್ಕಿದಳು

ಪಂಚಶತಕೋಟಿ ವಿಸ್ತೀರ್ಣಭೂಮಿ ಪ್ರಯ
ಪಂಚವೆಣ್ಣುಗಳಂತಿರಲಿ
ಪಂಚಬಾಣನ ರಾಣಿ ತನಗೆಣೆಯಿಲ್ಲೆಂದು
ಪಂಚಾರತಿಯನಿಕ್ಕಿದಳು ೧೪

ಐನೂರು ಕೋಟಿ ವಿಸ್ತೀರ್ಣ ಭೂಮಿಯ ಪ್ರಾಪಂಚಿಕ ಹೆಣ್ಣುಗಳು ಹಾಗಿರಲಿ, ಪಂಚಬಾಣ ಮನ್ಮಥನ ರಾಣಿ ತನಗೆ ಸರಿಸಮಾನ ಅಲ್ಲವೆಂದು ಪಂಚಾರತಿಯನು ತಂದಿಕ್ಕಿದಳು.

ಮೃಗಧರ ತರಣಿಕಿರಣ ವ್ಯಾಪ್ತಿ ಭೂಮಿಯ
ಮೃಗಮದಗಂಧಿಯರೊಳಗೆ
ಮೃಗನೇತ್ರೆ ತನಗೆಣೆಯಿಲ್ಲೆಂದು ಪುರುಷಾ
ಮೃಗಆರತಿಯ ಸಾರ್ಚಿದಳು ೧೫

ಚಂದ್ರ ಸೂರ್ಯರ ಕಿರಣ ವ್ಯಾಪ್ತಿ ಭೂಮಿಯ ಮೃಗಮದ(ಕಸ್ತೂರಿ) ಗಂಧಿಯರೊಳಗೆ ಜಿಂಕೆಗಣ್ಣಿನ ನನಗೆ ಎಣೆ ಯಾರೂ ಇಲ್ಲವೆಂದು ನಾಲ್ಕು ಕಾಲಿನ ಪುರುಷಾಮೃಗದ ಆರತಿಯನ್ನು ತಂದಿರಿಸಿದಳು.

ನೀಲಾಳಕ ಬದ್ಧ ಧಮ್ಮಿಲ್ಲ ಶೋಭಿತೆ
ನೀಲೋತ್ಪಲದಳ ನೇತ್ರೆ
ನೀಲ ಮೌಕ್ತಿಕ ರತ್ನ ಹಾರಾಲಂಕೃತೆ
ನೀಲಾಂಜನವ ಸಾರ್ಚಿದಳು ೧೬

ಕಪ್ಪು ಕೂದಲ ತುರುಬಿನಿಂದ ಶೋಭಿತೆ, ಕನ್ನೈದಿಲೆ ದಳನೇತ್ರೆ, ಮುತ್ತು ರತ್ನಗಳ ಮಾಲಾಲಂಕೃತೆ ನೀಲಾಂಜನ (ಆರತಿ)ವನ್ನು ತಂದಿರಿಸಿದಳು.

ಧೂಪಾರತಿ ಕಪ್ಪುರದಾರತಿ ರತ್ನ
ದೀಪಾರತಿ ಊದುಬತ್ತಿ
ಆಪಾರ ಮಹದಾರತಿ ದಿವ್ಯಶಿವಪೂಜೆ
ಸೋಪಸ್ಕರವನಿಕ್ಕಿದಳು ೧೭

ಧೂಪಾರತಿ, ಕರ್ಪೂರದಾರತಿ, ರತ್ನ ದೀಪಾರತಿ, ಊದುಬತ್ತಿ, ಆಪಾರ ಮಹದಾರತಿ, ದಿವ್ಯಶಿವಪೂಜೆಗೆ ಬೇಕಾದ ಸಾಮಾನು ಸರಂಜಾಮುಗಳನ್ನು ತಂದಿರಿಸಿದಳು.

ಚರಣ ಮಸ್ತಕ ದಿವ್ಯದೇಹದಿ ರತ್ನಾ
ಭರಣ ದೀಪ್ತಿಗಳುಜ್ವಲಿಸಲು
ಶರಣೋತ್ತಮ ಬಾಣಾಗುಭಯ ಪಕ್ಷದೊಳುಪ
ಕರಣಾಂಗನೆಯರೊಪ್ಪಿದರು ೧೮

ಪಾದ, ತಲೆ, ದೇಹಗಳಲ್ಲಿ ರತ್ನಾಭರಣ ದೀಪ್ತಿಗಳುಜ್ವಲಿಸಲು, ಶಿವಶರಣ ಬಾಣನಿಗೆ ಎರಡೂ ಪಕ್ಕದಲ್ಲಿ ಉಪಕರಣಾಂಗನೆಯರು ಸಜ್ಜಾಗಿ ನಿಂತಿದ್ದರು.

ಪಂಕಜಮುಖಿಯರು ಬಾಜಿಸುತಿಹ ಗಂಟೆ
ಶಂಬ ನಾನಾ ವಾದ್ಯನಿಚಯ
ಹೂಂಕಾರ ಶೋಣಿತಪುರದ ಉರುದುರಿತ ಭ
ಯಂಕರವಾಗಿ ಕೇಳಿಸಿತು ೧೯

ಕಮಲ ಮುಖಿಯರು ಬಾಜಿಸುತ್ತಿರುವ ಗಂಟೆ, ಶಂಖ ನಾನಾ ವಾದ್ಯ ನಿಚಯದ ಕಿವಿಗಡಚಿಕ್ಕುವ ನಾದ ಶೋಣಿತಪುರದ ಪ್ರಖರ ಪಾಪಭಯಂಕರವಾಗಿ ಕೇಳಿಸಿತು.

ಮಣಿಭೂಷಣಂಗಳ ಕಳೆದು ರುದ್ರಾಕ್ಷಿಯ
ಮಣಿಭೂಷಣಂಗಳ ತಳೆದು
ಮಣಿ ಮಾಲಿಕೆಗಳ ಬಿಟ್ಟನೀಶ್ವರಾಕ್ಷ
ಮಣಿಮಾಲಿಕೆಗಳ ತೊಟ್ಟ ೨೦

ರತ್ನದ ಒಡವೆಗಳನ್ನು ಕಳಚಿ ರುದ್ರಾಕ್ಷಿ ರನ್ನದೊಡವೆಯನ್ನು ಧರಿಸಿದ; ರತ್ನಹಾರವನ್ನು ಬಿಟ್ಟು ಈಶ್ವರಿಬೇರಿನ ಜಪಮಣಿ ಹಾರವನ್ನು ತೊಟ್ಟ.

ದಾನವ ಪ್ರಭು ವಿಭೂತಿಯ ಸಾರ್ಚಿ ಮಂತ್ರ ವಿ
ಧಾನ ವಿನ್ಯಾಸ ಪೂರ್ವಕದಿ
ಧ್ಯಾನವ ಮಾಡಿ ಲಲಾಟ ಮಧ್ಯೆ ಆಯತ
ಸ್ಥಾನದಿ ಭಸಿತವಿಕ್ಕಿದನು ೨೧

ದಾನವೇಂದ್ರ ವಿಭೂತಿಯನ್ನು ಕೈಗೆ ತೆಗೆದುಕೊಂಡು ಮಂತ್ರಪೂರ್ವಕ ಧ್ಯಾನ ಮಾಡಿ ಹಣೆಯ ಮಧ್ಯೆ ಉಚಿತಸ್ಥಾನದಲ್ಲಿ ಭಸ್ಮವನ್ನು ಧರಿಸಿದನು.

ಶಿರದೆಡೆಯೊಳಗಿರ್ದ ಶಿವಲಿಂಗದೇವರ
ಪರಮ ವಸ್ತ್ರವ ಬಿಚ್ಚಿತೆಗೆದು
ವರ ರತ್ನಾಂಚಿತ ವೃಷಭಮುದ್ರೆಯನಿಟ್ಟ
ಕರಕಂಜದೊಳಗೆ ಸಾರ್ಚಿದನು ೨೨

ತಲೆಯ ಮೇಲಿದ್ದ ಶಿವಲಿಂಗ ದೇವರ ಪವಿತ್ರ ವಸ್ತ್ರವನ್ನು ಬಿಚ್ಚಿ, ನಂದಿಮುದ್ರೆಯನ್ನು ಧರಿಸಿದ ಕೈಕಮಲದೊಳಗೆ ಮಡಗಿಕೊಂಡನು.

ಸೂಡಿರ್ದ ಕುಸುಮ ಸೌರಭವನಾಘ್ರಾಣವ
ಮಾಡಿ ಮುದದಿಂ ನಮಸ್ಕರಿಸಿ
ಊಡಿರ್ದ ಗಂಧ ಕಸ್ತುರಿಯ ನಿವಾರಿಸಿ
ನೋಡಿದನು ಪರಮಾತ್ಮಕನ ೨೩

ಲೇಪಿಸಿದ ಪುಷ್ಪಗಂಧವನ್ನು ಮೂಸುತ್ತಾ ನಮಸ್ಕರಿಸಿ, ಹಚ್ಚಿದ ಗಂಧ ಕಸ್ತೂರಿಯನ್ನು ನಿವಾರಿಸಿ ಪರಮಾತ್ಮನನ್ನು ಈಕ್ಷಿಸಿದನು

ವಿಸ್ತರಣೆಗೆಯ್ದು ನೋಡಿದರೆ ಬ್ರಹ್ಮಾಂಡ ಸ
ಮಸ್ತ ನಿನ್ನೊಳಡಗಿಹುದು
ಪ್ರಸ್ತವಿದೇನು ಕಾರಣ ಸ್ವಾಮಿ ನೀನೆನ್ನ
ಹಸ್ತಾಬ್ಜದೊಳಗೆ ಮಂಡಿಸಿದೆ ೨೪

ವಿಶಾಲ ದೃಷ್ಟಿಯಿಂದ ನೋಡಿದರೆ ಇಡೀ ಬ್ರಹ್ಮಾಂಡ ನಿನ್ನಲ್ಲಿ ಅಡಗಿದೆ. ಯಾವ ಶುಭಕಾರ್ಯಕ್ಕಾಗಿ ನೀನು ಬಂದು ಅಂಗೈಯೊಳಗೆ ಮಂಡಿಸಿದೆ.

ಹಡೆದ ತಾಯಿಲ್ಲ ತಾಯುಳ್ಳೊಡೆ ತಲೆ ಹೀಗೆ
ಜಡೆಗಟ್ಟಿಕೊಂಡು ಮಾಸಿಹುದೆ
ಮಡದಿಯರಿಲ್ಲ ಮಂಡೆಯ ಸಿಕ್ಕ ಬಿಡಿಸಲೆ
ನ್ನೊಡೆಯ ಕೋಯೆಂದು ನೀರೆರೆದ ೨೫

ಹಡೆದ ತಾಯಿ ನಿನಗಿಲ್ಲ, ಒಂದು ಪಕ್ಷ ತಾಯಿದ್ದರೆ ನಿನ್ನ ತಲೆ ಹೀಗೆ ಜಡೆಗಟ್ಟಿಕೊಂಡು ಕೊಳೆಯ ಮೊದೆಯಾಗಿರುತ್ತದೆಯೆ? ನಿನ್ನ ಮಂಡೆಯ ಸಿಕ್ಕನ್ನು ಬಿಡಿಸಲು ಮಡದಿ ಇಲ್ಲ ಎಂದು ಹೇಳಿ ತಲೆಯ ಮೇಲೆ ನೀರೆರೆದ.

ಸಾಸಿರ ಕರಕಮಲದೊಳೊಂದ ಶಿವಗಿತ್ತು
ಸಾಸಿರ ಕರಕಮಲದಿಂದ
ಸಾಸಿರ ಮೊಗಕೆ ಪೂರ್ಣ ಕಲಶಾಭಿಷೇಕವ
ಸಾಸಿರ ಬಾರಿ ಮಾಡಿದನು ೨೬

ಸಾವಿರ ಕೈಕಮಲಗಳಲ್ಲಿ ಒಂದನ್ನು ಶಿವನಿಗೆ ಕೊಟ್ಟು, ಸಾವಿರ ಕೈಕಮಲಗಳಿಂದ ಸಾವಿರ ಮುಖಗಳಿಗೆ ಪೂರ್ಣ ಕಳಶಾಭಿಷೇಕವನ್ನು ಸಾವಿರ ಸಾರಿ ಮಾಡಿದನು.

ಗಂಗಾಧರ ಅಘಹರ ದೇವ ದೇವೋ
ತ್ತುಂಗ ಭುಜಂಗ ಭೂಷಣಗೆ
ಅಂಗಜಭಸ್ಮವಿಲೇಪ ನಿರ್ಲೇಪಂಗೆ
ಮಂಗಳೋದಕವನರ್ಪಿಸಿದ ೨೭

ಗಂಗೆಯನ್ನು ಧರಿಸಿದವನಿಗೆ, ಪಾಪವಿನಾಶಕನಿಗೆ, ದೇವತಾಗ್ರಗಣ್ಯನಿಗೆ, ಸರ್ಪಾಭರಣನಿಗೆ, ಮನ್ಮಥನ ಭಸ್ಮವನ್ನು ಮೈಗೆ ಬಳಿದುಕೊಂಡಿದ್ದರೂ ಯಾವುದಕ್ಕೂ ಅಂಟಿಕೊಳ್ಳದವನಿಗೆ ಪವಿತ್ರ ಜಲವನ್ನು ಅರ್ಪಿಸಿದ.

ಕಂದರ್ಪನ ಸುಟ್ಟ ಪಣೆಗಣ್ಣು ಮುಚ್ಚಿ
ತೆಂದಾದೊಡೆ ಮತ್ತೆ ತೆರೆದು
ಬೆಂದ ಪಾಪಿಯ ಬೇಯಿಸ ಬೇಡವೆಂದು ಸು
ಗಂಧಾಕ್ಷತೆಯಮೆತ್ತಿದನು ೨೮

ಮನ್ಮಥನನ್ನು ಸುಟ್ಟ ಹಣೆಗಣ್ಣು ಮುಚ್ಚಿಕೊಂಡಿರುವುದನ್ನು ಮತ್ತೆ ತೆರೆದು, ಬೆಂದ ಪಾಪಿಯ ಮತ್ತೆ ಬೇಯಿಸಬೇಡವೆಂದು ಸುಗಂಧಾಕ್ಷತೆಯನ್ನು ಅದಕ್ಕೆ ಮೆತ್ತಿದನು.

ಕಿಡಿಗಣ್ಣು ತೆರೆಯದದಂದೊಳುರೆ ಮುದ್ರಿಸಿ
ಜೆಡೆಯಿಡುಗಿನೊಳಿದ್ದ ಹೆರೆಯ
ಬಿಡಿಸುವಂದದಿ ದಿವ್ಯಾಮೋದ ಪುಷ್ಪಂಗಳ
ಮುಡಿಸಿದ ಶಿವನ ಮಸ್ತಕದಿ ೨೯

ಕೆಂಡಗಣ್ಣು ತೆಗೆಯದ ರೀತಿಯಲ್ಲಿ ಅದಕ್ಕೆ ಮುದ್ರೆಯೊತ್ತಿ, ಜಡೆಯ ಇರುಕಲಿನಲ್ಲಿದ್ದ(ಸಂದಿಯಲ್ಲಿ ಸಿಕ್ಕಿದ್ದ) ಚಂದ್ರನನ್ನು ಬಿಡಿಸುವ ರೀತಿಯಲ್ಲಿಯೇ ಶಿವನ ಮುಡಿಗೆ ಹೂಗಳನ್ನು ಮುಡಿಸಿದನು.

ವ್ಯೋಮಕೇಶಗೆ ಭವಭೀಮ ಸುರೇಶಂಗೆ
ಸಾಮಜ ಚರ್ಮಾಂಬರಗೆ
ರಾಮಣೀಯಕ ಬಾಲಸೋಮ ಜೂಟಗೆ ಧೂಪ
ಧೂಮವ ನೊಲಿದರ್ಪಿಸಿದನು ೩೦

ಆಕಾಶಕೇಶನಿಗೆ, ಹುಟ್ಟುಸಾವಿಗೆ ಭೀಮನಂತಿರುವ ಸುರೋತ್ತಮನಿಗೆ, ಆನೆಯ ಚರ್ಮವನ್ನು ಉಡುಗೆಯಾಗಿ ತೊಟ್ಟವನಿಗೆ, ಸುಂದರ ಬಾಲ ಚಂದ್ರನನ್ನು ಜಡೆಯಲ್ಲಿ ಧರಿಸಿದವನಿಗೆ ಧೂಪಧೂಮವನ್ನು ಪ್ರೀತಿಯಿಂದ ಅರ್ಪಿಸಿದನು.

ಸ್ಮರಭಸ್ಮೀಕೃತ ಜಯತು ಆಕಾಶ ಮು
ಪ್ಪುರಭಸ್ಮೀಕೃತ ಜಯತು
ಶರಣ ದುಷ್ಕೃತ ಭಸ್ಮೀಕೃತ ಜಯತೆಂದು
ಕರದೊಳಾರತಿಯನೆತ್ತಿದನು ೩೧

ಮನ್ಮಥನನ್ನು ಬೂದಿ ಮಾಡಿದವನಿಗೆ ಜಯವಾಗಲಿ, ಆಕಾಶದಲ್ಲಿನ ಮೂರುಪುರಗಳನ್ನು ಬೂದಿ ಮಾಡಿದವನಿಗೆ ಜಯವಾಗಲಿ, ಭಕ್ತರ ಪಾಪಗಳನ್ನು ಬೂದಿ ಮಾಡಿದವನಿಗೆ ಜಯವಾಗಲಿ ಎಂದು ಶಿವನಿಗೆ ಆರತಿ ಮಾಡಿದನು.

ನುತ ಸಾಸಿರ ಕಿರಣದಿ ಸೂರ್ಯ ಮೇರು ಪ
ರ್ವತವ ಬಳಸಿ ಬರ್ಪಂತೆ
ಹುತವಹನೇತ್ರ ಮಂಡಿತ ಹಸ್ತ ಪರಿವೇ
ಷ್ಟಿತದಾರತಿಗಳೊಪ್ಪಿದವು ೩೨

ಸ್ತುತ್ಯ ಸಾವಿರ ಕಿರಣಗಳಿಂದ ಸೂರ್ಯ ಮೇರು ಪರ್ವತವನ್ನು ಬಳಸಿ ಬರುವಂತೆ ಕೆಂಡಗಣ್ಣಿನ ಮೇಲೆ ಮಂಡಿತವಾದ ಹಸ್ತಪರಿವೇಷ್ಟಿತ(ಸುತ್ತುವರಿದ)ದ ಆರತಿಗಳು ಕಂಗೊಳಿಸಿದವು.

ಪರಮಭಕ್ತನ ಸಾಸಿರ ಕೆಯ್ಯ ಸೊಡರೀ
ಶ್ವರನ ಮಂಡೆಯ ಸುತ್ತಿಬರಲು
ಹರ ನೋಡಿ ಸ್ವಸ್ಥದೊಳಿರಲಂಜಿ ಭಸ್ಮಾ
ಸುರನ ಹಸ್ತಾಗ್ನಿಯ ನೆನೆದ ೩೩

ಪರಮಭಕ್ತನಾದ ಬಾಣಾಸುರನ ಸಾವಿರ ಕೈಗಳ ಸೊಡರು(ದೀಪ) ಈಶ್ವರನ ಮಂಡೆಯನ್ನು ಸುತ್ತಿ ಬರುವಾಗ ಈಶ್ವರ ಸ್ವಸ್ಥವಾಗಿರಲಂಜಿ ಭಸ್ಮಾಸುರನ ಹಸ್ತಾಗ್ನಿಯನ್ನು ನೆನೆದನು.

ವಿಭುವೆ ನೀ ಬೆದರಬೇಡನುತ ಮಂಡೆ ಮೇಲೆ
ಅಭಯ ಹಸ್ತವನಿಕ್ಕುವಂತೆ
ಸೊಬಗಿಡಿದಬ್ಜ ಪುಷ್ಪಂಗಳ ನಿಗಮ ದು
ರ್ಲಭನ ಮಸ್ತಕದೊಳೇರಿಸಿದ ೩೪

ಪ್ರಭುವೇ ನೀ ಭಯಗೊಳ್ಳದಿರು ಎಂದು ಅವನ ಮಂಡೆಯ ಮೇಲೆ ಅಭಯಹಸ್ತವನ್ನು ಇಕ್ಕುವಂತೆ, ಸುಂದರವಾದ ಕಮಲದ ಹೂಗಳನ್ನು ವೇದಗಳಿಗೆ ನಿಲುಕದ ಅಪ್ರಮೇಯನ ಮುಡಿಗೆ ಏರಿಸಿದನು(ಮುಡಿಸಿದನು).

ಆಲಿಗಳೆವೆಯಲುಗದೆ ಭಕುತಿಯಲಿ ತ್ರಿ
ಶೂಲಿಯ ಮೇಲೆ ಕಣ್ಮನವ
ಕೀಲಿಸಿದನು ಕೀಳದಂತೆ ಹಸ್ತದಿ ಜಪ
ಮಾಲೆಗಳನು ತುಡುಕಿದನು ೩೫

ಕಣ್ಣುಗಳ ರೆಪ್ಪೆ ಮಿಟುಕಿಸದೆ ಶಿವನ ಮೇಲೆ ಭಕ್ತಿಯಿಂದ ಕಣ್ಮನವನ್ನು ನೆಟ್ಟನು. ಅದು ಅಲ್ಲಿಂದ ಕೀಳದಂತೆ ಕೈಯಲ್ಲಿ ಜಪಮಣಿ ಮಾಲೆಯನ್ನು ಹಿಡಿದನು.

ಗಣಿಸಲನಂತ ವೇದಗಳಿಂಗೆ ನಿಲುಕದ
ಫಣಿಭೂಷಣ ದಿವ್ಯನಾಮ
ಎಣಿಸಲ್ಕೆ ಪರಮಭಕ್ತರಿಗೆ ಸಿದ್ಧಿಪಂತೆ
ಮಾಣಿಮಾಲೆ ಕರೆದೊಳೊಪ್ಪಿದವು ೩೬

ಗಣೆನೆಗೆ ತೆಗೆದುಕೊಂಡರೆ ವೇದಗಳಿಗೂ ನಿಲುಕದ ನಾಗಾಭರಣನ ದಿವ್ಯ ನಾಮ, ಎಣಿಕೆಗೆ ತೊಡಗಿದರೆ ಪರಮಭಕ್ತರಿಗೆ ಅದು ಸಿದ್ಧಿಸುವಂತೆ ಕೈಯಲ್ಲಿ ಜಪಮಣಿಮಾಲೆ ರಂಜಿಸಿತು.

ವದನದಿ ಕುಣಿವ ನಾಲಗೆ ನಟಿಸುವ ತುಟಿ
ಸದಮಳ ಮಂತ್ರ ಕೀರ್ತನದಿ
ಹೃದಯದೊಳೊಡೆದು ಮೂಡಿದ ಜ್ಞಾನದೃಷ್ಟಿ
ಗೊದಗಿತು ಪರಮಾತ್ಮ ನಾನು ೩೭

ಬಾಯಲ್ಲಿ ನರ್ತಿಸುವ ನಾಲಿಗೆ, ನಟಿಸುವ ತುಟಿ, ನಿರ್ಮಲ ಮಂತ್ರ ಕೀರ್ತನೆಯಿಂದ ಹೃದಯದಲ್ಲಿ ಒಡಮೂಡಿದ ಜ್ಞಾನದೃಷ್ಟಿಗೆ ಪರಮಾತ್ಮನ ನಾಮ ಒದಗಿಬಂದಿತು.

ಈತನೆ ಪರಮೇಶ್ವರನೆಂದು ತಿಳಿದು ತಾ
ನಾತನೊಳಾತ ತನ್ನೊಳಗೆ
ಏತರೊಳೆರವಿಲ್ಲದಿರ್ದರು ಬೀಜ ಭೂ
ಜಾತ ನ್ಯಾಯದಂದದಲಿ ೩೮

ಈತನೇ ಪರಮೇಶ್ವರನೆಂದು ತಿಳಿದು, ತಾನು ಆತನೊಳಗೆ, ಆತ ತನ್ನೊಳಗೆ ಎಂದು ಭಾವಿಸಿ, ಯಾವುದರಲ್ಲೂ ಭೇದವಾದ ಅಥವಾ ಅಂತರವಿಲ್ಲದೆ, ಇಬ್ಬರೂ ಇದ್ದರು– ಬೀಜವೃಕ್ಷ ನ್ಯಾಯದಂತೆ.

ಧ್ಯಾನದೊಳಿರ್ದ ಲೋಚನಯುಗಳದ ಬಿಚ್ಚಿ
ಆನಂದ ಮನದೊಳು ಪೆರ್ಚಿ
ದಾನವ ಪ್ರಭು ಶಂಬುವಿಭುವಿಂಗೆ ನಿಖಿಳ ನ
ವೀನ ಪುಷ್ಪವ ಮುಡಿಸಿದನು ೩೯

ಕಣ್ಣುಮುಚ್ಚಿ ಧ್ಯಾನದಲ್ಲಿದ್ದ ದಾನವ ಎರಡು ಕಣ್ಣುಗಳನ್ನು ಬಿಚ್ಚಿ, ಸಂತೋಷ ಮನಸ್ಸಿನಲ್ಲಿ ಹೆಚ್ಚಿ, ಶಂಭುಪ್ರಭುವಿಗೆ ಹೊಸ ಹೂಗಳನ್ನು ಮುಡಿಸಿದನು.

ದಪ್ಪಕಹರನಿಂಗೆ ನಿಖಿಳಾರತಿಯನು
ಒಪ್ಪಿಸಿದನು ಅಳ್ತಿಯಿಂದ
ಪುಷ್ಪವ ಮುಡಿಸುವ ಮುಡಿಸಿ ನಿವಾರಿಪ
ತಪ್ಪದೆ ಮರಳಿ ಪೂಜಿಸುವ ೪೦

ಮನ್ಮಥ ಮರ್ದನನಿಗೆ ಪ್ರೀಯಿಯಿಂದ ಸರ್ವ ಆರತಿಗಳನ್ನು ಒಪ್ಪಿಸಿದನು. ಹೂವನ್ನು ಮುಡಿಸುವನು, ಮುಡಿಸಿ ತೆಗೆಯುವನು, ತಪ್ಪದೆ ಮರಳಿ ಪೂಜಿಸುವನು.

ಕಳವೆಯೋದನ ಸೂಪ ಘೃತವಧಿ ಪತ್ರೊಡೆ
ಫಲ ಶಾಕ ಸೀಕರಣೆ ಸಾರು
ಪಲವಿಧ ಪರಮಾನ್ನ ಬಹುಭಕ್ಷ್ಯ ಭೋಜ್ಯವ
ಸಲೆ ಸಮರ್ಪಿಸಿದ ನೀಶ್ವರಗೆ ೪೧

ಈಶ್ವರನಿಗೆ ಕಳವೆಯೋದನ(ನೆಲ್ಲಕ್ಕಿ ಅನ್ನ), ಸೂಪ(ತೊವ್ವೆ), ಘೃತ(ತುಪ್ಪ) ದಧಿ(ಮೊಸರು) ಪತ್ರೊಡೆ(ಕೆಸುವಿನ ಎಲೆಯಿಂದ ಮಾಡಿದ ವಡೆ) ಫಲ(ಹಣ್ಣು) ಶಾಕ(ವ್ಯಂಜನ ಪದಾರ್ಥ) ಸೀಕರಣೆ(ಮಾವಿನಹಣ್ಣಿನಿಂದ ಮಾಡಿದ ಸಿಹಿಭಕ್ಷ್ಯ) ಹಲವಾರು ವಿಧದ ಪರಮಾನ್ನ(ಪಾಯಸ) ಮೊದಲಾದ ಭಕ್ಷ್ಯ ಭೋಜ್ಯಗಳನ್ನು ಸಮರ್ಪಿಸಿದನು.

ತಲೆವೆಲೆ ಪೂಗಪೋಡಿಯ ಕಪ್ಪುರದ ಬೆ
ಳ್ಳೆಲೆಗೆ ಚೂರ್ಣಾಂಕಿತಗೆಯ್ದು
ಲಲನೆಯರೊಬ್ಬುಳಿಗೆಯ್ದಿತ್ತ ವೀಳ್ಯವ
ಸಲೆ ಸಮರ್ಪಿಸಿದನೀಶ್ವರಗೆ ೪೨

ಉತ್ತಮ ಬೆಲೆಯ ಪೋಡಿಯಡಕೆ, ಕರ್ಪೂರ, ಬಿಳಿಎಲೆಗೆ ಸುಣ್ಣ ಹಚ್ಚಿ ಲಲನೆಯರು ತೆಕ್ಕೆಗೊಳಿಸಿ ಕೊಟ್ಟ ವೀಳ್ಯವನ್ನು ಈಶ್ವರನಿಗೆ ಸಮರ್ಪಿಸಿದನು.

ಪುಲಿದೊವಲುಡೆಯಂಗೆ ಪುನರಪಿ ರತ್ನ ಪ್ರ
ಜ್ವಲದಾರತಿಗಳನು ಬೆಳಗಿ
ಸಲಿಲಜ ಮಂದಾರ ಮಲ್ಲಿಗೆ ಪುಷ್ಪಾಂ
ಜಲಿಯ ಸಲಿಸಿದ ಮಹೋತ್ಸವದಿ ೪೩

ಹುಲಿದೊಗಲನ್ನು ಉಟ್ಟಂಥ ಶಿವನಿಗೆ ಮತ್ತೆ ಪ್ರಜ್ವಲ ಆರತಿಗಳನ್ನು ಬೆಳಗಿ, ಕಮಲ, ಮಂದಾರ, ಮಲ್ಲಿಗೆ ಹೂಗಳನ್ನು ಸಲ್ಲಿಸಿದನು.

ಅಸಮಾಕ್ಷಗಷ್ಟ ವಿಧಾರ್ಚನೆ ಸಹಿತ ಷೋ
ಡಶ ಮಹದುಪಚಾರಂಗೆಯ್ದು
ಒಸೆದೊಡರ್ಚಿದನೊಂದರ ಮೇಲೊಂದ ರಾ
ಜಸ ತಾಮಸಂಗಳನುಳಿದು ೪೪

ಮುಕ್ಕಣ್ಣನಿಗೆ ಅಷ್ಟ ವಿಧಾರ್ಚನೆ, ಷೋಡಶ ಉಪಚಾರಗಳನ್ನು ಮಾಡಿ, ಒಂದರ ನಂತರ ಒಂದನ್ನು ನೆರವೇರಿಸಿದ ರಾಜಸತಾಮಸಗಳನ್ನು ಬಿಟ್ಟು.

ಛತ್ರ ಚಾಮರ ಗಿಂಡಿ ಹಡಪ ಬಿಜ್ಜಣ ಪ
ವಿತ್ರ ಕಾಳಾಂಜಿ ಕಜ್ಜಲವ
ಚಿತ್ರ ಪಾವುಗೆ ಗೀತ ನೃತ್ಯಾದಿ ಬಾ
ಹತ್ತ ಸದ್ವಿನಿಯೋಗಗೆಯ್ದು ೪೫

ಛತ್ರಿ, ಚಾಮರ, ಗಿಂಡಿ, ಹಡಪ, ಬಿಜ್ಜಣ(ಬೀಸಣಿಗೆ)ಕಾಳಂಜಿ(ಪೀಕದಾನಿ) ಕಜ್ಜಲ(ಕಾಡಿಗೆ) ಹಾವುಗೆ(ಪಾದುಕೆ) ವಾದ್ಯಗೀತ ನೃತ್ಯಾದಿ ಎಪ್ಪತ್ತೆರಡು ನೇಮಕಗಳನ್ನು ನಿಯೋಜಿಸಿದ.

ಮೃಡನಂಘ್ರಿಯುಗಳವ ಮುಟ್ಟಿ ಪೂಜೆಯ ಮಾಡಿ
ಪೊಡಮಟ್ಟು ಪುಣ್ಯ ಕೀರ್ತನೆಯ
ಜಡವಿರಹಿತ ಜಾಣ ಬಾಣ ಕೈವಾರಿಸ
ತೊಡಗಿದ ಕೇಳಾಯತಾಕ್ಷಿ ೪೬

ಈಶ್ವರನ ಜೋಡಿಪಾದಗಳನ್ನು ಮುಟ್ಟಿ ಪೂಜೆ ಮಾಡಿ, ನಮಸ್ಕರಿಸಿ, ಚೈತನ್ಯಶೀಲ ಬಾಣ ಹೊಗಳತೊಡಗಿದನು.

ಅಮರೆಶ್ವರ ನಿನ್ನ ಪಾದ ಪೂಜೆಗೆ ಕರ
ಕಮಲ ಸಾಸಿರವ ಪಾಲಿಸಿದೆ
ಯಮಳ ಸಾಸಿರ ಚಕ್ಷು ಜಿಹ್ವೆಯಿದ್ದಡೆ ದೇವೋ
ತ್ತಮ ನಿನ್ನ ನೋಡಿ ಕೀರ್ತಿಪೆನು ೪೭

ಅಮರೇಶ್ವರ ನಿನ್ನ ಪಾದ ಪೂಜೆಗೆ ನನ್ನ ಸಾವಿರ ಕೈಗಳನ್ನು ಬಳಸಿದೆ. ಎರಡುಪಟ್ಟು ಸಾವಿರ ಕಣ್ಣು ನಾಲಿಗೆಗಳಿದ್ದರೆ, ನಿನ್ನನ್ನು ಕೀರ್ತಿಸುವೆನು.

ಏತರ ಪೆಂಪು ಬ್ರಹ್ಮಾದಿ ದೇವರು ವಿಷ್ಣು
ಭೀತಸ್ಥರಾಗಿ ಕಂಗೆಡಲು
ನಾಥ ನೀ ಧರಿಸಿ ಸರ್ವರ ಕಾದ ಸದ್ಯೋ
ಜಾತ ಮುಖಾನ್ವಿತ ಶರಣು ೪೮

ವಿಷ್ಣು ಬ್ರಹ್ಮಾದಿ ದೇವತೆಗಳೆಲ್ಲ ಭಯದಿಂದ ಕಂಗೆಡಲು, ಆಗ ಸದ್ಯೋಜಾತ ಮುಖಾನ್ವಿತನಾದ ನೀನು ಎಲ್ಲರನ್ನೂ ಕಾಯ್ದೆ.

ದೇವದೇವೋತ್ತಮ ದೇವಶಿಖಾಮಣಿ
ದೇವರೆಲ್ಲರ ಕಾವ ದೇವ
ದೇವ ನಿನಗೆ ಪ್ರತಿದೇವ ರಹಿತ ವಾಮ
ದೇವ ಮುಖಾನ್ವಿತ ಶರಣು ೪೯

ನೀನು ದೇವ ದೇವೋತ್ತಮ, ದೇವ ಶಿರೋರತ್ನ, ಎಲ್ಲ ದೇವರನ್ನು ಕಾಯುವ ದೇವ, ನಿನಗೆ ಪ್ರತಿದೇವ ಇಲ್ಲದ ವಾಮದೇವ ಮುಖಾನ್ವಿತ ಶರಣು

ಘೋರಸಂಸಾರ ವಿದೂರೀಕೃತ ಭಕ್ತ
ಘೋರ ದುರಿತ ಸಂಹಾರ
ಘೋರ ಪಾತಕ ಪ್ರಾಯಶ್ಚಿತ್ತ ನಾಮಾಂಕಿತಾ
ಘೋರ ಮುಖಾನ್ವಿತ ಶರಣು ೫೦

ಘೋರ ಸಂಸಾರವನ್ನು ದೂರ ಮಾಡಿದವನು, ಭಕ್ತರ ಘೋರ ಪಾಪವನ್ನು ಸಂಹಾರ ಮಾಡಿದವನು ಘೋರ ಪಾತಕ ಪ್ರಾಯಶ್ಚಿತ್ತ ನಾಮಾಂಕಿತನಾದ ಅಘೋರ ಮುಖಾನ್ವಿತ ಶರಣು.

ಪುರುಷಾಧಿಕ ಮಹಾಪುರುಷ ನಿರ್ಜರನಿಭ
ಪುರುಷಾಕೃತಿ ವಿಶ್ವರೂಪ
ಪುರುಷಾಂತರ್ಯಾಮಿ ಪುರುಷನೆನಿಪ ತ
ತ್ಪುರುಷ ಮುಖಾನ್ವಿತ ಶರಣು ೫೧

ಪುರುಷೋತ್ತಮ ಮಹಾಪುರುಷ, ದೇವಸದೃಶ ಪುರುಷಾಕೃತಿ, ವಿಶ್ವರೂಪ, ಪುರುಷಾಂತರ್ಯಾಮಿ ಪುರುಷನೆನಿಸುವ ತತ್ಪುರುಷ ಮುಖಾನ್ವಿತ ಶರಣು.

ಮಾನ್ಯನಹುದು ಮಹದೇವಾದಿಗಳೊಳು
ಶೂನ್ಯನಹುದು ಶ್ರುತಿಗಳಿಗೆ
ಧಾನ್ಯಮಾಲಿನಿ ಪ್ರಣೀತ ತಾತ್ಪರ್ಯ ಈ
ಶಾನ್ಯ ಮುಖಾನ್ವಿತ ಶರಣು ೩೨

ದೇವಾಧಿದೇವತೆಗಳಲ್ಲಿ ನೀನು ಮಾನ್ಯನು. ಶ್ರುತಿಗಳಿಗೆ ನೀನು ಶೂನ್ಯನು. ಧಾನ್ಯಮಾಲಿನಿ(ರಾವಣನ ಪತ್ನಿ) ಪ್ರಣೀತ ಉದ್ದೇಶದ ಈಶಾನ್ಯ ಮುಖಾನ್ವಿತ ಶರಣು.

ನಾಟಕಧರ ಹರ ಪರಮೇಶ್ವರ ಚಂದ್ರ
ಜೂಟ ಲಲಾಟಲೋಚನನೆ
ಬೇಟದಿ ಬೆಂದು ಬೆಂಡಾದ ಮಾಯಾವಿಯ
ಕೂಟ ಕೊಳ್ಳದ ಸ್ವಾಮಿ ಶರಣು ೩೩

ನರ್ತಿಸುವ ನಟರಾಜ, ಈಶ್ವರ, ಪರಮೇಶ್ವರ, ಜಡೆಯಲ್ಲಿ ಚಂದ್ರಧರ, ಹಣೆಗಣ್ಣ, ನಿನ್ನ ತಪಸ್ಸು ಕೆಡಿಸಿದ ಮನ್ಮಥನನ್ನು ಭಸ್ಮೀಭೂತನನ್ನಾಗಿ ಮಾಡಿ, ಆ ಮಾಯಾವಿಯ ಕೂಟ ಕೂಡದ ಸ್ವಾಮಿ ನಿನಗೆ ಶರಣು

ಮುಖಚತುಷ್ಟಯ ಸ್ತೋತ್ರ ಪಾತ್ರ ತ್ರಿಣೇತ್ರ ಷ
ಣ್ಮುಖ ಜನನೀ ಕಾಂತ ಶಾಂತ
ಮುಖಹಸ್ತಿ ನರದೇಹಿಕನ ಪಡೆದ ಪಂಚ
ಮುಖ ಪರಮೇಶ್ವರ ಶರಣು ೩೪

ಬ್ರಹ್ಮನ ಗೋತ್ರಕ್ಕೆ ಪಾತ್ರನಾದ ತ್ರೀನೇತ್ರನೇ, ಷಣ್ಮುಖನ ತಾಯಿಯ ಕಾಂತನೆ, ಆನೆಯ ರುಂಡ, ಮನುಷ್ಯನ ಮುಂಡ ಇರುವ ಮಗನಿಗೆ ತಂದೆಯಾದ ಪಂಚಾನನ ಪರಮೇಶ್ವರ ನಿನಗೆ ಶರಣು.

ಈಶ ಸೂರಿಯ ಕೋಟಿ ತೇಜಃ ಪುಂಜ ಬಿ
ಲೇಶ ಭೂಷಣ ದೋಷನಾಶ
ವಾಸರ ವಿಧಿ ಮುಖ್ಯ ತ್ರಿದಶವಂದಿತ ಮ
ಹೇಶ ಸರ್ವೋತ್ತಮ ಶರಣು ೩೫

ಕೋಟಿ ಸೂರ್ಯ ತೇಜ;ಪುಂಜ, ಸರ್ಪಾಭರಣ, ದೋಷನಾಶ,

ಇಂದ್ರಬ್ರಹ್ಮಾದಿ ತ್ರಿದಶವಂದಿತ,(ದೇವತೆಗಳಿಂದ ವಂದಿಸಿಕೊಳ್ಳುವವನು) ಮಹೇಶ, ಸರ್ವೋತ್ತಮ ನಿನಗೆ ಶರಣು.

ಆವಂಗೆ ಮೇರು ಕಾರ್ಮುಕ ಶೇಷ ಸಿಂಜಿನಿ
ಆವಂಗೆ ನಾರಾಯಣಾಸ್ತ್ರ
ಆವಂಗೆ ವಿಧುಮಿತ್ರ ಭೂರಥ ವಾಜಿ
ಆವಂಗೆ ಶ್ರುತಿಕರ್ತ ಸೂತ ೫೬

ಯಾರಿಗೆ ಮೇರುಪರ್ವ ಬಿಲ್ಲೋ, ಯಾರಿಗೆ ಆದಿಶೇಷ ಸಿಂಜಿನಿ(ಹೆದೆ)ಯೋ ಯಾರಿಗೆ ನಾರಾಯಣ ಅಸ್ತ್ರವೋ(ಬಾಣವೋ) ಯಾರಿಗೆ ಸೂರ್ಯಚಂದ್ರರು ಭೂರಥಕ್ಕೆ ಕುದುರೆಗಳೋ, ಯಾರಿಗೆ ಶ್ರುತಿಕರ್ತ(ವಿಷ್ಣು)ಸೂತನೋ ಅವನಿಗೆ ಶರಣು.

ಯೋಚನೆಗರಿದು ತನ್ಮಹಿಮಾಂಬೋನಿಧಿ
ಈಚೆಯೊಳಜ ಸುರಾದಿಗಳು
ಆಚೆಯ ತಡಿಯ ಸ್ವಪ್ನದಲಿ ಕಂಡರಿಯರು
ಲೋಚನತ್ರಿತಯ ಮೆಯ್ದೋರು ೫೭

ನಿನ್ನ ಮಹಿಮೆಯ ಸಾಗರ ಯೋಚನೆಗೆ ಅಸಾಧ್ಯ, ಈಚೆಕಡೆ ಬ್ರಹ್ಮಾದಿ ದೇವತೆಗಳು, ಆಚೆಕಡೆಯ ತಡಿ(ದಡ, ತೀರ)ಯನ್ನು ಕನಸಿನಲ್ಲೂ ಕಂಡರಿಯರು. ಮುಕ್ಕಣ್ಣನೇ ಮೈದೊರು.

ತಾಮಸ ಗುಣ ರಾಜಸಗುಣ ಸಾತ್ತ್ವಿಕಗುಣ
ಸ್ತೋಮ ಸಗುಣ ನಿರ್ಗುಣನೆ
ಶ್ರೀ ಮಹಾದೇವ ದೇವೇಶ ಸರ್ವಜ್ಞ ಶಿ
ರೋಮಣಿ ಎನಗೆ ಮೆಯ್ದೋರು ೫೮

ತಾಮಸ ರಾಜಸ ಸಾತ್ತ್ವಿಕ ಗುಣಸ್ತೋಮನೆ, ಸಗುಣ ನಿರ್ಗುಣನೇ, ಮಹಾದೇವ, ದೇವೇಶ, ಸರ್ವಜ್ಞ ಶಿರೋಮಣಿಯೇ ಎನಗೆ ಮೈದೋರು.

ತತ್ತ್ವವ ನುಡಿವ ಬ್ರಹ್ಮಾದಿ ಬ್ರಹ್ಮರೊಳಗೆ ಮ
ಹತ್ವವ ಮೆರೆಯೆ ಚಿತ್ತೈಸು

ತತ್ತ್ವವನರಿಯದ ಮೂಢನೊಳು ಕಿಂಚಿತು ಮ
ಹತ್ವವ ಮೆಯ್ದೋರಿಸೆನಗೆ ೫೯

ತತ್ತ್ವವನ್ನು (ಪರಮಸತ್ಯವನ್ನು) ನುಡಿವ ಬ್ರಹ್ಮಾದಿ ಬ್ರಹ್ಮರೊಡನೆ ಮಹತ್ವವನ್ನು ಮೆರೆಯಲು ಚಿತ್ತೈಸು, ತತ್ವವನರಿಯದ ನನ್ನಂಥ ಮೂಢನಿಗೆ ಕಿಂಚಿತ್ ಮಹತ್ವವನ್ನು ಮೈದೋರಿಸು.

ಒಂದೆರಡಲ್ಲ ತದ್ ಕಲ್ಯಾಣಗುಣಗಳ
ಚೆಂದದಿಂದರಿದು ಕೀರ್ತಿಪೊಡೆ
ವೃಂದಾರಕರಿಗಚ್ಚರಿ ನಿನ್ನ ಕರುಣದ
ಕಂದನೆಂದೆನಗೆ ಮೈದೋರು ೬೦

ನಿನ್ನ ಕಲ್ಯಾಣಗುಣಗಳನ್ನು ಅರಿತು ಕೀರ್ತಿಸಲು ದೇವತೆಗಳಿಗೆ ಅಚ್ಚರಿ. ನಿನ್ನ ಕರುಣೆಯ ಕಂದನಾದ  ನನಗೆ ಮೈದೋರು.

ಏಣಾಂಕಧರ ತನ್ನ ಭಕ್ತ ಕೀರ್ತಿಸುವ ಸು
ಜಾಣ ವಾಕ್ಯಂಗಳ ಕೇಳ್ದು
ಪ್ರಾಣಲಿಂಗದೊಳು ತಾನಾಗ ಮೆಯ್ದೋರಿದ
ಬಾಣಾಸುರನ ಕಣ್ಮನಕೆ ೬೧

ಚಂದ್ರಶೇಖರ ತನ್ನ ಭಕ್ತ ಕೀರ್ತಿಸುವ ಜಾಣ್ನುಡಿಗಳನ್ನು ಕೇಳಿ, ಬಾಣಸುರನ ಕಣ್ಮನಕ್ಕೆ ಕಾಣುವಂತೆ ಶಿವ ಪ್ರಾಣಲಿಂಗದಲ್ಲಿ ಮೈದೋರಿದ.

ರದನಚ್ಛವಿ ಮಿನುಗುವ ಚಕ್ಷು ದಶ ಪಂಚ
ವದನಚ್ಛವಿ ಜಟಾಗ್ರದಲಿ
ವಿಧು ನವ್ಯ ವಿಗ್ರಹ ಮಂದಾಕಿನಿಯ ಷ
ಟ್ಪದ ನವಿರ್ಮುಡಿಯ ತೋರಿಸಿದ ೬೨

ಹಲ್ಲುಗಳ ಕಾಂತಿ, ಮಿನುಗುವ ಹತ್ತು ಕಣ್ಣುಗಳು, ಐದು ಮುಖಗಳು, ಜಡೆಯ ತುದಿಯಲ್ಲಿ ಚಂದ್ರ, ಗಂಗೆಯ ದುಂಬಿಗುರುಳ  ತುರುಬನ್ನು ತೋರಿಸಿದ.

ಕಂಧರದೊಳಗೆ ಕಾಣಿಸುತಿರ್ಪ ವಿಷನಾಗ
ಬಂಧ ಬೂಷಣ ಕಳೇವರದಿ

ಕಂದರ್ಪ ಕೋಟಿ ಲಾವಣ್ಯ ಶ್ರೀಪದ ನಖ
ಗಂಧ ಬೀರಲಾಘ್ರಾಣಿಸಿದ ೬೩

ಕೊರಳಲ್ಲಿ ಕಾಣಿಸುತ್ತಿರುವ ವಿಷಸರ್ಪ ಭೂಷಣ ದೇಹದಲ್ಲಿ ಕೋಟಿ ಮನ್ಮಥರ ಲಾವಣ್ಯ ಹೊಂದಿದ ಶ್ರೀಪಾದ ನಖ( ಒಂದು ಬಗೆಯ ಸುಗಂಧದ್ರವ್ಯ) ಗಂಧವನ್ನು ಬೀರಿದಾಗ ಅದನ್ನು ಆಘ್ರಾಣಿಸಿದ.

ಇಂದೀವರ ಮಿತ್ರ ಮಯೂಖವಾಹ ಸ
ನ್ಮಂದಿರವಹ ಪದಾಂಬುಜದಿ
ಸಂಧಿಸಿ ನೇತ್ರಯುಗ್ಮದಿ ನೋಡಿ ನೊಸಲಿಟ್ಟು
ವಂದಿಸಿದನು ಮಹೋತ್ಸವದಿ ೬೪

ಕೆನ್ನೈದಿಲೆಯ ಬಾಂಧವನಾದ ಚಂದ್ರನ ಕಿರಣದ ಮಂದಿರದಂಥ ಪಾದಕಮಲದಲ್ಲಿ ಸಂಧಿಸಿ ಜೋಡಿ ಕಣ್ಣುಗಳಿಂದ ನೋಡಿ ಹಣೆಯಿಟ್ಟು ವಂದಿಸಿದನು.

ನಿಗಮಾತೀತ ನಿರ್ಜರವ್ರಾತನಾಥ ಪ
ನ್ನಗ ಭೂಷ ದೋಷ ವಿನಾಶ
ನೆಗಹಿದ ಖಳನ ಬಾಹುಬಲ ನಿರ್ಮಲ ಸ
ನ್ಮೊಗ ನೋಡಿ ಶಿವ ಮುದ್ದಿಸಿದನು ೬೫

ವೇದಗಳಿಗೆ ನಿಲುಕದವನು, ದೇವತೆಗಳ ಒಡೆಯನು, ಸರ್ಪಾಭರಣನು, ದೋಷನಾಶನು ಆದ ಶಿವ ಬಾಣನ ಎತ್ತಿದ ಕೈ ನಿರ್ಮಲ ಮುಖವನ್ನು ನೋಡಿ ಮುದ್ದಿಸಿದನು.

ಮಗನೆ ಮೆಚ್ಚಿದೆ ಬೇಡು ಬೇಡು ಬೇಕಾದುದ
ನಗಣಿತವೀವೆನೆಂದೆನಲು
ಮೃಗಧರಶೇಖರ ನೀನಿತ್ತ ಭಾಗ್ಯ ಮೂ
ಜಗದೊಳೊರ್ವರಿಗಳವಲ್ಲ ೬೬

ಮಗನೆ ಮೆಚ್ಚಿದೆ, ನಿನಗೆ ಬೇಕಾದುದನ್ನು ಬೇಡು, ಅಧಿಕವಾಗಿ ಕೊಡುವೆನು ಎಂದೆನಲು, ಚಂದ್ರಶೇಖರ ನೀನು ಕೊಟ್ಟವ ಭಾಗ್ಯ ಮೂರು ಲೋಕಗಳಲ್ಲಿ ಒಬ್ಬರಿಗೂ ಸಾಧ್ಯವಿಲ್ಲ.

ವಿಲಸಿತವಾಗಿ ಕಣ್ಗೆಸೆದಿರ್ದ ರೌಪ್ಯಾ
ಚಲವಾಸವ ತಿರಸ್ಕರಿಸಿ
ಅಲಸದೆ ಬಂದು ತಾತ್ಪರದಿ ಎನ್ನ ಬಾ
ಗಿಲನು ಕಾಯುತಿರುವೆ ದೇವ ೬೭

ಸುಂದರವಾಗಿ ಕಂಗೊಳಿಸುವ ರಜತಾಚಲ(ಬೆಳ್ಳಿಬೆಟ್ಟ) ವಾಸವನ್ನು ತ್ಯಜಿಸಿ, ಆಲಸ್ಯವಿಲ್ಲದೆ ಬಂದು ನನ್ನ ಬಾಗಿಲನ್ನು ಕಾಯುತ್ತಿರುವೆ ದೇವ.

ಭುಜಗಾಭರಣ ತವಶರಣಂಗೆ ಸಾಸಿರ
ಭುಜವ್ರಜವನು ಪಾಲಿಸಿದೆ
ಭುಜಬಲದಿಂದೆನ್ನೊಡನೆ ಕಾದುವನೊಬ್ಬ
ಭುಜಜಲಾಧಿಪನ ಪಾಲಿಪುದು ೬೮

ಭುಜಗಾಭರಣ(ಸರ್ಪಾಭರಣ) ನಿನ್ನ ಶರಣನಿಗೆ ಸಾವಿರ ಭುಜವ್ರಜ(ತೋಳುಗಳ ಸಮೂಹ) ವನ್ನು ಪಾಲಿಸಿದೆ (ಕರುಣಿಸಿ ನೀಡಿದೆ) . ಭುಜಬಲದಿಂದ ನನ್ನೊಡನೆ ಯುದ್ದ ಮಾಡುವ ಭುಜಬಲಾಧಿಪನನ್ನು ದಯವಿಟ್ಟು ದಯಪಾಲಿಸು.

ಸೊಲ್ಲಿದು ಹಸನಾದುದು ಕಂದ ಕೇಳ್ನಿನ್ನ
ಗೆಲ್ಲುವರುಂಟು ಇನ್ನೇನು
ನಿಲ್ಲು ಕಾತರಿಸದಿರಾಹವದೊಳು ಕಾದಿ
ಕೊಲ್ಲುವ ಕೃಷ್ಣ ಬಂದಪನು ೬೯

ನಿನ್ನ ಮಾತು ಶುದ್ಧವಾದುದು, ಕಂದ ನಿನ್ನನ್ನು ಗೆಲ್ಲುವವರುಂಟು, ಇನ್ನು ಕಾತರಿಸದೆ ಇರು. ಯುದ್ಧದಲ್ಲಿ ನಿನ್ನೊಡನೆ ಕಾದು ಕೊಲ್ಲುವ ಕೃಷ್ಣ ಬರುವನು.

ಆದೊಡಿಂದಾನು ಸಂತಸವಾಂತೆ ನಿನ್ನ
ಪಾದಪಂಕಜ ಸಮ್ಮುಖದಿ
ಕಾದಲುಜ್ಜುಗವೆತ್ತು ಕಡಿದಾಡುವೆ ಕೃಷ್ಣ
ಯಾದವ ಬಲಗೂಡಿ ಬರಲಿ ೭೦

ಇಂದು ನಾನು ಸಂತೋಷಗೊಂಡೆ, ನಿನ್ನ ಪಾದಕಮಲ ಸಮ್ಮುಖದಲ್ಲಿ ಯುದ್ಧದಲ್ಲಿ ಕಾದಾಡುವೆನು. ಕೃಷ್ಣನು ಯಾದವ ಬಲಗೂಡಿ ಬರಲಿ.

ಮಾರಧ್ವಂಸಿ ಮದೀಯ ಕಾಳಗವೆಷ್ಟು
ದೂರವಿನ್ನೆಂದಿಗೆಂದೆನಲು
ಘೋರನೆ ಬಕ್ಕು ನಿನ್ನಯ ಚಿತ್ರ ರಥದ ಮ
ಯೂರ ಟೆಕ್ಕೆಯ ಮುರಿದೊಡನೆ ೭೧

ಮನ್ಮಥ ಧ್ವಂಸಿಯಾದ ಶಿವನೆ, ನನ್ನ ಯುದ್ಧದ ದಿನ ಎಂದು? ಎಷ್ಟು ದೂರವಿದೆ? ಎಂದು ಕೇಳಲು ನಿನ್ನರಥದ ನವಿಲು ಧ್ವಜ ಮುರಿದು ಬಿದ್ದೊಡನೆ ಆದಿನ ಅಲಕ್ಕನೆ ಬರುವುದು.

ಭೂಪ ನಿನ್ನಭಿಮತವಾಯ್ತು ಬಿಡಾರಕೆ
ಪೋಪೆವೆ ನಾವು ಪೇಳೆನಲು
ಚಾಪಳತ್ವದೊಳುಪಚರಿಸಿ ಪಾರ್ವತಿಯ ಪ್ರಾ
ಣೋಪನ ಬೀಳ್ಕೊಟ್ಟನಾಗ ೭೨

ಭೂಪ ನಿನ್ನ ಅಂತರಂಗದ ಆಶಯ ಸಿದ್ದಿಸಿತು. ಇನ್ನು ನನ್ನ ಬಿಡಾರಕ್ಕೆ ಹೋಗಬಹುದೆ ಎಂದು ಕೇಳಲು ಬಾಣಾಸುರ ಚಪಲದಿಂದುಪಚರಿಸಿ ಪಾರ್ವತಿಪ್ರಿಯನನ್ನು ಬೀಳ್ಕೊಟ್ಟ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೭೩

ವರ ಮೋಹನ ತರಂಗಿಣಿಯೆಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರು ಇರುವತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೨೨. ಬಾಣಾಸುರನ ಭೋಗಲೀಲೆ

ಪಠಿಸಿದ ಕೃತಿಯಲ್ಲ ಕೃತಿವೇಳಲಮೃತದ
ಘುಟಿಕೆಯಂತಿದೆ ನಿನ್ನ ಕವಿತೆ
ಘಟಿಸಿತು ನರಕಂಠೀರವ ಕರುಣದಿ
ತುಟಿಬಿಚ್ಚಿ ಪೇಳು ಮೇಲ್ಗತೆಯ ೧

ನಿನ್ನದು ಕಂಠಪಾಠ ಮಾಡಿ ಹೇಳಿದ ಕೃತಿಯಲ್ಲ. ನಿನ್ನ ಕಾವ್ಯ ಅಮೃತದ ಗುಳಿಗೆಯಂತಿದೆ. ನರಸಿಂಹನ ಕೃಪಾಕಟಾಕ್ಷದಿಂದ ಅದು ನಿನಗೆ ಸಿದ್ಧಿಸಿತು. ತುಟಿಬಿಚ್ಚಿ ಹೇಳು, ಮುಂದಿನ ಮೇಲ್ಗತೆಯನ್ನು

ಸುಮನಸದಿಂದ ಕೇಳಾದಡೆ ಸುಜ್ಞಾನ
ಪ್ರಮದೆ ನಿನ್ನ ಸ್ವರ್ಣ ಕರ್ಣ
ಯಮಳ ತಾಟಂಕಮಾಣಿಕವೆನೆ ಪೇಳುವೆ
ರಮಣೀಯವಾದ ಸತ್ಕೃತಿಯ ೨

ಸುಜ್ಞಾನ ವಧೂಟಿ ಸುಮನಸ್ಸಿನಿಂದ ಕೇಳು, ನಿನ್ನ ಸ್ವರ್ಣ ವರ್ಣದ ಕರ್ಣದಲ್ಲಿ ಶೋಭಿಸುವ ರತ್ನದ ಕರ್ಣಾಭರಣ ಎನ್ನುವಂತೆ ಸುಂದರ ಸತ್ಕೃತಿಯನ್ನು ಹೇಳುವೆನು.

ವಸ್ತ್ರದೊಳವತರಿಸಿದ ಲಿಂಗವ ಬಾಣ
ಮಸ್ತಕದಲಿ ಕಾವುಗೊಳಿಸಿ
ಸೊಸ್ತದೊಳೂಟವ ಮಾಡಿ ಕೈದೊಳೆವನ್ನ
ಮಸ್ತಮಿಸಿದ ಹಗಲೊಡೆಯ ೩

ಕೈವಸ್ತ್ರದಲ್ಲಿ ಅವತರಿಸಿದ ಲಿಂಗವನ್ನು ಬಾಣ ತಲೆಯ ಮೇಲೆ ಸಂಸ್ಥಾಪಿಸಿ ಸ್ವಸ್ಥವಾಗಿ ಊಟ ಮಾಡುವಷ್ಟರಲ್ಲಿ ಹಗಲೊಡೆಯನಾದ ಸೂರ್ಯ ಅಸ್ತಮಿಸಿದನು.

ಕಾಲವನರಿದು ಕರ್ಮವ ತಿದ್ದಿ ಪುನರಪಿ
ಶೀಲದಿ ಶಿವಪೂಜೆಗೆಯ್ದು
ಮೇಲಾಭರಣ ಮಾಲ್ಯಾನುಲೇಪನ ತಾಂ
ಬೂಲವ ಕೈಕೊಂಡನೊಲಿದು ೪

ಹೊತ್ತನ್ನು ಅರಿತು, ಪುನಃ ಶೀಲದಿಂದ ಶಿವಪೂಜೆ ಮಾಡಿ, ಮೇಲಾಭರಣ, ಮಾಲೆ ಅನುಲೇಪನದ ತಾಂಬೂಲವನ್ನು ಪ್ರೀತಿಯಿಂದ ಕೈಗೊಂಡನು.

ರಾಜಾಕೃತಿಮುಖಿಯರು ರಮ್ಯವಡೆದ ಸ
ರೋಜ ಸುಗಂಧಿಯರು ಸಹಿತ
ಭೋಜನ ಶಾಲೆಯಿಂ ಪೊರಮಟ್ಟರು ಸೂರ್‍ಯ
ತೇಜದಿ ಪಂಜು ರಂಜಿಸಲು ೫

ಚಂದ್ರಮುಖಿಯರು ಕಮಲಸುಗಂಧಿಯರು ಸಹಿತ ಭೋಜನಶಾಲೆಯಿಂದ ಹೊರಹೊರಟರು, ಸೂರ್ಯ ತೇಜಸ್ಸಿನಿಂದ ಪಂಜು ರಂಜಿಸಲು

ಪಚ್ಚೆಯ ಪಾವುಗೆಯವಧಾರು ಜೀಯಯೆ
ದೆಚ್ಚರು ಪೇಳ್ವ ಪೆಣ್ದನಿಗೆ
ಉಚ್ಚವವಡೆದು ಬಾಣಾಸುರ ಹೊಕ್ಕನು
ಸ್ವಚ್ಛದಿ ಮಣಿಸೆಜ್ಜೆವನೆಯ ೬

ಪಚ್ಚೆಯ ಪಾದುಕೆ, ಎಚ್ಚರಿಕೆ ಜೀಯ ಎಂದು ಜಾಗೃತಿ ಹೇಳುವ ಹೆಣ್ಣುಗಳ ದನಿಗೆ ಉತ್ಸಾಹಗೊಂಡು ಬಾಣಾಸುರ ರತ್ನದ ಶಯ್ಯಾಗೃಹವನ್ನು ಹೊಕ್ಕನು.

ಭಿತ್ತಿಯೊಳು ಪೊರಮಟ್ಟ ಚೆಲುವಿನ ಮದನಕೈ
ಯೆತ್ತಿದ ಪವಳದಂಡೆಗಳು
ಕೆತ್ತಿದ ನಿಖಿಳ ಮಾಣಿಕ ಪಚ್ಚೆ ಮೇಲ್ಕಟ್ಟು
ಮುತ್ತಿನ ಕುಚ್ಚು ರಂಜಿಸಿತು ೭

ಗೋಡೆಯಲ್ಲಿ ಹೊರಚಾಚಿದ ಚೆಲುವಿನ ಕೆತ್ತನೆಯ ಸುಂದರ ವಿಗ್ರಹ ಎತ್ತಿರುವ ಹವಳದ ದಂಡೆ(ಹಾರ)ಗಳು, ಕೆತ್ತಿದ ಸಕಲ ಮಾಣಿಕ, ಪಚ್ಚೆ ಮೇಲ್ಕಟ್ಟು, ಮುತ್ತಿನ ಕುಚ್ಚು, ರಂಜಿಸಿದವು.

ಕುಂದ ಮಲ್ಲಿಗೆ ಜಾಜಿ ಸಂಪಿಗೆ ಸುರಹೊನ್ನೆ
ನಂದಿ ಪಾದರಿ ಪಾರಿಜಾತ
ಗಂಧ ಸಂಯುಕ್ತ ನಾನಾ ಪುಷ್ಪ ಮಾಲೆಗ
ಳಿಂದ ಚೆನ್ನಾದುದಾ ನಿಲಯ ೮

ಕುಂದ(ಕೋಲುಮಲ್ಲಿಗೆ), ಮಲ್ಲಿಗೆ, ಜಾಜಿ, ಸಂಪಿಗೆ, ಸುರಹೊನ್ನೆ, ನಂದಿ(ನಂದಿಬಟ್ಟಲು ಹೂ) ಪಾದರಿ, ಪಾರಿಜಾತ ಮೊದಲಾದ ಸುಗಂಧಯುಕ್ತ ಮಾಲೆಗಳಿಂದ ಮನೆ ಆಲಂಕೃತವಾಯಿತು.

ಇತ್ತೆರದೊಳು ನಿಂದಿಹ ಜೀವರನ್ನದ
ಪುತ್ತಳಿಗಳು ಸೊಡರ್ವಿಡಿದು
ಮುತ್ತಡಸಿದ ಮಹದುಪಕರಣಗಳಿಂದ
ಚಿತ್ತೈಸಿದುವಲ್ಲಲ್ಲಿ ೯

ಎರಡೂ ಕಡೆ ನಿಂತಿರುವ ಜೀವರನ್ನದ (ಕಿರಣದ ಹೊಳಪಿನಿಂದ ಸ್ಪಂದಿಸುವ ರತ್ನ) ಪ್ರತಿಮೆಗಳು ದೀಪ ಹಿಡಿದು ಮುತ್ತು ಕೀಲಿಸಿದ ಉಪಕರಣಗಳಿಂದ ಕಂಗೊಳಿಸಿದವು.

ರುದ್ರ ಪಾರ್ವತಿ ವಿಘ್ನರಾಜ ಷಣ್ಮುಖ ವೀರ
ಭದ್ರ ನಂದೀಶ ಮುಂತಾದ
ಚಿದ್ರೂಪ ಪ್ರಮಥಾದಿಗಳ ವಿಗ್ರಹದ ಸ
ಮುದ್ರವ ನೋಡಿ ಹಿಗ್ಗಿದನು ೧೦

ರುದ್ರ, ಪಾರ್ವತಿ, ಗಣೇಶ, ಷಣ್ಮುಖ, ವೀರಭದ್ರ, ನಂದೀಶ ಮುಂತಾದ ಚಿದ್ರೂಪದ ಶಿವನ ಪರಿವಾರ ಮೊದಲಾದವರ ವಿಗ್ರಹ ಸಮುದ್ರವನ್ನು ನೋಡಿ ಹಿಗ್ಗಿದನು.

ಕೆಲಸಿತನದ ವಿದ್ಯವ ವಿಶ್ವಕರ್ಮಗೆ
ಕಲಿಸದಾಚಾರ್ಯ ತಾನೆನಿಸಿ
ವಿಲಸಿತ ರತ್ನ ನಿರ್ಮಿತ ದಿವ್ಯ ಪ್ರತಿಮೆಯ
ನಿಲಿಸಿದ ಮಯನ ಕೀರ್ತಿಸಿದ ೧೧

ಕೆತ್ತನೆ ಕೆಲಸ ವಿದ್ಯೆಯನ್ನು ದೇವ ಶಿಲ್ಪಿಗೆ ಕಲಿಸಿದ ಆಚಾರ್ಯ ತಾನೆಂದು, ಸುಂದರವಾದ ರತ್ನಖಚಿತ ಪ್ರತಿಮೆಯನ್ನು ನಿಲ್ಲಿಸಿದ ಮಯನನ್ನು ಹೊಗಳಿದ.

ದಪ್ಪಕ ರತಿಯ ವಸಂತಕೇಳಿಯ ಚಿತ್ರ
ವಿಪ್ಪುದ ನೋಡಿ ಸಂತಸದಿ
ಚಪ್ಪರ ಮಂಚದ ಮೇಲೆ ಕುಂಕುಮದಲ
ಸುಪ್ಪತ್ತಿಗೆಯೊಳು ಮಂಡಿಸಿದ ೧೨

ಮನ್ಮಥರತಿಯರ ರತಿಕ್ರೀಡಾ ಚಿತ್ರವಿರುವುದನ್ನು ನೋಡಿ, ಸಂತಸದಿಂದ ಮಂಚದ ಮೇಲಿನ ಸುಪ್ಪತ್ತಿಗೆಯಲ್ಲಿ ಮಂಡಿಸಿದನು.

ಕರಿಗಮನೆಯರು ತಂದರು ರತ್ನಮಯ ಹೊನ್ನ
ಹರಿವಾಣದುಂಬಿದಾರತಿಯ
ತಿರುಹಿ ನಿವ್ವಾಳಿಸಿ ಚಾಂಗು ಭಲಾ ಎಂದು
ಸಿರಿವೆತ್ತು ನಿಂದರಿಕ್ಕೆಲದಿ ೧೩

ಗಜಗಮನೆಯರು ರತ್ನಮಯ ಚಿನ್ನದ ಹರಿವಾಣದ ಆರತಿಯನ್ನು ನಿವಾಳಿಸಿ ಚಾಂಗು ಭಲಾ ಎಂದು ಘೋಷಿಸಿ ಎರಡೂ ಕಡೆ ನಿಂತರು.

ನೋಡಿದ ವರ ವಧೂಟಿಯರ ನುಣ್ಮೊಗವ ಮಾ
ತಾಡಿದ ವಿನಯೋಪಚಾರದಿ
ಬೇಡಿದ ವಸ್ತ್ರಭೂಷಣ ಪರಿಮಳವಿತ್ತು
ಮಾಡಿದ ಮನಕೆ ಸಂತಸವ ೧೪

ಸುಂದರಿಯರ ನುಣುಪಾದ ಮುಖಗಳನ್ನು ನೋಡಿದ, ವಿನಯದಿಂದ ಮಾತಾಡಿದ, ಬೇಡಿದ ವಸ್ತ್ರಭೂಷಣಗಳನ್ನು ಕೊಟ್ಟು ಅವರ ಮನಸ್ಸಿಗೆ ಹರ್ಷವನ್ನು ನೀಡಿದ.

ಇಳೆಯಾಣ್ಮನ ಮನದಿಂಗಿತವರಿತು ಹೊಂ
ಜೆಳೆವಿಡಿದಬ್ಜ ನೇತ್ರೆಯರು
ಎಳೆವೆಣ್ಣುಗಳ ಚಿತ್ತೈಸೆಂದು ಸತಿಯರ
ನಿಳಯಕೆ ಬೀಳ್ಕೊಟ್ಟರೊಲಿದು ೧೫

ದೊರೆಯ ಇಂಗಿತವನ್ನರಿತು ಹೊನ್ನ ಕಂಬಿ ಹಿಡಿದ ಕಮಲಾಕ್ಷಿಯರು, ಎಳೆಹೆಣ್ಣುಗಳನ್ನು ಪತ್ನಿಯರ ಮನೆಗೆ ಕರೆದೊಯ್ದರು.

ರಾಣಿಯರೋಲಗ ಹರಿದುದು ಪೆಣ್ಮಂಡೆ
ಮಾಣಿಕವಹ ಪಟ್ಟದರಸಿ
ಚೂಣಿ ನೋಟದ ಸೊಬಗಿಂದ ಪೂಗೋಲನ
ಕಾಣಿಸಿದಳು ಕಾಂತನೆಡೆಗೆ ೧೬

ರಾಣಿಯರ ದರ್ಬಾರು ಮುಗಿದು ಪಟ್ಟಣದ ರಾಣಿ ಮುಂಚೂಣಿ ನೋಟದ ಸೊಬಗಿನಿಂದ ಕಾಂತನೆದೆಯಲ್ಲಿ ಹೂಬಾಣನ ಕೈಚಳಕದಿಂದ ಕಚಗುಳಿ ಇಡುವಂತೆ ಮಾಡಿದಳು.

ಪುಟ್ಟಿದ ಕಾಮೋದ್ರೇಕದಿಂ ಮೈಝುಮ್ಮ
ದಟ್ಟಿ ತಕ್ಕೈಸಿಕೊಂಡವಳ
ಬಟ್ಟ ಬಲ್ಮೊಲೆಗಳ ಪಿಡಿದು ಪೆರ್ದೊಡೆಯಲಿ
ಪಟ್ಟಿಸಿಕೊಂಡ ಪದ್ಮಿನಿಯ ೧೭

ಕಾಮೋದ್ರೇಕದಿಂದ ಬಾಣನ ಮೈನವಿರೆದ್ದು, ಪಟ್ಟದರಸಿಯನ್ನು ತಬ್ಬಿಕೊಂಡು ಅವಳ ದುಂಡುಮೊಲೆಗಳನ್ನು ಹಿಡಿದು ತೊಡೆಯ ಮೇಲೆ ಮಲಗಿಸಿಕೊಂಡನು.

ಕಾತುರವೆಂತುಟೊ ಕ್ರಮಕವನೊಡೆದ ಪೋಳು
ವ್ರಾತದಿ ಕರ್ಪೂರವೆರಸಿ
ಶ್ವೇತಪರ್ಣದ ಚೂರ್ಣಿತ ಗುಳಿಗೆಯ ಪ್ರಾಣ
ನಾಥನ ಬಾಯ್ಗಿಟ್ಟಳೊಲಿದು ೧೮

ಕಾತುರ ಎಷ್ಟೆಂದು ಹೇಳುವುದು?ಪೋಡಿ ಅಡಿಕೆಗೆ ಕರ್ಪೂರ ಸೇರಿಸಿ, ಬಿಳಿ ಎಲೆಗೆ ಸುಣ್ಣ ಹಚ್ಚಿ ಸುರಳಿ ಮಾಡಿ ಪ್ರಾಣನಾಥನ ಬಾಯ್ಗಿಟ್ಟಳು.

ಝುಣಮಣಿಸದೆ ಜಾಣಶೇಖರ ರುದ್ರಾ
ರ್ಪಣವೆಂದು ಸವಿದ ತಾಂಬೂಲವ
ಗುಣನಿಧಿಯವಳ ಬಾಯೊಳು ಬಾಯನಿಕ್ಕಿ ಚುಂ
ಬನವ ಮಾಡಿದ ಮನೋತ್ಸಹದಿ ೧೯

ಜಾಣನಾದ ಬಾಣ, 'ತಣಮಣ' ಎಂದು ತಡಮಾಡದೆ ಶಿವಾರ್ಪಣವೆಂದು ತಾಂಬೂಲವನ್ನು ಜಗಿದು, ಕೂಡಲೇ ರಾಣಿಯ ಬಾಯಿಗೆ ಬಾಯಿಕ್ಕಿ ಚುಂಬಿಸಿದ ಉತ್ಸುಕತೆಯಿಂದ.

ಏನ ಬಣ್ಣಿಸ ಬಪ್ಪುದು ಸತ್ಪುರುಷ ನಿ
ಧಾನ ತನ್ನ ತಳಿರ್ದುಟಿಯಲಿ
ಪಾನದ ರುಚಿದೋರಿ ಪ್ರಮದೆಯ ಮರ್ಮ
ಸ್ಥಾನಗಳೆಡೆಯ ಚುಂಬಿಸಿದ ೨೦

ತನ್ನ ಚಿಗುರುದುಟಿಯಲ್ಲಿ ಪಾನದ ರುಚಿದೋರಿ ಪ್ರಮದೆಯ ಮರ್ಮಸ್ಥಾನಗಳನ್ನು ಚುಂಬಿಸಿದ.

ಮರಿದುಂಬಿಗುರುಳ ಮಾನಿನಿಯ ಕಣ್ ಬೆಂಡೆದ್ದು
ನಿರಿಬಿಚ್ಚಿ ದಿವ್ಯದೇಹದೊಳು
ತುರುಗಿದ ರೋಮಾಂಚನದಿಂದೆ ಕಾಮ ರಸ
ಸುರಿವವಳ ಜೊತೆ ಕ್ರೀಡಿಸಿದ ೨೧

ದುಂಬಿಗುರುಳ ಮಾನಿನಿಯ ಕಣ್ ಬೆಂಡೆದ್ದು, ನಿರಿಬಿಚ್ಚಿ ಬತ್ತಲೆ ದೇಹ ರೋಮಾಂಚನಗೊಂಡು ಕಾಮರಸ ಸುರಿಯುವವಳ ಜೊತೆ ಕ್ರೀಡಿಸಿದ.

ರತಿಯಾದಿ ಮಧ್ಯಾಂತ ಯೋಗದಿ ಬಾಣ ದಂ
ಪತಿ ಮನಮೂರ್ಛೆಯ ತಾಳ್ದು
ಮತಿ ಭ್ರಷ್ಟರಾಗದೆ ಚಿತ್ತವಿದ್ದುದು ಪಾ
ರ್ವತಿಯ ಪ್ರಾಣೇಶನಂಘ್ರಿಯೊಳು ೨೨

ರತಿಕ್ರೀಡೆಯ ಆದಿಮಧ್ಯಾಂತ ಯೋಗದಲ್ಲಿ ದಂಪತಿಗಳ ಮನ ಮೂರ್ಛೆ ಹೋದರೂ, ಮತಿ ಭ್ರಷ್ಟರಾಗದೆ ಶಿವನ ಪಾದಗಳಲ್ಲಿ ಅವರ ಚಿತ್ತ ನೆಲೆಸಿತ್ತು.

ಯೋಗನಿದ್ರೆಯೊಳೊರಗಿದ್ದರು ಪರಮ ಸಂ
ಭೋಗದ ಸೊಕ್ಕು ಮೈವಿಳಿದು
ಸೌಗಂಧ ಸಲಿಲದಿ ಕೈಕಾಲು ತೊಳೆದನು
ರಾಗ ದಂಪತಿಗಳೊಪ್ಪಿದರು ೨೩

ಸಂಭೋಗದ ಅಮಲೇರಿ ಮೈಮರೆತು ಮಲಗಿದ್ದ ಅವರು ಅಮಲಿಳಿದು ಸುಗಂಧ ಜಲದಲ್ಲಿ ಕೈಕಾಲು ತೊಳೆದು, ಅನುರಾಗ ದಂಪತಿಗಳು ಕಂಗೊಳಿಸಿದರು.

ಸೊಡರೇಳ್ಗೆಯಲಿ ಸುವರ್ಣ ವರ್ಣದಿ ರಮ್ಯ
ವಡೆದ ಸತ್ಕುಚ ಕಂಕುಳೆದೆಯ
ಬಿಡೆಯವಿಲ್ಲದೆ ಬಿನದಿಸಿ ನೋಡಿದ ಪ್ರಾಣ
ದೊಡೆಯಳ ಸಿರಿಮುದ್ದು ಮೊಗವ ೨೪

ದೀಪದ ಬೆಳಕಿನಲ್ಲಿ ಹೊಂಬಣ್ಣದಿಂದ ಅಂದವಾಗಿ ಕಾಣುತ್ತಿದ್ದ ಕುಚ, ಕಂಕುಳು, ಎದೆಗಳನ್ನು ಸಂಕೋಚವಿಲ್ಲದೆ ವಿನೋದದಿಂದ ಸವರಿ, ಪ್ರಾಣಕಾಂತೆಯ ಮುದ್ದುಮೊಗವನ್ನು ನೋಡಿದನು.

ಪಾರಿವದಂದದಿ ಗುಟುಕುದಂಬುಲವಿತ್ತು
ಪೀರಿದ ತೊಂಡೆವಣ್ದುಟಿಯ
ಹೋರಿದ ಮೈಯ ಸೊನೆ ಬೆಮರಾಂತುದಮಲ ಕ
ಸ್ತೂರಿ ಸೌಗಂಧ ಕಂಪೆಸೆಯೆ ೨೫

ಪಾರಿವಾಳದ ರೀತಿಯಲ್ಲಿ ಗುಟುಕುದಂಬುಲವನ್ನು ಕೊಟ್ಟು ತೊಂಡೆ ಹಣ್ಣಿನ ತುಟಿಯನ್ನು ಹೀರಿದ. ಹೋರಾಡಿದ ಮೈಯಲ್ಲಿ ಸೊನೆಬೆವರು ಮೂಡಿತು ಕಸ್ತೂರಿ ಸುಗಂಧದ ಕಂಪುಸೂಸುತ್ತಾ.

ಭೋಗಿಸಿ ದೇಹ ಬೆಂಡಾದರುದ್ದೀಪನ
ವಾಗುವುದಾಗ ನೀನೆದ್ದು
ಭಾಗೀರಥಿದಾಳ್ದನ ಪೂಜೆಯ ಮಾಡೆಂದು
ಕೂಗಿತು ವರ ತಾಮ್ರಚೂಡ ೨೬

ಭೋಗಿಸಿ ಬೆಂಡಾದ ದೇಹ ಯಾವಾಗ ಉದ್ದೀಪನಗೊಳ್ಳುವುದೋ ಆಗ ನೀನೆದ್ದು ಗಂಗಾಧರನ ಪೂಜೆ ಮಾಡೆಂದು ಸೂಚಿಸುವಂತೆ ಹುಂಜ ಕೊಕ್ಕೋಕೋ ಕೂಗಿತು.

ಕೇಳಿದಳಾತ್ಮೇಶ್ವರನ ಭೋಗಿಪ ಗೆಲ್ಲ
ಗೂಳಿಯ ತಡೆಯಲೋಸುಗ
ಕೋಳಿಯ ಸೃಜಿಸಬೇಕೆಂದು ನಾಲ್ಮೊಗಂಗೆ
ಪೇಳಿದ ಧರ್ಮಿಷ್ಠನಾರು ೨೭

ಮನದನ್ನನ ಭೋಗಿಸುವ ಗೆಲುವಿನ ಗೂಳಿಯನ್ನು ತಡೆಯಲೋಸುಗ

ಕೋಳಿಯನ್ನು ಸೃಷ್ಟಿಸಬೇಕೆಂದು ಚತುರ್ಮುಖನಿಗೆ ಹೇಳಿದ ಧರ್ಮಿಷ್ಠನಾರು ಎಂದು ಬಾಣನ ರಾಣಿ ಕುಟುಕಿದಳು.

ಕಾಲಜ್ಞಾನವನರಿದು ಸುರತದುತ್ತುಂಗ
ಕಾಲದಿ ಬೊಬ್ಬೆ ಹಾಕಬಹುದೆ
ಕಾಲಾಯುಧ ಕಲಹದಿ ತಾಮ್ರಚೂಡ ನಿ
ರ್ಮೂಲವಾಗಲೆಂದಳಲಿದಳು ೨೮

ಕಾಲಜ್ಞಾನವನ್ನರಿತು ಸಂಭೋಗದ ಉತ್ತುಂಗ ಹಂತದಲ್ಲಿ ಹೀಗೆ ಬೊಬ್ಬೆ ಎಬ್ಬಿಸಬಹುದೆ? ಕಾಲಾಯುಧ ಕದನದಲ್ಲಿ (ಕಾಲಿಗೆ ಕತ್ತಿಕಟ್ಟಿ ಆಡಿಸುವ ಕೋಳಿಜಗಳ) ಹುಂಜ ನಿರ್ಮೂಲನವಾಗಲೆಂದು ಶಪಿಸಿದಳು.

ಸುಖವೇನು ಲಕ್ಷ್ಯ ಸುರಾರ್ಚಿತ ಪದ ಪದ್ಮ
ಬಕುತಿಯ ಮಾಳ್ಪೆನೇಳೆನುತ
ಅಕಳಂಕ ಜಾಣ ಬಾಣಾಸುರ ತನ್ವಿಯ
ಮುಖವನಜವನಲರಿಸಿದ ೨೯

ಸುಖ ಯಾವ ಲೆಕ್ಕ? ದೇವತೆಗಳಿಂದ ಪೂಜೆಗೊಂಡ ಪಾದಕಮಲ ಭಕ್ತಿಯನ್ನು ಮಾಡುವೆನು ಮೇಲೇಳು ಎಂದು ಹೇಳಿ, ಜಾಣ ಬಾಣ ಕೋಮಲಾಂಗಿ ಮನದನ್ನೆಯ ಮುಖ ಕಮಲವನ್ನು ಅರಳಿಸಿದನು.

ದಪ್ಪಗನರ್ಧಾಂಗಿಯ ರೂಪಿಗಿಮ್ಮಡಿ
ಯಪ್ಪ ಸ್ಫುರದ್ರೂಪಿ ಕೇಳು
ಪುಪ್ಪ ಸುಗಂಧಗಂಧಿಯರು ಬಂದರು ಬಾಣ
ನುಪ್ಪವಡವ ಪಾಡಲೋಸ್ಕರ ೩೦

ಮನ್ಮಥನ ಅರ್ಧಾಂಗಿಯಾದ ರತಿಯ ರೂಪಿಗಿಂತಲೂ ಇಮ್ಮಡಿ ರೂಪವತಿಯಾಗಿರುವ ಮನದನ್ನೆ ಕೇಳು, ಬಾಣನಿಗೆ ಉಪ್ಪವಡವನ್ನು (ನಿದ್ರೆಯಿಂದ ಮೇಲೆಬ್ಬಿಸುವ ಹಾಡು) ಹಾಡಲು ಪುಷ್ಪಗಂಧಿಯರು ಬಂದರು.

ಮೇಳವ ಮಾಡಿ ದಂಡಿಗೆವಿಡಿದು ಶುದ್ಧ
ಸಾಳಗ ಸಂಕೀರ್ಣ ರಾಗದಿ
ಆಳಾಪ ಠಾಯೆ ನೇಮಗಳಿಂದ ನೂರೆಂಟು
ತಾಳಗೀತಗಳ ಪಾಡಿದರು ೩೧

ಮೇಳದವರು ದಂಡಿಗೆ ಹಿಡಿದು ಶುದ್ಧ, ಸಾಳಗ, ಸಂಕೀರ್ಣ ರಾಗಗಳಲ್ಲಿ ಆಲಾಪ, ತಾಯೆ, ನೇಮಗಳಿಂದ ನೂರಾರು ತಾಳಗೀತಗಳನ್ನು ಹಾಡಿದರು.

ನಾರಾಯಣಿ ದೇಶಾಕ್ಷಿ ಗುರ್ಜರಿ ದೇವಗಾಂ
ಧಾರಿ ಗುಂಡಕ್ರಿಯ ವಸಂತ
ಆರಭಿ ಸಾಮಂತ ಮಲಹರಿಯಿಂದ ಕೈ
ವಾರಿಸಿ ಖಳನ ಪಾಡಿದರು ೩೨

ನಾರಾಯಣಿ, ದೇಶಾಕ್ಷಿ, ಗುರ್ಜರಿ, ದೇವಗಾಂಧಾರಿ, ಗುಂಡಕ್ರಿಯ, ವಸಂತ, ಆರಭಿ, ಸಾಮಂತ, ಮಲಹರಿ ರಾಗಗಳಿಂದ ಖಳನನ್ನು ಹೊಗಳಿ ಹಾಡಿದರು.

ಬಲಿಗರ್ಭ ಪರಿಪೂರ್ಣ ಚಂದ್ರ ದೈತ್ಯೇಂದ್ರ
ಪುಲಿ ಚರ್ಮಾಂಬರ ಸದ್ಭಕ್ತ
ಲಲಿತಾಂಗಿಯ ತೋಳ ತೆಕ್ಕೆಯ ಹಕ್ಕೆಯಿಂ
ದೊಲಿದೇಳೆಂದು ಪಾಡಿದರು ೩೩

ಬಲಿಚಕ್ರವರ್ತಿಯ ಪೂರ್ಣಚಂದ್ರ ತೇಜಸ್ವಿ ಪುತ್ರ, ದೈತ್ಯೇಂದ್ರ, ಹುಲಿಚರ್ಮಾಂಬರನಾದ ಈಶ್ವರನ ಸದ್ಭಕ್ತ, ಲಲಿತಾಂಗಿಯ ತೋಳ ತೆಕ್ಕೆಯ ಹಕ್ಕೆ (ನೆಲೆ, ಮಲಗುದಾಣ)ಯಿಂದ ಮೇಲೇಳು ಎಂದು ಒಲಿದು ಹಾಡಿದರು.

ಅಷ್ಟದಿಗಿಭ ಮನೋಭಂಗ ನಿಶಾಚರಾ
ಭೀಷ್ಟ ಸಾಸಿರ ಭುಜೋತ್ತುಂಗ
ಷಷ್ಠಾಸ್ಯಪಿತ ಪದಾಬ್ಜಭೃಂಗ ಶಿವಲಿಂಗ
ನಿಷ್ಠ ಏಳೆಂದು ಪಾಡಿದರು ೩೪

ಅಷ್ಟ ದಿಗ್ಗಜಗಳ ಮನೋಭಂಗನೆ, ಸಾಸಿರ, ಭುಜೋತ್ತುಂಗನೆ, ಷಣ್ಮುಖ ಪಿತ ಪದಕಮಲ ಭೃಂಗನೆ, ಶಿವಲಿಂಗನಿಷ್ಠನೇ ಮೇಲೇಳೆಂದು ಪಾಡಿದರು.

ಅಧ್ಯಕ್ಷನಾಗಿ ಪಾಡುವ ಗಾನ ತನ್ಮಯ
ವಿದ್ಯಾರ್ಥಿಗಳ ನಿರ್ಘೋಷ
ಉದ್ಯಾನವರೆ ಮೊಳಗಿದವು ಶೋಣಿತಪುರ
ಮಧ್ಯದ ನಿಖಿಳ ದೇಗುಲದಿ ೩೫

ಶೋಣಿತಪುರದ ಎಲ್ಲ ದೇವಸ್ಥಾನಗಳಲ್ಲು ಹಾಡುವ ಗಾನತನ್ಮಯ ವಿದ್ಯಾರ್ಥಿಗಳ ಗಟ್ಟಿಯಾದ ಧ್ವನಿ, ಹೊರಹೊರಟ ಹರೆ(ಉದ್ಯಾನವರೆ)ಗಳ ಸದ್ದು ಮೊಳಗಿದವು.

ಈಶನಾಲಯದ ವಾದ್ಯ ಕೇಳ್ದು ಜ್ಯೋತಿ ಪ್ರ
ಕಾಶನೂಳಿಗವ ಮಾಳ್ಪುದಕೆ
ನೇಸರ ಬಟ್ಟು ಮೂಡಿತು ಘಳಿಹರ ಜ್ಯೋ
ತೀಶರ ಡಂಗುರ ಮೊಳಗಿದುವು ೩೬

ದೇವಾಲಯಗಳ ವಾದ್ಯವನ್ನು ಕೇಳಿ, ದೇವೋತ್ತಮನ ಸೇವೆ ಮಾಡುವುದಕ್ಕೆ ಪೂರ್ವ ದಿಗಂತದ ಲಲಾಟದಲ್ಲಿ ಕುಂಕುಮ ಬೊಟ್ಟನಿಟ್ಟಂತೆ ನೇಸರು ಮೂಡಿತು ಗಡಿಯಾರ ಜ್ಯೋತಿಷ್ಕರ ಡಂಗುರ ಮೊಳಗಿದವು.

ತುರುಗಿ ತುಂಬಿದ ಕತ್ತಲೆ ಭಾಸ್ಕರಗಂಜಿ
ಮುರಿದೋಡಿ ಬನವ ಹೊಕ್ಕಂತೆ
ಮರುಗಿದುವೆಳ ಜೊನ್ನವಕ್ಕಿ ಕಾಂತಾರದಿ
ಗರಿಗಣ್ಣ ವಿಹಗ ಕೂಗಿದುವು. ೩೭

ತುಂಬಿದ ತೂತುಗತ್ತಲೆ ಸೂರ್ಯನಿಗಂಜಿ ಓಡೋಡಿ ಕಾಡು ಸೇರಿದಂತೆ ಎಳೆಯ ಜೊನ್ನವಕ್ಕಿ(ಚಕೋರ ಪಕ್ಷಿ)ಗಳು ಮರುಗಿದವು. ಆದರೆ ಗರಿಗಣ್ಣ ವಿಹಗ(ನವಿಲುಪಕ್ಷಿ)ಗಳು ಕೂಗಿದವು.

ಮೃದನುಡಿಗಳ ರಾಜಕೀರ ಕೋಕಿಲಸ್ವರ
ಪುದು ಗೂಡಿದಂತೆ ಗಾನೆಯರ
ಮಧುರಾಳಾಪಗೀತವ ಕೇಳ್ದು ಖಳರಾಯ
ಚದುರ ಮೆಮುರಿದೆದ್ದನಾಗ ೩೮

ಅರಗಿಳಿಯ ಮೃದು ನುಡಿಗಳ, ಕೋಗಿಲೆಯ ಸುಮಧುರ ಸ್ವರದ ಬೆಸುಗೆಯಾದಂತೆ ಗಾಯಕಿಯರ ಮಧುರಾಲಾಪ ಗೀತವನ್ನು ಕೇಳಿ ಚದುರ ಖಳರಾಯ ಆಗ ಮೈಮುರಿದೆದ್ದನು.

ಗಂಗಾಜೂಟ ಲಲಾಟಾಕ್ಷ ಜಯವೆನುತ
ಅಂಗಯ್ಯ ನಿಖಿಲಾಂಗುಲಿಯ
ಮಂಗಳ ವೃಷಭ ಮುದ್ರೆಯಿಂ ನಮಿಸಿದಾಗ
ಭೃಂಗಕುಂತಲೆಯನೀಕ್ಷಿಸಿದ ೩೯

ಗಂಗಾಧರ, ನಿಟಿಲಾಕ್ಷ ಜಯವೆಂದು ಹೇಳುತ್ತ ಅಂಗೈಯ ಎಲ್ಲ ಬೆರಳುಗಳನ್ನು ವೃಷಭಮುದ್ರೆಯಲ್ಲಿ ಬಾಗಿಸಿದಾಗ ದುಂಬಿಗುರುಳ ತರಳೆಯನ್ನು ನೋಡಿದ.

ಅಚ್ಚ ಕಪಿಲ ವರ್ಣದ ಪಶು ಖುರ ಶೃಂಗ
ಬೆಚ್ಚಂತೆ ಸ್ವರ್ಣ ಕೋಹಳ
ವಚ್ಚ ಸಹಿತ ಬಂದಿರೆ ಪುಚ್ಚವ ನೋಡಿ
ಉಚ್ಚವಿಸಿದ ಬಾಣ ಜಾಣ ೪೦

ಗೊರಸು ಮತ್ತು ಕೊಂಬಿಗೆ ಬೆಸೆದಂತೆ ಚಿನ್ನದ ಅಣಸುಳ್ಳ, ಅಚ್ಚ ಕಂದುಬಣ್ಣದ ಹಸು, ವತ್ಸ(ಕರು)ಸಮೇತ ಬಂದಿರಲು ಹಿಂಭಾಗ ನೋಡಿ ಬಾಣ ಉತ್ಸವಿಸಿದನು.

ಜಲಮಲಗಳೆದು ಶೌಚದ ಮಾಡಿ ರನ್ನ ಬ
ಚ್ಚಲನೇರಿ ಮಿಂದು ಸೌಖ್ಯದಲಿ
ವಿಲಸಿತ ದೇವಾಂಗ ವಸ್ತ್ರವನುಟ್ಟು ಹೊಂ
ಗೆಲಸದಾವುಗೆಯ ಮೆಟ್ಟಿದನು ೪೧

ಮಲಮೂತ್ರ ವಿಸರ್ಜನೆ ಮಾಡಿ, ರನ್ನ ಬಚ್ಚಲನ್ನೇರಿ ಸ್ನಾನ ಮಾಡಿ, ಸುಂದರ ರೇಷ್ಮೆ ವಸ್ತ್ರವನ್ನು ಉಟ್ಟು, ಹೊಂಗೆಲಸದ ಪಾದುಕೆಯನ್ನು ಮೆಟ್ಟಿದನು.

ರಾಜಾರ್ಕಶಿಖಿನೇತ್ರನ ಭಕ್ತವರ ದೇವ
ಪೂಜೆಯ ನಿಳಯವನು ಹೊಕ್ಕು
ಓಜೆಯೊಳೆಡೆ ಮಾಡಿದ ಗದ್ದುಗೆಯಲ್ಲಿ
ತೇಜೋಮಯನು ಮಂಡಿಸಿದ ೪೨

ರಾಜಾರ್ಕ ಶಿಖಿ ನೇತ್ರನ(ಚಂದ್ರ ಸೂರ್ಯ ಅಗ್ನಿಗಣ್ಣ ಶಿವನ) ಭಕ್ತನಾದ ಬಾಣ ದೇವರಮನೆಯನ್ನು ಹೊಕ್ಕು, ಕ್ರಮವಾಗಿ ಇರಿಸಿದ ಗದ್ದುಗೆಯಲ್ಲಿ ಮಂಡಿಸಿದನು.

ಜಾತಿರುದ್ರಾಕ್ಷಿಯ ಮಣಿಮಾಲೆದಳೆದು ವಿ
ಭೂತಿಯ ಧರಿಸಿ ಹಸ್ತದಲಿ
ಜ್ಯೋತಿರ್ಲಿಂಗ ಪಿಡಿದಭಿಷೇಕಗೈದು ವಿ
ಭೂತಿ ಗಂಧಾಕ್ಷತೆಯಿಟ್ಟನು. ೪೩

ಜಾತಿರುದ್ರಾಕ್ಷಿಯ (ಶ್ರೇಷ್ಠ ರುದ್ರಾಕ್ಷಿಯ) ಮಣಿಮಾಲೆಯನ್ನು ತೊಟ್ಟು, ವಿಭೂತಿಯನ್ನು ಧರಿಸಿ, ಅಂಗೈಯಲ್ಲಿ ಜ್ಯೋತಿರ್ಲಿಂಗವನ್ನು ಹಿಡಿದು ಅಭಿಷೇಕ ಮಾಡಿ ವಿಭೂತಿ ಗಂಧ ಅಕ್ಷತೆಗಳನ್ನು ಇಟ್ಟನು.

ಚೆಂಗಣಿಗಿಲೆ ಸೇವಂತಿಗೆ ಕತ್ತುರಿ
ಹಿಂಗಾರ ಮುಡಿವಾಳ ದವನ
ಮಂಗಳ ತುಳಸಿ ಮೇಣ್ ಬಿಲ್ವಪತ್ರವ ಶಿವ
ಲಿಂಗಾರ್ಪಿತವ ಮಾಡಿದನು ೪೪

ಕೆಂಪುಕಣಗಿಲೆ, ಸೇವಂತಿಗೆ, ಕಸ್ತೂರಿ, ಹಿಂಗಾರ(ಮುಸುಕು ಹೊಡೆದ ಅಡಕೆಯ ಹೊಂಬಾಳೆ), ಮುಡಿವಾಳ(ಪರಿಮಳಯುಕ್ತ ಬೇರು),ದವನ (ಪರಿಮಳಯುಕ್ತ ಸಸ್ಯ), ತುಳಸಿ ಮತ್ತು ಬಿಲ್ವ ಪತ್ರೆಯನ್ನು ಶಿವಲಿಂಗಕ್ಕೆ ಮುಡಿಸಿದನು.

ಹೊತ್ತಿಸಿದೇಕಾರತಿ ಪಂಚಾರತಿ ಕಡ್ಡಿ
ಬತ್ತಿ ನೀಲಾಂಜನವಲಗೆ
ಮತ್ತೆ ನಾನಾ ವಾದ್ಯ ರಭಸದಿಂ ಮೊಳಗ
ಲೆತ್ತಿದನು ಮಹದಾರತಿಯ ೪೫

ಏಕಾರತಿ, ಪಂಚಾರತಿ, ಊದುಬತ್ತಿ, ದೀಪದಲಗೆಗಳನ್ನು ಹೊತ್ತಿಸಿ, ನಾನಾ ವಾದ್ಯ ಸದ್ದಿನೊಡನೆ ಮಹದಾರತಿಯ ನೆತ್ತಿದನು.

ಧೂಪ ದೀಪಾರತಿ ತಾಂಬೂಲ ನೈವೇದ್ಯ
ಶ್ರೀಪರಮೇಶಗರ್ಪಿಸಿದ
ಅ ಪಾರ ಮಹಿಮನ ವಸ್ತ್ರದೊಳಡಗಿಸಿ
ಸ್ಥಾಪನೆಗೈದ ಮಸ್ತಕದಿ. ೪೬

ಧೂಪ, ದೀಪ, ಆರತಿ, ತಾಂಬೂಲ, ನೈವೇದ್ಯಗಳನ್ನು ಪರಮೇಶ್ವರನಿಗೆ ಅರ್ಪಿಸಿ, ಅಪಾರ ಮಹಿಮನನ್ನು ವಸ್ತ್ರದಲ್ಲಿ ಅಡಗಿಸಿ ಮಸ್ತಕದಲ್ಲಿ ಸ್ಥಾಪನೆ ಮಾಡಿದನು.

ಕಾವನೆಂದರೆ ಕೊಲ್ವ ಕೊಲ್ವನೆಂದರೆ ಮತ್ತೆ
ಕಾವನಂಘ್ರಿಯ ಪೂಜೆಗೆಯ್ದು
ದೇವಪೂಜೆಯ ಸದನದಿಂ ಪೊರಮಟ್ಟು
ಚಾವಡಿ ಗೈತಂದ ಮುದದಿ ೪೭

ಕಾಯುವನೆಂದರೆ ಕೊಲ್ಲುವ, ಕೊಲ್ಲುವನೆಂದರೆ ಕಾಯುವ ಅಪ್ರಮೇಯನ ಅಂಘ್ರಿ(ಪಾದ)ಯನ್ನು ಪೂಜಿಸಿ, ದೇವರ ಮನೆಯಿಂದ ಹೊರಟು, ಸಭಾಮಂಟಪಕ್ಕೆ ಬಂದನು.

ಅದೊ ಬಂದ ರಾಯನೆಂದೆನೆ ಕೇಳ್ದು ಮನ್ನೆಯ
ರೆದೆಗೆಟ್ಟು ಚಾವಡಿಯೊಳಗೆ
ಮದಗಜಯೂಥ ಕಂಠೀರವ ಬರೆ ಕಂಡು
ಗದಗದಿಪಂತೆ ಬೆಚ್ಚಿದರು ೪೮

ಅವನು ಬರುವ ಸುದ್ದಿ ಕೇಳಿ, ಮಾನ್ಯರೆಲ್ಲ ಭಯಗೊಂಡು, ಮದಿಸಿದ ಆನೆಗಳಿಗೆ ಸಿಂಹದೋಪಾದಿ ಇರುವ ಬಾಣ ಓಲಗ ಶಾಲೆಗೆ ಬಂದದ್ದನ್ನು ಕಂಡು ಬೆಚ್ಚಿದರು.

ದಾನಮಂಟಪ ಸಿಂಹಾಸನದಲಿ ಬಂದು
ದಾನವಾಧೀಶ ಮಂಡಿಸಿದ
ದಾನಪಾತ್ರರ ಬರ ಹೇಳಲುವಿಬುಧರ ಪ್ರ
ಧಾನ ಸಂದೋಹವೈತಂದಿತು ೪೯

ದಾನವಾಧೀಶ ದಾನಮಂಟಪದ ಸಿಂಹಾಸನದಲ್ಲಿ ಕುಳಿತು ದಾನಪಾತ್ರರ ಬರಹೇಳಲು, ಪ್ರಧಾನ ವಿದ್ವಾಂಸರ ಸಮೂಹ ಅಲ್ಲಿಗೆ ಬಂದಿತು.

ಯಾಗ ಪೂರ್ಣಾಹುತಿಯನು ಮಾಡಿ ವರ ಹವಿ
ರ್ಭಾಗದಂಗಾರ ಕಜ್ಜಳವ
ರಾಗದಿ ಪೌರೋಹಿತರ್ತಂದು ತನ್ಮಂತ್ರ
ಯೋಗದಿ ನೊಸಲಿಗಿಕ್ಕಿದರು ೫೦

ಪುರೋಹಿತರು ಯಜ್ಞಕ್ಕೆ ಪೂರ್ಣಾಹುತಿಯನ್ನು ನೀಡಿ ಹವಿರ್ಭಾಗ(ಬೆಂಕಿಗೆ ಅರ್ಪಿಸುವ ಹಾಲುತುಪ್ಪ ಇತ್ಯಾದಿ)ದ ಇದ್ದಿಲು ಕಪ್ಪನ್ನು ತಂದು ಮಂತ್ರಪಠನ ಮಾಡುತ್ತಾ ಬಾಣನ ಹಣೆಗಿಟ್ಟರು.

ವೇದ ಶಾಸ್ತ್ರಾಗಮ ಸಂಪನ್ನರಾಶೀ
ರ್ವಾದ ಮಂತ್ರಾಕ್ಷತೆಯ
ಭೂಧವಗಿತ್ತು ಮಂಡೆಯ ಮೇಲೆ ಚೆಲ್ಲಿದೊ
ಡಾದುವನೇಕ ರಾಶಿಗಳು ೫೧

ವೇದ ಶಾಸ್ತ್ರಾಗಮ ಸಂಪನ್ನರು ಆಶೀರ್ವಾದದ ಮಂತ್ರಾಕ್ಷತೆಯನ್ನು ರಾಜನಿಗೆ ಕೊಟ್ಟು ತಲೆಯ ಮೇಲೆ ಚೆಲ್ಲಿದಾಗ ಆದುವು ಅನೇಕ ರಾಶಿಗಳು.

ಚಿಂದಿಯ ತೆಗೆದು ಕೌಂಕುಳೊಳಿಟ್ಟು ನಿಟಿಲದೊ
ಳೊಂದಿದ ತ್ರೈಪುಂಡ್ರ ದ್ವಿಜರು
ಬಂದರು ತಾಕು ತಾಕುಗಳಲ್ಲಿ ಕಳುಹುವೊ
ಡೆಂದಿಗು ತೀರದೆಂಬಂತೆ ೫೨

ತುಂಡು ಬಟ್ಟೆಯನ್ನು ಕಂಕುಳಲ್ಲಿಟ್ಟುಕೊಂಡು, ಹಣೆಯಲ್ಲಿ ಮೂರುನಾಮ ಧರಿಸಿದ ಶ್ರೀವೈಷ್ಣವ ಬ್ರಾಹ್ಮಣರು ಗುಂಪು ಗುಂಪುಗಳಲ್ಲಿ ಬಂದರು, ಕಳಿಸಲು ಎಂದಿಗೂ ತೀರದಂತೆ.

ಜಿತ ಪಾಠದಿಂದೋದುವ ಕರಣಿಕ ಪುರೋ
ಹಿತ ವಾಕ್ಯದಿಂದ ಯೋಗ್ಯರಿಗೆ
ಶತಸಾಸಿರ ಲಕ್ಷಕೋಟಿ ಗೋದಾನವ
ಮಿತಿ ಮಾಡಿ ಧಾರೆಯನೆರೆದ ೫೩

ಕರಣಿಕ ಪುರೋಹಿತರ ಮಾತಿನ ಮೇರೆಗೆ ಕಂಠಪಾಠ ಮಾಡಿಕೊಂಡು ಪಠಿಸುವ ಯೋಗ್ಯರಿಗೆ ನೂರು ಸಾವಿರ ಲಕ್ಷಕೋಟಿ ಗೋದಾನವನ್ನು ಧಾರೆ ಎರೆದನು.

ನೋಡಲು ವೇದಶಾಸ್ತ್ರಾಗಮ ನಿಪುಣರ್ಗೆ
ಷೋಡಶ ದಾನವನಿತ್ತು
ನಾಡಾಡಿ ದ್ವಿಜರಿಗೆ ವಿತ್ತವ ಮತ್ತಾರ
ಬೇಡದಂತಿತ್ತು ಬೀಳ್ಕೊಟ್ಟ ೫೪

ವೇದಶಾಸ್ತ್ರಗಮ ಪರಿಣತರಿಗೆ ಷೋಡಶ ದಾನ(ಗೋವು, ಭೂಮಿ, ವಸ್ತ್ರ, ಆಭರಣ, ಛತ್ರ, ಚಾಮರ, ಹಾಸಿಗೆ, ಬೀಸಣಿಗೆ, ಸಾಲಗ್ರಾಮ, ಧನ, ಧಾನ್ಯ,

ದೀಪ, ಪಾದುಕೆ, ಆಜ್ಯ, ಕನ್ಯೆ, ಎಂಬ ಹದಿನಾರು ದಾನಗಳು) ವನ್ನು ಕೊಟ್ಟು, ಸಾಮಾನ್ಯ ಬ್ರಾಹ್ಮಣರಿಗೆ ಹಣವನ್ನು ಮತ್ತಾರ ಬಳಿಯೂ ಬೇಡದಷ್ಟು ಕೊಟ್ಟು ಬೀಳ್ಕೊಟ್ಟ.

ಹೊನ್ನ ಮೊಟ್ಟೆಯ ಹೊತ್ತು ವಿಪ್ರ ದಾರಿದ್ರ್ಯ ವಿ
ಚ್ಛಿನ್ನವಾಯ್ತಾ ಸಮಯದಲಿ
ಸನ್ನದ್ಧರಾಗಿ ಕುಂಭಾಂಡನ ಕಂಡರು ಛ
ಪ್ಪನ್ನ ದೇಶದ ರಾಯರುಗಳು ೫೫

ಚಿನ್ನದ ಮೂಟೆ ಹೊತ್ತು ಬ್ರಾಹ್ಮಣರ ದಾರಿದ್ರ್ಯ ಚುಪ್ಪಾನುಚೂರಾಯಿತು. ಛಪ್ಪನ್ನ ದೇಶದ ರಾಜರು ಕುಂಭಾಂಡನನ್ನು ಕಂಡರು.

ಹೆದ್ದೊರೆಗಳು ಕೈಗಾಣಿಕೆಗಳಿತ್ತಡ್ಡ
ಬಿದ್ದರು ಬಿಂಕವನು ಬಿಸುಟು
ಎದ್ದರು ಬಿನ್ನಹಗೆಯ್ದೆಡಬಲದಿ ನಿಂ
ತಿದ್ದರು ಕುಂಭಾಂಡ ಸಹಿತ ೫೬

ಹೆದ್ದೊರೆಗಳು(ಹಿರಿಯ ದೊರೆಗಳು)ಕೈ ಕಾಣಿಕೆಗಳನ್ನು ಕೊಟ್ಟು ಬಿಂಕವನ್ನು ಬಿಟ್ಟು, ಅಡ್ಡಬಿದ್ದರು. ಬಿನ್ನಹ ಮಾಡಿ ಎದ್ದರು. ಕುಂಭಾಂಡ ಎಡಬಲದಲ್ಲಿ ನಿಂತರು ಸಹಿತ.

ನೆಟ್ಟನೆ ಪರಮ ಪ್ರಧಾನ ಮನ್ನೆಯರ ಬೀ
ಳ್ಕೊಟ್ಟ ಚಾವಡಿಗೆ ಪೋಗೆನುತ
ಪಟ್ಟದ ರಾಣಿಯರುಗಳಿಗೊಡ್ಡೋಲಗ
ಗೊಟ್ಟನಂತಃಪುರದೊಳಗೆ ೫೭

ಪ್ರಧಾನ ಮನ್ನೆಯರನ್ನು ಓಲಗಶಾಲೆಗೆ ಹೋಗಿರೆಂದು ಬೀಳ್ಕೊಟ್ಟ. ಅಂತಃಪುರದಲ್ಲಿ ಪಟ್ಟದರಾಣಿಯರಿಗೆ ಒಡ್ಡೋಲಗ ಕೊಟ್ಟ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳಿನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೫೮

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದವರನ್ನು ಸೂರ್ಯ ಚಂದ್ರರು ಇರುವ ತನಕ ಲಕ್ಷ್ಮೀಕಾಂತ ಕೃಪೆಯಿಟ್ಟು ರಕ್ಷಿಸುವನು.

## ೨೩. ಉಷಾದೇವಿಯ ಶೃಂಗಾರ

ಗುಟ್ಟಡರದೆ ಕಾದ ಚಿಲುಪಾಲು ಮಕ್ಷಿಕೋ
ಚ್ಛಿಷ್ಟವಲ್ಲದ ಜೇನುತುಪ್ಪ
ಕಟ್ಟುಬೀಳದ ಸಕ್ಕರೆಗಿಂತ ಸವಿವಾತ
ನೆಟ್ಟನೆ ಪೇಳ್ವುದೆನ್ನೊಡನೆ ೧

ಗುಟ್ಟಡರದ (ಗುಪ್ತ ಹೊಡೆಯದ, ದುರ್ವಾಸನೆ ಹೊಡೆಯದ) ಚಿಲುಪಾಲು(ಕಾದಕೆನೆಹಾಲು), ನೊಣದ ಎಂಜಲಲ್ಲದ ಜೇನುತುಪ್ಪ, ಕಟ್ಟು(ನೀರು, ಉದಾಹರಣೆಗೆ ಬೇಳೆಕಟ್ಟು, ಹುಳ್ಳಿಕಟ್ಟು) ಬೀಳದ ಸಕ್ಕರೆಗಿಂತ ಸವಿಯಾದ ಮಾತನ್ನು ನನಗೆ ಹೇಳು.

ಮಡದಿಯರ ಮಂಡೆ ಮಾಣಿಕವೆ ಒಸರ್ವ ಜೇ
ನ್ಗೊಡದಂತೆ ಮತ್ಕಾವ್ಯ ರುಚಿಯ
ಮೃಡಭಕ್ತ ಬಾಣಗೀರ್ವಾಣರ್ಸವಿದು ಸ್ಥಾನ
ವಡೆದಿದೆ ಸಿಂಹ ವಿಷ್ಟರದಿ ೨

ಸ್ತ್ರೀಯರ ಶಿರೋರತ್ನವೆ, ಜಿನುಗುವ ಜೇಂಗೊಡದಂತೆ ನನ್ನ ಕಾವ್ಯದ ರುಚಿಯುನ್ನು ಮೃಡಭಕ್ತ ಬಾಣ ಹಾಗೂ ದೇವತೆಗಳು ಸವಿದು, ಸಿಂಹಾಸನರೂಢವಾಗಿದೆ ನನ್ನ ಕಾವ್ಯ.

ಪೊಗಳುವರಾಳಾಪಿಸುವರೋದುವರು ವೀ
ಣೆಗಳ ಬಾಜಿಸುವ ಪೆಣ್ಜನರು
ಯುಗಳ ಪಕ್ಷದೊಳೆಸೆದಿರಲು ಕುಂಭಾಂಡನ
ಮಗಳೈತಂದಳಾಕ್ಷಣದಿ ೩

ಹೊಗಳುವವರು, ಆಲಾಪಿಸುವವರು, ಓದುವವರು, ವೀಣೆ ನುಡಿಸು ವಿಲಾಸಿನಿಯರು ಎರಡೂ ಪಕ್ಕದಲ್ಲಿ ಕಂಗೊಳಿಸಿರಲು, ಆಗ ಕುಂಭಾಂಡನ ಮಗಳು ಬಂದಳು.

ಬಲಿಕುಮಾರಕನ ಪಾದವ ಕಂಡು ಮುಕುಳಿತಾಂ
ಜಲಿವೆತ್ತು ಕಾಮರೂಪಗಳ
ಒಲಿದೊಂದೊಂದ ತೋರಿಸಿ ಜನರರ್ಥಿಯ
ಗಳಿಸಿದಳೇನ ಹೇಳುವೆನು ೪

ಬಲಿಯ ಮಗ ಬಾಣಾಸುರನನ್ನು ಕಂಡು ಕೈಮುಗಿದು ಕಾಮಾರೂಪ(ಬೇಕಾದ ರೂಪ ತಾಳುವ ಇಂದ್ರಜಾಲವಿದ್ಯೆ) ಗಳನ್ನು ಒಂದೊಂದಾಗಿ ತೋರಿಸಿ ಜನರ ಪ್ರೀತಿ ಗಳಿಸಿದಳು.

ಏಕೆ ನೀ ಬಂದೆ ಭಾಮಿನಿ ಶಿರೋಮಣಿ ಚಿತ್ರ
ಲೇಖೆ ಬಿನ್ನಹ ಮಾಡೆನಲು
ಲೋಕೇಶನ ಕಂಡು ಬಹೆನೆಂದು ತವಪುತ್ರಿ
ತಾ ಕೇಳ ಕಳುಹಿದಳೊಡೆಯ ೫

ಚಿತ್ರಲೇಖೆ, ನೀನೇಕೆ ಬಂದೆ ಎಂದು ಬಾಣನು ಕೇಳಿದಾಗ, ಆಗ ಆಕೆ ನಿನ್ನ ಮಗಳು ಶಿವನ ದರ್ಶನಕ್ಕೆ ಹೋಗಲು ನಿಮ್ಮ ಅನುಮತಿಗಾಗಿ ಕಳಿಸಿದಳು ಎಂದಳು

ಅದೊಡೊಳ್ಳೆಯದಾಯಿತು ಗಿರಿಜೇಶನೊಳು
ಭೇದವಿಲ್ಲದೆ ಬಕುತಿಯಲಿ
ಪಾದಪದ್ಮವ ನಿರೀಕ್ಷಿಸಿ ಬೇಗ ಬಹುದೆಂದು
ಬೋಧಿಸಿ ಬೀಳ್ಕೊಟ್ಟನವಳ ೬

ಒಳ್ಳೆದಾಯಿತು ಗಿರಿಜೇಶ ಪಾದಪದ್ಮವನ್ನು ಈಕ್ಷಿಸಿ, ಭಕ್ತಿಯಿಂದ ಪೂಜಿಸಿ, ಬೇಗ ಬರಬೇಕೆಂದು ಹೇಳಿ ಚಿತ್ರಲೇಖೆಯನ್ನು ಬೀಳ್ಕೊಟ್ಟ.

ಅಪ್ಪಣೆವಡೆದು ಬಂದುಸಿರ್ದಳು ಬಾಗಿಲೊ
ಳಿಪ್ಪ ಖೋಜಾ ದೈತ್ಯರಿಗೆ
ಉಪ್ಪರಿಗೆಯನೇರಿ ಕುವರಿಯ ಮನಸಿಂಗೆ
ಬಪ್ಪಂತೆ ಸುದ್ದಿವೇಳಿದಳು ೭

ಅಪ್ಪಣೆ ಪಡೆದು ಬಂದು ಬಾಗಿಲಲ್ಲಿದ್ದ ಖೋಜಾ ದೈತ್ಯರಿಗೆ, ಉಸುರಿದಳು ಬಳಿಕ ಉಪ್ಪರಿಗೆ ಏರಿ ಕುಮಾರಿಗೆ ಹಿಡಿಸುವಂತೆ ಸುದ್ದಿ ಮುಟ್ಟಿಸಿದಳು.

ಗಂದೇಭ ಗಮನೆ ಚಿತ್ತವಿಸು ನಿನ್ನಯ ಹೆತ್ತ
ತಂದೆ ಬೀಳ್ಕೊಟ್ಟ ಧೂರ್ಜಟಿಗೆ
ಸಂದೇಹವಿಲ್ಲದೆ ಶರಣೆಯ ಬರಲ್ವೇ
ಳೆಂದನೆನಲವಳು ಹಿಗ್ಗಿದಳು ೮

ಸಂದೇಹವಿಲ್ಲದೆ ಶಿವನಿಗೆ ಶರಣೆಂದು ಹೇಳಿ ಬರಬೇಕೆಂದು ನಿಮ್ಮ ತಂದೆ ನನಗೆ ಹೇಳಿ ನನ್ನನ್ನು ಬೀಳ್ಕೊಟ್ಟನು ಎಂದಾಗ ಗೆಳತಿ ಹಿಗ್ಗಿದಳು.

ಜಾತಿ ಕಪ್ಪುರ ವೀಳ್ಯವನಿತ್ತು ಪ್ರಾಣ ಸಂ
ಗಾತಿಯ ಪಿಡಿದು ಕುಸ್ತರಿಸಿ
ಜ್ಯೋತಿ ಸ್ವರೂಪನ ತೋರಿಸಿ ಮನದ ಸಂ
ಪ್ರೀತಿಯ ಸಲಿಸ ಹೇಳಿದಳು ೯

ಉತ್ತಮ ಕರ್ಪೂರವೀಳ್ಯವನ್ನು ಕೊಟ್ಟು, ಪ್ರಾಣಸಂಗಾತಿ ಚಿತ್ರಲೇಖೆಯನ್ನು ಉಪಚರಿಸಿ, ಜ್ಯೋತಿ ಸ್ವರೂಪನಾದ ಶಿವನಿಗೆ ತನ್ನ ಮನದ ಸಂಪ್ರೀತಿಯನ್ನು ಸಲ್ಲಿಸಲು ಹೇಳಿದಳು.

ತುಂಡವ ಪಿಡಿದು ಮುದ್ದಿಸಲೇಕೆ ನೀನೊಪ್ಪು
ಗೊಂಡುದೆ ಮನ್ಮನೋವಾಂಛೆ
ಪುಂಡರೀಕಾಕ್ಷಿ ಸಿಂಗರವಾಗು ಮೇರು ಕೋ
ದಂಡಗೆ ಪೊಡಮಟ್ಟು ಬರಲು ೧೦

ಮುಖ ಹಿಡಿದು ಮುದ್ದಿಸಲೇಕೆ? ನಿನಗೆ ಒಪ್ಪಿಗೆಯಾದದ್ದೆ ನನಗೂ ಒಪ್ಪಿಗೆ, ಮೇರುಪರ್ವತವನ್ನೆ ಬಿಲ್ಲು ಮಾಡಿಕೊಂಡಿರುವ ಶಿವನಿಗೆ ನಮಸ್ಕರಿಸಿ ಬರಲು ಬೇಗ ಶೃಂಗಾರ ಮಾಡಿಕೊ ಎಂದು ಗೆಳತಿಗೆ ಹೇಳಿದಳು.

ಎನಲುಷಾದೇವಿ ಸಂತಸದಿ ಮೀಟು ಜ
ವ್ವನೆಯರಿಗದನು ಸೂಚಿಸಲು
ಮನಗೊಂಬ ವಸ್ತ್ರಭೂಷಣ ಮಾಲ್ಯಾನುಲೇ
ಪನವ ತಂದರು ಕುಮಾರಿಗೆ ೧೧

ಉಷಾದೇವಿ ಸುಂದರ ಯುವತಿಯರಿಗೆ ಅದನ್ನು ಸೂಚಿಸಲು, ಅವರು ಕೂಡಲೇ ಕಣ್ಮನಗಳನ್ನು ಸೂರೆಗೊಳ್ಳುವ ಒಡವೆ, ವಸ್ತ್ರ, ಹಾರ, ಲೇಪನದ್ರವ್ಯಗಳನ್ನು ಕುಮಾರಿಗಾಗಿ ತಂದರು.

ಅಗಿಲು ಚಂದನ ಪಚ್ಚೆಗಪ್ಪುರ ಪನ್ನೀರು
ಮೃಗನಾಭಿ ಮುಖ್ಯ ಲೇಪನದಿ
ತಿಗುರನಿಕ್ಕಿದರಾಳಿಯರು ಸತ್ಕುವರಿಯ
ಹೋಗರೆಳ್ವ ಹೊಂಬಣ್ಣ ಮೆಯ್ಗೆ ೧೨

ಅಗಿಲು(ಸುಗಂಧದ ಮರ) ಚಂದನ(ಸುಗಂಧದ ಶ್ರೀಗಂಧ ವೃಕ್ಷ) ಪಚ್ಚೆ ಕರ್ಪೂರ, ಪನ್ನೀರು, ಮೃಗನಾಭಿ(ಕಸ್ತೂರಿ) ಮುಂತಾದ ಮುಖ್ಯ ಲೇಪನಗಳಿಂದ ಕುಮಾರಿಯ ಕಾಂತಿಗೊಳ್ಳುವ ಹೊಂಬಣ್ಣದ ಮೈಗೆ ಲೇಪಿಸಿ ತಿಕ್ಕಿದರು.

ವರ ಚಂದಿರ ಪಾವುಡಕೆ ಶೋಭಿಸುವ ಪೊನ್
ವರಣದ ಶುಭ್ರ ಮಗುಟವ
ಸ್ಮರಬಾಣ ಗರಿಯಂತೆ ನಿರಿವಿಡಿದುಡಿಸಿದರು
ದರಹಾಸ ಮುಖಿಗೆ ಸಂಭ್ರಮದಿ ೧೩

ಕೆಂಪುಲಂಗಕ್ಕೆ ಪರಕಾರ ಹೊಂದಿಕೆಯಾಗುವ ಹೊಂಬಣ್ಣದ ರೇಷ್ಮೆ ಸೀರೆಯನ್ನು ಬಾಣದ ಗರಿಯಂತೆ ನಿರಿ(ನೆರಿಗೆ)ಹಿಡಿದು ಉಡಿಸಿದರು – ನಗುಮುಖದ ಉಷಾದೇವಿಗೆ

ಮಕರಾಂಕ ಮಂಡಿತ ಪೂಗಣೆಗಳ್ಗೆ ಮೌ
ಕ್ತಿಕ ಮಿಟ್ಟೆಗಳ ಸಾರ್ಚಿದಂತೆ
ನಖಚಂದ್ರ ದಶಕದಿಂ ಬೆರಳೊಪ್ಪಿರ್ದುವಾ
ಯಕನಂಘ್ರಿಯುಗಳ ಪಲ್ಲವದಿ ೧೪

ಮನ್ಮಥನ ಹೂಬಾಣಗಳಿಗೆ ಮುತ್ತಿನ ಬಾಣಗಳನ್ನು ಜೋಡಿಸಿದಂತೆ, ಉಷಾದೇವಿಯ ಪಾದ ಪಲ್ಲವ(ಚಿಗುರು)ದಲ್ಲಿ ಹತ್ತು ಗೆರೆಚಂದ್ರ ಉಗುರಿನ ಬೆರಳುಗಳು ಕಣ್ ಸೆಳೆದವು.

ಹಡೆದೊಡನೆ ಎಸೆವ ಹೊಮ್ಮಿಗಮರಿಯ ಮುಸುಡು
ಮಡ ಶೃಂಗದೇಳ್ಗೆ ತತ್ಪರಡು
ಜಡಗಂಧ ರಹಿತ ಕೆಮ್ಮೀನ್ಗಳಂದದಿ ಕಿರು
ದೊಡೆ ಮೆರೆದುವು ಕುಮಾರಿತಿಯ ೧೫

ಹೆತ್ತ ಕೂಡಲೇ ಹೊಳೆಯುವ ಹೊಂಬಣ್ಣದ ಜಿಂಕೆ ಮರಿಯ ಮುಖ,

ಹಿಮ್ಮಡಿ, ಹಿಮ್ಮಡಿಗಂಟು, ಕೊಂಬಿನ ಮೊಳಕೆ ಒಡಮೂಡಿರುವಂತೆ ಕುಮಾರಿಯ ಕಿರುದೊಡೆ (ಕಣಕಾಲು) ಗಳು ಜಡಗಂಧ (ಜಲವಾಸನೆ) ವಿರದ ಕೆಂಪು ಮೀನುಗಳಂತೆ ಇದ್ದವು.

ಶಂಬರಜಿತು ಗೇಹದ್ವಾರ ತೋರಣ ಹೇಮ
ಗಂಬಗಳು ಚೈತನ್ಯವಡೆದು
ಮುಂಬರಿದೆಡೆಯಾಡುವಂತೆ ತತ್ಕುವರಿಯ
ಹೊಂಬಾಳೆದೊಡೆಗಳೊಪ್ಪಿದವು ೧೬

ಮನ್ಮಥನ ಮನೆಯ ಬಾಗಿಲು ತೋರಣ ಚಿನ್ನದ ಕಂಬಗಳು ಚೈತನ್ಯ ಪಡೆದು ನಡುವೆ ಆಡುವಂತೆ ಆ ಕುಮಾರಿಯ ಹೊಂಬಣ್ಣದ ಬಾಳೆ ಕಂದಿನ ಹಾಗಿರುವ ತೊಡೆಗಳು ಕಂಗೊಳಿಸಿದವು.

ನಗಜಾವರ ಶತ್ರು ಗರುಡಿಯೊಳು ಬಾಹುಮೂ
ಲಗಳು ಸತ್ರಾಣಿಸಲೆನುತ
ನೆಗಹುವ ಹೊಸಹೊನ್ನ ವಜ್ರಮುಷ್ಟಿಗಳಂತೆ
ಜಘನಸ್ಥಳಗಳೊಪ್ಪಿದವು ೧೭

ಮನ್ಮಥನ ಗರುಡಿಯಲ್ಲಿ ಬಾಹುಮೂಲಗಳು(ತೋಳಿನ ಮೊದಲು, ಕಂಕುಳು)ಶಕ್ತಿಗೊಳ್ಳಲೆಂದು ಮೇಲಕ್ಕೆ ಎತ್ತುವ ಹೊಸ ಹೊನ್ನಿನ ವಜ್ರಮುಷ್ಟಿ(ಆಯುಧ ವಿಶೇಷ)ಗಳಂತೆ ಕುಮಾರಿಯ ನಿತಂಬಗಳು ಎದ್ದು ಕಾಣುತ್ತಿದ್ದವು.

ಕಡುಜಾಣೆ ರತಿಯನರ್ತಿಸಲೋಸ್ಕರ ವಟ್ಟ
ಗುಡುವ ಕಾಮನ ಕೈಯ ಹೊನ್ನ
ಉಡುಕಿನ ಮಧ್ಯಕಿಂತ ಅತ್ಯಂತ ಸಣ್ಣ
ನಡು ವಿರಾಜಿಸುತಿರ್ದುದವಳ ೧೮

ರತಿಯನ್ನು ಬಯಸಿ ಮೆಚ್ಚಿಸಲು ವಟ್ಟ(ಸೋಡಿ ಹಣ) ಕೊಡುವ ಮನ್ಮಥನ ಕೈಯಲ್ಲಿರುವ ಉಡುಕಿನ ಮಧ್ಯಕ್ಕಿಂತ (ಡಮರುಗದ ನಡುವಿಗಿಂತ) ಸಣ್ಣದಾಗಿರುವ ನಡು(ಸೊಂಟ)ವಿನ ಕುಮಾರಿ ವಿರಾಜಿಸಿದಳು.

ನಳಿನಪತ್ರಾಯತೇಕ್ಷಣೆಯಂಗದೇಶದೊಳು
ಬೆಳೆಸಿದ ಲಾವಣ್ಯವನದಿ
ಲುಳಿವೆತ್ತು ರತಿಕಾಮದೇವರಾಡುವ ಕಾಸು
ಗುಳಿಯಂತೆ ಹೊಕ್ಕಳೊಪ್ಪಿದುದು ೧೯

ಕಮಲದಳಾಂಬಕಿ ಉಷಾದೇವಿಯ ಮೈಕಟ್ಟಿನಲ್ಲಿರುವ ಆಯಕಟ್ಟಿನ ಆಟವಾಡುವ ಸ್ಥಳವೆಂಬಂತೆ, ರತಿಕಾಮರಾಡುವ ಕಾಂತಿವೆತ್ತ ಕಾಸುಗುಳಿ(ಕಾಸಿನಾಟದ ಗುಣಿ)ಯಂತೆ, ಉಷಾದೇವಿಯು ಹೊಕ್ಕಳ ಕಾಣತೊಡಗಿತು.

ಸುರನರ ನಾಗಲೋಕದಿ ವರ್ತಿಸುವ ಸೌಂ
ದರವೆಣ್ಣು ಬಾಣನಂದಗೆಗೆ
ಸರಿಯಿಲ್ಲವೆಂದು ಮುವೆರಲಿಂದ ರತಿರಾಜ
ಬರೆದಂತೆ ತಿವಳಿ ರಾಜಿಸಿತು ೨೦

ಸುರಲೋಕ, ನಾಗಲೋಕ, ನರಲೋಕಗಳಲ್ಲಿ ಚಲಿಸುವ ಸುಂದರ ಹೆಣ್ಣು ಬಾಣನಂದನೆ ಉಷಾದೇವಿಗೆ ಸರಿಸಾಟಿಯಿಲ್ಲವೆಂದು ಮನ್ಮಥ ಮೂರು ಬೆರಳುಗಳಿಂದ ಬರೆದಂತೆ ತಿವಳಿ(ತ್ರಿವಳಿ=ಕಿಬ್ಬೊಟ್ಟೆಯ ಮೇಲಿನ ಮೂರು ಗೆರೆ) ರಾಜಿಸಿತು.

ರಾಮಣೀಯಕವೆತ್ತ ಸುಳಿನಾಭಿ ಕುಚಮಧ್ಯ
ಸೀಮೆಯನೊಲವಿಂದೀಕ್ಷಿಸಲು
ಕಾಮೋಜ ಪಿಡಿದ ಸೂತ್ರದ ಕರ್ಗೆರೆಯೆನೆ
ರೋಮಾಳಿ ಕುಡಿಯ ಚಾಚಿತು ೨೧

ಸುಂದರವಾದ ಹೊಕ್ಕುಳು ಮತ್ತು ವಕ್ಷದ ಮಧ್ಯದ ಸೀಮೆಯನ್ನು ಪ್ರೀತಿಯಿಂದ ನೋಡಲು ಅನುವಾಗುವಂತೆ ಮನ್ಮಥನೆಂಬ ಶಿಲ್ಪಿ ಹಿಡಿದ ದಾರದ ಕರಿಗೆರೆ ಎಂಬಂತೆ ಹೊಕ್ಕುಳಿನಿಂದ ಮೇಲ್ಮುಖವಾಗಿ ನಾರಗಹಾವಿನ ಮರಿಯಂತೆ ನಿಂತಿರುವ ಬಾಸೆ (ಕುಡಿ ಚಾಚಿದ ರೋಮಾಳಿಯ ಬಳ್ಳಿ)ಯ ಮೇಲೆ ಬಿದ್ದ ಕಣ್ಣು ಅತ್ತಿತ್ತ ಅಲುಗಾಡದೆ ನಿಂತು ಬಿಡುತ್ತದೆ.

ಕಲೆವಂತ ವಿಧಿ ತ್ರಿಜಗ ಸೌಂದರ್ಯದಿ ಕೋ
ಮಲೆಯ ನಿರ್ಮಿಸಿ ಮಿಕ್ಕ ಸೊಬಗ
ಸಲೆ ರಾಶಿಯುಗ್ಮವ ನೆರಹಿದಂದದಿ ಬಟ್ಟ
ಮೊಲೆ ಮೆರೆದುವು ಕುಮಾರತಿಯ ೨೨

ಬ್ರಹ್ಮ ಮೂರು ಲೋಕದ ಸೌಂದರ್ಯವನ್ನೆಲ್ಲ ಬಳಸಿಕೊಂಡು ಕೋಮಲೆಯನ್ನು ನಿರ್ಮಿಸಿ, ಉಳಿದ ಸೊಬಗನ್ನು ಎರಡು ಗುಡ್ಡೆ ಮಾಡಿದಂತೆ ಬಟ್ಟಮೊಲೆಗಳು ದಿಟ್ಟವಾಗಿ ಕಾಣುತ್ತಿದ್ದವು.

ಹೊರಡಾಗದಂತೆ ನಾಲ್ಮೊಗ ಜಂತದಲಿ ಹೊಂ
ಗರಡಿಗೆಗಡೆದು ಕರಿಮಣಿಯ
ಬಿರಿಡೆಯ ಬಿಗಿದಿಟ್ಟನೆಂಬಂತೆ ಬಲ್ಮೊಲೆ
ಎರಡರ ಮೊಗಪು ತೋರಿದವು ೨೩

ಬ್ರಹ್ಮ ಡೊಂಕುಗಿಂಕು ಆಗದಂತೆ ದಂತದಲ್ಲಿ ಚಿನ್ನದ ಕರಡಿಗೆ ಕಡೆದು, ಕರಿಮಣಿಯ ಬಿರಡೆ ಹಾಕಿದಂತೆ ಜೋಡಿಮೊಲೆಗಳ ತೊಟ್ಟು ತೋರಿದವು.

ಈಷಣತ್ರಿತಯಾದಿಗಳ ವರ್ಜಿಸಿದ ಮು
ನೀಶರು ಮೊದಲಹ ಗ್ರಾಹಕರ
ಭಾಸವೆಂದೆನಿಸಿ ಬಂಧನ ಮಾಳ್ಪ ಕಾಮ
ಪಾಶದೊಲು ತೋರ್ದವು ತೋಳ್ಗಳು ೨೪

ಈಚಣತ್ರಯ(ಹೆಣ್ಣು, ಹೊನ್ನು , ಮಣ್ಣು)ಗಳನ್ನು ವರ್ಜಿಸಿದ ಮುನೀಶರು ಮೊದಲಾದ ಗ್ರಾಹಕರ ವರ್ತನೆ ತೋರಿಕೆಯೆಂದು ಭಾವಿಸಿ ಬಂಧಿಸುವ ಕಾಮಪಾಶದಂತೆ ಆಕೆಯ ತೋಳುಗಳು ತೋರಿದವು.

ಪರವಶದಿಂದ ಮಾತಾಡುವ ಸಿತಶಂಖ
ವರಸ್ವರ ಪೂತವಲ್ಲೆಂದು
ಸ್ವರ ಸಪ್ತಕ ರಾಗರಸವೆತ್ತು ಕಂಬು ಕಂ
ಧರ ಮೆರೆದುದು ಕುಮಾರಿತಿಯ ೨೫

ಪರವಶದಿಂದ ಮಾತಾಡುವ ಬಿಳಿಯ ಶಂಖದ ನಾದ ಪವಿತ್ರ ವಲ್ಲವೆಂದು, ಸಪ್ತಸ್ವರಗಳ ರಾಗರಸವೆತ್ತು ಕುಮಾರಿಯ ಕಂಬುಕಂದರ(ಶಂಖದಂಥ ಕೊರಳು) ಮೆರೆಯಿತು.

ಕೆಂದಳಿರು ಕುಂದ ಸಂಪಗೆ ನೈದಿಲು ಪಿಚು
ಮಂದ ಬಿಲ್ವಪತ್ರೆ ಚಂದನ
ಗಂಧಪೋಷಕ ಶಿಶಿರಮಿಶ್ರಿತ ವದನಾರ
ವಿಂದ ಕಂಗೊಳಿಸಿದ್ದುದವಳ ೨೬

ಕೆಂದಳಿರು, ಮಲ್ಲಿಗೆ, ಸಂಪಿಗೆ, ನೈದಿಲೆ, ಬೇವು, ಬಿಲ್ವತ್ರೆ, ಚಂದನ ಗಂಧ ಪೋಷಕವೂ, ಶೈತ್ಯ ಮಿಶ್ರಿತವೂ ಆದ ಕುಮಾರಿಯ ವದನಾರವಿಂದ ಕಂಗೊಳಿಸಿತು.

ಪೂರ್ಣಾಬ್ಜ ವದನೆಯ ತನುಲಾವಣ್ಯ ಮ
ಹಾರ್ಣವದೊಳಗೆ ಶೋಭಿಸುವ
ಸ್ವರ್ಣ ಮೌಕ್ತಿಕದ ಚಿಪ್ಪುಗಳೆಂಬಂತೆ
ಕರ್ಣಗಳು ಕಂಗೊಳಿಸಿದವು ೨೭

ಕಮಲಮುಖಿಯ ಸೌಂದರ್ಯ ಸಮುದ್ರದೊಳಗೆ ಶೋಭಿಸುವ ಸ್ವರ್ಣ ಮುತ್ತಿನ ಚಿಪ್ಪುಗಳೆಂಬಂತೆ ಆಕೆಯ ಕರ್ಣಗಳು ಕಂಗೊಳಿಸಿದವು.

ವಿಕಸಿತ ವದನಾಂಬೋರುಹ ಭರಿತ ಸ
ನ್ಮಕರಂದ ಜಲವ ಸ್ವೀಕರಿಸಿ
ಸೊಕವಡೆದಲರ್ವಕ್ಕಿಗಳಂತೆ ನೀಲಾ
ಳಕವಿರ್ದುದವಳ ಮಸ್ತಕದಿ ೨೮

ಅವಳ ಅರಳಿದ ಮುಖಕಮಲದ ಮಕರಂದವನ್ನು ಸೇವಿಸಿ ಸೊಗವಡೆದ ದುಂಬಿಗಳಂತೆ ತಲೆಯಲ್ಲಿನ ಅವಳ ನೀಲಾಳಕ(ಕಪ್ಪುಗೂದಲು)ಹೊಳೆಯುತ್ತಿತ್ತು.

ಕಿರುವೆರಲುಗುರಿಂದ ಬೈತಲೆ ತೆಗೆದಾಗ
ಮರಿದುಂಬಿಗುರುಳ ಮಾನಿನಿಗೆ
ತುರುಬನಿಕ್ಕಿದರು ನೋಳ್ಪ ಕಣ್ಣದೃಷ್ಟಿಗೆ
ಗೊರಬನಿಕ್ಕಿದರೆಂಬಂತೆ ೨೯

ಕಿರಿಬೆರಳ ಉಗುರಿನಿಂದ ಬೈತಲೆ ತೆಗೆದು ದುಂಬಿಗುರುಳ ಕುಮಾರಿಗೆ ತುರುಬನ್ನು ಹಾಕಿದರು– ನೋಡುವವರಿಂದ ದೃಷ್ಟಿಯಾಗದಿರಲೆಂದು ಗೊರಬು ಹಾಕಿದಂತೆ,

ಜಾತಿ ಮುತ್ತುಗಳ ಕೇವಣಿಸಿರ್ದ ಹೊಸ ಹೊನ್ನ
ಕೇತಕಿ ಎಸಳ ಕಟ್ಟಿದರು
ಖ್ಯಾತಿವಡೆದ ಪೆರ್ದುರುಬಿನ ಮೇಲೆ ತ
ಜ್ಜಾತಿ ಮಾಣಿಕವ ಸೂಡಿದರು ೩೦

ಶ್ರೇಷ್ಠ ಮುತ್ತುಗಳನ್ನು ಕೀಲಿಸಿದ್ದ ಹೊಂಗೇದಗೆ ಎಸಳನ್ನು ಕಟ್ಟಿದರು; ತುರುಬಿನ ಮೇಲೆ ಶ್ರೇಷ್ಠ ಮಾಣಿಕವನ್ನು ತೊಡಿಸಿದರು.

ಕೇಳಾ ಕುವರಿಯ ನೊಸಲಿನರ್ಧೇಂದು ಸ
ಮ್ಮೇಳಕ್ಕೆ ಬರ್ಪ ತಾರಕೆಯ
ಜಾಳನೆಂಬಂತೆ ಮುತ್ತಿನ ಬೈತಲೆಯ ಚ
ಡಾಳ ಮಾಲಿಕೆಯ ಕಟ್ಟಿದರು ೩೧

ಅವಳ ಹಣೆಯ ಅರ್ಧಚಂದ್ರ ಸಮ್ಮೇಳಕ್ಕೆ ಬರುವ ನಕ್ಷತ್ರಗಳ ಜಾಲವೆಂಬಂತೆ ಮುತ್ತುಗಳಿಂದ ಪಳಪಳಗುಡುವ ಮಾಲಿಕೆಯನ್ನು ಬೈತಲೆಗೆ ಕಟ್ಟಿದರು.

ಅಂಗಜದೇವನ ವಾಮಹಸ್ತದೊಳಿಪ್ಪ
ಸಿಂಗಾಡಿ ಸೆಡೆಬಿಡಲೊಡನೆ
ತುಂಗ ಕಜ್ಜಳಿಯ ಲೇಪಿಸಿದಂತೆ ಕಾಶ್ಮೀರ
ಮಂಗಳ ತಿಲಕವಿಕ್ಕಿದರು ೩೨

ಮನ್ಮಥನ ಕೈಯ ಬಿಲ್ಲು ಸೆಡಹು ಕೊಂಕು ಬಿಡಲು ಕೂಡಲೇ ಕಜ್ಜಳಿ(ಹಲವು ಔಷಧ ವಸ್ತುಗಳ ಮಿಶ್ರ) ಯನ್ನು ಲೇಪಿಸಿ, ಹಣೆಗೆ ಕಾಶ್ಮೀರ ತಿಲಕವನ್ನು ಇಟ್ಟರು.

ನೋಡಿದೊಡುಭಯಲೋಚನ ನೀಳ್ದು ಕರ್ಣನ
ಕೂಡುವುವೆಂದು ಭಿನ್ನತೆಯ
ಮಾಡಿ ಮಂಡಲವಲರ್ಚಿಸುವಂತೆ ಕಣ್ಗೆ
ಕಾಡಿಗೆ ಎಚ್ಚಿದರೊಲಿದು ೩೩

ನೋಡಿದರೆ ನೀಳವಾದ ಉಭಯ ಲೋಚನಗಳು ಕಿವಿಗಳನ್ನು ಕೂಡುತ್ತವೆ ಎಂದು ಎರಡರ ಮಧ್ಯೆ ಅಂತರ ಮೂಡುವಂತೆ, ಕಣ್ಣಿಗೆ ಕಾಡಿಗೆಯನ್ನು ಹಚ್ಚಿದರು.

ಚಂದಿರ ಸ್ವರವಾಗಿ ಪೊರವಟ್ಟು ಬಹಮಾರ್ಗ
ವೆಂದು ನಾನಾಪುಟದೆಡದಿ
ನಿಂದಿಹ ರೋಹಿಣಿ ನಕ್ಷತ್ರವೆಂಬಂದದಿ
ಒಂದಿಸಿದರು ಮೂಗುತಿಯನು ೩೪

ಮೂಗಿನ ಎಡಹೊಳ್ಳೆಯಲ್ಲಿ ಚಂದ್ರಸ್ವರ ಹೊರಹೊರಟು ಬರುತ್ತದೆ ಎಂದು ರೋಹಿಣಿ ನಕ್ಷತ್ರ ಥಳಥಳಿಸುವಂತೆ ಮೂಗುತಿಯನ್ನು ಜೋಡಿಸಿದರು [ಎಡಗಡೆ ಹೊಳ್ಳೆಯಲ್ಲಿ ಇಡಾ(ಚಂದ್ರ)ನಾಡಿಯೂ ಬಲಗಡೆ ಹೊಳ್ಳೆಯಲ್ಲಿ ಪಿಂಗಳ(ಸೂರ್ಯ) ನಾಡಿಯೂ ಸಂಚರಿಸುತ್ತವೆ ಎಂಬ ಯೌಗಿಕ ಪರಿಭಾಷೆ ಇಲ್ಲಿ ಬಳಕೆಯಾಗಿದೆ.]

ಜಿತಕಾಮರುಗಳ ಜಯಿಸುವ ಮನ್ಮಥ
ರಥಚಕ್ರಯುಗಳವೆಂಬಂತೆ
ಶತಕೋಟಿ ನೀಲ ಮಾಣಿಕ್ಯದೋಲೆಯ ಬಾಣ
ಸುತೆಯ ಕರ್ಣದೊಳು ಸಾರ್ಚಿದರು ೩೫

ಜಿತಕಾಮರನ್ನು ಜಯಿಸುವ ಮನ್ಮಥನ ರಥದ ಚಕ್ರಗಳೆಂಬಂತೆ ಬಾಣಸುತೆಯ ಕಿವಿಗಳಿಗೆ ರತ್ನದ ಓಲೆಗಳನ್ನು ಜೋಡಿಸಿದರು.

ಅತ್ರಿಮುನೀಶನಂದನ ಜೂಟ ಭಕ್ತನ
ಪುತ್ರಿಯ ಗಂಡಯುಗಳದಲ್ಲಿ
ಚಿತ್ರಿಸಿದಂತೆ ನಾನಾ ವರ್ಣದಲಿ ಕರ್ಣ
ಪತ್ರಿಕೆ ಪ್ರತಿಬಿಂಬಿಸಿದುವು ೩೬

ಅತ್ರಿ ಮುನಿಯ ಮಗನಾದ ಚಂದ್ರನನ್ನು ಧರಿಸಿದ ಶಿವನ ಭಕ್ತನಾದ ಬಾಣನ ಮಗಳು ಉಷಾದೇವಿಯ ಕೆನ್ನೆಗಳಲ್ಲಿ ಚಿತ್ರಿಸಿದಂತೆ ನಾನಾವರ್ಣದ ಕರ್ಣಾಭರಣ ಪ್ರತಿಬಿಂಬಿಸಿದವು.

ದಪ್ಪಕ ಶಾಸ್ತ್ರವಲ್ಲದೆ ಧರಿತ್ರಿಯೊಳಿಡಿ
ದಿಪ್ಪ ನಾನಾ ಶಾಸ್ತ್ರಗಳನು
ತಪ್ಪಿಸೆ ಶ್ರವಣನಾಳವ ಮುಚ್ಚುವಂದದಿ
ಕೊಪ್ಪುವಿಕ್ಕಿದರು ಕರ್ಣದಲಿ ೩೭

ಮನ್ಮಥ ಶಾಸ್ತ್ರವಲ್ಲದೆ ಪ್ರಪಂಚದಲ್ಲಿರುವ ಎಲ್ಲ ಶಾಸ್ತ್ರಗಳನ್ನು ತಪ್ಪಿಸಲು ಕಿವಿಯ ನಾಳವನ್ನು ಮುಚ್ಚುವಂತೆ ಕಿವಿಗೆ ಕೊಪ್ಪು (ಕರ್ಣಾಭರಣ) ತೊಡಿಸಿದರು.

ಕಂತೆ ಕಚಭಾರದಿಂದ ನುಣ್ಗೊರಲು ಮುರಿ
ದಂತಾಹುದೆಂಬ ಸಂದೆಗದಿ
ಸಂತತ ಬಣ್ಣಗಲ್ಲುಗಳ ಕೇವಣಿಸಿರ್ದ
ಚಿಂತಾಕ ಬಲುಹನಿಕ್ಕಿದರು ೩೮

ಕಂತೆಯುಷ್ಟಿರುವ ಕೂದಲಿನ ಭಾರದಿಂದ ನುಣ್ಗೊರಲು ಮುರಿದಂತಾಗುವುದೆಂಬ ಸಂದೇಹದಿಂದ ಬಣ್ಣದ ಹರಳನ್ನು ಕೀಲಿಸಿದ ಚಿಂತಾಕವನ್ನು ಕೊರಳಿಗೆ ತೊಡಿಸಿದರು.

ಆಯವ ನೋಡಿ ಶಸ್ತ್ರದೊಳಿರಿದೇರಿಂದ
ಸಾಯದೆ ಸ್ತ್ರೀ ಲೋಭದಲಿ
ತೋಯಜಾಕ್ಷಿಯ ಕುಚಮಧ್ಯ ಕಂಠ ಮಾಲೆಯ
ನಾಯಕ ರತ್ನ ರಂಜಿಸಿತು ೩೯

ಆಯಕಟ್ಟು ಸ್ಥಳವೆಂದು ಶಸ್ತ್ರದಿಂದ ಇರಿದ ಗಾಯದಿಂದ ಸಾಯದೆ ಸ್ತ್ರೀ ಲೋಭದಿಂದ ಕಮಲಾಕ್ಷಿಯ ಕುಚಮಧ್ಯದಲ್ಲಿ ಕೊರಳ ಮಾಲೆಯ ನಾಯಕ ರತ್ನ ರಂಜಿಸಿತು.

ರಜನೀಚರಧರನಾತ್ಮ ಸಂಭವ ತನ್ನ
ಗಜಮಸ್ತಕದರಳಲೆಯ
ನಿಜಲೀಲೆಯೊಳಮರಿಸಿದಂತೆ ಕುವರಿಗೆ
ಭುಜಪತ್ರಿಕೆಯ ಸಾರ್ಚಿದರು ೪೦

ಈಶ್ವರನ ಮಗನಾದ ಗಣಪತಿಯ ಆನೆಮುಖದ ಅರಳೆಲೆಯನ್ನು ನಿಜ ಜೀವನದಲ್ಲಿ ಬಳಕೆಗೆ ತಂದಂತೆ ಕುಮಾರಿಗೆ ಭುಜಪತ್ರಿಕೆ(ಭುಜಕೀರ್ತಿ ಅಥವಾ ಆಭರಣ)ಯನ್ನು ತೊಡಿಸಿದರು.

ಕಡುಗಲಿ ಕಾಮ ತನ್ನುಭಯ ಹಸ್ತದ ಗದೆ
ಗಡರ್ಚಿದ ಮಣಿಗಟ್ಟಿನಂತೆ
ಬಿಡೆಯವಿಲ್ಲದೆ ಕುವರಿಯ ತೋಳ್ಗೆ ಭಾಪುರಿ
ಕಡಗ ಕಂಕಣವನಿಕ್ಕಿದರು ೪೧

ಸಮರ್ಥ ಮನ್ಮಥ ತನ್ನ ಎರಡೂ ಹಸ್ತಗಳಿಗೆ ಇರುವ ಮಣಿಕಟ್ಟಿನಂತೆ ಸಂಕೋಚವಿಲ್ಲದೆ ಕುಮಾರಿಯ ತೋಳಿಗೆ ಭಾಪುರಿ, ಕಡಗ, ಕಂಕಣಗಳನ್ನು ಇಕ್ಕಿದರು.

ಅಂಗಜಾತನ ಪುಷ್ಪಶರ ಬಿರಿದಪುದೆಂದು
ಹೊಂಗಟ್ಟುಗಳ ಕಟ್ಟುವಂತೆ
ತೊಂಗಲ ಸೆಳ್ಳುಗುರ್ವೆರಲಿಂಗೆ ಮಾಣಿಕ
ದುಂಗುರಗಳನಿಟ್ಟರೊಲಿದು ೪೨

ಮನ್ಮಥನ ಪುಷ್ಪಬಾಣ ಬಿರಿದು ಬೀಲು(ಸೀಳು) ಬಿಡುವುದೆಂದು ಚಿನ್ನದ ಕಟ್ಟುಗಳನ್ನು ಕಟ್ಟುವಂತೆ ಚೂಪಾದ ಉಗುರುಗಳ ಗೊಂಚಲು ಬೆರಳುಗಳಿಗೆ ಮಾಣಿಕ್ಯದ ಉಂಗುರುಗಳನ್ನು ಇಟ್ಟರು.

ಹೆಂಗಳ ರನ್ನೆಯ ಹೇಮವಕ್ಷವನಾಂತ
ಕಂಗೊಳಿಸುವ ಬಟ್ಟಮೊಲೆಗಳು
ಅಂಗನೆಯಡಿಯಿಡಲಾಗಿ ಜಗ್ಗುವುವೆಂದು
ಮಂಗಳ ರವಕೆಯನಿಕ್ಕಿದರು ೪೩

ಕುಮಾರಿಯು ಹೊಂಬಣ್ಣದ ವಕ್ಷದೊಳಗೆ ಕಂಗೊಳಿಸುವ ದುಂಡುಮೊಲೆಗಳು ಆಕೆ ಅಡಿ ಇಟ್ಟಾಗ ಜಗ್ಗುತ್ತವೆ ಎಂದು ಗುತ್ತನಾಗಿ ರವಿಕೆ ತೊಡಿಸಿದರು.

ಏಣಲೋಚನೆಯ ಬಲ್ಮೊಲೆಯ ಭಾರಕೆ ನಿ
ತ್ರಾಣಿಸಿ ನಡು ನಿಲ್ಲದೆನುತ
ಕೇಣವಿಲ್ಲದೆ ರತ್ನಕೀಲಿತ ಸ್ವರ್ಣದೊ
ಡ್ಯಾಣವ ತಂದಿಕ್ಕಿದರು ೪೪

ಜಿಂಕೆಗಣ್ಣಿನ ಕೊಡಗೂಸಿನ(ಇನ್ನೂ ಮದುವೆಯಾಗದ ಕನ್ಯೆ) ಕೊಡಮೊಲೆಗಳ ಭಾರಕ್ಕೆ ನಡು ನಿತ್ರಾಣದಿಂದ ನೆಟ್ಟಗೆ ನಿಲ್ಲಲಾರದು ಎಂಬ ಭಾವನೆಯಿಂದ ರತ್ನಕೀಲಿತ ಹೊನ್ನಿನ ಒಡ್ಯಾಣ(ಡಾಬು) ವನ್ನು ತಂದಿಕ್ಕಿದರು.

ಸಾಮಜ ಮಸ್ತಕ ಕಂಠೀರವ ಮಧ್ಯ
ಸೀಮೆಯ ರೇಖೆಯೆಂಬಂತೆ
ಕೋಮಲ ನಡುವಿಗೆ ಕಟಿಸೂತ್ರ ಕಾಂಚೀ
ದಾಮವ ತಂದಿಕ್ಕಿದರು ೪೫

ಆನೆಯ ತಲೆ(ನಿತಂಬ), ಸಿಂಹದ ಮಧ್ಯ (ಸೊಂಟ) ಸೀಮೆಯ

ರೇಖೆಯೆಂಬಂತೆ ಕಟಿಸೂತ್ರ(ಡಾಬು ಎಂಬ ಅರ್ಥವಿದ್ದರೂ, ಸರಪಳಿಯಂತೆ ಸೊಂಟದಿಂದ ನಿತಂಬದ ಮೇಲೆ ಇಳಿಬಿದ್ದ ಆಭರಣ ಎಂಬುದು ಸೂತ್ರ ಶಬ್ದದಿಂದ ಸಾಬೀತಾಗುತ್ತದೆ) ಕಾಂಚಿ(ಡಾಬು)ದಾಮ(ಡಾಬು)ವನ್ನು ತಂದಿಕ್ಕಿದರು.(ಒಂದೇ ಅರ್ಥದ ಜೋಡು ನುಡಿಯ ಪ್ರಯೋಗವನ್ನು ನಾವಿಲ್ಲಿ ಕಾಣಬಹದು.)

ಆಯತಿ ಹೆಣ್ಣುಗಳೇನು ಗಹನವೆನ್ನುವ
ಬಾಯಿ ಬಡಿಕ ತವಸಿಗಳ
ತಾಯೆ ನೀ ಕೆಡೆಮೆಟ್ಟೆನುತ ಕಾಲಂದುಗೆ
ಪಾಯವಟ್ಟವನಿಕ್ಕಿದರು ೪೬

ಸಂಯಮದ ಹೆಣ್ಣುಗಳೇನು ಜಾರದಿರುವರೆ? ಎಂಬ ಬಾಯಿ ಬಡಿಕ ತಪಸ್ವಿಗಳನ್ನು ನೀನು ಕೆಳಕ್ಕೆ ಕೆಡವಿ ಮೆಟ್ಟು ಎಂದು ಕಾಲಿಗೆ ಪಾಯವಟ್ಟ (ಪೆಂಡೆಯ, ಕಾಲಂದುಗೆ)ಹಾಕಿದರು.

ಸೆಕೆಯಿಲ್ಲದಾವಗಮುರಿವ ಕೆಂಗಿಡಿಯ ಮಾ
ಲಿಕೆಯಂತೆ ಮಂಗಳವಡೆದ
ನಿಖಿಲ ರತ್ನಂಗಳಡಸಿದ ಮುದ್ರಿಕೆ ಮಂ
ಬಿಕೆಯನಿಟ್ಟರು ಬೆರಲ್ಗಳಿಗೆ ೪೭

ಶಾಖ(ಧಗೆ) ವಿಲ್ಲದೆ ಯಾವಾಗಲೂ ಜ್ವಲಿಸುವ ಕೆಂಗಿಡಿಯ ಮಾಲಿಕೆಯಂತೆ ಕಾಣುವ ರತ್ನಖಚಿತ ಮುದ್ರಯುಂಗುರವನ್ನು ಕೈ ಬೆರಳಿಗೂ ಮಂಟಿಕೆ(ಮಿಂಚು, ಕಾಲುಂಗರ)ಯನ್ನು ಕಾಲಬೆರಳಿಗೂ ಇಟ್ಟರು.

ಕಟ್ಟಾಳು ಕಾಮದೇವ ತಾತ್ಪರಿಯದ
ಪಟ್ಟದಾನೆಯ ಬಂಧಿಸದೆ
ಬಿಟ್ಟುದಾದೊಡೆಲ್ಲರ ಜಗ್ಗಿ ತುಳಿವುದೆಂ
ದಿಟ್ಟರು ಕಾಲ್ಗೆ ನಿಗಳವನು ೪೮

ಕಟ್ಟಾಳು ಮನ್ಮಥನ ಉದ್ದೇಶಪೂರ್ವಕವಾದ ಈ ಪಟ್ಟದಾನೆಯನ್ನು ಬಂಧಿಸಿ ಹಿಡಿತದಲ್ಲಿ ಇಡದಿದ್ದರೆ, ಎಲ್ಲರನ್ನೂ ಜಗ್ಗಿಸಿ ತುಳಿಯುತ್ತದೆಂದು ಕಾಲಿಗೆ ನಿಗಳ(ಚೈನು, ಸರಪಳಿ)ವನ್ನು ಹಾಕಿದರು.

ಆಪಾದಮಸ್ತಕ ದಿವ್ಯವಿಗ್ರಹದ ಸ್ವ
ರೂಪ ಒಂದೊಂದ ನೋಡಿದೊಡೆ
ಶ್ರೀಪತಿಯಾತ್ಮಸಂಭವನ ಪೂಗೋಲ ಸಂ
ತಾಪಕ್ಕೆ ಬೀಳದವರಾರು ೪೯

ಅಡಿಯಿಂದ ಮುಡಿಯವರೆಗೂ ದಿವ್ಯ ಸೌಂದರ್ಯವತಿಯ ಒಂದೊಂದು ಅಂಗವನ್ನು ನೋಡುತ್ತಾ ಹೋದರೆ ಕೃಷ್ಣನ ಮಗನಾದ ಮನ್ಮಥನ ಹೂಬಾಣ ಸಂತಾಪಕ್ಕೆ ಒಳಗಾಗದವರಾರು?

ಮೊಗ ಬಾಹುಮೂಲ ನಿರ್ಮಲವಕ್ಷ ಗುರುಕುಚ
ಯುಗಳದಿ ನೆಟ್ಟ ದಿಟ್ಟಿಯನು
ತೆಗೆವನದಾವ ವೀರಾಧಿವೀರನು ಪ
ನ್ನಗ ನರಸುರಲೋಕದೊಳಗೆ ೫೦

ಮುಖ, ತೋಳಮೂಲ(ಕಂಕುಳ) ನಿರ್ಮಲ ವಕ್ಷ, ದೊಡ್ಡ ದುಂಡುಮೊಲೆಗಳ ಮೇಲೆ ಇಟ್ಟ ದೃಷ್ಟಿಯನ್ನು ನಾಗಲೋಕ ನರಲೋಕ, ಸುರಲೋಕದ ಯಾವ ವೀರಾಧಿವೀರನು ಹಿಂದಕ್ಕೆ ತೆಗೆಯಬಲ್ಲನು?

ಭುಜಗಾಭರಣನ ಮಗುಳೆ ಜೈಸುವೆನೆಂದು
ಅಜಸಹೋದರ ಕೂರ್ತು ತನ್ನ
ವಿಜಯ ಲಕ್ಷ್ಮಿಯ ಪೂಜೆಗೆಯ್ದನೆಂಬಂತೆ ಬಾ
ಣಜೆಯಿರ್ದಳತಿ ಚೆಲುವಾಗಿ ೫೧

ಶಿವನನ್ನು ಮತ್ತೆ ಜಯಿಸುವೆನೆಂದು ಮನ್ಮಥ ಲಕ್ಷ್ಮೀಪೂಜೆ ಮಾಡಿದನೆಂಬಂತೆ, ಬಾಣನ ಮಗಳಾದ ಉಷಾದೇವಿ ಚೆಲುವಿನ ಅಧಿದೇವತೆಯಂತೆ ಕಾಣುತ್ತಿದ್ದಳು.

ಆಕೆಯ ರೂಪಿಂಗೆ ಪ್ರತಿರೂಪವೆನೆ ಚಿತ್ರ
ಲೇಖೆಯ ಸಿಂಗರಗೈದರು
ಈಕೆಯ ಕೊಂಡಾಡುವವೊಡೊಂದು ನಾಲಗೆ
ಸಾಕೆನಿಸದು ಸತ್ಕವಿಗೆ ೫೨

ಆಕೆಯ ರೂಪಿಗೆ ಪ್ರತಿರೂಪವೆಂಬಂತೆ ಚಿತ್ರಲೇಖೆಯನ್ನು ಶೃಂಗರಿಸಿದರು. ಈಕೆಯನ್ನು ಕೊಂಡಾಡಲು ಒಂದು ನಾಲಗೆ ಸಾಲದು.

ಚೆಲುವೆಗೆ ತಕ್ಕ ಸಿಂಗರವ ನಿರ್ಮಿಸಿ ಮನ
ದೊಲವಿಂದ ನೋಡಿ ದಾದಿಯರು
ನಲಿವಿಂಗೆ ಹರಳುದುಂಬಿದ ರತ್ನಮಯ ಹೊ
ನ್ನಿಲುವುಗನ್ನಡಿಯ ತೋರಿದರು ೫೩

ಚೆಲುವೆಗೆ ತಕ್ಕ ಅಲಂಕಾರವನ್ನು ಮಾಡಿ, ನೋಡಿ ನಲಿದ ದಾದಿಯರು, ಹರಳುದುಂಬಿದ ರತ್ನಖಚಿತ ನಿಲುವುಗನ್ನಡಿಯನ್ನು ಚಿತ್ರಲೇಖೆಗೆ ತೋರಿಸಿದರು.

ಪುರ್ಬುಗಳಂತೆ ಕಣ್ಣುಗಳಂತೆ ಕುಚಗಳಂತೆ
ಪರ್ಬಿದ ನಳಿತೋಳ್ಗಳಂತೆ
ಇರ್ಬರ ರೂಪು ತಾತ್ಪರ್ಯವಾಗಿರಲು ಕಂ
ಡುರ್ಬಿದರತಿ ಹರ್ಷದಲಿ ೫೪

ಹುಬ್ಬುಗಳು ಹಾಗೆಯೇ, ಕಣ್ಣುಗಳು ಹಾಗೆಯೇ, ಮೊಲೆಗಳು ಹಾಗೆಯೇ, ಕೋಮಲ ತೋಳುಗಳು ಹಾಗೆಯೇ, ಇಬ್ಬರ ರೂಪು ಪರಸ್ಪರ ಹೊಂದಿಕೊಂಡಂತೆ ಇರಲು, ನೋಡಿ ಹರ್ಷಿಸಿದರು.

ಗಾಡಿಕಾರ್ತಿಯರಿರ್ವರ ಲಾವಣ್ಯವ
ನೋಡಿ ರಕ್ಷೆಯ ಬೊಟ್ಟನಿಟ್ಟು
ಜೋಡಿಸಿ ಸಲ ಸನ್ನಾಹದಿಂ ಪಯಣವ
ಮಾಡಿ ಹರ್ಮ್ಯವನಿಳಿಸಿದರು ೫೫

ಸುಂದರಿಯರಿಬ್ಬರ ಅಂದಚೆಂದವನ್ನು ನೋಡಿ ದೃಷ್ಟಿ ಬೊಟ್ಟಿಟ್ಟು, ಪಯಣಕ್ಕೆ ಸಕಲ ಸಿದ್ಧತೆಯನ್ನು ಮಾಡಿ ಮಹಡಿಯಿಂದ ಕೆಳಗಿಳಿಸಿದರು.

ಮೇಲೇಳುಲೋಕವ ಜಯಿಸಿ ಮಾಯಾಂಗನೆ
ಲೀಲೆಯಿಂದಿಳೆಗಿಳಿಯುವಂತೆ
ಬಾಲೆ ಹರ್ಮ್ಯವನಿಳಿದೈತಂದಳಾ ಚಂದ್ರ
ಶಾಲೆಯ ರಂಗಸ್ಥಳದೆಡೆಗೆ ೫೬

ಮೇಲೇಳು ಲೋಕವನ್ನು ಜಯಿಸಿ ಮಾಯಾಂಗನೆ ಲೀಲೆಯಿಂದ ಇಳೆಗಳಿಯುವಂತೆ, ಕುಮಾರಿ ಸೌಧವನ್ನು ಇಳಿದು ಚಂದ್ರಶಾಲೆಗೆ ಐತಂದಳು.

ಬಿಸರುಹಗಂಧಗಂಧಿನಿ ಕರೆಸಿದಳು ಜೋ
ಯಿಸರ ಪಂಚಾಂಗ ಪ್ರಶ್ನೆಗೆ
ಅಸಮಾಕ್ಷನಡಿದರುಶನಕೆ ಪೋದಪೆವೆಂದು
ಬೆಸಗೊಳಲೊಳಿತೆಂದು ನುಡಿದ ೫೭

ಕಮಲಗಂಧ ಸುಗಂಧಿನಿ ಪಂಚಾಂಗ ಪ್ರಶ್ನೆಗಾಗಿ ಜೋಯಿಸರನ್ನು ಕರೆಸಿದಳು. ಶಿವನ ದರುಶನಕ್ಕೆ ಹೋಗುತ್ತೇವೆಂದು ಕೇಳಿದಾಗ ಒಳ್ಳೆಯದು ಹೋಗಿ ಬನ್ನಿ ಎಂದ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೫೮

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯಚಂದ್ರರು ಇರುವ ತನಕ ಲಕ್ಷ್ಮೀಕಾಂತ ರಕ್ಷಿಸದೆ ಬಿಡನು.

## ೨೪ ಉಷೆಗೆ ಶಿವದರ್ಶನ

ನಳಿನಪತ್ರಾಯತೆಕ್ಷನ ಭೃತ್ಯ ನಿನ್ನಯ
ಹುಳಿ ಹೊದ್ದದ ಇನಿವಾತುಗಳು
ಗಳಿಲನೆ ಬಂದು ಕರ್ಣವ ಹೊಕ್ಕು ಮನವ
ನಿರ್ಕುಳಿಗೊಳ್ಳಲುಸಿರು ಮೆಲ್ಲಗೆತೆಯ ೧

ಕಮಲಾಕ್ಷ ಶ್ರೀಹರಿಯ ಸೇವಕನಾದ ಕನಕ, ನಿನ್ನ ಹುಳಿಯಿರದ ಸವಿ ಮಾತುಗಳು ಬೇಗ ಬಂದು ಕಿವಿಯನ್ನು ಹೊಕ್ಕು ಮನಸ್ಸನ್ನು ದ್ರವಿಸುವಂತೆ ಮೆಲ್ಲಗೆ ಹೇಳು.

ಚೆನ್ನಾಗಿ ಲಾಲಿಸು ಚೆಲ್ವಡರಿದ ನಿನ್ನ
ಕನ್ನವುರದಲಿ ಮೆರೆವಂಥ
ಹೊನ್ನ ಹೂವಿಗೆ ಪರಿಮಳ ಬಪ್ಪಂತೊರೆವೆ
ಬಿನ್ನಾಣಗಾತಿ ಚಿತ್ತೈಸು ೨

ಚೆನ್ನಾಗಿ ಮೈಯೆಲ್ಲ ಕಿವಿಯಾಗಿ ಕೇಳು, ನಿನ್ನ ಕರ್ಣಾಭರಣದಲ್ಲಿ ಮೆರೆವಂಥ ಹೊನ್ನಿನ ಹೂವಿಗೆ ಪರಿಮಳ ಬರುವಂತೆ ಹೇಳುವೆ, ಬಿನ್ನಾಣಗಾತಿ ಚಿತ್ತೈಸು.

ಸಾಸಿರ ಬಾಹುನಂದನೆಯ ಲಾವಣ್ಯಾಂಬು
ರಾಶಿಯನೊಡಗೂಡಿ ಮೆರೆವ
ಭೂಷಿತವಾಹಿನಿ ನಿಚಯವೆಂಬಂತೆ ಸು
ವಾಸಿನಿಯರು ಕೂಡಿದರು ೩

ಬಾಣನ ನಂದನೆಯ ಲಾವಣ್ಯಾಂಬುನಿಧಿಯನ್ನು ಕೂಡಿಕೊಳ್ಳುನಂತೆ, ಆಭರಣಾಲಂಕೃತ ಪ್ರವಾಹ ಸಮೂಹವೆಂಬಂತೆ ಸುವಾಸಿನಿಯರು ಕೂಡಿಕೊಂಡರು.

ಚಲ್ಲಣ ಕಾಸೆ ಕುಪ್ಪುಸ ಮೊಲೆಕಟ್ಟುಗಳ
ಸಲ್ಲಲಿತಾಂಗ ಭೂಷಣದಿ
ನಿಲ್ಲದೆ ಜಗವ ಮೋಹಿಪ ಮಿಂಡಿವೆಂಗಳು
ಪಲ್ಲಕ್ಕಿಯೊಡನೈದಿದರು ೪

ಚಡ್ಡಿ, ನಡುಕಟ್ಟು, ಕುಪ್ಪುಸ, ಮೊಲೆಕಟ್ಟುಗಳ ಹಾಗೂ ಸುಂದರ ಆಭರಣಗಳ ಯುವತಿಯರು ಜಗತ್ತನ್ನೆ ಮರುಳುಗೊಳಿಸುವಂತೆ ಪಲ್ಲಕ್ಕಿಯ ಜೊತೆ ಬರತೊಡಗಿದರು.

ಹತ್ತಿದರೊರ್ವರೊಂದೊಂದು ಪಲ್ಲಕ್ಕಿಯ
ಮುತ್ತಿನ ಕುಚ್ಚುಗಳು ಮೆರೆಯೆ
ಸತ್ತಿಗೆ ಶತಸಾವಿತರ ಲಕ್ಷ ಕೋಟಿ ಮೇ
ಲೆತ್ತಿದುವಿನನ ಮಂಡಲಕೆ ೫

ಮುತ್ತಿನ ಕುಚ್ಚುಗಳಿಂದ ಮೆರೆವ ಒಂದೊಂದು ಪಲ್ಲಕ್ಕಿಯನ್ನು ಒಬ್ಬೊಬ್ಬರು ಹತ್ತಿದರು. ಸೂರ್ಯಮಂಡಲಕ್ಕೆ ನೂರು, ಸಾವಿರ, ಲಕ್ಷ, ಕೋಟಿ ಸತ್ತಿಗೆ(ಛತ್ರಿ)ಗಳು ಮೇಲೆದ್ದವು.

ಭೇದಿಸರಿದೆನೆ ಪರಮಸಿಂಗರವ ಸಂ
ಪಾದಿಸಿಕೊಂಡು ಸೌಖ್ಯದಲಿ
ಸಾಧಿಸಿ ಕಲಿತ ನಾನಾ ವಾದ್ಯ ನಿಚಯವ
ನಾದಿಸಿದರು ನಾರಿಯರು ೬

ಅಲಂಕೃತಗೊಂಡ ನಾರಿಯರು ತಾವು ಕಲಿತ ನಾನಾವಾದ್ಯಗಳನ್ನು ನುಡಿಸಿದರು. (ನಾದಿಸಿದರು=ನಾದ ಹೊರಹೊಮ್ಮುವಂತೆ ಮಾಡಿದರು)

ಬಿಡದೊದರುವ ವಾದ್ಯರಭಸ ಪಾಠಕಿಯರು
ಗ್ಗಡಣೆಯನಾರು ಬಣ್ಣಿಪರು
ಮಡದಿ ರನ್ನೆಯರುಡಿದಾರ ಕಿಂಕಿಣಿಯಿಂದ
ನಡೆದರು ರಾಜವೀಧಿಯಲಿ ೭

ಬಿಡದೆ ಒಂದೇ ಸಮನೆ ಒದರುವ ವಾದ್ಯಗಳ, ಹೊಗಳುವ ಪಾಠಕಿಯರ ಘೋಷವೇಷಗಳನ್ನು ಯಾರು ವರ್ಣಿಸುವರು? ಸ್ತ್ರೀ ರತ್ನಗಳು ಉಡಿದಾರ ಕಿರುಗೆಜ್ಜೆಯಿಂದ ನಾದ ಮಾಡುತ್ತಾ ನಡೆದರು.

ಸಂಬಳಿಗೆಯು ಸಂಚಿ ಮೊಗವಾವುಡ ರನ್ನ
ಗಂಬಳಿ ಹೊನ್ನ ಹಾವುಗೆಯ
ಹೊಂಬಣ್ಣ ಮೆಯ್ಯ ಮಾನಿನಿಯಣ ಕುವರಿಯ
ಬೆಂಬಳಿವಿಡಿದೆಯ್ದಿದರು ೮

ಭರಣಿ, ಚೀಲ, ಮುಖವನ್ನು ಒರೆಸುವ ತೆಳುವಾದ ವಸ್ತ್ರ, ರತ್ನಗಂಬಳಿ, ಚಿನ್ನದ ಪಾದುಕೆಗಳ ಹೊಂಬಣ್ಣದ ಬೊಂಬೆಯಂಥ ಮಾನಿನಿಯರು, ಕುಮಾರಿಯ ಬೆಂಬಳಿಯಲ್ಲಿ ಬಂದರು.

ಕುಂಚ ಸುವರ್ಣ ದಂಡ ಚಾಮರಗಳ ಲಾ
ಮಂಚ ಬಿಜ್ಜಣದಾಲವಟ್ಟ
ಕಾಂಚನ ಸೌಮ್ಯ ಸಗ್ಗಳೆ ಗಿಂಡಿ ವೆಣ್ಗಳು
ಚಂಚಲಾಕ್ಷಿಯೊಡನೈದಿದರು ೯

ನವಿಲುಗರಿಯ ಕುಂಚಿಗೆ, ಕನಕದಂಡ, ಚಾಮರ(ಚಮರೀ ಮೃಗದ ಕೂದಲಿನಿಂದ ಕುಚ್ಚಿನಂತೆ ಮಾಡಿದ ಬೀಸಣಿಗೆ)ಲಾಮಂಚ (ಸುವಾಸನಾ ಮೂಲಿಕೆ) ಬಿಜ್ಜಣವಾಲವಟ್ಟ(ಬೀಸಣಿಗೆ; ಇವರೆಡೂ ಜೋಡಿ ನುಡಿ'ಬಿಜ್ಜಣ + ಆಲವಟ್ಟ ಆದ್ದರಿಂದ ಅವುಗಳಿಗೆ ಬೀಸಣಿಗೆ ಎಂದು ಒಂದೇ ಅರ್ಥ) ಸಗ್ಗಳೇ ನೀರು ತುಂಬಿದ ಚರ್ಮದ ಚೀಲ) ಗಿಂಡಿ(ಕಿರಿದಾದ ಬಾಯುಳ್ಳ ಮಿಳ್ಳೆ)ಗಳನ್ನು ಹಿಡಿದ ಹೆಣ್ಣುಗಳು ಉಷಾದೇವಿಯೊಡನೆ ತೆರಳಿದರು.

ರಂಜಿಪ ರನ್ನಗನ್ನಡಿ ರತ್ನಮಯ ಕಾ
ಳಾಂಜಿ ಕರ್ಪೂರ ಕರಂಡ
ಮಂಜುಳ ಗಂಧೋದಕ ಹೂಜೆಯವರ್ಗಳು
ಕಂಜಾಕ್ಷಿಯೊಡನೈದಿದರು ೧೦

ರನ್ನಗನ್ನಡಿ, ರತ್ನಖಚಿತ ಪೀಕದಾನಿ, ಕರ್ಪೂರ ಭರಣಿ, ಗಂಧೋದಕ ಹೂಜೆಯವರು ಕಮಲಾಕ್ಷಿಯೊಡನೆ ಹೊರಟು ಬಂದರು.

ಸುಳಿಗುರುಳವರುಂಗುರಗುರಳವರು ಬಾ
ಲಳಿಗುರುಳವರು ನುಣ್ಗುರುಳ
ತಳಿತ ನೀಲ್ಗುರಳ ಮಾನಿನಿಯರು ಕುವರಿಯ
ಬಳಿವಿಡಿದೈದಿರೊಗ್ಗಿನಲಿ ೧೧

ಸುಳಿಗುರುಳಿನವರು, ಗುಂಗುರುಗುರುಳಿನವರು, ಮರಿದುಂಬಿ ಕುರುಳವರು, ನುಣ್ಗುರುಳ ಹಾಗೂ ನೀಲ್ಗುರುಳ ಮಾನಿನಿಯರು ಕುಮಾರಿಯ ಸನಿಹದಲ್ಲೇ ಬಂದರು.

ಚೆಲ್ಲೆಗಣ್ಣ ಅರಳ್ಗಣ್ಣ ನಿಡಿಗಣ್ಣವರು
ಹುಲ್ಲೆಗಣ್ಣೆಸಳ್ಗಣ್ಣವರು
ಲಲ್ಲೆನೋಟದ ನಗೆಗಣ್ಣವರು ತೋರ ಧ
ಮ್ಮಿಲ್ಲೆಯರೆಯ್ದರೊಗ್ಗಿನಲಿ ೧೨

ವಿಲಾಸ ಕಣ್ಣಿನವರು, ಅರಳಿದ ಕಣ್ಣವರು, ನಿಡಿದಾದ ಕಣ್ಣವರು, ಜಿಂಕೆ ಕಣ್ಣವರು, ಎಸಳು ಕಣ್ಣವರು, ನಗೆ ಕಣ್ಣಿನವರು, ದಪ್ಪ ತುರುಬಿನವರು ಒಟ್ಟಾಗಿ ಬಂದರು.

ನಗೆಮೊಗದವರು ಸಿರಿಮೊಗದವರು ತಾವರೆ
ಮೊಗದವರು ಮುದ್ದು ಮೊಗದವರು
ಮಿಗೆ ಚೆಲುವಿನ ಬಟ್ಟಮೊಗದವರು ನಲೆ ನ
ಲ್ಬಗೆಯಿಂ ನಡೆದರೊಗ್ಗಿನಲಿ ೧೩

ನಗೆ ಮುಖದುರು, ಸಿರಿಮುಖದವರು, ಕಮಲ ಮುಖದವರು, ಮುದ್ದು ಮುಖದವರು, ಸುಂದರ ದುಂಡು ಮುಖದವರು ಒಳ್ಳೆ ಮನಸ್ಸಿನಿಂದ ಹಿಂಬಾಲಿಸಿದರು.

ಉಂಗುರವಿಡಿ ನಡುವಿನ ಮುದ್ದು ಲಾವಣ್ಯ
ದಂಗ ತಿವಳಿ ಪೊರವಾರು
ಹೊಂಗದಳಿಯನೇಳಿಸುವ ಪೆರ್ದೊಡೆಯೆಳ
ವೆಂಗಳ್ಯೆದಿದರೆಡಬಲದಿ ೧೪

ಹಿಡಿನಡು, ಮುದ್ದಾದ ಮೈಮಾಟ, ಕಿಬ್ಬೊಟ್ಟೆಯಲ್ಲಿನ ಮೂರುಗೆರೆ, ನಿತಂಬ, ಹೊಂಬಣ್ಣದ ಬಾಳೆಕಂದನ್ನು ಲೇವಡಿ ಮಾಡುವ ತೊಡೆಯ ಎಳೆಯ ಹೆಣ್ಣುಗಳು ಎಡಬಲದಲ್ಲಿ ಬಂದರು.

ಗಂದೇಭಗಮನೆಯರು ಅಂಚೆ ನಡೆಯವರು
ಮಂದಗಮನೆಯರು ಮುದದಿ
ಅಂದವಡೆದ ಚರಣಾಭರಣಗಳ ಉಲುಹಿ
ನೊಂದಿಗೈದಿದರಿಕ್ಕೆಲದಿ ೧೫

ಮದಿಸಿದ ಗಜಗಮನೆಯರು, ಹಂಸಗಮನೆಯರು, ಮಂದಗಮನೆಯರು, ಸುಂದರ ಚರಣಾಭರಣಗಳ ಸದ್ದಿನೊಂದಿಗೆ ಎರಡು ಕಡೆಯಲ್ಲೂ ಬಂದರು.

ಸೊಕ್ಕಾನೆ ನಡೆವೆತ್ತ ಸೊಬಗಿಯರು ವಿಟರೆರ್ದೆ
ಬಿಕ್ಕನೆ ಬಿರಿಯುವಂದದಲಿ
ಅಕ್ಕರಿಂದಾಲೋಕನಗೆಯ್ದು ಮದನನ
ಮೊಕ್ಕಳಕೊಳಗು ರೂಡಿದರು ೧೬

ಸೊಕ್ಕಿದ(ಮದಿಸಿದ) ಆನೆಯ ನಡೆಯ ಸೊಬಗಿಯರು ವಿಟರ ಎದೆ ಬಿರಿಯುವ (ಸೀಳಿಕೊಳ್ಳುವ) ರೀತಿಯಲ್ಲಿ ಕತ್ತಿಯ ಹರಿತದ ಕಣ್ಣಿನಿಂದಲೇ ಮನ್ಮಥಬಾಧೆಯ ಹೆಚ್ಚಳಕ್ಕೆ ಒಳಗು ಮಾಡಿದರು.

ಇಕ್ಕಿದ ಚರಣಭೂಷಿತ ಕೆಳದಿಯರೆಂಟು
ದಿಕ್ಕನೊಳತಿ ರೂಪುವಡೆದು
ಲೆಕ್ಕಿಸಲರಿದೆಂಬವೊಲು ತೆರಳಿದರು ಪ
ಲ್ಲಕ್ಕಿಯ ಸುತ್ತ ಸಂದಣಿಸಿ ೧೭

ಚರಣಾಭರಣ ತರುಣಿಯರು ಎಂಟು ದಿಕ್ಕಿನಲ್ಲೂ ಅತಿಯಾದ ರೂಪನ್ನು ಪಡೆದು, ಅವರನ್ನು ಅಲಕ್ಷಿಸಲು ಅಸಾಧ್ಯವೆಂಬಂತೆ ಪಲ್ಲಕ್ಕಿಯ ಸುತ್ತ ಗುಂಪುಗುಂಪಾಗಿ ತೆರಳಿದರು.

ಓಣಿಯಿಕ್ಕೆಲದಲಿ ದೊರೆವೆಣ್ಣುಗಳು ಮುತ್ತು
ಮಾಣಿಕದಾರತಿ ಬೆಳಗಿ
ಕಾಣಿಕೆಯಿತ್ತು ಕೆಯ್ಮುಗಿದರು ಹರಿ ನೀಲ
ವೇಣಿಯ ನೋಡಿ ಸಂತಸದಿ ೧೮

ರಸ್ತೆಯ ಎರಡೂ ಕಡೆ ಸಮಾನ ವಯಸ್ಸಿನ ತರುಣಿಯರು ಮುತ್ತು ಮಾಣಿಕ್ಯದ ಆರತಿ ಬೆಳಗಿ ಕಾಣಿಕೆ ಕೊಟ್ಟು, ನೋಡಿ ಸಂತಸಗೊಂಡು, ಕರಿನಾಗರದಂಥ ಜಡೆಯವಳಿಗೆ ಕೈಮುಗಿದರು. (ಹರಿ=ಸರ್ಪ, ನವಿಲು)

ಪುಣ್ಯಾಂಗನೆಯ ಇಕ್ಕೆಲದಲಿ ನಿಂದಿರುವ
ಪಣ್ಯಾಂಗನೆಯರನೇಕ
ಪುಣ್ಯವ ಮಾಡಿರ್ದೆವಿಂದೀಯಕನ ಲಾ
ವಣ್ಯವನು ಕಂಡೆವೆಂದರು ೧೯

ಪುಣ್ಯಾಂಗನೆ ಉಷಾದೇವಿಯ ಎರಡೂಕಡೆ ನಿಂತಿರುವ ಪಣ್ಯಾಂಗನೆಯರು (ವೇಶ್ಯೆಯರು) ಪೂರ್ವಜನ್ಮದ ಪುಣ್ಯದಿಂದ ಈ ಅಕ್ಕನ ಸೌಂದರ್ಯವನ್ನು ಕಣ್ತುಂಬ ನೋಡಿದೆವು ಎಂದರು.

ಎಡಬಲದುಪ್ಪರಿಗೆಯ ಸಾಲುಸಾಲುಗಳ
ಲಡರಿ ನೋಳ್ಪ ಹೆಣ್ಣು ಗಂಡು
ಜಡಜ ಕುಟ್ಮಲ ಯೌವ್ವನೆಯರನೀಕ್ಷಿಸಿ
ಪಡೆದರತನು ಪಾಪಗಳನು ೨೦

ಎಡಬಲದ ಸಾಲುಸಾಲು ಉಪ್ಪರಿಗೆಗಳನ್ನು ಹತ್ತಿ ನೋಡುವ ಹೆಣ್ಣುಗಂಡುಗಳು ಕಮಲದ ಮೊಗ್ಗಿನಂಥ ಯುವತಿಯರನ್ನು ನೋಡಿ ಮನ್ಮಥ ತಾಪಕ್ಕೆ ತುತ್ತಾದರು.

ಬಾಣಪುತ್ರಿಯ ಕೆಳದಿಯರ ನೋಡಿದರು ಪೂ
ಬಾಣಸಮಾನ ಸದ್ವಿಟರು
ಬಾಣ ತಾಗಿದ ಹರಿಣಗಳಂದದಿ ಪಂಚ
ಬಾಣ ಥಟ್ಟುಗಿದು ಬಿದ್ದಿಹರು ೨೧

ಮನ್ಮಥ ಸದೃಶ ಸದ್ವಿಟರು(ಸಾತ್ತ್ವಿಕ ಕಾಮುಕರು)ಬಾಣನ ಮಗಳ ಕೆಳದಿಯರ ಅಂದವನ್ನು ನೋಡಿ, ಬಾಣ ತಾಗಿದ ಜಿಂಕೆಗಳಂದದಲ್ಲಿ, ಪಂಚಬಾಣನ ಬಾಣನೆಟ್ಟು ಬಿದ್ದಿಹರು.

ಮಂಡಳಿಸಿರ್ದ ಮಾನಿನಿರನ್ನೆಯರ ರೂಪ
ಕಂಡ ನಿಷ್ಕಾಮ ತಾಪಸರು
ದುಂಡು ಮಲ್ಲಿಗೆಗೋಲು ತಾಗಲು ತಪಗೆಟ್ಟು
ಬೆಂಡಾದರತಿ ವಿರಹದಲಿ ೨೨

ಸುತ್ತುವರಿದಿದ್ದ ಸ್ತ್ರೀರತ್ನಗಳ ರೂಪ ಕಂಡ ನಿಷ್ಕಾಮ ತಾಪಸರು, ಮನ್ಮಥನ ಹೂಬಾಣ ತಾಗಿ, ತಪಗೆಟ್ಟು, ವಿರಹದಲ್ಲಿ ಬೆಂದು ಬೆಂಡಾದರು.

ಮುಂದೆ ಬಾರಿಸುವ ನಾನಾ ವಾದ್ಯ ರಭಸದಿ
ನಿಂದುಗ್ಗಡಿಪ ಮಾಗಧರು
ಸಂದಣಿಸಿದರಣ್ಣಗಳ ದಾದಿಯರ ಹೊ
ನ್ನಂದಣದ ಬೆನ್ನ ಭಾಗದಲಿ ೨೩

ಮುಂದೆ ಬಾರಿಸುವ ನಾನಾ ವಾದ್ಯಗಳ ರಭಸದ ಮಧ್ಯೆ ನಿಂತು ಉದ್ಘೋಷಿಸುವ ವಂದಿ ಮಾಗಧರು (ಹೊಗಳು ಭಟ್ಟರು) ಅಣ್ಣಂದಿರ, ದಾದಿಯರ ಹೊನ್ನಂದಣದ (ಚಿನ್ನದ ಪಲ್ಲಕ್ಕಿಯ)ಹಿಂಭಾಗದಲ್ಲಿ ಗುಂಪುಗೂಡಿದರು.

ತೋರಣಗುಡಿ ಗೋಪುರಕೆ ಕೆಯ್ನೀಡುವ
ವಾರಣನಿಚಯದ ಪಿಂದೆಸೆಯೆ
ಸಾರಣವೆಂಗಳು ನುಡಿನಡೆಗಲಿಯುವ ವಿ
ಚಾರಣದಿಂದಲೆಯ್ದಿದರು ೨೪

ಗುಡಿಗೋಪುರಗಳ ತೋರಣದ ಮಾವಿನಸೊಪ್ಪಿಗೆ ಸೊಂಡಿಲು ಚಾಚುವ ಆನೆಗಳ ಹಿಂದೆಯೇ ಜಿಂಕೆಯಂತೆ ಜಗಿಯುವ ಹೆಣ್ಣುಗಳು ನಡೆನುಡಿ ಕಲಿಯುವ ವಿಚಾರದಿಂದ ಬಂದರು.

ಸಡಗರದಿಂದ ನೋಡುವರ ಕಣ್ಣಾಲಿಗ
ಳೊಡತಿಯ ಮೇಲೆ ನೆಡಲು ಬಿಡದೆ
ಅಡಹಾಯ್ದವಕೆ ತಮ್ಮಯ ಪೇರುರವಾಂತು
ತಡೆದರು ಬಲ್ಮೊಲೆಗಳಲಿ ೨೫

ಸಡಗರದಿಂದ ನೋಡುವವರ ಕಣ್ಣಾಲಿಗಳು ಒಡತಿಯ ಮೇಲೆ ನೆಡಲು ಬಿಡದೆ(ಆರ್ಥಾತ್ ದೃಷ್ಟಿಯಾಗಿ ನರಳಲು ಅವಕಾಶಕೊಡದೆ) ಅಡ್ಡ ಬಂದು ವಿಶಾಲವಕ್ಷವನ್ನು ಗುರಾಣಿಯನ್ನಾಗಿಸಿ ತಮ್ಮ ದಡಿಮೊಲೆಗಳಿಂದ ತಡೆದರು.

ಅವರ ಲಾವಣ್ಯಾಂಬು ವಿಟರ ಕಣ್ಮೀಂಗಳ
ಜವಗಿಡಿಸಿದುವು ಗೋಪ್ಯದಲಿ
ಕುವರಿಯ ಪರಮ ಸೌಂದರ ಸಿಂಧುರ ಕೈವ
ಶವಲ್ಲ ನರಗಿರರಿಂಗೆ ೨೬

ಅವರ ಸೌಂದರ್ಯದ ಬಾಣಗಳು ಕಾಮುಕರ ಕಣ್‌ಮೀನುಗಳನ್ನು ಚಲಿಸದಂತೆ ಮಾಡಿದವು, ಮನುಷ್ಯಗಿನುಷ್ಯರಿಗೆ ಕುಮಾರಿಯ ಸೌಂದರ್ಯ ಸಿಂಧುರ (ಆನೆ) ಸುಲಭವಾಗಿ ಕೈವಶವಲ್ಲ.

ಕೊತ್ತಳ ಜಘನ ಬಲ್ಮೊಲೆ ಮುಗಿಲಟ್ಟಳೆ
ವೃತ್ತ ಪೆರ್ದುರುಬಿನ ತೆನೆಯ
ಚಿತ್ತಜ ನಡೆಗೋಂಟೆಯಂತೆ ಪಲ್ಲಕ್ಕಿಯ
ಸುತ್ತಲೆಯ್ದರು ಕೆಳದಿಯರು ೨೭

ಹೆಣ್ಣಿನ ನಿತಂಬವೇ(ಕುಂಡಿಯೇ) ಕೋಟೆಯ ಬುರುಜು, ಬಲ್ಮೊಲೆಯೆ ಮುಗಿಲೆತ್ತರದ ವೇದಿಕೆ, ದುಂಡು ತುರುಬೇ ಕೋಟೆಯ ತುದಿ, ಆದ್ದರಿಂದ ಉಷಾದೇವಿಯ ಗೆಳತಿಯರೇ ಮನ್ಮಥನ ನಡೆದಾಡುವ ಕೋಟೆ ಎಂಬಂತೆ ಪಲ್ಲಕ್ಕಿಯ ಸುತ್ತ ಲಲ್ಲೆ ಹಾಕುತ್ತಾ ಮುನ್ನಡೆದರು.

ಇಚ್ಚಾರಿ ಮಕರ ತೋರಣ ರತ್ನ ಕೀಲಿತ
ನಿಚ್ಚಳ ಹೊನ್ನಂದಣದಲಿ
ಸ್ವಚ್ಛದಿ ಪೊರಮಟ್ಟಳು ವರಪುರಲಕ್ಷ್ಮಿಯ
ಉಚ್ಚವ ಮೂರುತಿಯಂದದಿ ೨೮

ಎರಡೂ ಕಡೆಯೂ ಮೆರವಣಿಗೆಯ ತೋರಣವಿರುವ ರತ್ನಖಚಿತ ಚಿನ್ನದ ಅಂದಣ(ಪಲ್ಲಕ್ಕಿ)ದಲ್ಲಿ ಪುರಲಕ್ಷ್ಮಿಯ ಉತ್ಸವ ಮೂರ್ತಿಯಂತೆ ಹೊರಹೊರಟಳು.

ಹುಲಿಮೊಗ ಅಂಕವಾಗಿಲು ಕೋಟೆಕೊತ್ತಳ
ಸಲಿಲಪೂರಿತದ ಪೇರಗುಳು
ನಲಿನಾಯತಾಕ್ಷಿ ನೋಡುತ ಬಂದಳು ಶಿವ
ನೆಲೆಸಿರ್ದ ನಂದನದೆಡೆಗೆ ೨೯

ಹುಲಿಮುಖ, ಯುದ್ಧದ ಬಾಗಿಲು, ಕೋಟೆಕೊತ್ತಳ, ನೀರು ತುಂಬಿದ ದೊಡ್ಡ ಕಂದಕಗಳನ್ನು ಕುಮಾರಿ ನೋಡುತ್ತಾ ಶಿವ ನೆಲೆಸಿದ್ದ ನಂದನದೆಡೆಗೆ ಬಂದಳು.

ಉನ್ನತ ವನಲಕ್ಷ್ಮಿ ಧರಿಸಿದ ಸುಂದರ
ಹೊನ್ನ ಮೇಖಲೆಯೆಂಬಂತೆ
ಸೊನ್ನಾರಗೆಲಸದಿಂದೊಪ್ಪುವ ಕಡೆಯಾಣಿ
ಚಿನ್ನದ ಕೋಂಟೆ ರಂಜಿಸಿತು ೩೦

ಶ್ರೇಷ್ಠ ವನಲಕ್ಷ್ಮಿ ಧರಿಸಿದ ಚಿನ್ನದ ಮೇಖಲೆ (ಡಾಬು) ಎಂಬಂತೆ ಚಿನ್ನದ ಮುಲಾಮಿನಿಂದ ಶೋಭಿಸುವ ಕಡೆಯಾಣಿ (ಅಪರಂಜಿ) ಚಿನ್ನದ ಕೋಟೆ ರಂಜಿಸಿತು

ತಿಂಗಳ ಜೂಟಗೆ ಸುರನಾರಿಯರು ತಂದ
ಮಂಗಳ ಜಲ ಕುಂಭದಂತೆ
ಕಂಗೊಳಿಸುವ ಕೋಟೆಯ ತೆನೆಗೊಂದೊಂದು
ಪೊಂಗಳಸಂಗಳೊಪ್ಪಿದುವು ೩೧

ತಿಂಗಳ ಜೂಟ(ಚಂದ್ರಶೇಖರ)ನಿಗೆ ದೇವತಾಸ್ತ್ರೀಯರು ಹೊತ್ತು ತಂದಿರುವ ಜಲಕುಂಭಗಳಂತೆ ಕೋಟೆಯ ತೆನೆ(ತುದಿ)ಗಳಿಗೆ ಒಂದೊಂದು ಚಿನ್ನದ ಕಳಶಗಳೊಪ್ಪಿದುವು.

ಸಿಂಗರದೋಂಟದ ಹೆಬ್ಬಾಗಿಲುಪ್ಪರಿಗೆಯ
ಹೊಂಗಳಸವ ಕಂಡು ನಮಿಸಿ
ಹೆಂಗಳರನ್ನೆ ಪಲ್ಲಕ್ಕಿಯಿಂದಿಳಿದಳು
ತ್ತುಂಗಯೌವ್ವನೆ ಸಖಿಯೊಡನೆ ೩೨

ಶೃಂಗಾರ ತೋಟದ ಹೆಬ್ಬಾಗಿಲು ಉಪ್ಪರಿಗೆಯ ಹೊಂಗಳಸ ಕಂಡು ನಮಸ್ಕರಿಸಿ, ಉತ್ತುಂಗ ಯೌವ್ವನಸ್ಥೆಯಾದ ಉಷಾದೇವಿ ಪಲ್ಲಕ್ಕಿಯಿಂದ ಇಳಿದಳು

ಬಾರಿಸುತಿರ್ಪ ನಾನಾ ವಾದ್ಯ ಸಾಕೆಂದು
ಸಾರಿಸಿ ಗಜಗಮನೆಯರು
ತೋರಿಸಿದರು ಕುವರಿಗೆ ಹೊನ್ನ ತೋರಣ
ವೇರಿಸಿದಮಲ ಗೋಪುರವ ೩೩

ಬಾರಿಸುತ್ತಿರುವ ನಾನಾ ವಾದ್ಯಗಳನ್ನು ನಿಲ್ಲಿಸಿ ಎಂದು ಹೇಳಿದ ಗಜಗಮನೆಯರು, ಚಿನ್ನದ ತೋರಣ ಕಟ್ಟಿರುವ ನಿರ್ಮಲಗೋಪುರವನ್ನು ಕುಮಾರಿಗೆ ತೋರಿಸಿದರು.

ಏನಬಣ್ಣಿಸುವೆ ಬಾಗಿಲ ಮುಂದೆ ದಿವ್ಯ ವಿ
ಮಾನ ಮೂವತ್ತು ಮೂರ್ಕೋಟಿ
ದಾನವ ದಿಗ್ದಂತಿ ಹಯ ಉಚ್ಚೈಶ್ರವ
ನಾನಾ ಪರಿಯಲಿ ನರ್ತಿಪುವು ೩೪

ಏನನ್ನು ವರ್ಣಿಸುವುದು ಬಿಡುವುದು? ಬಾಗಿಲ ಮುಂದೆ ದೇವರ ರಥ, ಮೂವತ್ತು ಮೂರು ಕೋಟಿ ದಿಗ್ಗಜಗಳು, ಅಶ್ವಗಳು, ಉಚ್ಚೈಶ್ರವ (ಇಂದ್ರನ ಕುದುರೆ) ನಾನಾ ರೀತಿಯಲ್ಲಿ ಕುಣಿದಾಡುತ್ತಿರುವುವು.

ಸಡಗರದಿಂದ ನೋಡಿದರೆ ಕಣ್ಗೆಸೆದರು
ಮೃಡಗೇಹ ದ್ವಾರಪಾಲಕರು
ಜಡವಲ್ಲದ ದಿವ್ಯದೇಹ ವೃಂದಾರಕ
ಗಡಣವೊಪ್ಪಿರ್ದುದಿಕ್ಕೆಲದಿ ೩೫

ಮುಂದೆ ನೋಡಿದರೆ ಶಿವಾಲಯದ ದ್ವಾರಪಾಲಕರು, ಎರಡೂ ಕಡೆ ದೇವತೆಗಳ ಸಮೂಹ ಕಣ್ಣಿಗೆ ಕಂಡರು.

ಬಾಣನಂದನೆ ಬಂದಳೆನೆ ಕೇಳ್ದು ಕರೆಸಿದ
ನೇಣಾಂಕಧರ ಮಮತೆಯಲಿ
ಕಾಣಲುದ್ಯೋಗಿಸಿ ನಡೆದಳು ಕುವರಿ ಗೀ
ರ್ವಾಣರ ಮೊಗವ ನಿಟ್ಟಿಸುತ ೩೬

ಬಾಣನ ಮಗಳು ಬಂದ ಸುದ್ದಿಯನ್ನು ಕೇಳಿ ಶಿವ ಮಮತೆಯಿಂದ ಒಳಗೆ ಬರಲು ಹೇಳಿಕಳಿಸಿದ. ಕುಮಾರಿ ದೇವತೆಗಳ ಮುಖ ನೋಡುತ್ತಾ ಶಿವನನ್ನು ಕಾಣಲು ಒಳ ಹೋದಳು

ಸೊಗಯಿಪ ಪಚ್ಚೆಯ ಪಾಸರೆಯಲಿ ಪಾದ
ಯುಗ ಹೊನ್ನ ಹಾವುಗೆವೆರಸಿ
ಜಗದೇಕ ಪರಮಸೌಂದರಿ ಹೆಜ್ಜೆಯಿಡಲು ಹೊ
ಮ್ಮಿಗ ಹೋದ ಬಟ್ಟೆಯಂತಾಯ್ತು ೩೭

ಪಚ್ಚೆಯ ಹಾಸುಬಂಡೆಯ ಮೇಲೆ ಹೊನ್ನ ಹಾವುಗೆ(ಪಾದುಕೆ) ಧರಿಸಿದ ಸುಂದರ ಕುವರಿ ಹೆಜ್ಜೆ ಇಡಲು ಹೊಂಬಣ್ಣದ ಜಿಂಕೆ ಹೋದ ದಾರಿಯಂತೆ ಕಂಡು ಬಂದಿತು

ಸ್ಮರ ಭದ್ರಗಜ ಯೂಥದ ವಿಳಾಸಿನಿಯರ
ಚರಣ ಸಪ್ಪುಳವೈತರಲು
ವರ ನೀಲ ಮಣಿಗಟ್ಟಿನ ಮೇಲೆ ಹೊಂಬಳ್ಳಿ
ಬರೆದಂತೆ ಕಣ್ಗೆ ರಂಜಿಸಿತು ೩೮

ಮನ್ಮಥನ ಮದಿಸಿದ ಆನೆಗಳ ಹಿಂಡಿನಂತೆ ವಿಲಾಸಿನಿಯರ ಹೆಜ್ಜೆ ಸದ್ದು ಐತರಲು, ಸುಂದರ ನೀಲಿ ನೆಲೆಗಟ್ಟಿನ ಮೇಲೆ ಹೊನ್ನಿನ ಬಳ್ಳಿ ಬರೆದಂತೆ ಕಣ್ಣುಗಳಿಗೆ ರಂಜಿಸಿತು

ಇಕ್ಕೆಲದೊಳು ಬರ್ಪ ಮಿಂಡಿಯರೊಳು ತನ್ನ
ಕಕ್ಕಸ ಕುಚದ ಭಾರದಲಿ
ಚಕ್ಕನೆ ನಡೆಯಲಾರದೆ ಮೆಲ್ಲಡಿಯಿಟ್ಟು
ಹೊಕ್ಕಳು ಶಿವನಿದ್ದ ವನವ ೩೯

ಎರಡೂ ಕಡೆ ಬರುವ ಕಟ್ಟರೆಯದ ಬೆಡಗಿಯರೊಡನೆ ತನ್ನ ಗಟ್ಟಿ ಮೊಲೆಗಳ ಭಾರದಿಂದ ಸರಸರನೆ ನಡೆಯಲಾರದೆ ಮೆಲ್ಲನೆ ನಡೆದು ಶಿವನಿದ್ದ ವನವನ್ನು ಹೊಕ್ಕಳು

ದೊರೆವೆಣ್ಣ ಪೊಂಬಾಳೆದೊಡೆ ಪೆಂಪು ಸೂಸು
ತ್ತಿರೆ ಕಂಡೊಳಗೊಳಗೆ ಕರುಬಿ
ಒರೆಗೆ ತಾ ಸರಿ ಬಂದುದಿಲ್ಲೆಂದು ಸತತ
ಹೊರೆಗಳೆದುವು ಬಾಳೆ ಬನದಿ ೪೦

ದೊರೆಮಗಳ ಹೊಂಬಣ್ಣದ ಬಾಳೆಯ ಕಂದಿನಂತೆ ಕಂಗೊಳಿಸುವ ತೊಡೆಗಳನ್ನು ನೋಡಿ ಒಳಗೊಳಗೆ ಅಸೂಯೆ ಪಟ್ಟು, ತಾವು ಅವುಗಳಿಗೆ ಸರಿಸಾಟಿಯಲ್ಲವೆಂದು ವನದಲ್ಲಿ ಬಾಳೆಗಳು ಪದರಗಳನ್ನು ಸತತವಾಗಿ ಬಿಚ್ಚುತ್ತಾ ಹೋದವು.

ಒಂಬತ್ತು ತಿಂಗಳು ಹೊತ್ತ ಮಾತೃಕೆಯ ಪಾ
ದಾಂಭೋರುಹಕಲರ್ಗರೆದು
ಮುಂಬಾಗಿ ಕೈನೀಡಿ ಶರಣೆಂಬ ರೀತಿಯಲಿ
ಪೊಂಬಾಳೆ ಬನದೊಳೊಪ್ಪಿದವು ೪೧

ಒಂಭತ್ತು ತಿಂಗಳು ಹೊತ್ತು ಹೆತ್ತ ಮಾತೆಯ ಪಾದಕಮಲಕ್ಕೆ ಹೂವನ್ನು ಅರ್ಪಿಸಿ ಶರಣು ಮಾಡುವ ರೀತಿಯಲ್ಲಿ ಹೊಂಬಾಳೆ (ಬಾಳೆಗೊನೆಯ ಹೂವು)ಗಳು ಕೆಳಕ್ಕೆ ಬಾಗಿರುವುದು ಕಂಡಿತು

ಅಂಗಜನ ಮಡುಹಿದ ಸೂತಕದಿಂದುಮೆಯ
ಸಂಗಕೆ ಬರೆನೆಂದು ತಿಳುಪಿ
ಹೊಂಗೊಡದಲಿ ನೀರ ಹೊತ್ತ ಧೂರ್ಜಟಿಯಂತೆ
ತೆಂಗಾಯ ಮರಗಳೊಪ್ಪಿದುವು ೪೨

ಮನ್ಮಥನನ್ನು ಕೊಂದ ಸೂತಕದಲ್ಲಿ (ಜನನ ಮರಣಗಳಿಂದಾಗುವ ಮೈಲಿಗೆ)ಪಾರ್ವತಿಯ ಅಂಗಸಂಗ ಮಾಡುವುದಿಲ್ಲ ಎಂದು ತಿಳಿಸಿ ಚಿನ್ನದ ಕೊಡದಲ್ಲಿ ನೀರನ್ನು ಹೊತ್ತ ಶಿವನಂತೆ ತೆಂಗಿನಕಾಯಿ ಮರಗಳು ಕಂಗೊಳಿಸಿದುವು.

ನಸಿದ ಕಾಮವ ಪೆರ್ಚಿಸುವ ದಿವ್ಯಘುಟಿಕೆಯ
ಪಸುರ್ಗರಡಿಗೆಯೊಳು ತುಂಬಿ
ವಸುಧೆಯೊಳು ಮೆರೆಸಲು ಕಟ್ಟಿದಂದದಲಿ ಕ
ಣ್ಗೆಸೆದುವು ಪೂಗ ವೃಕ್ಷಗಳು ೪೩

ನಶಿಸಿದ ಕಾಮವನ್ನು ಹೆಚ್ಚಿಸುವ ಸಲುವಾಗಿ ದಿವ್ಯ ಗುಳಿಗೆಯನ್ನು ಹಸುರು ಕರಡಿಗೆ (ಭವಣಿ)ಯಲ್ಲಿ ತುಂಬಿ ಪ್ರಪಂಚದಲ್ಲಿ ಮೆರೆಸಲು ಅಡಕೆಕಾಯಿಗಳಿಂದ ಕೂಡಿದ ಅಡಕೆಮರಗಳು ಕಣ್ಣಿಗೆ ರಂಜನೆ ನೀಡಿದವು.

ಕಾಮಾಸ್ತ್ರ ನಿಯಳಯದಿ ನಿಖಿಳ ಪಚ್ಚೆಯ ಸಭಾ
ಧಾಮದ ಮೇಲ್ಗಟ್ಟಿನಂತೆ
ರಾಮಣೀಯತೆವೆತ್ತ ಚೆಂದಳಿರ ಮಿಡಿಯಿಂದ
ಮಾಮರ ಮನಂಗೊಳಿಸಿದುವು ೪೪

ಮನ್ಮಥ ಭವನದಲ್ಲಿ ಪಚ್ಚೆಯ ಸಭಾಮಂಟಪದ ಮೇಲ್ಗಟ್ಟಿನಂತೆ ರಮ್ಯತೆಯ ಚೆಂದಳಿರು ಹಾಗೂ ಮಿಡಿ(ಹೀಚು)ಗಳಿಂದ ಮಾವಿನಮರಗಳು ಮನವನ್ನು ಸೂರೆಗೊಂಡವು.

ಮೀರಿದ ಕಮ್ಮಲರ್ಗಳ ದೇವಾರ್ಚನೆ
ಗೇರಿಸಗೊಡದೆ ಎಂಜಲಿಸಿ
ಪಾರುವ ಪರಮೆವಿಂಡುಗಳ ಬಂಧಿಸಿದಂತೆ
ನೇರಿಲ ಪಣ್ಗಳೊಪ್ಪಿದವು ೪೫

ಸುವಾಸನೆಯ ಹೂವುಗಳನ್ನು ದೇವರ ಮುಡಿಗೇರಿಸಲು, ಅವುಗಳ ಮೀಸಲುತನವನ್ನು ಹೋಗಲಾಡಿಸುವಂತೆ ಎಂಜಲು ಮಾಡಿ ಹಾರಿ ಹೋಗುವ ದುಂಬಿ ಹಿಂಡುಗಳನ್ನು ಬಂಧಿಸಿ ಸೆರೆಮನೆಯಲ್ಲಿ ಇಟ್ಟಂತೆ ನೇರಿಲ ಹಣ್ಣುಗಳು ಕಂಡವು

ಕೆಲರಿಂಗೆ ಬಾಹ್ಯ ದಾನವನಿತ್ತು ಯೋಗ್ಯರಿಂ
ಗಲಸದೆ ಗುಪಿತದಿಂ ಕೊಡುವ
ಸುಲಭದಾನಿಯ ಪಸುರ ಕೊನೆಯೊಳು ಕಾತ
ಹಲಸಿನ ಮರಗಳೊಪ್ಪಿದವು ೪೬

ಕೆಲವರಿಗೆ ಬಹಿರಂಗವಾಗಿ ದಾನವನ್ನು ನೀಡಿ , ಯೋಗ್ಯರಿಗೆ ಗೋಪ್ಯವಾಗಿ ಕೊಡುವಂತೆ ದಾನಿ (ಹಲಸಿನ ಬೀಜ)ಯನ್ನುಳ್ಳ ಕಾಯಿಬಿಟ್ಟ ಹಸುರುಗೊಂಬೆಯ ಹಲಸಿನ ಮರಗಳು ಒಪ್ಪಿದವು.

ಅಂಬೋರುಹ ಭವಾಂಡವ ರೋಮ ರೋಮದೊಳು
ಇಂಬಿಟ್ಟ ವಿಷ್ಣುವಿನಂತೆ
ಕೊಂಬರಿಲ್ಲದೆ ಕಾಯಿ ಪಣ್ಗಳ ತಾಳ್ದ
ದುಂಬರ ದ್ರುಮಗಳೊಪ್ಪಿದವು ೪೭

ಬ್ರಹ್ಮಾಂಡದ ರೋಮ ರೋಮದಲ್ಲಿ ಇಂಬಿಟ್ಟ (ನೆಲೆಗೊಂಡ) ವಿಷ್ಣುವಿನಂತೆ ಕೊಂಡುಕೊಳ್ಳುವವರಿಲ್ಲದಿದ್ದರೂ ಕಾಯಿ ಹಣ್ಣುಗಳನ್ನು ಪಡೆದ ಅತ್ತಿಯಮರಗಳೊಪ್ಪಿದವು.

ಭಜನೆಯ ಮಾಡಿ ಬಾಗಿಲಿಗೆ ಬಂದು ನಿಂದ
ದ್ವಿಜರನುಮತವ ತೀರಿಸಿದ
ನಿಜಲೋಭಿಶತವೆಂಬದಿ ಶಾಲ್ಮಲಿ
ಕುಜವಿರ್ದುದಾ ಬನಬನದಿ ೪೮

ಭಜನೆ ಮಾಡಿ ಬಾಗಲಿಗೆ ಬಂದು ನಿಂತ ದ್ವಿಜರ(ಹಕ್ಕಿಗಳ)ಇಷ್ಟವನ್ನು ತೀರಿಸದ ನೂರಕ್ಕೆ ನೂರು ಪಾಲು ಜಿಪುಣ ಎಂಬ ಬೂರುಗದ ಮರಗಳು ಇದ್ದುವು.

ಲಂಪಟರಿಗೊಳಗಾಗದ ಹದಿಬದೆಯಂತೆ
ಗಾಂಪ ಷಟ್ಪದ ಜಾರರಿಗೆ
ಸೊಂಪಾದ ಸೌಗಂಧ ರುಚಿದೋರದೆ ಪೆ
ರ್ಸಂಪಗೆ ಮರಗಳೊಪ್ಪಿದವು ೪೯

ಕಾಮುಕರಿಗೆ ಮೈ ಒಪ್ಪಿಸದ ಪತಿವ್ರತೆಯಂತೆ ದಡ್ಡ ದುಂಬಿ ಜಾರರಿಗೆ

ಸೊಂಪಾದ ಸುಗಂಧದ ರುಚಿದೋರದೆ ದೊಡ್ಡ ಸಂಪಿಗೆ ಮರಗಳು ರಾರಾಜಿಸಿದವು. (ನಿಜಸಂಗತಿ ಎಂದರೆ ಸಂಪಿಗೆ ಹೂವಿನ ಅಧಿಕ ಸುವಾಸನೆಗೆ ತಲೆತಿರುಗಿದಂತಗುವುದೆಂದು ದುಂಬಿಗಳು ಸಂಪಿಗೆ ಹೂವಿನ ಮಧು ಕುಡಿಯಲು ಬರುವುದಿಲ್ಲ. ಈ ಸತ್ಯವನ್ನು ಕನಕ ಚಾತುರ್ಯದಿಂದ ಮೇಲಿನಂತೆ ಚಿತ್ರಿಸಿದ್ದಾನೆ)

ಶಿವನಂತೆ ಭುಜಗಾಭರಣದಿಂ ಲಕ್ಷ್ಮೀ
ಧವನಂತೆ ವಿಹಗಧ್ವಜದಿ
ಅವಯವದೊಳು ಗಂಧವಡೆದ ಚಂದನ ವೃಕ್ಷ
ನಿವಹವೊಪ್ಪಿರ್ದುದಾ ಬನದಿ ೫೦

ಶಿವನಂತೆ ಸರ್ಪಾಭರಣದಿಂದ, ಲಕ್ಷ್ಮೀಕಾಂತನಂತೆ ಪಕ್ಷಿಧ್ವಜದಿಂದ, ಅಂಗೋಪಾಂಗದಲ್ಲಿ ಗಂಧ ಪಡೆದ ಶ್ರೀಗಂಧದ ಮರಗಳು ಆ ಬನದಲ್ಲಿದ್ದವು.

ಪೊಂಬಸಿರನಿಳೆಯೊಳು ಪೊಕ್ಕಲ್ಲಿ ಪಾಷಾಣ
ವೆಂಬ ಮರ್ತ್ಯರ ನುಡಿಗಳಲ್ದು
ಜಂಭಾರಿಪುರಕಡರುವ ರತ್ನದಂತೆ ದಾ
ಳಿಂಬದ ಕೊನೆವಣ್ಣಳಿಹವು ೫೧

ಬ್ರಹ್ಮನ ಇಹಲೋಕದಲ್ಲಿ ಪ್ರವೇಶಿಸಿದ ಕಡೆ ಪಾಷಾಣ (ಕಲ್ಲು) ಸದೃಶ ನರರ ನುಡಿಗೆ ಅತ್ತು ಜಂಭಾರಿ(ಜಂಭ ಎಂಬ ರಾಕ್ಷಸನ ಶತ್ರುವಾದ ಇಂದ್ರ) ಪುರಕ್ಕೆ ನೆಗೆಯುವ ರತ್ನಗಳಂತೆ ದಾಳಿಂಬೆಯ ಬೀಜ ತುಂಬಿದ ಹಣ್ಣುಗಳು ಕಣ್ಣಿಗೆ ಹಬ್ಬವನ್ನುಂಟು ಮಾಡಿದವು

ಮಾದಲ ನಿಂಬೆ ದೊಡ್ಡೀಳೆ ಕಂಚಿ ಕಿತ್ತೀಳೆ
ಸ್ವಾದ ಖರ್ಜೂರ ದ್ರಾಕ್ಷಿಗಳು
ಪಾದಪ ನಿಚಯ ಸತ್ಫಲಪೂಜೆಗಟ್ಟಿದಂ
ತಾದುದನೇಕ ಪಣ್ಣಸರ ೫೨

ಮಾದಲ, ನಿಂಬೆ, ದೊಡ್ಡೀಳೆ, ಕಂಚಿ(ಹೇರೀಳೆ), ಕಿತ್ತೀಳೆ, ರುಚಿಕರವಾದ ಖರ್ಜೂರ ದ್ರಾಕ್ಷಿಗಳ ವೃಕ್ಷ ಸಮೂಹ ಸತ್ಫಲ ಪೂಜೆಗೆ ಕಳಿಸಿದಾಂತಾಯ್ತು ಅನೇಕ ಹಣ್ಣುಗಳ ರಾಶಿರಾಶಿಯನ್ನು ಕಳಿಸಿದಂತೆ ಕಂಡಿತು.

ಥಂಡಿಯೊಳೇಗಳುಂ ಪ್ರಾಣಕಾಂತನನಪ್ಪಿ
        ಕೊಂಡಿರಿ ಅಗಲದಿರಿಯೆನುತ
ಮಿಂಡಿಯರಿಗೆ ಬುದ್ಧಿವೇಳಂತೆಲೆವಳ್ಳಿ
        ಮುಂಡಿಗೆಗಳನಡರಿದುವು ೫೩

ಥಂಡಿ(ಚಳಿ)ಯಲ್ಲಿ ಯಾವಾಗಲೂ ಪ್ರಾಣಪ್ರಿಯರನ್ನು ಅಪ್ಪಿಕೊಂಡಿರಿ, ಅಗಲಬೇಡಿ ಎಂದು ಮಿಂಡಿಯರಿಗೆ (ಯುವತಿಯರಿಗೆ) ಬುದ್ದಿ ಹೇಳುವಂತೆ ಎಲಬಳ್ಳಿಗಳು ಮರದ ಕಾಂಡಗಳನ್ನು , ದಿಮ್ಮಿಗಳನ್ನು ಸುತ್ತಿಕೊಂಡು ನೆಮ್ಮದಿಯಿಂದ ಇರುವವು.

ದಾನವ ದಶಕಂಠ ಕಂಠವಿಚ್ಛೇದ ವಿ
        ಮಾನ ಶ್ರೀರಾಮ ಲಕ್ಷ್ಮಣರ
ಸೇನೆಯ ಗಡಣವೆಂಬಂದದಿ ಬಹುವಿಧ
        ವಾನರ ಕೊನೆಯೊಳೊಪ್ಪಿದುವು ೫೪

ರಾಕ್ಷಸನಾದ ರಾವಣನ ಕಂಠ ವಿಚ್ಛೇದ ಮಾಡಿದ ರಾಮಲಕ್ಷ್ಮಣರ ಸೈನ್ಯ ಸಮೂಹ ಎಂಬಂತೆ ವಾನರಗಳು ಮರದ ರೆಂಬೆಕೊಂಬೆಗಳಲ್ಲಿ ನೆಗೆದಾಡುತಿದ್ದವು

ತಿಣ್ಣವಾದರೆ ತನ್ನ ತಲೆಪೊರೆಯನು ಮು
        ಕ್ಕಣ್ಣನೀ ಬನದೊಳಿಟ್ಟಂತೆ
ತಣ್ಣರೆಗಲ್ಲ ಸೋಪಾನದ ಕೊಳ ಬೆಳ
        ರ್ವಣ್ಣನ ಬಿರುಬು ತೋರಿದುವು ೫೫

ಭಾರವಾಗಲು ತನ್ನ ತಲೆಯ ಹೊರೆಯನ್ನು ಮುಕ್ಕಣನು ಈ ವನದಲ್ಲಿ ಇಟ್ಟಂತೆ, ತಣ್ಣನೆಯ ಅರೆಬಂಡೆಯ ಸೋಪಾನದ ಕೊಳ ಬೆಳರ್ವಣ್ಣನ (ಶಿವನ) ಬಿರುಬು(ಬಿರುಸು, ಗಟ್ಟಿತನ) ತೋರಿದವು

ನಳಿನಾಸ್ಯ ಕುಚಕೋಕ, ಕುಮುದಿನಿ ಚಕ್ಷು
        ಸುಳಿನಾಭಿ, ತ್ರಿವಳಿ ತರಂಗ
ಬಳಿವಾಳೆ ಪಲ್ಲವ ಪ್ರತಿಬಿಂಬ ತೊಡೆಪಾದ
        ಕೊಳವೆಣ್ಣು ಕಣ್ಣೆ ಶೋಭಿಸಿತು ೫೬

ಕಮಲವೇ ಮುಖ, ಚಕ್ರವಾಕ ಪಕ್ಷಿಯೇ ಸ್ತನ, ಕನ್ನೈದಿಲೆಯೇ ಕಣ್ಣು,

ನೀರಿನ ಸುಳಿಯೇ ಹೊಕ್ಕುಳು, ಕಿಬ್ಬೊಟ್ಟೆಯ ತಿವಳಿ(ಮೂರುಗೆರೆ)ಯೇ ಅಲೆ, ಬಾಳೆಯ ಕಾಂಡ ಮತ್ತು ಚಿಗುರುಗಳೇ ತೊಡೆ ಮತ್ತು ಪಾದ ಎಂಬಂತೆ ಕೊಳವೆಣ್ಣಿನ ಪ್ರತಿಬಿಂಬ ಕಣ್ಣುಗಳಿಗೆ ಕಂಡಿತು.

ಮಂದಾಕಿನಿ ಮಹಾದೇವನ ಜಡೆಗಳ
ಬಂಧದಿಂ ಬಿಡುಗಡೆ ಹೊಂದಿ
ನಂದನದೊಳು ಬಂದು ಪರಿದಾಡುವ ಚೆಲು
ವಿಂದ ಕಾಲುವೆಗಳೊಪ್ಪಿದುವು ೫೭

ಗಂಗೆ ಶಿವನ ಜಡೆಯ ಬಂಧನದಿಂದ ಬಿಡುಗಡೆಗೊಂಡು ನಂದನದಲ್ಲಿ ನಲವಿನಿಂದ ನಡೆದಾಡುವ ಚೆಲುವಿನಿಂದ ಕಾಲುವೆಗಳು ಕಂಡುಬಂದವು

ಕೊಳಗಳೊಳಗೆ ಕೊಳರ್ವಕ್ಕಿ ಚಕ್ರಿಗಳ ನಿ
ರ್ಮಳಿನ ಅಂಚೆ ಕೊಂಚೆಗಳ
ಮಳಲೊಟ್ಟಿಲನೇರಿ ನರ್ತಿಪ ನವಿಲ್ಗಳ
ಬಳಗವ ನೋಡುತ್ತೈದಿದಳು ೫೮

ಕೊಳಗಳಲ್ಲಿ ನೀರಹಕ್ಕಿ, ಚಕ್ರವಾಕ ಪಕ್ಷಿ, ಹಂಸ, ಕ್ರೌಂಚ ಪಕ್ಷಿಗಳನ್ನು ಹಾಗೂ ಮಳಲ ರಾಶಿಯನ್ನೇರಿ ನರ್ತಿಸುವ ನವಿಲುಗಳನ್ನು ನೋಡುತ್ತಾ ಬಂದಳು

ಭೋಗಿಭೂಷನ ಜಯಿಸುವೊಡೆ ಉಷೆಯಲ್ಲಿಗೆ
ಪೋಗಿ ಸಕ್ಕಜ ಮಾಡೆನುತ
ವಾಗೀಶನೊಡಹುಟ್ಟಿದಂಗೆ ಸೂಚಿಪಂತೆ
ಕೂಗಿತು ಕಲಕಂಠ ನಿಚಯ ೫೯

ಶಿವನನ್ನು ಜಯಿಸುವುದಾದರೆ ಉಷೆಯೊಡನೆ ಸಕ್ಕಜ(ಸ್ನೇಹ) ಮಾಡು ಎಂದು ಬ್ರಹ್ಮನ ಒಡಹುಟ್ಟಿದ ಮನ್ಮಥನಿಗೆ ಸೂಚಿಸುವಂತೆ ಕೋಗಿಲೆಗಳು ಕೂಗಿದವು

ಎತ್ತನೋಡಿದರಂಕುರಿತ ಸತ್ಕುಸುಮಿತ
ವೆತ್ತ ನೋಡಿದೊಡೆ ಸತ್ಫಲಿತ
ಎತ್ತ ನೋಡಲು ಕಳಿವಣ್ಣುಗಳ ತರುಲತೆ
ಕತ್ತಲೆಗೆಯ್ವುದಾ ಬನದಿ ೬೦

ಎತ್ತ ನೋಡಿದರೆ ಅತ್ತ ಮೊಳಕೆಗೊಂಡ, ಹೂಬಿಟ್ಟ, ಫಲಬಿಟ್ಟ, ಕಳಿತ ಹಣ್ಣುಗಳ ತರುಲತೆಗಳಿಂದ ಆ ಬನ ಕತ್ತಲೆಗೊಂಡಿದೆ

ಶಿವನ ಪಟ್ಟದ ಹೆಂಡತಿಯೊಡ ಹುಟ್ಟಿದ
ನಿವಹ ನೆಟ್ಟನೆ ಬಂದುವೆನೆ
ನವರತ್ನಗಳಿಂದ ರಚಿಸಿದ ಕೃತಕಾದ್ರಿ
ಕುವರಿಯ ಕಣ್ಗೆ ರಂಜಿಸಿತು ೬೧

ಶಿವನ ಪಟ್ಟದ ರಾಣಿ ಪಾರ್ವತಿಯೊಡನೆ ಒಡಹುಟ್ಟಿದ ಸಮೂಹ ನೆಟ್ಟಗೆ ಜೊತೆಯಲ್ಲಿ ಬಂದಿತೇನೊ ಎಂಬಂತೆ ನವರತ್ನಗಳಿಂದ ರಚಿಸಿದ ಕೃತಕಬೆಟ್ಟ ಕುಮಾರಿಯ ಕಣ್ಣಿಗೆ ಕಾಣಿಸಿತು

ಜತನದಿಂ ಕೊನೆವಿಡಿದು ನೇಲುವ ಚರ್ಮಾ
ಯತನವಕ್ಕಿಯ ಕಂಡು ನಗುತ
ಮಿತಿಯಿಲ್ಲದಲರ್ದೋಟವ ಪೊಕ್ಕು ಕೊಯ್ದರಾ
ಯತ ನೇತ್ರೆಯರು ಪುಷ್ಪಚಯವ ೬೨

ಎಚ್ಚರಿಕೆಯಿಂದ ಕೊಂಬೆಗಳಿಗೆ ಕಾಲುಗಳನ್ನು ಗಂಟು ಹಾಕಿಕೊಂಡು ತಲೆಕೆಳಗಾಗಿ ಜೋತು ಬಿದ್ದಿರುವ ಚರ್ಮಾಯತನವಕ್ಕಿ (ಈರೇಹಕ್ಕಿ, ಕೀಚು ಬಾಲದ ಹಕ್ಕಿ)ಯನ್ನು ಕಂಡು ನಗುತ್ತಾ ವಿಶಾಲ ಹೂದೋಟವನ್ನು ಹೊಕ್ಕು ವಿಶಾಲಾಕ್ಷಿಯರು ಹೂಗಳನ್ನು ಕೊಯ್ದರು.

ಮಾಂದಳಿರಸುಗೆ ಮಲ್ಲಿಗೆ ಪದ್ಮ ನೀಲಾರ
ವಿಂದ ತಳಿರ್ವಧೂಟಿಯರು
ಕಂದರ್ಪದೇವನ ಕಮ್ಮಲರ್ಗೋಲುಗ
ಳೆಂದವನು ತಿರಿದರರ್ತಿಯಲಿ ೬೩

ಮಾವಿನ ಚಿಗುರು, ಅಸುಗೆ(ಅಶೋಕ ಪುಷ್ಪ), ಮಲ್ಲಿಗೆ, ಕಮಲ, ನೀಲಕಮಲಗಳ ಚಿಗುರಿನ ಚಿಗರೆಯರು ಮನ್ಮಥನ ಹೂಬಾಣಗಳೆಂದು ಪ್ರೀತಿಯಿಂದ ಸಂಗ್ರಹಿಸಿದರು

ಮಿಗೆ ಶೋಭಿಸುವ ಷಟ್ಪದವೇಣಿ ಮುದದಿ ಸಂ
ಪಗೆಯಲರ್ದಿರಿಯೆ ಮತ್ತೊರ್ವ
ನಗೆಮೊಗದವಳು ಕೇತಕಿಯ ಕಂಡೀಶನ
ಪಗೆಯೆಂದು ತಿರಿದಿಕ್ಕಿದಳು ೬೪

ದುಂಬಿಜಡೆಯವಳೊಬ್ಬಳು ಸಡಗರದಿಂದ ಸಂಪಿಗೆ ಹೂವನ್ನು ಸಂಗ್ರಹಿಸಿದರೆ, ಮತ್ತೊಬ್ಬ ನಗೆಗಾತಿ ಕೇದಗೆ (ತಾಳೆಗರಿ)ಯನ್ನು ಕಂಡು ಶಿವನ ಹಗೆಯೆಂದು ನುಲಿಚಿ ಕಿತ್ತಳು. (ಷಟ್ಪದವೇಣಿ ಎಂಬಲ್ಲಿ ಷಟ್ಪದಿ ಎಂದರೆ ದುಂಬಿ ಷಟ್ಪದವೇಣಿ ಎಂದರೆ ದುಂಬಿಜಡೆಯವಳು ಎಂದು ಅರ್ಥ ಮಾಡಬಹುದು. ಹಾಗೆಯೇ ಸಾಮಾನ್ಯವಾಗಿ ಕೂದಲನ್ನು ಮೂರು ಸೀಳು(ಭಾಗ) ಮಾಡಿ ಜಡೆ ಹೆಣೆಯಲಾಗುತ್ತದೆ ಇಲ್ಲಿ ಆರು ಸೀಳು ಮಾಡಿ ಹೆಣೆದ ಜಡೆಯವಳು ಎಂದೂ ಅರ್ಥೈಸಬಹುದು)

ವರ ಸೌಂದರ್ಯದ ಚೆಲುವೆ ಮಚ್ಚರದಿಂದ
ಸುರಹೊನ್ನೆದೊಂಗಲ ಮುರಿದಳು
ಪರಮವ್ರತಸ್ಥೆ ಮತ್ತೊರ್ವಳು ಪಾದರಿ
ಯರಲ್ಗಳ ತಿರಿದಿಕ್ಕಿದಳು ೬೫

ಒಬ್ಬ ಚೆಲುವೆ ಮಚ್ಚರದಿಂದ ಸುರಹೊನ್ನೆ ಗೊಂಚಲನ್ನು ಮುರಿದಳು. ಮತ್ತೊಬ್ಬ ಪರಮವ್ರತಸ್ಥೆ ಪಾದರಿ ಹೂಗಳನ್ನು ಕಿತ್ತುಕೊಂಡಳು.

ಇರವಳಿದಾತನ ಹೆಸರಾಂತು ವನದೊಳ
ಗಿರಲಿರವಂತಿಗೆ ತರಿದು
ಹರತಪಧ್ವಂಸಿಯ ಕಟ್ಟಾಯುಧವೆಂದು
ಸುರಗಿಯ ಮುರಿದಿಕ್ಕಿದಳು ೬೬

ಅಸ್ತಿತ್ವ ಇಲ್ಲದಾತನ (ಅಂದರೆ ಸತ್ತವನ)ಹೆಸರನ್ನು ಹೊಂದಿ ವನದಲ್ಲಿರುವ ಇರವಂತಿಗೆಯನ್ನು ಕಿತ್ತುಕೊಂಡು, ಶಿವನ ತಪಸ್ಸನ್ನು ಧ್ವಂಸ ಮಾಡಿದ ಮನ್ಮಥನ ಕಟ್ಟಾಯುಧವೆಂದು ಸುರಹೊನ್ನೆಯನ್ನು ಮುರಿದುಕೊಂಡಳು.

ಕಯ್ಯೊಳಗರ್ಧರೇಖೆಯನಾಂತು ಮೊಲ್ಲೆಯ
ಕೊಯ್ಯುವಂಗನೆಯರ ಪಳಿದು

ಗಯ್ಯಾಳಿವೆಂಗಳು ನಿಖಿಲ ಪುಷ್ಪಗಳನು
ಕೈಯ್ಯಾರ ಕೊಯ್ದರರ್ತಿಯಲಿ ೬೭

ಕೈಯೊಳಗೆ ಅರ್ಧರೇಖೆ (ಹೆಬ್ಬೆರಳಿಗೆ ಹಾಕಿಕೊಳ್ಳುವ ಉಗುರಿನಾಕಾರದ ಲೋಹದ ಉಪಕರಣ ವಿಶೇಷ)ಯನ್ನು ಹಾಕಿಕೊಂಡು ಮೊಲ್ಲೆ ಹೂಗಳನ್ನು ಕೊಯ್ಯುವ ಹೆಂಗಸರನ್ನು ಹಳಿದು, ಗಯ್ಯಾಳಿ ಹೆಂಗಸರು ಸಕಲ ಹೂಗಳನ್ನು ತಮ್ಮ ಕೈಯಾರ ಕೊಯ್ದರು.

ಬಣ್ಣಬಣ್ಣದ ಪೂಗಯ್ದು ಹೊಂಬಾಳೆಯ
ಪನ್ನದಲಿ ಪೊಟ್ಟಣಗಟ್ಟಿ
ಕನ್ನೈದಿಲೆಗಣ್ಣ ಕಾಂತೆಯರೊಡತಿಗೆ
ಬಿನ್ನಣಗೆಯ್ದು ತೋರಿದರು ೬೮

ಬಣ್ಣಬಣ್ಣದ ಹೂಗಳನ್ನು ಕೊಯ್ದು, ಹೊಂಬಾಳೆಯ ಎಲೆಯಲ್ಲಿ ಪೊಟ್ಟಣ ಕಟ್ಟಿ, ಕನ್ನೈದಿಲೆಗಣ್ಣ ಕಾಂತೆಯರು ತಮ್ಮ ಒಡತಿಗೆ ಬಿನ್ನಾಣದಿಂದ ಅರ್ಪಿಸಿದರು.

ಚಂದನ ಮೊದಲಾದ ನಿಖಿಲ ಪೂಗಳಿಗೆ ಮೆ
ಯ್ಗಂಧವ ಕಡಗುಡುವಂತೆ
ನಂದನ ವನಲಕ್ಷ್ಮಿಯ ಪೋಲ್ದು ಬಾಣಜೆ
ಬಂದಳೀಶ್ವರನ ಚಾವಡಿಗೆ ೬೯

ಶ್ರೀಗಂಧ ಮೊದಲಾದ ಹೂಗಳಿಗೆ ತನ್ನ ಮೆಯ್ಗಂಧವನ್ನು ಸಾಲ ಕೊಡುವಂತೆ ನಂದನ ವನ ಲಕ್ಷ್ಮಿಯನ್ನು ಹೋಲುವ ಬಾಣಾಸುರನ ಮಗಳು ಉಷಾದೇವಿ ಶಿವನ ಗುಡಿಗೆ ಬಂದಳು

ಉಪಮಾತೀತ ಸೌಂದರವೆತ್ತ ಸಭಾ ಮಂ
ಟಪದೊಳು ಸಿಂಹವಿಷ್ಟರದಿ
ಲಪನ ಪಂಚಕನೊಡ್ಡೋಲಗಗೊಟ್ಟಿರೆ
ಚಪಲಾಕ್ಷಿಯರು ನೋಡಿದರು ೭೦

ಹೋಲಿಕೆ ನೀಡಲಾಗದ ಸುಂದರ ಸಭಾಮಂಟಪದ ಸಿಂಹಾಸನದಲ್ಲಿ ಕುಳಿತು ಲಪನ ಪಂಚಕ(ಪಂಚಾನನ=ಈಶ್ವರ) ಒಡ್ಡೋಲಗ ನಡೆಸುವುದನ್ನು ಚಂಚಲಾಕ್ಷಿಯರು ನೋಡಿದರು.

ಎಡದೊಳಿಂದ್ರಾದಿ ದೇವತೆಗಳು ಬಲದಲಿ
ಒಡನಿರೆ ಬ್ರಹ್ಮ ತಾಪಸರು
ಮೃಡಗಣವವರ ಪಿಂದೆ ನಂದಿ ಭೃಂಗೀಶ
ರೊಡೆಯನ ಮುಂದೆ ನಿಂದಿಹರು ೭೧

ಎಡದಲ್ಲಿ ಇಂದ್ರಾದಿ ದೇವತೆಗಳು, ಬಲದಲ್ಲಿ ಬ್ರಹ್ಮರ್ಷಿಗಳು, ಮೃಢಗಣದವರು ಹಿಂದೆ, ನಂದಿ ಭೃಂಗೀಶ ಮುಂದೆ ನಿಂತಿರುವರು.

ಚಂದಿರಮುಖಿ ಪಾರ್ವತಿ ಪರಮೇಶಂಗೆ
ವಂದಿಸಿ ಪಿಡಿರತ್ನವಿಕ್ಕಿ
ತಂದಿರ್ದ ನಿಖಿಳ ಪುಷ್ಪದಿ ಪೂಜೆ ಮಾಡಿದ
ಳಿಂದೀವರ ನೇತ್ರೆ ಮುದದಿ ೭೨

ಚಂದ್ರಮುಖಿ ಪಾರ್ವತಿ ಪರಮೇಶ್ವರನಿಗೆ ವಂದಿಸಿ, ಹಿಡಿರತ್ನಗಳನ್ನಿಟ್ಟು, ಇಂದೀವರ ನೇತ್ರೆ(ಕನ್ನೈದಿಲ ಕಣ್ಣವಳು) ಮುದದಿಂದ, ತಂದಿದ್ದ ಸಕಲ ಪುಷ್ಪಗಳಿಂದ ಪೂಜೆ ಮಾಡಿದಳು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೭೩

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯಚಂದ್ರರು ಇರುವ ಕನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೨೫ ಉಷೆಗೆ ಶಿವನ ವರ

ಪ್ರಾಸಿಂದ ನಿಖಿಳ ಚಿತ್ರಾರ್ಥ ಗರ್ಭಿತ ಭಾವ
ಲೇಸೆನೆ ಹರಿಕೊಟ್ಟ ವರದಿ
ತ್ರಾಸಿಂದ ತೂಗಿದ ಮಣಿಯೆನೆ ಮಜ್ಜೀವಿ
ತೇಶ ವಿಸ್ತರಿಸು ಮೇಲ್ಗತೆಯ ೧

ಪ್ರಾಸದ ಎಲ್ಲ ಚಿತ್ರವಿಚಿತ್ರ ಅರ್ಥಗರ್ಭಿತ ಭಾವ ಲೇಸು ಎಂದಿರುವಾಗ ಶ್ರೀ ಹರಿ ಕೊಟ್ಟ ವರದಿಂದ ತ್ರಾಸು (ತಕ್ಕಡಿ)ಹಿಡಿದು ತೂಗಿದ ರತ್ನವೆನ್ನುವಂತೆ ನನ್ನ ಜೀವಿತೇಶ ಮೇಲ್ಗತೆಯನ್ನು ನನಗೆ ಹೇಳು.

ಏತಕೆನ್ನನು ಕೀರ್ತಿಸಬೇಕು ನನಗೊಂದು
ಸ್ವತಂತ್ರ ಬುದ್ಧಿ ಬೇರಿಹುದೆ
ಪೀತಾಂಬರನೋದಿಸಿದ ಸಾರಣನಂತೆ
ಮಾತ ವಿಸ್ತರಿಪೆ ಕೇಳು ಕೆಳದಿ ೨

ಏತಕೆನ್ನನ್ನು ಹೊಗಳುವೆ? ನನಗೊಂದು ಸ್ವತಂತ್ರ ಬುದ್ಧಿ ಬೇರೆ ಇರುವುದೆ? ಪೀತಾಂಬರ (ವಿಷ್ಣು, ಕೃಷ್ಣ) ಓದಿಸಿದ ಸಾರಣ(ಗಿಳಿ)ನಂತೆ ಮಾತನಾಡುವೆನು ಕೇಳು ಕೇಳದಿ

ನೋಡಿದನೀಶ ಬಾಣಜೆ ವಕ್ರವನು ಮಾ
ತಾಡಿಸಿ ಬಂದಿರೇಕೆನಲು
ಗಾಡಿಯಿಂದವಳು ನಾಣ್ಚಿರಲು ಬಿನ್ನಹವ
ಮಾಡಿದಳಾ ಚಿತ್ರಲೇಖೆ ೩

ಬಾಣಜೆ(ಬಾಣನ ಮಗಳು)ಯ ಮುಖನೋಡಿ, ಬಂದುದೇಕೆಂದು ಕೇಳಲು, ಅತಿಯಾದ ಚೆಲುವಿನಂದವಳು ನಾಚಿ ನೀರಾಗಲು, ಅವಳ ಗೆಳತಿ ಚಿತ್ರಲೇಖೆ ಬಿನ್ನಹ ಮಾಡಿದಳು

ದೇವಾಧೀಶ ನಿಮ್ಮಯ ಸಂದರ್ಶನ
ಜೀವರೆಲ್ಲರಿಗೆ ಸಿದ್ದಿಪುದೆ
ಆವ ಜನ್ಮದ ಸುಕೃತವೋ ಮೂಲೋಕ
ದೇವನೆನಗೆ ಮೆಯ್ದೋರಿದ ೪

ನಿಮ್ಮ ದರ್ಶನ ಎಲ್ಲ ಜೀವರಿಗೆ ಸಿಕ್ಕುವುದೆ? ಯಾವ ಜನ್ಮದ ಪುಣ್ಯವೋ ಮೂಲೋಕದೊಡೆಯ ನನಗೆ ಮೈದೋರಿದ

ಎನಲೀಶ್ವರ ಚಿತ್ರಲೇಖೆಯ ಮೊಗ ನೋಡಿ
ವಿನಯದಿ ಬಾಣನಂದನೆಗೆ
ತನ್ವಿಗೇಕೆ ಲಜ್ಜೆ ಬಿನ್ನಹ ಮಾಡಲು ಹೇ
ಳೆನಲದನುಸುರಿದಳು ಕೆಳದಿಗೆ ೫

ಎಂದು ಹೇಳಿದಾಗ, ಈಶ್ವರ ಚಿತ್ರಲೇಖೆಯ ಮುಖ ನೋಡಿ, ವಿನಯದಿಂದ ಬಾಣಜೆಗೆ ಏಕೆ ಲಜ್ಜೆ? ಬಿನ್ನಹ ಮಾಡಲು ಹೇಳು ಎಂದೆನಲು, ಚಿತ್ರಲೇಖೆ ಗೆಳತಿಗೆ ಉಸುರಿದಳು.

ತಲೆಗುತ್ತಲೇಕೆ ತರಳಾಕ್ಷಿ ದುಃಖದಂ
ಡಲೆಯ ನಿವಾರಿಪ ಶಿವನ
ಸಲೆ ನೋಡಿ ಕೃತಪುಣ್ಯೆಯಾಗೆಂದು ಕೋ
ಮಲೆ ಪೇಳ್ದಳೊಡತಿಯ ಕೂಡೆ ೬

ತಲೆತಗ್ಗಿಸಿ ನಿಲ್ಲುವುದೇಕೆ? ದುಃಖದ ತಾಪವನ್ನು ನಿವಾರಿಸುವ ಶಿವನನ್ನು ನೋಡಿ ಸುಕೃತೆಯಾಗು(ಪುಣ್ಯವಂತೆಯಾಗು) ಎಂದು ಒಡತಿಗೆ ಹೇಳಿದಳು

ಯಕ್ಷ ಗುಹ್ಯಕ ಸಿದ್ದ ಗಂಧರ್ವ ಲಕ್ಕೋಪ
ಲಕ್ಷ ನಿರ್ಜರರ ಮಧ್ಯದಲಿ
ದಕ್ಷನ ತನುಜೆಗರ್ಧಾಂಗವನಿತ್ತ ಭಾ
ಳಾಕ್ಷನ ಮೊಗನೋಡು ತಾಯೆ ೭

ಯಕ್ಷ, ಗುಹ್ಯಕ, ಸಿದ್ಧ, ಗಂಧರ್ವ ಮೊದಲಾದ ಲಕ್ಷೋಪಲಕ್ಷ ದೇವತೆಗಳ ಮಧ್ಯೆ ದಕ್ಷನ ಮಗಳಿಗೆ ಅರ್ಧಾಂಗವನ್ನು ಕೊಟ್ಟ ಹಣೆಗಣ್ಣನನ್ನು ನೋಡು ಒಡತಿ

ಜಡೆಯೊಳು ಸೂಡಿದ ಗಂಗೆ ಚಂದ್ರ ಕಂಠದೊ
ಳೆಡೆಗೊಂಡ ವಿಷಫಣಿದೊಡವು
ತೊಡೆಯೊಳೊಪ್ಪುವ ಪಾರ್ವತಿ ಚತುರ್ದಶ ಜಗ
ದೊಡೆಯನ ಮೊಗ ನೋಡು ತಾಯೆ ೮

ಜಡೆಯಲ್ಲಿ ಧರಿಸಿದ ಗಂಗೆ ಚಂದ್ರ, ಕೊರಳಲ್ಲಿ ಸರ್ಪದ ಆಭರಣ, ತೊಡೆಯ ಮೇಲೆ ಎಡೆಗೊಂಡ ಪಾರ್ವತಿ – ಇಂಥ ಈರೇಳುಲೋಕದೊಡೆಯನನ್ನು ನೋಡು ತಾಯೆ

ಸಖಿ ಪೇಳ್ದ ಪರಮತತ್ವವ ತಿಳಿದಂಬುಜ
ಮುಖಿ ನಿರೀಕ್ಷಣೆಯ ಮಾಡಿದಳು
ನಿಖಿಳ ದೇವತೆಗಳೊಡ್ಡೋಲಗದೊಳು ನಿತ್ಯ
ಸುಖಿ ಪರಮೇಶ್ವರನಿರವನು ೯

ಗೆಳತಿ ಹೇಳಿದ ಪರಮ ತತ್ವವ ತಿಳಿದು ಕಮಲಮುಖಿ, ಸಕಲದೇವತೆಗಳ ಒಡ್ಡೋಲಗದಲ್ಲಿ ಇರುವ ನಿತ್ಯಸುಖಿ ಪರಮೇಶ್ವರನ ಇರವನ್ನು ಈಕ್ಷಿಸಿದಳು

ಈಶ ನಿಮ್ಮನು ನುಡಿಸುವೆನೆಂಬೆನೆ ಉರ
ಗೇಶಗರಿದು ನನ್ನ ಹವಣೆ
ದೋಷರಹಿತ ಮಹಿಮಾರ್ಣವದೊಳಗೊಂದು
ಲೇಶ ಮಾತ್ರ ಬಲ್ಲವರಾರು ೧೦

ಈಶ ನಿಮ್ಮನ್ನು ಸ್ತುತಿಸಲು ಸಾವಿರ ನಾಲಗೆಯ ಆದಿಶೇಷನಿಗೇ ಅಸಾಧ್ಯ. ಇನ್ನು ನನಗೆ ಹವಣೆ ?ಸಾಧ್ಯವೆ?ದೋಷರಹಿತನಾದ ನಿನ್ನ ಮಹಿಮೆಯಲ್ಲಿ ಒಂದೇ ಒಂದು ಚೂರನ್ನು ಬಲ್ಲವರಾರು?

ಮಾನಿವೆಂಗಳ ಶಿರೋಮಣಿ ಸ್ತುತಿಗೆ ಮೆಚ್ಚಿ
ದಾನಿಗಳರಸ ಕುಸ್ತರಿಸಿ
ಏನಿ ನೀವಿಲ್ಲಿಗೆಯ್ತಂದಿರಿಯೆನಲು ಭ
ವಾನಿಯಾ ಧವಗೆ ಹೇಳಿದಳು ೧೧

ಮಾನಿನಿಯರ ಶಿರೋಮಣಿ ಎನ್ನಿಸಿದ ಉಷಾದೇವಿಯ ಸ್ತುತಿಗೆ ಮೆಚ್ಚಿದ ಈಶ್ವರ ಉಪಚರಿಸಿ, ಇಲ್ಲಿಗೆ ನೀವು ಬಂದದ್ದು ಏತಕ್ಕೆ ಎನ್ನಲು, ಬಾಣಜೆ ಶಿವನಿಗೆ (ಭವಾನಿಯ ಧವ) ಹೇಳಿದಳು

ನಾಗಭೂಷಣ ನಿಮ್ಮದೇಹದೊಳರ್ಧ
ಭಾಗದೇಹವನೊತ್ತೆಗೊಂಡ
ಶ್ರೀ ಗೌರಿದೇವಿಯ ಪದಯುಗಳವ ಕಂಡು
ಪೋಗಲ್ಕೆ ಬಂದೆವು ಜೀಯ ೧೨

ನಾಗಭೂಷಣನೆ, ನಿಮ್ಮ ದೇಹದಲ್ಲಿ ಅರ್ಧಭಾಗವನ್ನು ಒತ್ತೆಗೊಂಡ ಪಾರ್ವತಿಯ ಪಾದಕಮಲಗಳನ್ನು ನೋಡಲು ಬಂದೆವು ಜೀಯ

ಅಪಾರ ಮಹಿಮಾರ್ಣವ ಕೋಟಿ ಕಂದರ್ಪ
ರೂಪ ಮಜ್ಜನ್ಮಾಂತರದ
ಪಾಪ ವಿಚ್ಛಿನ್ನವಾದುದು ಪಾರ್ವತಿಯ ಪ್ರಾ
ಣೋಪ ಕೇಳೆಂದು ಪೇಳ್ದಳು ೧೩

ಅಪಾರ ಮಹಿಮಾರ್ಣವ(ಮಹಿಮಾಸಮುದ್ರ) ಕೋಟಿ ಕಂದರ್ಪ(ಮನ್ಮಥ) ರೂಪ, ನನ್ನ ಜನ್ಮಾಂತರದ ಪಾಪರಾಶಿಯೆಲ್ಲ ಭಸ್ಮವಾಯಿತು, ಪಾರ್ವತಿ ಪ್ರಾಣೋಪ (ಓಪಒಡೆಯ, ಇನಿಯ) ಕೇಳೆಂದು ಹೇಳಿದಳು.

ಮಾತನಾಡೆ ಬಾಯ್ದೆರೆಯ ಚೆಲುವನು ಕಂಡು
ಸೋತನೀಶ್ವರ ಮನದೊಳಗೆ
ಕಾತರಿಸದೆ ತನ್ನ ಮಗಳೆಂದು ನೋಡಿದ
ಭೂತೇಶ ಕರುಣಾಕರನು ೧೪

ಮಾತನಾಡಿದಾಗ ಬಾಯ್ದೆರೆಯ (ತುಟಿಯ) ಚೆಲುವನ್ನು ಕಂಡು ಮನದಲ್ಲಿ ಸೋತು ಹೋದನು. ಆದರೆ ಕೆಟ್ಟದ್ದಕ್ಕೆ ಕಾತರಿಸದೆ ಕರುಣಾಕರನು ತನ್ನ ಮಗಳೆಂದು ನೋಡಿದನು

ಕಂದರ್ಪಹರನೊರ್ವನಲ್ಲದೆ ಕುವರಿಯ
ಹೊಂದಾವರೆ ಮೊಗ್ಗೆ ಮೊಲೆಯ
ಚೆಂದವ ನೋಡಿದ ಸುರನರೋರಗವ್ರಾತ
ಬೆಂದುದು ವಿರಹಾಗ್ನಿಯಲಿ ೧೫

ಮನ್ಮಥ ಧ್ವಂಸಿ ಶಿವನೊಬ್ಬನೆ ಅಲ್ಲದೆ ಕುಮಾರಿಯ ಹೊಂದಾವರೆ ಮೊಗ್ಗಿನ ಮೊಲೆಯ ಚೆಲುವನ್ನು ನೋಡಿದ ಸುರ, ನರ, ನಾಗ ವೃಂದವೆಲ್ಲ ವಿರಹಾಗ್ನಿಯಲ್ಲಿ ಬೆಂದಿತು

ಬಾಣನಂದನೆಯೆಂಬ ತಡಿಕೆಯ ಮರೆಯಲಿ
ಜಾಣ ಮನ್ಮಥನರಳ್ಗಣೆಯ
ಕೇಣವಿಲ್ಲದೆ ಹೂಡಿ ಸುರರೆರ್ದೆಯೊಳಗಿರ್ದ
ಪ್ರಾಣಹಂಸಗಳ ಬಂಧಿಸಿದ ೧೬

ಬಾಣನಂದನೆಯೆಂಬ ತಡಿಕೆ(ಬೇಲಿ) ಮರೆಯಲ್ಲಿ ಜಾಣ ಮನ್ಮಥ ಹೂ ಬಾಣವನ್ನು ಹೂಡಿ ದೇವತೆಗಳ ಎದೆಯಲ್ಲಿದ್ದ ಪ್ರಾಣಹಂಸಗಳನ್ನು ಬಂಧಿಸಿದ

ಓಲಗದೊಳಗಿರ್ದ ತ್ರಿದಶರು ಕಮ್ಮಲ
ಗೋಲನಂಡಲೆಗೆ ಬಿದ್ದಿರಲು
ನೀಲಕಂಧರ ನೋಡಿ ನಸುನಗುತದರ ಸ
ಕೀಲವನುಮೆಗೆ ತೋರಿಸಿದ ೧೭

ಓಲಗದಲ್ಲಿದ್ದ ದೇವತೆಗಳೆಲ್ಲ ಮನ್ಮಥನ ಕೋಟಲೆಗೆ ಒಳಗಾಗಿ ಬಿದ್ದಿರಲು, ಶಿವನು ಅದನ್ನು ನೋಡಿ ನಸುನಗುತ್ತ ಪಾರ್ವತಿಗೆ ಅದರ ಗುಟ್ಟನ್ನು ರಟ್ಟು ಮಾಡಿದ

ಪೊಡೆಯ ಕಿಲ್ಬಿಷವ ಪ್ರಕ್ಷಾಲಿಸಿ ವರವ ತಾ
ಪಡೆಯ ಬೇಕಿಂತಪ್ಪ ಸುತೆ
ಕೆಡೆಮೆಟ್ಟಿದಳೆಲ್ಲರನೆಂದು ತ್ರೈಲೋಕ
ದೊಡೆಯ ಪಾರ್ವತಿಗೆ ತೋರಿಸಿದ ೧೮

ಹೊಟ್ಟೆಯ ಕಲ್ಮಶವನ್ನು ತೊಳೆದು ವರವನ್ನು ಪಡೆಯಲು ಬಂದಾಕೆ, ಎಲ್ಲರನ್ನು ಕೆಳಕ್ಕೆ ಕೆಡವಿ ಮೆಟ್ಟಿದಳೆಂದು ತ್ರೈಲೋಕದೊಡೆಯ ಪಾರ್ವತಿಗೆ ತೋರಿಸಿದ

ಮಂದಸ್ಮಿತ ಮುಖಿಯರ ನಿನ್ನ ಪ್ರಾರ್ಥಿಸಿ
ಬಂದಂತವರ ಕುಸ್ತರಿಸಿ
ಚೆಂದವ ಮಾಡಿ ಬೀಳ್ಕೊಡವೇಳ್ದು ಪೆರ್ದೊಡೆ
ಯಿಂದಲೆಬ್ಬಿಸಿದ ಪಾರ್ವತಿಯ ೧೯

ನಿನ್ನನ್ನು ಪ್ರಾರ್ಥಿಸಲು ಬಂದ ನಗುಮುಖದ ಚೆಲುವೆಯರನ್ನು ಉಪಚರಿಸಿ, ಬೀಳ್ಕೊಡಲು ಹೇಳಿ, ಪಾರ್ವತಿಯನ್ನು ತೊಡೆಯಿಂದ ಮೇಲೆಬ್ಬಿಸಿದನು

ಭೋಗಿಭೂಷಣನ ತೊಡೆಯಿಂದೆದ್ದು ಚೌಷಷ್ಟಿ
ಯೋಗಿಣಿ ಸುರನಾರಿಯರನು
ಬಾಗಿಲೊಳಿರಿಸಿ ಬಾಣಜೆ ಸಹಿತೊಳಪೊಕ್ಕು
ಪೋಗಿ ಗದ್ದುಗೆಯನೇರಿದಳು ೨೦

ಶಿವನ ತೊಡಯಿಂದೆದ್ದು ಅರುವತ್ತುನಾಲ್ಕು ಯೋಗಿಣಿ ದೇವನಾರಿಯರನ್ನು ಬಾಗಿಲಲ್ಲಿರಿಸಿ, ಬಾಣಜೆ ಸಹಿತ ಒಳಹೊಕ್ಕು ಗದ್ದುಗೆ ಏರಿದಳು

ಹಿಂಡಿದೊಡೊಂಬತ್ತು ಬಣ್ಣ ಸೋರುವ ರತ್ನ
ಖಂಡಿತ ಸ್ವರ್ಣ ಭೂಷಣದಿ
ಮಂಡಿತ ಮೆಯ್ವೆಳಗಿನ ಪಾರ್ವತಿ ಕುಂ
ಭಾಂಡಿಯ ನುಡಿಸಿದಳ್ಮುದದಿ ೨೧

ಹಿಂಡಿದರೆ ಒಂಬತ್ತು ಬಣ್ಣ ಸೋರುವ ರತ್ನಖಚಿತ ಸ್ವರ್ಣ ಭೂಷಣದಿಂದ ಮಂಡಿತಳಾದ ಹೊಳಪಿನ ಪಾರ್ವತಿ ಕುಂಭಾಂಡಿಯ(ಕುಂಭಾಂಡನ ಮಗಳು ಚಿತ್ರಲೇಖೆಯ)ನ್ನು ಮಾತನಾಡಿಸಿದಳು

ಕ್ಷೇಮವೆ ವರ ಚಿತ್ರಲೇಖೆ ಬಾಣಜೆ ಪರಿ
ಣಾಮವೆ ನಿಮ್ಮಭಿಮತವ
ಪ್ರೇಮದಿಂದ ಬಿನ್ನಹ ಮಾಡವೇಳ್ದಳು
ಕಾಮಾಕ್ಷಿ ಕಾರುಣ್ಯದಲಿ ೨೨

ಕ್ಷೇಮವೆ ಚಿತ್ರಲೇಖೆ?ಕ್ಷೇಮವೆ ಉಷಾದೇವಿ? ನಿಮ್ಮ ಅಂತರಂಗದ ಅಭಿಪ್ರಾಯವನ್ನು ಪ್ರೇಮದಿಂದ ಬಿನ್ನಹ ಮಾಡಿರೆಂದು ಕರುಣೆಯಿಂದ ಹೇಳಿದಳು

ಸ್ಥಿತಿಯುತ್ಪತ್ತಿ ವಿದೂರೀಕೃತೆ ನಿನ್ನ
ನುಡಿಗೆಯ್ದಪೆವೆಂದು ನೆಗಳ್ದ
ಶ್ರುತಿಶಾಸ್ತ್ರಕೋಟಿಗಳರಸಿ ಕಾಣದ ಪಾ
ರ್ವತಿ ನಿನ್ನ ಕಂಡುದೆ ಕ್ಷೇಮ ೨೩

ಸ್ಥಿತಿ ಉತ್ಪತ್ತಿಗೆ ವಿದೂರೆಯಾದ ನಿನ್ನನ್ನು ಸ್ತುತಿಸುವೆವು ಎಂದು ಪ್ರಸಿದ್ಧ ಶ್ರುತಿ ಶಾಸ್ತ್ರಕೋಟಿಗಳು ಹುಡುಕಿದರೂ ಕಾಣದ ಪಾರ್ವತಿ ಮಾತೆ, ನಿನ್ನನ್ನು ಕಂಡದ್ದೇ ನಮಗೆ ಕ್ಷೇಮ, ಪುಣ್ಯವಿಶೇಷ

ಬಂದ ಕಾರಿಯವಾವುದೆನುತ ನೀ ಬೆಸಗೊಳ
ಲಂದವಾಯಿತು ಕೇಳು ತಾಯೆ
ವೃಂದಾರಕ ನಾಗ ನರ ಸದುಹೃದಯಾರ
ವಿಂದ ನಿವಾಸಿ ನೀನರಿಯ ೨೪

ಬಂದ ಕಾರ್ಯವೇನು ಎಂದು ನೀವು ವಿಚಾರಿಸಿದರೆ ನಮಗೆ ನಗು ಬರುತ್ತದೆ. ಏಕೆಂದರೆ ಜಗ ತೂಗುವ ತಾಯಿಗೆ ತೊಟ್ಟಿಲು ತೂಗುವುದು ಗೊತ್ತಿಲ್ಲವೆ? ಸುರನರೋರಗ ಹೃದಯವಾಸಿಯಾದ ನೀನು ನಮ್ಮೆದೆಯಿಲ್ಲಿರುವುದನ್ನು ಅರಿಯೆಯ?

ಆಡಿದಾಯಕನ ಮಾತ ದಿವ್ಯದೃಷ್ಟಿಯೊಳು
ನೋಡಿ ತನ್ನೊಳು ತಾ ತಿಳಿದು
ಗಾಡಿಕಾತಿಗೆ ಪುರುಷಾಪೇಕ್ಷೆಯಿಹುದೆಂದು
ನೀಡಿದಳು ಗಿರಿಜೆ ಸೂಚನೆಯ ೨೫

ಆಡಿದ ಆ ಅಕ್ಕನ (ಉಷಾದೇವಿಯ)ಮಾತಿನ ಜಾಡನ್ನು ಹಿಡಿದ ಪಾರ್ವತಿ ದಿವ್ಯದೃಷ್ಟಿಯಿಂದ ಸತ್ಯಸಂಗತಿಯನ್ನು ತಿಳಿದು, ಬೆಡಗಿಗೆ (ಸುಂದರಿಗೆ)ಹುಡಗನ ಅಪೇಕ್ಷೆ ಇದೆ ಎಂದು ಸೂಚನೆ ನೀಡಿದಳು

ನಾಳಿನ ವೈಶಾಖ ಶುದ್ಧ ದ್ವಾದಶಿಯು ಛ
ಡಾಳಿಸಿದಿರುಳಲೀಯಕನ
ತೋಳಿಗೊಪ್ಪುವ ನಲ್ಲ ಕನಸಲಿ ಬಹ ರಸ
ದಾಳಿವಿಲ್ಲನ ಸಮರೂಪ ೨೬

ಮುಂದೆ ಬರುವ ವೈಶಾಖ ಶುದ್ಧ ದ್ವಾದಶಿ ಪ್ರಜ್ವಲಿಸಿದ ರಾತ್ರಿಯಲ್ಲಿ ಈಕೆಯ ತೋಳಿಗೆ ಒಪ್ಪುವ ಪ್ರಿಯತಮ, ಮನ್ಮಥನ ಸಮರೂಪ, ಕನಸಲಲಿ ಕಾಣಿಸಿಕೊಳ್ಳುವನು

ಸ್ವಪನದಿ ಬಂದು ಕ್ರೀಡಿಸಿದಾತ ಪ್ರಿಯನಾ
ದಪ ಕೆಲವು ದಿವಸಂಗಳಿಗೆ
ಉಪಮಿಸಬಾರದ ಪರಮಸೌಂದರ ಚಂದ್ರ
ಲಪನಂಗೆ ವಿವಾಹವಪ್ಪುದು ೨೭

ಸ್ವಪ್ನದಲ್ಲಿ ಬಂದು ಕ್ರೀಡಿಸಿದಾತ ಕೆಲವು ದಿವಸಗಳಲ್ಲಿ ಪ್ರಿಯನಾಗುವನು. ಉಪಮಾತೀತ ಚಂದ್ರಮುಖದ ಚೆಲುವನೊಂದಿಗೆ ವಿವಾಹವಾಗುವುದು

ಜಾಣೆ ಮೂಜಗದ ಹೆಂಗಳ ಮುದ್ದು ಮೂರ್ತಿ ಗೀ
ವಾರ್ಣೇಶ್ವರಿ ನಿನ್ನ ನುಡಿಗೆ
ಊಣೆಯ ಹೊದ್ದದು ಕುವರಿಗೆ ಕಾಂತ ಸುಪ್ರ
ಮಾಣವೆಂಬುದು ಶತಸಿದ್ಧ ೨೮

ಮೂರು ಲೋಕದ ಹೆಣ್ಣುಗಳ ಮುದ್ದುಮೂರ್ತಿ, ಗೀರ್ವಾಣೇಶ್ವರಿ ನಿನ್ನ ನುಡಿಗೆ ಊಣೆಯು (ಕುಂದು) ಉಂಟಾಗದು; ಕುವಾರಿಗೆ ಕಾಂತ ದೊರಕುವನೆಂಬುದು ಶತಸಿದ್ಧ

ಕಡಿಯಾಗಲಬುಧಿ ನೀರಸಗೊಳಲಿ ಚಂದ್ರ
ಕಿಡಿಯಾಗಲಗ್ನಿ ಮೆಯ್ಯರತು
ನಿಡಿಯಾದರಾಗಬೇಕಲ್ಲದೆ ನೀ ಪೇಳ್ವ
ನುಡಿಯೊಳು ಪುಸಿಯುಂಟೆ ತಾಯೆ ೨೯

ಸಮುದ್ರ ತುಂಡುತುಂಡಾಗಲಿ, ಚಂದ್ರ ರಸವಿಹೀನನಾಗಲಿ, ಅಗ್ನಿ ಸಣ್ಣ ಕಿಡಿರೂಪವಾಗಲಿ, ಅಬುಧಿಯ ಮೈಯೊಣಗಿ ನಿಡಿ(ನೊರೆ, ಬುರುಗು)ಯಾಗಲಿ ಆಗಬೇಕಲ್ಲದೆ ನೀನು ಹೇಳಿದ ಮಾತಿನಲ್ಲಿ ಹುಸಿಯುಂಟೆ ತಾಯೆ

ಪಾರಲಿ ಮೇರು ಪರ್ವತ ಗಗನದಲಿ ಕಾ
ಲೂರಲಾಕಾಶ ಭೂಮಿಯಲಿ
ತೋರಲಿ ಬೆಳಗು ಪಶ್ಚಿಮದಿ ನಿನ್ನಾಜ್ಞೆಯ
ಮೀರಲೊರ್ವರಿಗೆ ಸಾಧ್ಯವೆ ೩೦

ಆಕಾಶದಲ್ಲಿ ಮೇರುಪರ್ವತ ಹಾರಲಿ, ಭೂಮಿಯಲ್ಲಿ ಆಕಾಶ ಕಾಲೂರಲಿ, ಸೂರ್ಯ ಪಶ್ಚಿಮದಲ್ಲಿ ಉದಿಸಲಿ ನಿನ್ನ ಆಜ್ಞೆಯನ್ನು ಮೀರಲು ಸಾಧ್ಯವೆ?

ಬೇಸರದಖಿಳ ವೇದಂಗಳುಚ್ಚರಿಪ ವಿ
ಘ್ನೇಶನ ಪಡೆದ ಮಾತೃಕೆಯ
ಭಾಸುರ ಜಿಹ್ವೆಯೊಳು ಪೊರಮಟ್ಟ ವಚನಕೆ
ಬೀಸರವಿಲ್ಲೆಂದಳವಳು ೩೧

ಎಲ್ಲ ವೇದಗಳು ಉಚ್ಚರಿಸುವ ಗಣೇಶನ ತಾಯಿಯ ಪ್ರಕಾಶಮಾನವಾದ ನಾಲಗೆಯಲ್ಲಿ ಹೊರಹೊರಟ ವಚನಕ್ಕೆ ವ್ಯರ್ಥತೆ ಬರುವುದಿಲ್ಲ

ನೆರೆವೆರೆಮೊಗದ ಬಾಲೆಯ ಕೀರ್ತನೆಗೇಳ್ದು
ಕರೆಗೊರಲನ ರಾಣಿ ಮೆಚ್ಚಿ
ಮರೆಯದೆ ವಸ್ತ್ರಭೂಷಣ ಪರಿಮಳದುಡು
ಗೊರೆಯಿತ್ತು ಕುಸ್ತರಿಸಿದಳು ೩೨

ಪೂರ್ಣಚಂದ್ರ ಮುಖಿಯ ಕೀರ್ತನೆಗೆ(ಸ್ತುತಿಗೆ) ಮೆಚ್ಚಿದ ಪಾರ್ವತಿ ಮರೆಯದೆ ವಸ್ತ್ರಭೂಷಣ ಪರಿಮಳದ ಉಡುಗೊರೆ ಕೊಟ್ಟು ಉಪಚರಿಸಿದಳು

ಮಗಳೆ ನಿನ್ನಯ ರೂಪ ಗುಣಶೀಲವ ನೋಡಿ
ದಗಣಿತ ಸುರ ನರೋರಗರು
ಮುಗುಳಂಬಿಗೊಳಗಾದರೆಂದ ಪಾರ್ವತಿ ಕರ
ಯುಗಳದಿಂ ಮುದ್ದಾಡಿದಳು ೩೩

ಮಗಳೆ, ನಿನ್ನ ರೂಪ ಗುಣ ಶೀಲವನ್ನು ನೋಡಿದ ಅಸಂಖ್ಯ ಸುರನರೋರಗರು ಹೂಬಾಣನ ಬಾಧೆಗೊಳಗಾದರೆಂದು ಹೇಳಿ, ಪಾರ್ವತಿ ಎರಡು ಕೈಗಳಿಂದಲೂ ಮುಖವನ್ನು ಹಿಡಿದು ಮುದ್ದಾಡಿದಳು

ಆಕೆಯ ಸನ್ಮಾನಿಸಿ ಕೇಳ್ದಳು ಚಿತ್ರ
ಲೇಖೆಯ ಮನದಭಿಮತವನು
ನೀ ಕೇಳ್ದರೆ ತಪ್ಪು ನುಡಿವೆನೆ ನನಗಿಷ್ಟು
ಸಾಕೆಂದು ಪೇಳ್ದಳುತ್ಸವದಿ ೩೪

ಚಿತ್ರಲೇಖೆಯನ್ನು ಸನ್ಮಾನಿಸಿ ಆಕೆಯ ಮನದ ಅಭಿಪ್ರಾಯವನ್ನು ಕೇಳಿದಾಗ, ನಾನು ತಪ್ಪು ನುಡಿಯುವೆನೆ? ನನಗಿಷ್ಟು ಸಾಕು ಎಂದು ಹೇಳಿದಳು.

ಹಿಮಗಿರಿರಾಜ ನಂದನೆ ಬಂದು ವಿಬುಧೋ
ತ್ತಮನ ಪೆರ್ದೊಡೆಯೊಳು ಕುಳಿತು
ಕಮಲಾಕ್ಷಿಯರ ಕಳುಹಲು ಚಿತ್ತೈಸೆಂದು
ರಮಣಂಗೆ ಬಿನ್ನವಿಸಿದಳು ೩೫

ಪಾರ್ವತಿ ಬಂದು ಶಿವನ ತೊಡೆಯೇರಿ, ಕಮಲಾಕ್ಷಿಯರನ್ನು ಕಳಿಸಲು ಮನಸ್ಸು ಮಾಡೆಂದು ಗಂಡನಿಗೆ ಹೇಳಿದಳು

ತನ್ನಾತ್ಮೇಶ್ವರಿ ತರಹರದಲಿ ಪೇಳ್ದ
ಬಿನ್ನಹವನು ಶಿವ ಕೇಳ್ದು
ಹೊನ್ನ ಪುತ್ಥಳಿಯಂತೆ ನಿಂದಿರ್ದ ಕುವರಿಯ
ಚೆನ್ನ ಮೊಗವನು ನಿಟ್ಟಿಸಿದ ೩೬

ತರಾತುರಿಯಿಂದ ತನ್ನ ಆತ್ಮೇಶ್ವರಿ ಹೇಳಿದ ಬಿನ್ನಹವನ್ನು ಕೇಳಿ, ಚಿನ್ನದ ಬೊಂಬೆಯಂತೆ ನಿಂತಿದ್ದ ಕುಮಾರಿಯ ಚೆಂದದ ಮುಖವನ್ನು ನಿಟ್ಟಿಸಿದ

ಪಟ್ಟದರಾಣಿ ಪಾರ್ವತಿ ನಿಮಗೊಲಿದೇನ
ಕೊಟ್ಟಳು ತೋರುತೋರೆನುತ
ನೆಟ್ಟನೆ ನೋಡಿ ತಾನುಡುಗೊರೆಯಿತ್ತು ಬೀ
ಳ್ಕೊಟ್ಟನು ಶಿವ ಕುಮಾರಿಯರ ೩೭

ಪಟ್ಟದ ರಾಣಿ ಪಾರ್ವತಿ ನಿಮಗೆ ಕಾಣಿಕೆಯಾಗಿ ಕೊಟ್ಟದ್ದನ್ನು ತೋರಿಸಿ ತೋರಿಸಿ ಎಂದು ಪರದಾಡಿ ನೋಡಿ , ತಾನೂ ಉಡುಗೊರೆ ಕೊಟ್ಟು ಬೀಳ್ಕೊಟ್ಟನು.

ಶುದ್ಧ ಸ್ಫಟಿಕ ಸಂಖಾಶನಂಘ್ರಿಯೊಳಡ್ಡ
ಬಿದ್ದು ಈಶ್ವರಿಗೆ ವಂದಿಸಿ
ಇದ್ದ ಮಹೇಶ್ವರರುಗಳ ಬೀಳ್ಕೊಂಡು ನಡೆ
ದಿದ್ದರುತ್ಸವದಿ ಮನೆಯತ್ತ ೩೮

ಈಶ್ವರ ಹಾಗೂ ಈಶ್ವರಿಗಳಿಬ್ಬರಿಗೂ ಕಾಲಿಗೆ ಬಿದ್ದು ಎಲ್ಲರನ್ನೂ ಬೀಳ್ಕೊಂಡು ಮನೆಯತ್ತ ಹಿಂದಿರುಗಿದರು

ಇದೆ ನಿಂದಳಿದೆ ಪೋದಳಿದೆ ಕಾಣದಾದಳೆಂ
ದೆದೆ ಹಳಿವುತ ನಿರ್ಜರರು
ಹೊದೆಗೋಲಿನಿಂದ ಮನ್ಮಥನೆಚ್ಚ ಮಾತ್ರದಿ
ಸೊದೆಗೂಳ ಶೋಧಿಸಿತವರ್ಗೆ ೩೯

ಈಗ ತಾನೆ ತಾನೆ ಇದ್ದಳು, ಈಗ ತಾನೆ ಹೋದಳು, ಈಗ ಕಾಣದಾದಳು ಎಂದು ತಳಮಳಗೊಂಡ ದೇವತೆಗಳು ಮನ್ಮಥನು ತನ್ನ ಬತ್ತಳಿಕೆಯ ಹೂಬಾಣ ಪ್ರಯೋಗಿಸಿದಾಗ ಅವರ ಅಮೃತಾನ್ನವನ್ನು ಶೋಧಿಸಿತು

ಅಂತರಿಸದೆ ತೀಕ್ಷಣದಿ ಪೋಪ ಕುವರಿಯರ
ಮುಂತಡ್ಡಗಟ್ಟಿ ತತ್‌ಕ್ಷಣ
ಭ್ರಾಂತರಾದರು ದೇವವಿಟರು ಕುಮಾರ ಜ
ಯಂತಾದಿಗಳು ಮೌನದಲಿ ೪೦

ಎಲ್ಲೂ ನಿಲ್ಲದೆ ವೇಗವಾಗಿ ಹೋದ ಕುಮಾರಿಯರನ್ನು ಅಡ್ಡಗಟ್ಟಿ ತಕ್ಷಣವೇ ದೇವಲೋಕದ ಕಾಮುಕರು, ಕುಮಾರ ಜಯಂತಾದಿಗಳು ಭ್ರಮೆಗೊಂಡರು

ಇತ್ತಲೀ ಹವಣಾದುದು ರಾಜವದನೆ ಪೆ
ಣ್ಮೊತ್ತದಿ ವನವನುತ್ತರಿಸಿ
ಚಿತ್ತ ಸೆಳೆದ ಗೀತವಾದ್ಯ ಗೀಳಿಡಲು ಪು
ರೋತ್ತರವನು ಪೊಕ್ಕರೊಲಿದು ೪೧

ಇತ್ತ ಈ ಅವಸ್ಥೆಯಾದರೆ ಅತ್ತ ಚಂದ್ರಮುಖಿ ಸ್ತ್ರೀ ಮೊತ್ತದ ಮೂಲಕ ನಂದನವನ್ನು ದಾಟಿ ಮನಸೆಳವ ಗೀತವಾದ್ಯಗಳ ಮಧ್ಯೆ ಪುರವನ್ನು ಹೊಕ್ಕರು

ಅನಲಾಕ್ಷನ ಮದವಳಿಗೆಯ ಕೃಪೆವೆತ್ತು
ವನರುಹಗಂಧಿ ಬರ್ಪುದನು
ದಿನನಾಥ ವೀಧಿಯಿಕ್ಕೆಲದಲಿ ನೋಡುವ
ಜನಪದ ಸಂದಣಿಸಿದುದು ೪೨

ಈಶ್ವರ ದಂಪತಿಗಳ ಕೃಪೆಯನ್ನು ಹೊಂದಿ ಕಮಲಗಂಧಿ ಬರುವುದನ್ನು ನೋಡಲು ಜನಪದರು ಸೂರ್ಯಬೀದಿಯ ಎರಡೂ ಕಡೆ ಜಮಾಯಿಸಿದರು.

ಎತ್ತುವಾರತಿಯ ನೀವಳಿಸುವ ಜವಳಿಯ
ಮುತ್ತು ರತ್ನಗಳ ಕಾಣಿಕೆಯ
ಇತ್ತೆರಗುವ ಸೆಟ್ಟಿ ಸಮಯಭೂಸುರರ ಸಂ
ಪತ್ತನದೇನ ಬಣ್ಣಿಪೆನು ೪೩

ಎತ್ತುವ ಅರತಿಯ, ನೀವಳಿಸುವ ಜವಳಿಯ(ವಸ್ತ್ರದ), ಮುತ್ತು ರತ್ನಗಳ ಕಾಣಿಕೆಯ ಕೊಟ್ಟು ನಮಸ್ಕರಿಸುವ ಶೆಟ್ಟಿ ಮತ್ತು ಸಂಪ್ರದಾಯ ಬ್ರಾಹ್ಮಣರ ಸಂಪತ್ತು ವರ್ಣನಾತೀತ

ಇನಿತು ಸೌಭಾಗ್ಯ ಮತ್ತಿನಿತು ಸಂಭ್ರಮ ಮ
ತ್ತಿನಿತು ಪಂಚವಾದ್ಯ ರಭಸ
ಇನಿತಲ್ಲ ನೋಡಿ ಸಂತಸವೆತ್ತು ಕನ್ನೆ
ವನಿತೆ ಹೊಕ್ಕಳು ಮಂದಿರವ ೪೪

ಇಷ್ಟು ಸೌಭಾಗ್ಯ, ಇಷ್ಟು ಸಂಭ್ರಮ, ಇಷ್ಟು ಪಂಚ(ದೊಡ್ಡ) ವಾದ್ಯ ರಭಸಗಳನ್ನೆಲ್ಲ ನೋಡಿ ಸಂತಸದಿಂದ ಕುಮಾರಿ ಮಂದಿರವನ್ನು ಪ್ರವೇಶಿಸಿದಳು

ಇಳಿದಳು ಮಾಣಿಕ್ಯ ರಚಿತದಂದಣದಿಂದ
ಕಳುಹಿದಳೊಡನೆ ಬಂದವರ
ತಳಿತ ಮುತ್ತಿನ ಚಾವಡಿಯ ಗದ್ದುಗೆಯಲಿ
ಕುಳಿತಳು ತನ್ನ ಸಖಿ ಸಮೇತ ೪೫

ಮುತ್ತುರತ್ನದ ಪಲ್ಲಕ್ಕಿಯಿಂದ ಇಳಿದು, ಬಂದವರನ್ನು ಕಳಿಸಿ, ಮುತ್ತಿನ ಸಭಾಮಂಟಪದ ಗದ್ದುಗೆಯಲ್ಲಿ ಗೆಳತಿ ಸಮೇತ ಕುಳಿತಳು

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೬

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯಚಂದ್ರರು ಇರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು

## ೨೬. ಉಷೆ ಚಿತ್ರಲೇಖೆ ಸರಸ

ನಕ್ರಕಂಟಕವನುತ್ತರಿಸಿ ಗಜೇಂದ್ರನ
ವಕ್ತ್ರವನು ತೀರ್ಕಣೆಗೆಯ್ದು
ಚಕ್ರಪಾಣಿಯ ಕೂರ್ತು ಕೃತಿವೇಳೆನಗೆ ತ್ರಿ
ವಿಕ್ರಮ ದಾಸಸ್ಯದಾಸ ೧

ಆನೆಯ ಮುಖವನ್ನು ಮೊಸಳೆಯ ಗಂಡಾಂತರದಿಂದ ಪಾರುಮಾಡಿ ಕೊನೆಗೊಳಿಸಿದ ಚಕ್ರಪಾಣಿಯ ಬಗೆಗೆ ಕಥೆ ಹೇಳು, ತ್ರಿವಿಕ್ರಮ ದಾಸಸ್ಯದಾಸ (ತ್ರಿವಿಕ್ರಮ ದೇವರ ದಾಸನಾಗಿರುವ ವಾದಿರಾಜನ ದಾಸನಾದ ಕನಕನೆ)ಎಂದು ಸುಜ್ಞಾನ ವಧೂಟಿ ಕನಕನನ್ನು ಕೇಳಿದಳು

ಹರಿಶರಣರ ಪಾದರಜವ ಮಸ್ತಕದಲಿ
ಧರಿಸಿ ರಾಮಾನುಜಾಗಮವ
ಸ್ಮರಿಸಿ ಮನೋನುರಾಗವನಾಂತು ಕತೆಯ ಬಿ
ತ್ತರಿಸುವೆ ಕೇಳಾಯತಾಕ್ಷಿ ೨

ಹರಿಶರಣರ(ವಿಷ್ಣು ಭಕ್ತರ;ಶೈವಧರ್ಮದ 'ಶರಣ' ಶಬ್ದವನ್ನು ವೈಷ್ಣಧರ್ಮದಲ್ಲಿ ನಾಟಿ ಹಾಕಿರುವ ಕನಕನ ದೃಷ್ಟಿ ವೈಶಾಲ್ಯ ಮನನೀಯ) ಪಾದದ ಧೂಳನ್ನು ತಲೆಯ ಮೇಲೆ ಧರಿಸಿ, ರಾಮಾನುಜ ಸಂಪ್ರದಾಯ ವಿಧಿವಿಧಾನವನ್ನು ಸ್ಮರಿಸಿ, ಪ್ರೀತಿಯಿಂದ ಕಥೆಯನ್ನು ಹೇಳುತ್ತೇನೆ ಕೇಳು ಎಂದು ಪತ್ನಿಗೆ ಕನಕ ಹೇಳಿದನು

ಹೊಂದಂಬಿಗೆಯುದಕವ ತಂದು ಚರಣಾರ
ವಿಂದವನು ಪಡಿಗದಿ ತೊಳೆದು
ಗಂಧಕತ್ತುರಿಯಿಂದ ತಿಗುರಿಕ್ಕಿ ಪಾವುಡ
ದಿಂದೊರಸಿದರು ಸೌಖ್ಯದಲಿ ೩

ಚಿನ್ನದ ಚೊಂಬಿನಲ್ಲಿ ನೀರನ್ನು ತಂದು, ಪಾದಕಮಲವನ್ನು ಪೀಕದಾನಿಯಲ್ಲಿರಿಸಿ ತೊಳೆದು, ಗಂಧ ಕಸ್ತೂರಿಯನ್ನು ಲೇಪಿಸಿ ಹೊಳಪುಗೊಳಿಸಿ, ಪಾವುಡ(ತೆಳುವಸ್ತ್ರ)ದಿಂದ ಒರೆಸಿದರು

ಬಾಲೆ ತನ್ನಯ ಮಿತ್ರೆ ಸಹಿತ ಕಾಲ್ತೊಳೆದು ಸು
ಶೀಲೆಯರು ನೂರಾರು ಹೆಣ್ಣ
ಲೀಲೆಯಿಂದೊಡಗೊಂಡು ಹೊಕ್ಕಳು ಭೋಜನ
ಶಾಲೆಯನು ಸಂತಸದಿಂದ ೪

ತನ್ನ ಗೆಳತಿ ಹಾಗೂ ನೂರಾರು ಸುಶೀಲೆಯರ ಸಮೇತ ಕಾಲನ್ನು ತೊಳೆದು, ಅವರೊಡನೆ ನಗುನಗುತ್ತಾ ಊಟದ ಮನೆಯನ್ನು ಪ್ರವೇಶಿಸಿದಳು.

ಸಿತವಟ್ಟೆಯನಿಟ್ಟು ಗದ್ದುಗೆಯಲಿ ಮಂದ
ಸ್ಮಿತ ಮುಖಿಯರ ಸಾಲುಗೊಳಿಸಿ
ಸತಿಯರ ತಲೆವಣಿ ಸಖಿಯೊಡನಿರ್ದಳು
ರತಿ ಸರಸತಿಯ ಡೀವಿಯಲಿ ೫

ಕೂಡುವ ಸ್ಥಳದಲ್ಲಿ ಬಿಳಿಬಟ್ಟೆಯನ್ನು ಇಟ್ಟು, ಮುಗುಳುನಗೆಯ ಮುಖದವರನ್ನು ಸಾಲಾಗಿ ಕುಳ್ಳಿರಿಸಿ, ಸ್ತ್ರೀರತ್ನವೆನ್ನಿಸಿದ ಉಷಾದೇವಿ ತನ್ನ ಗೆಳತಿ ಚಿತ್ರಲೇಖೆಯೊಡನೆ ರತಿಸರಸ್ವತಿಯ ಠೀವಿಯಲ್ಲಿ ಮಂಡಿಸಿದಳು

ಕಿರಣಶೋಭಿತ ರತ್ನಾಂಚಿತ ನಿಖಿಳೋಪ
ಕರಣದಿ ಶಿವಪೂಜೆಗೆಯ್ದು
ಶರಣು ಮಾಡಿ ಮಸ್ತಕದೊಳಾಂತುಕೊಂಡರು
ಶರಣೇಶನನೀಕ್ಷಿಸುತ್ತ ೬

ಕಿರಣಗಳಿಂದ ಹೊಳೆಯುವ ರತ್ನಖಚಿತ ಉಪಕರಣಗಳಿಂದ ಶಿವಪೂಜೆ ನೆರವೇರಿಸಿ, ಶರಣು ಮಾಡಿಕೊಂಡು ಶರಣೇಶನನ್ನು ನೆಟ್ಟ ಕಣ್ಣುಗಳಿಂದ ನೋಡುತ್ತಲೆ ಲಿಂಗವನ್ನು ಮಸ್ತಕದ ಸ್ವಸ್ಥಾನದಲ್ಲಿರಿಸಿದರು.

ಜಲಜಾಕ್ಷಿಯರುಪಕರಣಗಳನು ತೆಗೆದತಿ
ನಲವಿಂದ ತಂದಿರಿಸಿದರು
ವಿಲಸಿತ ಮಾಣಿಕ್ಯಮಯ ಹೊನ್ನ ಹರಿವಾಣ
ಕೆಲವಟ್ಟಲಡ್ಡಣಿಗೆಗಳ ೭

ಕಮಲಮುಖಿಯರು, ಆ ಎಲ್ಲ ಉಪಕರಣಗಳನ್ನು ತೆಗೆದು, ರತ್ನಖಚಿತ ಚಿನ್ನದ ಹರಿವಾಣ ಕೆಲವು ಬಟ್ಟಲು ಮತ್ತು ಅಡ್ಡಣಿಗೆ(ಊಟದ ತಟ್ಟೆಯನ್ನಿಟ್ಟುಕೊಳ್ಳಲು

ಒಂದು ಗೇಣು ಅಥವಾ ಒಂದೂವರೆ ಗೇಣುದ್ದದ ಮೂರು ಕಾಲುಗಳ ತೆವುಟಿಗೆ ಮಣೆ)ಗಳನ್ನು ತಂದಿರಿಸಿದರು

ಕುಡಿನೀರ ಹೊನ್ನ ಹೂಜೆಯ ಸಾಲ್ಗೊಳಿಸಿದ
ರಡಿಗೆಗಾರ್ತಿಯರಂದದಲಿ
ಪಿಡಿದರು ಸ್ವರ್ಣ ಭಾಂಡದಿ ಶಾಖಂಗಳ
ಬಡಿಸಿದರತಿ ಚತುರತೆಯಿಂದ ೮

ಕುಡಿನೀರಿನ ಹೊನ್ನಹೂಜೆಯನ್ನು ಸಾಲಾಗಿರಿಸಿದ ಅಡುಗೆಗಾತಿಯರು ಚಿನ್ನದ ಪಾತ್ರೆಯಲ್ಲಿ ತಂದ ಕಾಯಿಪಲ್ಯಗಳನ್ನು ಚಾಕಚಕ್ಯತೆಯಿಂದ ಬಡಿಸಿದರು

ಸಣ್ಣಕ್ಕಿಯಶನ ಸದ್ಘೃತ ತೋವೆ ಪಳಿದ ಕೈ
ದಣ್ಣಲೆಯ ದಧಿ ಪತ್ರೊಡೆ
ತಣ್ಣೈಸದ ಉಪ್ಪು ಕಾಯಿ ಪಚಡಿಗಳ ಮು
ಕ್ಕಣ್ಣಗರ್ಪಿತವ ಮಾಡಿದರು ೯

ಸಣ್ಣಅಕ್ಕಿ ಅನ್ನ, ಒಳ್ಳೆಯ ತುಪ್ಪ, ತೊವ್ವೆ, ಪಳಿದ್ಯ, ತಣ್ಣನೆಯ ಮೊಸರು, ಪತ್ರೊಡೆ, ತಣ್ಣಗಿರದ ಉಪ್ಪಿನಕಾಯಿ ಪಚಡಿಗಳನ್ನು ಈಶ್ವರನಿಗೆ ಅರ್ಪಿತ ಮಾಡಿದರು

ರಂಜಿಪ ಪರಡಿ ಗಾರಿಗೆ ಸಣ್ಣ ಸಜ್ಜಿಗೆ
ಸಂಜೀವ ಘುಟಿಕೆ ದುಗ್ಧಾನ್ನ
ಭುಂಜಿಸುವನಿತು ಸದ್ಘೃತ ಭಕ್ಷ್ಯಗಳ ಮೃ
ತ್ಯುಂಜಯಾರ್ಪಣ ಮಾಡಿದರು ೧೦

ಪಾಯಸ, ಗಾರಿಗೆ(ಸಿಹಿಭಕ್ಷ್ಯ) ಸಜ್ಜಿಗೆ, ಸಂಜೀವ ಘುಟಿಕೆ (ಸಂಜೀವ ಮೂಲಿಕೆಯ ಗಡ್ಡೆ) ಮೊಸರನ್ನ, ತುಪ್ಪ, ತಿನ್ನುವಷ್ಟು ಭಕ್ಷ್ಯಗಳನ್ನು ಮೃತ್ಯುಂಜಯಾರ್ಪಣ ಮಾಡಿದರು

ರಸರಸಾಯನ ಪರಿಮಳ ಮಿಶ್ರಿತ ಕೆನೆ
ಮೊಸರುಪ್ಪುಗಾಯ ಸಂದೋಹ
ಹಸನು ನೀರ್ಮಜ್ಜಿಗೆ ರುಚಿಯನಾನೆದೊಗಲ
ವಸನಗರ್ಪಿತವ ಮಾಡಿದರು ೧೧

ರಸಾಯನ, ಪರಿಮಳಯುಕ್ತ ಕೆನೆಮೊಸರು, ಉಪ್ಪಿನಕಾಯಿ, ಹಸನಾದ

ನೀರುಮಜ್ಜಿಗೆಯನ್ನು ಆನೆದೊಗಲವಸನ(ಆನೆಚರ್ಮದ ಬಟ್ಟೆ) ಧಾರಿಗೆ (ಶಿವನಿಗೆ) ಅರ್ಪಿಸಿದರು.

ಅವಧರಿಸಿದಳು ಲಿಂಗವನುರಸ್ತಳದಲಿ
ಕುವರಿ ತನ್ನಯ ಮಿತ್ರೆ ಸಹಿತ
ಧವಳ ಸರೋಜಾಕ್ಷಿಯರ ಸಂದೋಹದಲಿ
ಭುವನೇಶ್ವರಿಯ ಸಾರಿದಳು ೧೨

ವಕ್ಷಸ್ಥಳದಲ್ಲಿ ಲಿಂಗವನ್ನು ಗಮನವಿಟ್ಟು ಚಿತ್ತೈಸಿ ಕುಮಾರಿ ತನ್ನ ಗೆಳತಿಯರೊಂದಿಗೆ ಪಾರ್ವತಿಯ ಬಳಿಗೆ ಹೋದಳು

ಸ್ವಸ್ತದಿಂದಾರೋಗಿಸಿ ಪೊಂದಂಬಿಗೆಯ
ಹಸ್ತೋದಕದಿಂ ಕೈದೊಳೆದು
ವಿಸ್ತರದಿಂದೆ ಸುಗಂಧವೀಳ್ಯವ ವೇದ
ದುಸ್ತರಗರ್ಪಿತಗೈದರು ೧೩

ಸ್ವಸ್ಥಚಿತ್ತದಿಂದ ಊಟ ಮಾಡಿ, ಚಿನ್ನದ ತಂಬಿಗೆಯ ನೀರಿನಿಂದ ಕೈ ತೊಳೆದು, ಸುಗಂಧ ವೀಳ್ಯವನ್ನು ವೇದದುಸ್ತರನಿಗೆ(ವೇದಗಳಿಗೆ ನಿಲುಕದವನಿಗೆ)ಅರ್ಪಿತ ಮಾಡಿದರು

ಪಟ್ಟೆ ಪಟ್ಟಾವಳಿ ಮೃಗಝಲ್ಲಿ ಸೌರಭ್ಯ
ವಟ್ಟಿರ್ದ ಪೂಮಾಲೆಗಳು
ಬಟ್ಟವಡೆದ ಹವಳ ಮುತ್ತು ರತ್ನಗಳ ಮೇ
ಲ್ಕಟ್ಟು ರಂಜಿಸಿತು ಕಣ್ಮನಕೆ ೧೪

ಪಟ್ಟೆಗಳನ್ನುಳ್ಳ ರೇಷ್ಮೆವಸ್ತ್ರ, ಪುನಗು ಸೌಗಂಧ ಲೇಪಿತ ಹೂ ಮಾಲೆಗಳು, ದುಂಡು ದುಂಡಾದ ಹವಳ ಮುತ್ತುಗಳ ಮೇಲ್ಕಟ್ಟು(ಸಿಂಹಾಸನ, ಮಂಟಪಗಳ ಮೇಲೆ ಕಟ್ಟುವ ಬಟ್ಟೆ) ಗಳು ಕಣ್ಮನಕೆ ರಂಜನೆ ನೀಡಿದವು

ಮಿಗೆ ರಮ್ಯವಡೆದ ನಾನಾ ರತ್ನಖಚಿತ ಗ
ದ್ದುಗೆಯಲಿ ಕುಳಿತಳಾ ಕುವರಿ

ನಗೆಮೊಗದಬಲೆಯರಂದೆತ್ತಿದರು ಸ
ದ್ಬಗೆವೆತ್ತ ಮುತ್ತಿನಾರತಿಯ ೧೫

ನಾನಾ ರತ್ನಖಚಿತ ಗದ್ದುಗೆಯ ಮೇಲೆ ಉಷಾದೇವಿ ಕುಳಿತಳು. ಮುಗುಳುನಗೆಯ ಅಬಲೆಯರು ಆಕೆಗೆ ಮುತ್ತಿನಾರತಿಯನ್ನು ಎತ್ತಿದರು.

ಆ ಲತಾಂಗಿಯ ಬಂದುಗೆವಾಯ ರದನಾನು
ಕೂಲ ಚೆಂದುಟಿ ಮೆರೆಯಲು
ಶ್ರೀ ಲತಾಂಗಿಯರು ಕಪ್ಪುರ ಮಿಶ್ರಿತ ತಾಂ
ಬೂಲವನಿತ್ತರೆಲ್ಲರಿಗೆ ೧೬

ಬಳ್ಳಿದೇಹದ, ಬುಂದುಗೆ(ಪುಷ್ಪವಿಶೇಷ) ಬಾಯ, ಹಲ್ಲಿಗನುಗುಣವಾದ ಕೆಂದುಟಿ ಮೆರೆಯಲು, ಸಂಪದದ್ಭರಿತ ಬಳ್ಳಿದೇಹದ ಅಬಲೆಯರು ಕರ್ಪೂರ ಮಿಶ್ರಿತ ತಾಂಬೂಲವನ್ನು ಎಲ್ಲರಿಗೂ ಕೊಟ್ಟರು

ಆಳಿಯರುಗಳೆಲ್ಲರಿಗೆ ಕಪ್ಪುರಮಿಶ್ರಿತ
ವೀಳೆಯವಿತ್ತು ಮಂತ್ರಿಜೆಯ
ಕೇಳಿದಳೀಶನೊಡ್ಡೋಲಗವೆಂತೆನೆ
ಪೇಳಿದಳು ಮನಃಪೂರ್ವಕದಿ ೧೭

ಸೇವಕಿಯರೆಲ್ಲರಿಗೆ ಕರ್ಪೂರ ಮಿಶ್ರಿತ ವೀಳ್ಯವನ್ನು ಕೊಟ್ಟು, ಮಂತ್ರಿಜೆ (ಕುಂಭಾಂಡ ಮಂತ್ರಿಯ ಮಗಳಾದ ಚಿತ್ರಲೇಖೆ)ಯನ್ನು ಈಶನ ಓಡ್ಡೋಲಗ ಹೇಗಿತ್ತು ಎಂದಾಗ ಅವಳು ಮನಃಪೂರ್ವಕವಾಗಿ ಹೇಳಿದಳು

ಕಿಡಿಗಣ್ಣನೊಡ್ಡೋಲಗದಲಿ ಸುರವೆಣ್ಗ
ಳಿಡಿಕಿರಿದಿಹುದು ನಿನ್ನೊರೆಗೆ
ಪಡಿಗಾಣೆವೆಂದು ಬಿನ್ನೈಸಲು ಸಖಿಯೊಡನೆ
ನುಡಿದಳಂಬುಜನೇತ್ರೆ ನಗುತ ೧೮

ಹಣೆಗಣ್ಣನ ಆಸ್ಥಾನದಲ್ಲಿ ಸುರಸ್ತ್ರೀಯರು ತುಂಬಿ ತುಳುಕುತ್ತಿದ್ದರೂ ನಿನ್ನ ಚೆಲುವಿನ ಮೆರುಗಿಗೆ ಪ್ರತಿಯಾದ ಚೆಲುವಿನ ಮೆರಗನ್ನು ಕಾಣಲಿಲ್ಲ ಎಂದಾಗ ಉಷಾದೇವಿ ತನ್ನ ಗೆಳತಿ ಚಿತ್ರಲೇಖೆಗೆ ಹೇಳಿದಳು ಹೀಗೆ :

ಏಕೆನ್ನ ಪಿರಿದು ಕೀರ್ತಿಯ ಮಾಡುವೆ ಚಿತ್ರ
ಲೇಖೆ ಮಹೇಶನೋಲಗದಿ
ಸಾಕೊಂದು ಸುರವೆಣ್ಣು ಪಡಿಯಿಲ್ಲವೆಂದು ನೀ
ನೇಕೆ ಪೇಳ್ದೆಯದು ಉಚಿತವೆ ೧೯

ಚಿತ್ರಲೇಖೆ ನೀನೇಕೆ ನನ್ನನ್ನು ದೊಡ್ಡವಳನ್ನಾಗಿ ಮಾಡಿ ಹೊಗಳುತ್ತೀಯೆ? ಈಶ್ವರನ ಓಲಗದಲ್ಲಿ ನನಗೆ ಸರಿಸಮಾನ ಹೆಣ್ಣು ಒಂದೂ ಇಲ್ಲವೆಂದು ಏಕೆ ಹೇಳಿದೆ? ಅದು ಉಚಿತವೇ?

ನನ್ನ ಮಾತು ತುಸುಸಟೆ ಎನಿಸಿದರೀ ರನ್ನ
ಗನ್ನಡಿಯಿದೆ ಕೋ ನೋಡಿಕೊ
ಚೆನ್ನಾಗಿ ಭಾವಿಸಿ ಸಾದೃಶ್ಯವ ನೋಡಿ
ನಿನ್ನ ನೀ ತಿಳಿದುಕೊಳ್ಳವ್ವ ೨೦

ನನ್ನ ಮಾತು ಸುಳ್ಳೆನಿಸಿದರೆ ರನ್ನಗನ್ನಡಿಯಿದೆ ನೋಡಿಕೋ. ಪರಿಭಾವಿಸಿ ನಿನಗೆ ಸರಿಸಾಟಿ ಇದ್ದಾರೆಯೆ ಎಂಬದನ್ನು ನೀನೇ ಗ್ರಹಿಸಿಕೋ

ನೋಡಿದಳಬಲೆ ದರ್ಪಣವೆಂಬ ನಭದಲ್ಲಿ
ಮೂಡಿರ್ದ ಮುಖಚಂದ್ರಮನ
ಕೂಡಿರ್ದ ನಕ್ಷತ್ರವೆಂಬಂತೆ ತುರುಬಲಿ
ಸೂಡಿರ್ದ ಮುತ್ತಿನ ಮಣಿಗಳ ೨೧

ಕನ್ನಡಿಯ ಆಕಾಶದಲ್ಲಿ ಮೂಡಿದ್ದ ಮುಖ ಚಂದ್ರನನ್ನು, ತುರುಬಿಗೆ ಅಲಂಕರಿಸಿದ್ದ ಮುತ್ತಿನ ಮಣಿಗಳ ನಕ್ಷತ್ರ ಸಮೂಹವನ್ನು ನೋಡಿದಳು

ಘನರೂಪ ಯೌವ್ವನವಡೆದ ಸೌಭಾಗ್ಯವ
ಮನದೊಳಗಿಂಬಿಟ್ಟುಕೊಂಡು
ವನಜಾಕ್ಷಿ ಮಾತನಾಡಿದಳು ನಿರ್ಜರವಧೂ
ಜನವೆತ್ತ ನಾನೆತ್ತಲೆನುತ ೨೨

ಶ್ರೇಷ್ಠ ಸೌಂದರ್ಯ ಹಾಗೂ ಕಟ್ಟರೆಯದ ಸೌಭಾಗ್ಯವುಳ್ಳ ಉಷಾದೇವಿ ಸುರಸ್ತ್ರೀಯರೆಲ್ಲಿ?ನಾನೆಲ್ಲಿ? ಎಂದು ಅಭಿಪ್ರಾಯಿಸಿದಳು

ಕೊಂಡಾಡಿದೊಡೆ ಹಿರ್‍ರನೆ ಹಿಗ್ಗುವರು ಭೂ
ಮಂಡಲದಧಮವೆಣ್ಣುಗಳು
ಪುಂಡರೀಕಾಕ್ಷಿ ನೀನಂತವಳಲ್ಲ ನಾ
ಕಂಡುದ ಪೇಳ್ದೆ ತಪ್ಪೇನು ೨೩

ಆಗ ಚಿತ್ರಲೇಖೆ ಅಧಮ ಸ್ತ್ರೀಯರು ಹೊಗಳಿದರೆ ಹಿಗ್ಗುವರು, ನೀನು ಅಂಥವಳಲ್ಲ ಎಂದಳು

ಮಗಳನಂಗೀಕರಿಸಿದನೆಂಬ ದೋಷ ನಾ
ಲ್ಮೊಗನಿಗೆ ಬಂದುದ ಕಂಡು
ಮೃಗಧರ ನಿನ್ನ ಜವ್ವನದಲಿ ಕಣ್ಣಿಟ್ಟು
ತೆಗೆದು ಹೋದನನಿವಾರ್ಯದಿ ೨೪

ಮಗಳನ್ನೇ ಮದುವೆಯಾದನೆಂಬ ಅಪವಾದ ಬ್ರಹ್ಮನಿಗೆ ಇರುವುದನ್ನು ಕಂಡು ಚಂದ್ರ ನಿನ್ನ ಯೌವ್ವನದ ಮೇಲೆ ಕಣ್ಣಿಟ್ಟು ತೆಗೆದುಹೋದ (ಬಡವಾದ)

ಆತಗಾ ಹವಣಾದ ಬಳಿಕ ಮಿಕ್ಕಿನ ಪುರು
ಹೂತಾದಿ ನಿಖಿಳ ನಿರ್ಜರರು
ಕಾತರಿಸಿದರು ನಿನ್ನಿರವ ಕಾಣುತ ಮೀನ
ಕೇತನಗೊಳಗಾದರಬಲೆ ೨೫

ಆತನಿಗೆ ಅಂಥ ಸ್ಥಿತಿಯೊದಗಿದ ಮೇಲೆ, ಉಳಿದ ಪುರುಹೂತಾದಿ ದೇವತೆಗಳು ನಿನ್ನ ರೂಪಕ್ಕೆ ಕಾತರಿಸಿ ಮನ್ಮಥ ಬಾಧೆಗೆ ಒಳಗಾದರು.

ಗಂಡು ಮೆಚ್ಚುವ ಮಿಂಡಿಯರ್ಗೆ ವರ ವಧು
ವಿಂಡೊಲಿವುದು ಸರಿ ಮಿಂಡರಿಗೆ
ಕಂಡುದಿಲ್ಲವು ಪೆಣ್ಣಿಗೆ ಪೆಣ್ಣು ಮನ ಮರು
ಳ್ಗೊಂಡಿಹುದ ಕೇಳಾಯತಾಕ್ಷಿ ೨೬

ಗಂಡು ಮೆಚ್ಚುವ ಮಿಂಡಿಯರಿಗೆ(ಯುವತಿಯರಿಗೆ) ವಧುವಿಂಡು ಒಲಿಯುವುದು;ಆದರೆ ಮಿಂಡರಿಗೆ (ಯುವಕರಿಗೆ) ಒಲಿಯುವ ವಧುವಿಂಡು ಕಂಡುದು ಇಲ್ಲ. ಆದರೆ ಹೆಣ್ಣಿಗೆ ಹೆಣ್ಣು ಮರುಳುಗೊಂಡಿರುವುದು ಸೋಜಿಗಗೊಳಿಸುತ್ತದೆ

ನೆರೆಜಾಣೆ ನಿನ್ನ ಕೀರ್ತಿಸುವೊಡಹಿ ಲೋಕ
ದೆರೆಯಂಗೆ ಮತಿ ಮಂದವಹುದು
ಕರೆಕಂಠ ಮೇನಕಾತ್ಮಜೆ ಪಾಲಿಸಿದುಡು
ಗೊರೆಯ ನೋಡೆಂದು ತೋರಿದಳು ೨೭

ಕಡುಜಾಣೆ, ನಿನ್ನನ್ನು ಹೊಗಳಲು ನಾಗಲೋಕದ ಒಡೆಯನಾದ ಆದಿಶೇಷನಿಗೂ ಬುದ್ಧಿ ಮಾಂದ್ಯವಾಗುವುದು, ವಿಷಕಂಠ ಹಾಗೂ ಮೇನಕಾ ಪುತ್ರಿ ಕೊಟ್ಟ ಉಡುಗೊರೆಯನ್ನು ನೋಡೆಂದು ತೋರಿದಳು

ಈಷಣತ್ರಿತಯ ವಿವರ್ಜಿತ ಗರಳಾ
ಪೋಷಣ ಗಿರಿಜೆ ಪಾಲಿಸಿದ
ಭೂಷಣ ವಸ್ತ್ರಾದಿಗಳ ನಿಟ್ಟಿಸಿ ಪರಿ
ತೋಷವ ಪಡೆದಳಾ ಕುವರಿ ೨೮

ಈಷಣತ್ರಯ (ಹೆಣ್ಣು, ಹೊನ್ನು, ಮಣ್ಣು)ವನ್ನು ವರ್ಜಿಸಿದ ಗರಳಕೊರಳ(ವಿಷಕಂಠ ಶಿವ) ಹಾಗೂ ಗಿರಿಜೆ(ಪಾರ್ವತಿ) ಪಾಲಿಸಿದ ಒಡವೆ ವಸ್ತ್ರಗಳನ್ನು ನಿಟ್ಟಿಸಿ ಸಂತಸಗೊಂಡಳು

ಪೇಳಲದಾರು ಬಲ್ಲರು ಮೂಲದ ರತ್ನ
ಮೇಳವಿದೆಲ್ಲಿ ಸಿದ್ಧಿಸಿತೊ
ಜಾಳಿಸದೆ ಕೆತ್ತಿದನಾರೋ ಕೆಲಸಿಯೆಂ
ದಾಲೋಚಿಸಿದಳು ಕುವರಿ ೨೯

ಈ ರತ್ನರಾಶಿ ಎಲ್ಲ ಸಿದ್ದಿಸಿತೊ? ಯಾವ ಶಿಲ್ಪಿ ಕೆತ್ತಿದನೊ? ಎಂದು ಕುಮಾರಿ ಚಿಂತಿಸಿದಳು

ನೂತನದಾವ ಸುಜಾಣನೊ ಮೇಣಂತೆ ಪು
ರಾತನದಾವ ಕೋವಿದನೋ
ಶ್ವೇತವಸ್ತ್ರವ ತೊಳೆದಗಸನದಾರೆಂದು
ಭೂತೇಶ ಬಲ್ಲ ನಾನರಿಯೆ ೩೦

ವಿನೂತನ ಜಾಣನೋ ಅಥವಾ ಪುರಾತನ ಕೋವಿದನೋ? ಈ ಬಿಳಿಬಟ್ಟೆಯನ್ನು ತೊಳೆದ ಅಗಸ ಇವರಿಬ್ಬರಲ್ಲಿ ಯಾರು? ಎಂದು ಶಿವಬಲ್ಲ, ನನಗೆ ಗೊತ್ತಿಲ್ಲ

ಉಟ್ಟುದು ಹಳೆಯಾನೆದೊವಲು ಕಂಧರದೊಳ
ಗಿಟ್ಟುದು ಜೀರ್ಣರುಂಡಮಾಲೆ
ತೊಟ್ಟುದು ಫಣಿಭೂಷಣ ಅವನಿಗಿದನಾರು
ಕೊಟ್ಟರೋ ನಮಗೀವುದಕೆ ೩೧

ಶಿವ ಉಟ್ಟಿರುವುದು ಹಳೆಯ ಆನೆ ಚರ್ಮ, ಕೊರಳೊಳಗೆ ಇಟ್ಟಿರುವುದು ಜೀರ್ಣರುಂಡಗಳ ಹಾರ, ತೊಟ್ಟಿರುವುದು ಸರ್ಪದಾಭರಣ; ಹೀಗಿರುವಾಗ ನಮಗೆ ಕೊಡಲು ಈ ಶ್ವೇತವಸ್ತ್ರವನ್ನು ಇವನಿಗೆ ಯಾರು ಕೊಟ್ಟರೊ?

ಹವಣಲ್ಲದ ಮಾತನಾಡಿದೆ ಸಲೆ ವೃದ್ಧ
ಶ್ರವ ಮುಖ್ಯ ನಿಖಿಲ ನಿರ್ಜರರು
ಶಿವನ ಪೂಜೆಯ ಮಾಡಿ ಪಡೆದರೈಶ್ವರ್ಯವ
ಧವಳಾಕ್ಷಿ ಇತ್ತ ಚಿತ್ತೈಸು ೩೨

ತೂಕವಿಲ್ಲದ ಮಾತನಾಡಿದೆ, ವೃದ್ಧಶ್ರವ ಮೊದಲಾದ ಸುರರು ಶಿವನ ಪೂಜೆ ಮಾಡಿ ಸಂಪತ್ತು ಪಡೆದರು ಎಂಬುದನ್ನು ಮೆರೆಯದಿರು

ಆತನ ಗುಣಶೀಲವ ಪೊಗಳರಿದಸಂ
ಖ್ಯಾತ ವಿಮಾನ ವಿದೂರನ
ಚೇತನಾತ್ಮಕನ ಬಣ್ಣಿಪರಾರು ಕೇಳು ಮೀನ
ಕೇತನ ಮದ ಸೊಕ್ಕಿದಾನೆ ೩೩

ಮನ್ಮಥನ ಮದದಾನೆಯೇ (ಕಟ್ಟರೆಯದ ಉಷಾದೇವಿಯೆ) ಶಿವನ ಗುಣಶೀಲವನ್ನು ಹೊಗಳಲು ಅಸಾಧ್ಯ.ಅವನು ಅಸಂಖ್ಯಾತ ವಿಮಾನ(ದೇವರಥ)ಗಳಿಗೆ ದೂರವಾದವನು. ಇಂಥ ಚೇತನಾತ್ಮಕನನ್ನು ವರ್ಣಿಸುವುದು ಹೇಗೆ?

ಕೈಸಾರಿದೊಡವೆಯೆನುತ ಕೊಡಬೇಕೆಂದು
ಪೈಸರಗೊಳಬೇಡ ಮನದಿ
ವೈಶಾಖ ಶುದ್ಧ ದ್ವಾದಶಿ ತಾಕಬೇ
ಕೈಸೆನ್ನ ಮಾತ ಮನ್ನಿಪೊಡೆ ೩೪

ಕೈಗೆ ಬಂದ ಒಡವೆಯನ್ನು ಕೊಡಬೇಕೆಂದು ಹಿಂದೆ ಸರಿಯಬೇಡ. ನನ್ನ ಮಾತನ್ನು ಮನ್ನಿಸಬೇಕಾದರೆ ವೈಶಾಖ ಶುದ್ಧ ದ್ವಾದಶಿ ಬರಬೇಕಲ್ಲವೆ?

ಹುಟ್ಟಿ ಬುದ್ಧಿಗಲಿತ ಮೇಲೆ ನಿನ್ನಾಜ್ಞೆಯ
ಕಟ್ಟಿನೊಳಿಹೆನೆಂದೆನುತ
ನಿಟ್ಟಿಸಿ ನವರತ್ನಭೂಷಣಂಗಳ ಹೊನ್ನ
ಪೆಟ್ಟಿಗೆಯೊಳಗಿರಿಸಿದಳು ೩೫

ಹುಟ್ಟಿ ಬುದ್ಧಿಗಲಿತ ಮೇಲೆ ನಿನ್ನಾಜ್ಞೆಯ ಕಟ್ಟಿಗೆ ಒಳಪಟ್ಟಿದ್ದೇನೆ ಎಂದು ಈಕ್ಷಿಸುತ್ತ ನವರತ್ನದ ಒಡವೆಗಳನ್ನು ಚಿನ್ನದ ಪೆಟ್ಟಿಗೆಯಲ್ಲಿರಿಸಿದಳು

ಮದಸೊಕ್ಕಿದಾನೆ ಮಾವುತನಿಚ್ಚೆಯಿದ್ದಂತೆ
ಸುದತಿ ನೀನೆನ್ನಾಜ್ಞೆಯಲಿ
ಪದ ತಪ್ಪದಿರ್ದ ಕಾರಣ ನಿನ್ನ ಸೇವೆಗಾ
ನೊದಗಿದೆ ಕೇಳಾಯತಾಕ್ಷಿ ೩೬

ಮದಸೊಕ್ಕಿದಾನೆಯಾದರೂ ಮಾವುತನ ಇಚ್ಚೆಯನ್ನು ಮೀರಿ ವರ್ತಿಸಲಾಗದಂತೆ, ನೀನು ನನ್ನ ಆಜ್ಞೆಯನ್ನು ಮೀರಿ ವರ್ತಿಸದಿರುವ ಕಾರಣದಿಂದ ನಾನು ನಿನ್ನ ಸೇವಕಿಯಾಗಿದ್ದೇನೆ

ಮಿತ್ತುಂಜಯ ಕೀರ್ತನೆಯಿಂದ ಪರಿತೋಷ
ವೆತ್ತಿರ್ಪ ಪೆಣ್ಣುಗಳೊಡನೆ
ಹೊತ್ತುಗಳೆಯಲೋಸುಗ ಕೇಳಿದಳರು
ವತ್ತು ನಾಲುಕು ವಿದ್ಯೆಗಳ ೩೭

ಮೃತ್ಯುಂಜಯನ ಹೊಗಳಿಕೆಯಿಂದ ಸಂತೋಷಗೊಂಡ ಹೆಣ್ಣುಗಳು ಹೊತ್ತುಗಳೆಯಲು ಅರವತ್ತು ನಾಲ್ಕು ವಿದ್ಯೆಗಳನ್ನು ಕೇಳಿದರು.

ವೃಂದಾರಕ ರಾಕ್ಷಸ ಯುದ್ಧಕಥೆ ಹರಿ
ಶ್ಚಂದ್ರಾದಿ ಚಕ್ರವರ್ತಿಗಳ
ಹಿಂದಣ ಷೋಡಶ ಮಹಾರಾಜರ ಸುಪ್ರ
ಬಂಧ ಕಾವ್ಯಗಳ ಕೇಳಿದರು ೩೮

ಸುರಾಸುರರ ಯುದ್ಧ ಕತೆ, ಹರಿಶ್ಚಂದ್ರಾದಿ ಚಕ್ರವರ್ತಿಗಳ, ಹಿಂದಿನ ಹದಿನಾರು ಮಹಾರಾಜರ ಸುಪ್ರಬಂಧ ಕಾವ್ಯಗಳನ್ನು ಕೇಳಿದರು

ಗೀತವಾದ್ಯ ನೃತ್ಯ ನಾನಾ ಖೇಲನ ವಿಪ
ರೀತ ಮಾಯಾ ವಿದ್ಯೆಗಳ
ವ್ರಾತವನೊಂದೊಂದ ನೋಡಿ ಸಂತಸಗೊಂಡ
ರಾ ತರಳಾಯತಾಕ್ಷಿಯರು ೩೯

ಗೀತ, ವಾದ್ಯ, ನೃತ್ಯ ನಾನಾ ಆಟಪಾಟಗಳ, ಅಸಂಖ್ಯ ಮಾಯಾ ವಿದ್ಯೆಗಳ ಸಮೂಹವನ್ನು ನೋಡಿ ಆ ವಿಶಾಲಾಕ್ಷಿಯರು ಸಂತಸಗೊಂಡರು

ಮತವರಿದವರವರುಗಳಿಂಗೆ ದಾರಿದ್ರ್ಯ
ಜಿತ ಭಾಗ್ಯವಿತ್ತು ಕುಸ್ತರಿಸಿ
ಶತಪತ್ರನೇತ್ರೆಯರಿರಲಿತ್ತಲಸ್ತಂ
ಗತನಾದ ಸೂರ್ಯ ಪಶ್ಚಿಮದಿ ೪೦

ಅವರವರ ಅಭಿಪ್ರಾಯವನ್ನು ತಿಳಿದು ಬಡತನ ಗೆಲ್ಲುವ ಭಾಗ್ಯವನ್ನು ಕೊಟ್ಟು, ಉಪಚರಿಸಿ ಕಮಲಾಕ್ಷಿಯರು ಇತ್ತ ಇರುವಾಗ, ಅತ್ತ ಪಶ್ಚಿಮದಲ್ಲಿ ಸೂರ್ಯ ಮುಳುಗಿದ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೧

ವರಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯಚಂದ್ರರು ಇರುವತನಕ ಲಕ್ಷ್ಮೀಕಾಂತ ರಕ್ಷಿಸುವನು

## ೨೭ ಉಷೆಯ ಸ್ವಪ್ನ

ನಿಗ್ರಹಬಡಿಸಿ ಮಾವನ ಕೊಂದು ಮಧುರೆಯ
ನುಗ್ರಸೇನಗೆ ಪಾಲಿಸಿದ
ನ್ಯಗ್ರೋಧ ತಳಿರ್ವಾಸ ದೇವನ ಪಾದಾ
ನುಗ್ರಹದಿ ಕೃತಿಯ ವಿಸ್ತರಿಸು ೧

ದಂಡಿಸಿ ಮಾವ ಕಂಸನನ್ನು ಕೊಂದು, ಮಥುರಾ ನಗರದ ಆಡಳಿತವನ್ನು ಅವನ ತಂದೆ ಉಗ್ರಸೇನನಿಗೆ ವಹಿಸಿದ, ಆಲದೆಲೆಯ ಮೇಲೆ ವಾಸ ಮಾಡಿದ ದೇವನ ಪಾದಾನುಗ್ರಹದಿಂದ ಕಥೆಯನ್ನು ವಿಸ್ತರಿಸು

ಕಾಕೇಂದ್ರಿಯ ಶಬ್ದಗಳಲ್ಲ ಗರುಡ ಪ
ತಾಕೇಶ್ವರನ ಸತ್ಕೃತಿಯ
ನೀ ಕೇಳಲುಸುರವೆ ಕಂಬಚ್ಚಿನಿಂದ ಸ
ಲಾಕೆಯ ತೆಗೆದಂತೆ ಕೆಳದಿ ೨

ಕೀಳು ಓಜಸ್ಸಿನ ಶಬ್ದಗಳಲ್ಲ, ಗರುಡ ಧ್ವಜನ (ಶ್ರೀಹರಿಯ)ಸತ್ಕೃತಿಯನ್ನು ಚಿನ್ನದ ಕಂಬಚ್ಚಿನಿಂದ ಸಲಾಕೆ(ಕಂಬಿ, ತಂತಿ) ಯನ್ನು ತೆಗೆದಂತೆ ನಿನಗೆ ಹೇಳುವೆನು

ಗಂಡು ಪೆಣ್ಣಗಲ್ವಕ್ಕಿ ಸ್ವಸ್ಥಾನದೊಳಿಂಬು
ಗೊಂಡಿರ್ದವು ತಮದುಪಟಳವ
ಕಂಡು ಆದಿತ್ಯ ಮಾರ್ಬಲ ಬಂದುದೆನೆ ಸೊಡ
ರ್ದಿಂಡು ತತ್ಪುರದೊಳೊಪ್ಪಿದುವು ೩

ಗಂಡು, ಹೆಣ್ಣು ಪಗಲ್ವಕ್ಕಿ(ಚಕ್ರವಾಕ ಪಕ್ಷಿ) ಸ್ವಸ್ಥಾನದಲ್ಲಿ ನೆಲೆಗೊಂಡಿದ್ದವು. ಕತ್ತಲೆಯ ಉಪಟಳವನ್ನು ಕಂಡು ಸೂರ್ಯನ ಶತ್ರುಸೈನ್ಯ (ಇರುಳು) ಬಂದಿತೊ ಏನೋ ಎಂಬಂತೆ ಆ ಪುರದಲ್ಲಿ ದೀಪಗಳ ಜಾತ್ರೆಯೇ ಜರುಗಿತು

ಆದುದು ಕುವರಿಗೀಶ್ವರ ಪೂಜೆ ಭೋಜನ
ವಾದುದು ಸಖಿವೆಣ್ಗಳೊಡನೆ
ಆದುದಿರುಳ ನಿದ್ದೆ ಮಣಿಮಂಚದೊಳು ಬೆಳ
ಗಾದುದು ನವಿಲ್ಗಳುತ್ಸವಿಸೆ ೪

ಕುಮಾರಿಗೆ ಶಿವಪೂಜೆ, ಊಟವಾದ ಮೇಲೆ ಮಣಿಮಂಚದಲ್ಲಿ ರಾತ್ರಿ ನಿದ್ದೆಯಾಯಿತು. ನವಿಲ ಕೇಕೆಗಳು ಬೆಳಗಾದುದನ್ನು ಸೂಚಿಸಿದವು

ಜೋಡಿಗೊಂಡವು ಚಕ್ರವಾಕ ಪಕ್ಷಿಗಳು
ಓಡಿದುವಳಿ ಚೂತವನಕೆ
ಮಾಡಿದ ಚಂದ್ರ ಪಲಾಯನ ಪಠನ ಸೂರ್ಯ
ಮೂಡಿದನುದಯ ಶೈಲದಲಿ ೫

ಚಕ್ರವಾಕ ಪಕ್ಷಿಗಳು ಜೋಡಿಯಾದವು. ಮಾವಿನ ತೋಪಿಗೆ ದುಂಬಿಗಳು ಓಡಿದವು. ಚಂದ್ರ ಪಲಾಯನ ಪಠನ ಮಾಡಿದನು. ಉದಯ ಶೈಲದಲ್ಲಿ ಸೂರ್ಯ ಮೂಡಿದನು

ಬುಧರಾಮ್ನಾಯ ಘೋಷಣೆಯಂತೆ ಗಾನೆಯರು
ವಿಧವರಿದು ಆಳಾಪಿಸುವ
ಸದಮಲ ಶೈವಕೀರ್ತನೆಗಳ ಕೇಳ್ದು
ಸುದತಿ ಮೆಮ್ಮುರಿಯುತೆದ್ದಳು ೬

ವಿದ್ವಾಂಸರ ಆಮ್ನಾಯ(ವೇದ) ಘೋಷಣೆಯಂತೆ, ಗಾಯಕಿಯರು ಆಲಾಪಿಸುವ ಶೈವ ಕೀರ್ತನೆಗಳನ್ನು ಕೇಳಿ ಕುಮಾರಿ ಮೈಮುರಿದೆದ್ದಳು

ನೋಡಿದಳುಭಯ ಹಸ್ತರೇಖೆಯನೆದ್ದು
ಮಾಡಿ ಜಳಕ ದೇಹಾರವ
ಪೋಡಿಪೂಗದ ಬೆಳ್ಳೆಲೆಯ ಮೆಲ್ಲುತೆ ಸಖಿ
ಗೂಡಿ ಬಂದಳು ದಿವಾಣಕೆ ೭

ಎದ್ದು ಬೊಗಸೆಯ ಹಸ್ತರೇಖೆಯನ್ನು ನೋಡಿ, ಬಳಿಕ ಸ್ನಾನ ಪೂಜೆಗಳನ್ನು ಮಾಡಿ, ಚೂರಡಕೆ ಬಿಳಿಎಲೆಯನ್ನು ಮೆಲ್ಲುತ್ತ ಸಖಿಯರೊಡನೆ ದಿವಾಣಕ್ಕೆ (ಪಡಸಾಲೆಗೆ, ಮೊಗಸಾಲೆಗೆ)ಬಂದಳು

ಮುತ್ತಿನ ಗದ್ದುಗೆ ಒರಗುಮೂಡೆಯೊಳು ಬೆ
ನ್ನೊತ್ತಿ ಮಂಡಿಸಿದಳಾ ಕುವರಿ
ಹತ್ತಿರ ಕರೆದು ಕುಳ್ಳಿರಿಸಿಕೊಂಡಳು ಪ್ರಾಣ
ಪತ್ತುಗೆ ಗಾತಿಯ ಮುದದಿ ೮

ಮುತ್ತಿನ ಗದ್ದುಗೆಯಲ್ಲಿ ಒರಗುದಿಂಬನ್ನು ಒರಗಿಕೊಂಡು ಕುಳಿತ ಉಷಾದೇವಿ ಪ್ರಾಣಸಮ ಪತ್ತುಗೆಗಾತಿ(ಜೊತೆಗಾತಿ)ಯನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡಳು

ಕುಡಿನೀರು ವೀಳ್ಯ ಕಾಳಾಂಜಿ ಚಾಮರ ಕ
ನ್ನಡಿ ಮುಖವಸ್ತ್ರ ಬಿಜ್ಜಣ್ಣವ
ಪಿಡಿದೆಡಬಲದಿ ನಿಂದಿಹರು ಮಿಂಡಿವೆಂಗಳು
ಮುಡಿ ಮೊಲೆ ಭರದಿ ಕಂಪಿಸುತ ೯

ಕುಡಿಯುವ ನೀರು, ತಾಂಬೂಲ, ಪೀಕದಾನಿ, ಚಾಮರ, ಕನ್ನಡಿ ಮುಖವಸ್ತ್ರ, ಬೀಸಣಿಗೆ ಹಿಡಿದು ಎಡಬಲದಲ್ಲಿ ಮುಡಿ ಮೊಲೆ ನಡುಗುವ ಕಟ್ಟರೆಯದ ಹೆಣ್ಣುಗಳು (ಮಿಂಡಿವೆಂಗಳು)ನಿಂತಿರುವರು

ಅತ್ಯಂತ ಜಾಣೆಯರು ಸೊಲ್ಲಿಸುವ ಸಾ
ಹಿತ್ಯ ಪಾಠಕ ಪ್ರಮದೆಯರು
ನೃತ್ಯದವರು ತಾಳಮೇಳ ಸಹಿತ ಬಂದರು
ಮತ್ತೇಭಗಮನೆಯಿರ್ದೆಡೆಗೆ ೧೦

ಜಾಣೆಯರು, ವಾಚಿಸುವ ಸಾಹಿತ್ಯದ ಅಧ್ಯಾಪಕ ಸುಂದರಿಯರು, ನೃತ್ಯದವರು ಮದದಾನೆ ಗಮನೆ(ಗಂಭೀರ ನಡಗೆಯ)ಉಷಾದೇವಿ ಇದ್ದಲ್ಲಿಗೆ ಬಂದರು

ವರ ರುದ್ರವೀಣೆ ಧನುರ್ವೀಣೆ ಜಂತ್ರ ತುಂ
ಬುರುವೀಣೆ ಕೂರ್ಮವೀಣೆಗಳ
ಸ್ವರಮಂಡಲ ಮುಖ್ಯ ತಂತ್ರೀವಾದ್ಯದ ಹೆಣ್ಣು
ನೆರೆದುದು ಕುವರಿಯೋಲಗದಿ ೧೧

ರುದ್ರವೀಣೆ, ಧನುರ್ವೀಣೆ, ಜಂತ್ರ (ವಾದ್ಯವಿಶೇಷ), ತುಂಬರುವೀಣೆ,

ಕೂರ್ಮವೀಣೆ, ಸ್ವರಮಂಡಲ ಮುಖ್ಯ ತಂತ್ರೀವಾದ್ಯದ ಹೆಣ್ಣುಗಳು ದಿವಾಣದಲ್ಲಿ ನೆರೆದರು.

ಮೀರುವ ಯೌವ್ವನ ಸಿರಿಮೊಗದೊಳು ಹೊಗ
ರೇರುವ ಕಾಂತಿ ಮೆಯ್ಯೊಳಗೆ
ಬೀರುವ ಸುಗಂಧಗಂಧಿನಿಗೆ ಸುವಿದ್ಯವ
ತೋರುವರಾಯತಾಕ್ಷಿಯರು ೧೨

ಸಿರಿಮೊಗದಲ್ಲಿ ಉಕ್ಕುವ ಕಟ್ಟರೆಯ, ಮೈಯಲ್ಲಿ ಪಳಾರಿಸುವ ಮಿಂಚಿನ ಕಾಂತಿ, ಸೌಗಂಧ ಬೀರುವ ಸುವಾಸಿನಿಗೆ ವಿಶಾಲಾಕ್ಷಿಯರು ನಾನಾ ವಿದ್ಯೆಗಳನ್ನು ಪ್ರದರ್ಶಿಸಿದರು

ಕಾಮಕೇಳಿಯಲಿ ಕಾಂತರ ಹೃದಯದೊಳಿರ್ದ
ನೇಮವ ತುಡುಕುವಂದದಲಿ
ಕೋಮಲ ಕೈವೆರಲಿಂದ ತಂತ್ರಿಯ ಮೀಟಿ
ರಾಮಕ್ರಿಯೆಯ ಬಾಜಿಸಿದಳು ೧೩

ರತಿಕ್ರೀಡೆಯಲ್ಲಿ ಕಾಂತರ ಹೃದಯದಲ್ಲಿರುವ ನೇಮವನ್ನು ಮುಟ್ಟಿ ಹಿಡಿಯುವ ಹಾಗೆ, ಗಾಯಕಿಯೊಬ್ಬಳು ಕೋಮಲವಾದ ಕೈಬೆರಳಿನಿಂದ ವೀಣೆಯ ತಂತಿಯನ್ನು ಮಿಡಿದು ರಾಮಕ್ರಿಯೆ ರಾಗವನ್ನು ಬಾಜಿಸಿದಳು.

ಅಗಳಾ ವೀಣೆಯ ತೂರ್ಯ ತ್ರಯಾದಿಗಳು
ನಾಗವಾಸವ ನೆರೆನೋಡೆ
ಚಾಗವಗೈದಳು ಕಲ್ಪಭೂರುಹವಿಳೆ
ಭಾಗಕೆ ಸರಿಬಾರದೆನಿಸಿ ೧೪

ಆಗ ವೀಣೆಯ ತೂರ್ಯತ್ರಯ(ಗೀತ, ನೃತ್ಯ, ವಾದ್ಯ)ಗಳು ನಾಟ್ಯಗೃಹದತ್ತ ಮುಖಮಾಡಲು, ದೇವಲೋಕದ ಕಲ್ಪವೃಕ್ಷ ಇಹಲೋಕಕ್ಕೆ ಸರಿಬಾರದೆನಿಸಿ ಆಕೆ ತ್ಯಾಗವನ್ನು ಮಾಡಿದಳು.

ಲೆತ್ತ ಪಗಡೆ ಚದುರಂಗವ ಗೆಲುವಳು
ಮತ್ತೇಭಗಮನೆ ಮಂತ್ರಿಜೆಯ

ಚಿತ್ತವೈಕಲ್ಯ ಮಾಡದೆ ಸೋಲ್ವಳೇಕೆನೆ
ಹೊತ್ತುಗಳೆವುದೇಕೈಕ ಗುರಿ ೧೫

ಚಿತ್ರಲೇಖೆಯ ವಿರುದ್ಧ ಲೆತ್ತ, ಪಗಡೆ, ಚದುರಂಗವನ್ನು ಗೆಲ್ಲುವಳು. ಚಿತ್ತವೈಕಲ್ಯಕ್ಕೆ ಅವಕಾಶ ಕೊಡದೆ ಸೋಲುವಳು. ಏಕೆಂದರೆ ಹೊತ್ತು ಕಳೆಯುವುದು ಏಕೈಕ ಗುರಿ

ಮಡಿವಂತೆ ಕಾಷ್ಠವಾದವ ಬಿಟ್ಟು ಕೇಳಿದ
ಳಿತಹಾಸ ಪೌರಾಣಗಳನು
ಕತಿಪಯ ದಿನವ ನೂಕಿದಳು ಗಿರಿಜೆ ಕೊಟ್ಟ
ತಿಥಿ ನಕ್ಷತ್ರ ಕೂಡುವನಕ ೧೬

ಬುದ್ಧಿವಂತೆ ವ್ಯರ್ಥವಾತುಕತೆ (ಕಾಷ್ಟವಾದ)ಬಿಟ್ಟು ಇತಿಹಾಸ ಪುರಾಣಗಳನ್ನು ಕೇಳಿದಳು. ಪಾರ್ವತಿದೇವಿ ನೀಡಿದ ತಿಥಿನಕ್ಷತ್ರ ಕೂಡಿ ಬರುವ ತನಕ  ಕೆಲವು ದಿನಗಳನ್ನು ನೂಕಿದಳು.

ಬಿಸಿಲ ಛಡಾಳದಿ ಬೆಂದರ್ಗೆ ಮಡುನೀರು
ಸಸಿನೆಳಲಿದಿರ್ವಂದಂತೆ
ಅಸಿಯಳ ಮನದನುತಾಪದಾಯಸಕೆ ಸಂ
ಧಿಸಿತು ಈಶ್ವರಿಯ ನಿರೂಪ ೧೭

ಬಿಸಿಲ ಝಳದಿಂದ ಬೆಂದವರಿಗೆ ಮಡುವಿನನೀರು, ಗಿಡದ ನೆರಳು ದೊರಕಿದಂತೆ, ಬಳ್ಳಿ ಮೈಯವಳ ಮನಸ್ಸಿನ ತಾಪದ ಆಯಾಸಕ್ಕೆ ಪಾರ್ವತಿಯ ನಿರೂಪ ಸಂಧಿಸಿತು

ಗಳಿಗೆಯನೊಂದೊಂದು ಕಲ್ಪಕೋಟಿಯ ಮಾಡಿ
ಕಳೆವ ಮಾನಿನಿಯ ಚಿತ್ತವನು
ತಿಳಿದು ಸಖಿಶಿರೋಮಣಿ ಸೂರ್ಯನ ಮೇಲೆ
ಮುಳಿದು ನಿಷ್ಠುರವನಾಡಿದಳು ೧೮

ಒಂದೊಂದು ಗಳಿಗೆಯುನ್ನು ಕಲ್ಪಕೋಟಿ(ಕೋಟಿ ಸಹಸ್ರ ಯುಗಗಳು)ಮಾಡಿ ಕಳೆಯುವ ಉಷಾದೇವಿಯ ಮನಸ್ಸನ್ನು  ಅರಿತು ಗೆಳತಿ ಚಿತ್ರಲೇಖೆ ಸೂರ್ಯನ ಮೇಲೆ ಸಿಟ್ಟಾಗಿ ನಿಷ್ಠುರದ ಮಾತಾಡಿದಳು.

ಹಸಗೆಟ್ಟುವೋ ಗಾಲಿ ಎರೆಯೆಣ್ಣೆ ತೀರ್ದುದೊ
ಅಸಮಾಶ್ವಗಳು ಬಾಂದೊರೆಯ
ಕೆಸರೊಳು ಬಿದ್ದೇಳಲಾರದಾದುವೊ ಎಂದು
ಬಿಸಜಾಕ್ಷಿ ರವಿಯ ನೋಡಿದಳು ೧೯

ಚಕ್ರಗಳು ಹಸಗೆಟ್ಟವೊ(ಸರಿದಸದವೋ, ಅಂದಗೆಟ್ಟವೋ), ಚಕ್ರಗಳ ಗುಂಭಕ್ಕೆ ಇಟ್ಟ ಎರೆಯೆಣ್ಣೆ ತೀರಿಹೋಯಿತೊ, ಅಸಮಾಶ್ಯಗಳು(ಸೂರ್ಯನ ರಥದ ಏಳು ಕುದುರೆಗಳು) ಆಕಾಶಗಂಗೆಯ ಕೆಸರೊಳಗೆ ಬಿದ್ದು ಏಳಲಾರದಾದುವೋ ಎಂದು ಕಮಲಾಕ್ಷಿ ಸೂರ್ಯನನ್ನು ನೋಡಿದಳು

ಚಿತ್ರಲೇಖೆಯ ಮಾತ ಮನ್ನಿಸಲು ಕಂಜ
ಮಿತ್ರ ತನ್ನಯ ಮಣಿರಥವ
ಸತ್ರಾಣಿಸಿಕೊಂಡು ತೆರಳಿದ ವಿಘಳಿಗೆ
ಮಾತ್ರದಿ ಪಡುವೆಟ್ಟದೆಡೆಗೆ ೨೦

ಚಿತ್ರಲೇಖೆಯ ಮಾತಿಗೆ ಮಾನ್ಯತೆ ನೀಡುವಂತೆ ಸೂರ್ಯ ತನ್ನ ರಥವನ್ನು ಸಶಕ್ತಗೊಳಿಸಿಕೊಂಡು ವಿಘಳಿಗೆ (ಗಳಿಗೆಯ ಅರುವತ್ತನೆಯ ಒಂದು ಭಾಗ)ಯಲ್ಲಿ ಪಶ್ಚಿಮ ಬೆಟ್ಟದೆಡೆಗೆ ತೆರಳಿದ

ಶುದ್ಧಾತ್ಮಕ ಬಾಣನಾತ್ಮ ಸಂಭವೆಗನಿ
ರುದ್ಧನೆ ಕೈಸಾರಲೆನುತ
ಬದ್ಧ ಹರಕೆಯ ನೀಡಿ ಭಾಸ್ಕರದೇವ
ಬಿದ್ದನು ಪಶ್ಚಿಮಾಂಬುಧಿಗೆ ೨೧

ಪರಿಶುದ್ಧ ಹೃದಯಿಯಾದ ಬಾಣನ ಮಗಳಾದ ಉಷಾದೇವಿಗೆ ಅನಿರುದ್ಧನೇ ದೊರಕಲಿ ಎಂದು ಹರಕೆಯ ಹೊತ್ತು ಹಗಲೊಡೆಯ (ಸೂರ್ಯ) ಪಡುಗಡಲಿಗೆ ಬಿದ್ದನು.

ಬಿಸುಗದಿರನ ನುಂಗಿ ನೀರ್ಗುಡಿದಿರುಳ ರ
ಕ್ಕಸಿಯ ಮಸ್ತಕದ ಬೈತಲೆಯ
ಅಸಿಯ ಚಂದ್ರಾಂಕಿತವೆಂಬಂತೆ ಸಂಜೆಗೆಂ
ಪೆಸೆದುದು ಕೇಳಾಯತಾಕ್ಷಿ ೨೨

ಸೂರ್ಯನನ್ನು ನುಂಗಿ ನೀರ್ಕುಡಿದ ಇರುಳ ರಕ್ಕಸಿಯ ಮಸ್ತಕದ ಬೈತಲೆಯಲ್ಲಿರುವ ಕತ್ತಿಯ ಕುಂಕುಮ ಮುದ್ರಿಕೆಯೆಂಬಂತೆ ಸಂಜೆಗೆಂಪು ರಂಜಿಸಿತು

ವಾರಿಜ ಚಕ್ರಿವಕ್ಕಿಗಳು ಕುಗ್ಗಿದುವು ಚ
ಕೋರ ನೀಲಾಬ್ಜ ಹಿಗ್ಗಿದುವು
ಸೋರಿದುವಮೃತಪಾಷಾಣ ಪಾಲ್ಗಡಲಂತೆ
ಪೂರಯಿಸಿತು ಚಂದ್ರನುದಯ ೨೩

ಚಂದ್ರ ಉದಯವಾದ ಕೂಡಲೇ ಕಮಲ ಚಕ್ರವಾಕ ಪಕ್ಷಿಗಳು ಕುಗ್ಗಿದವು, ಕನ್ನೈದಿಲೆ ಚಕೋರ ಪಕ್ಷಿಗಳು ಹಿಗ್ಗಿದವು, ಚಂದ್ರಕಾಂಶ ಶಿಲೆಗಳು ಹಾಲುಗಡಲಂತೆ ಸೋರತೊಡಗಿದವು.

ಮೇಳೈಸಿದುವು ಶೋಣಿತಪುರದೊಳು ಬೊಂ
ಬಾಳದೀವಿಗೆ ವಾದ್ಯರವ
ಗೀಳಿಡಲೆಡೆಯಾಡುವ ದೊರೆಗಳ ಪೆಂಪ
ಪೇಳಲಸಾಧ್ಯ ನಾಲಗೆಗೆ ೨೪

ಶೋಣಿತಪುರದಲ್ಲಿ ಬೊಂಬಾಳದೀವಿಗೆ(ದೀಪದ ಕಂಬದಲ್ಲಿ ಹಚ್ಚಿಟ್ಟ ಜ್ಯೋತಿಗಳು)ಕಾಣಿಸಿಕೊಂಡವು. ವಾದ್ಯ ಸದ್ದು ಗೀಳಿಟ್ಟಾಗ ಅಲೆದಾಡುವ ದೊರೆಗಳ ಹಿರಿಮೆಯನ್ನು ಹೇಳಲಸಾಧ್ಯ

ಊರೊಳಗಿನಿತು ಸಂಭ್ರಮವಡೆದಿರಲು ಕು
ಮಾರತಿಯರು ಶಿವಾರ್ಚನೆಯ
ಪೂರತಿಗೆಯ್ದು ಸದ್ಭಕುತಿಯನಾಂತು ಕೈ
ವಾರಿಸುತಿರ್ದರರ್ತಿಯಲಿ ೨೫

ಊರೊಳಗೆ ಇಷ್ಟು ಸಂಭ್ರಮ ಸಡಗರ ತಾಂಡವವಾಡುತ್ತಿರಲು, ಕುಮಾರಿದ್ವಯರು ಶಿವಾರ್ಚನೆ ಮಾಡಿ ಭಕ್ತಿಯನ್ನು ಹೊಂದಿ ಪ್ರೀತಿಯಿಂದ ಶಿವನನ್ನು ಹೊಗಳಿದರು

ಸಡಗರದಿಂದ ನೋಡುವರ ಕಣ್ಣಾಲಿಗ
ಳೊಡತಿಯ ಮೇಲೆ ಸಂಧಿಸಲು

ಅಡಹಾಯಿದಾಕೆ ತನ್ನಯ ಪೇರುರವಾಂತ
ತಡೆದಳು ಬಲ್ಮೊಲೆಗಳಿಂದ ೨೬

ನೋಡುವವರ ಕಣ್ಣುಗಳು ಒಡತಿಯ ಮೇಲೆ ನೆಟ್ಟಾಗ, ಚಿತ್ರಲೇಖೆ ಅಡ್ಡಬಂದು ತನ್ನ ವಿಶಾಲ ವಕ್ಷ ಹೊಂದಿದ ಬಲ್ಮೊಲೆಗಳಿಂದ ತಡೆದಳು

ಅವರ ಲಾವಣ್ಯಾಬ್ಧಿ ವಿಟರ ಕಣ್ಮನಗಳ
ಜವಗಿಡಿಸಿದುವು ಗೋಪ್ಯದಲಿ
ಕುವರಿಯ ಸೌಂದರ್ಯ ಸಿಂಧುವ ಕಾಂಬರೆ
ಹವಣಲ್ಲ ನರಮನುಷ್ಯರಿಗೆ ೨೭

ಅವರ ಲಾವಣ್ಯ ವಿಟರ ಕಣ್ಮನಗಳನ್ನು ಚಲಿಸದಂತೆ ಮಾಡಿದವು. ಕುಮಾರಿಯ ಸೌಂದರ್ಯ ಸಮುದ್ರವನ್ನು ಕಾಣಲು ನರಮನುಷ್ಯರಿಗೆ ಸಾಧ್ಯವಿಲ್ಲ

ಸತಿಶಿರೋಮಣಿಯರಿರ್ವರೀಶ್ವರ ಪಾ
ರ್ವತಿ ಕೊಟ್ಟ ವಸ್ತ್ರ ಭೂಷಣವ
ಅತಿ ಹರುಷದೊಳುಟ್ಟು ತೊಟ್ಟು ಭುಕ್ತಿಯ ಮಾಡಿ
ನುತಿಸಿದರು ಗೌರಿವಲ್ಲಭನ ೨೮

ಕುಮಾರಿಯರಿಬ್ಬರು ಶಿವಪಾರ್ವತಿ ಕೊಟ್ಟ ಉಡುಗೆತೊಡುಗೆಗಳನ್ನು ಉಟ್ಟು ತೊಟ್ಟು ಊಟ ಮಾಡಿ ಶಿವನನ್ನು ಸ್ತುತಿಸಿದರು.

ಕೆತ್ತಿದ ನಿಖಿಳ ರತ್ನಗಳ ಮೆಯ್ವೆಳಗು ಕೈ
ಬತ್ತಿಯ ಸೊಡರ ಕೀಳ್ಪಡಿಸಿ
ಕತ್ತೆತ್ತಿನಿಂತ ರಮ್ಯವಡೆದ ಹರ್ಮ್ಯವ
ಹತ್ತಿದಳರಸಂಚೆ ಗಮನೆ ೨೯

ಕುಂದಣಿಸಿದ ಸಕಲ ರತ್ನಗಳ ಮೈಬೆಳಗು, ಕೈಯಲ್ಲಿರುವ ಬತ್ತಿಯ ದೀಪವನ್ನು ಕೀಳಾಗಿಸಲು, ಕತ್ತೆತ್ತಿ ನಿಂತ ರಮ್ಯ ಸೌಧವನ್ನು ಹಂಸಗಮನೆ ಹತ್ತಿದಳು

ತಲೆವಣಿಯ ತಾಳ್ದು ಫಣಿಲೋಕ ಭೂಲೋಕ
ಮೇಲೆ ಸುರಲೋಕ ಮುಂಕೊಂಡು

ಕಲೆಗಧಿನಾಥ ಚಂದ್ರನ ನೋಡ ಪೋಪಂತೆ
ನೆಲೆನೆಲೆಗಡರ್ದಳಾ ಕುವರಿ ೩೦

ಶಿರೋರತ್ನ ಧರಿಸಿ ಉರಗಲೋಕ, ನರಲೋಕ, ಸುರಲೋಕಗಳನ್ನು ಮೀರಿ ಕಲೆಗಾರ ಚಂದ್ರನನ್ನು ನೋಡಲು ಹೋಗುವಂತೆ ಕುವರಿ ಹಂತಹಂತಗಳಿಗೆ ಹತ್ತಿದಳು.

ಭೋಗಿಭೂಷನ ಗಿರಿಶಿಖರವ ಚೌಷಷ್ಟಿ
ಯೋಗಿಣಿಯರು ಪತ್ತಿದಂತೆ
ಲಾಗಿನಲಿ ಜಾಣವೆಣ್ಣುಗಳು ಮಂತ್ರಿಜೆ ಸಹ
ವಾಗಿ ಹರ್ಮ್ಯವನೇರಿದರು ೩೧

ಸರ್ಪಭೂಷಣನ ಗಿರಿಶಿಖರವನ್ನು ಅರುವತ್ತು ನಾಲ್ಕು ಯೋಗಿಣಿಯರು ಹತ್ತಿದಂತೆ, ಸುಲಭದಲ್ಲಿ ಚಿತ್ರಲೇಖೆ ಸಮೇತ ಜಾಣವೆಣ್ಣುಗಳು ಸೌಧವನ್ನು ಹತ್ತಿದರು

ಇನಕಿರಣಂಗಳ ಮಸುಳಿಪ ರತ್ನಕಾಂ
ಚನಮಂಚ ಮೃದು ತಲ್ಪದಲಿ
ವನಜದಳಾಯತೇಕ್ಷಣೆ ಮಂಡಿಸಿದಳು
ಘನಪರಿತೋಷದುಬ್ಬಿನಲಿ ೩೨

ಸೂರ್ಯಕಿರಣಗಳನ್ನು ಮಸುಕಾಗಿಸುವ ರತ್ನ ಕಾಂಚನ ಮಂಚದ ಮಿದು ಹಾಸಗೆಯಲ್ಲಿ ಕಮಲದಳಾಂಬಕಿ ಸಂತೋಷದಿಂದ ಮಂಡಿಸಿದಳು

ಹೇಳಿಕೆಯಲಿ ಮಿತ್ರೆ ಕುಳಿತಳು ಕಾಂತಿ ಥ
ಡಾಳಿಪ ಮಣಿಮಂಚದೆಡೆಯ
ಆಳಿಯರು ಗಂಧೋದಕ ಹೂಜಿಯಿಂದ ಪ್ರ
ಕ್ಷಾಳಿಸಿದರು ಪಡಯುಗವನು ೩೩

ಕಾಂತಿ ಥಳಥಳಿಸುವ ರತ್ನಮಂಚದ ಬಳಿಯೆ ಇದ್ದ ಹೇಳಿಕೆ (<ಪೇಳಿಗೆ <ಪೇಟಿಗೆ<ಪೆಟ್ಟಿಗೆ= ಸಂದೂಕ)ಯಲ್ಲಿ ಕಾಲಿಟ್ಟು ಕುಳಿತಳು. ಸೇವಕಿಯರು ಹೂಜಿಯ ಗಂಧೋದಕದಿಂದ ಎರಡು ಪಾದಗಳನ್ನು ತೊಳೆದರು

ಮಂಡೆಯ ಕುರುಳ ಹಿಕ್ಕುವರು ಕೆಲರು ಪೂ
ದಂಡೆಯ ಮುಡಿಸುವರು ಕೆಲರು
ಅಂಡೆಯೊಳಿಡಿದ ಜವ್ವಾದಿಯ ಪೂಸಿದರು
ಖಂಡೇಂದು ಭಾಳ ಕುವರಿಗೆ ೩೪

ಅರ್ಧಚಂದ್ರಾಕೃತಿಯ ಹಣೆಯ ಕುಮಾರಿಗೆ ಕೆಲವರು ಮಂಡೆಯ ಕೂದಲ ಸಿಕ್ಕನ್ನು ಬಿಡಿಸಿ ಬಾಚುವರು, ಕೆಲವರು ಹೂದಂಡೆಯನ್ನು ಮುಡಿಸುವರು, ಕೆಲವರು ಅಂಡೆ(ಬಿದಿರ ಕೊಳವೆ)ಯಲ್ಲಿದ್ದ ಜವಾದಿ(ಪುನುಗು)ಯನ್ನು ಮೈಗೆ ಲೇಪಿಸುವರು.

ಅಂಬುಜವದನೆಯ ಶೌಚಕ್ಕೆ ಪನ್ನೀರ
ಚೆಂಬು ಗಂಧೋದಕ ಹೂಜೆ
ತುಂಬುದಟ್ಟೆಯೊಳು ನಾನಾ ಮಸ್ತುಗಳ ತಲೆ
ಗಿಂಬಿನೊಳು ತಂದಿರಿಸಿದರು ೩೫

ಕಮಲಮುಖಿಯ ಶೌಚಕ್ಕೆ ಪನ್ನೀರಿನ ಚೆಂಬು, ಗಂಧೋದಕ ಹೂಜೆ ನಾನಾವಸ್ತುಗಳ ತುಂಬು ತಟ್ಟೆಯನ್ನು ತಲೆದೆಸೆಯಲ್ಲಿ ತಂದಿರಿಸಿದರು

ಹಾಡಿಸಬೇಡ ನಾನಾ ವಾದ್ಯಗಳ ದನಿ
ಮಾಡಿಸಬೇಡೊರ್ವರೊಡನೆ
ಕ್ರೀಡಿಸಬೇಡ ಸ್ವಸ್ತದಿ ನಿದ್ದೆಗೆಯ್ವುದೆಂ
ದಾಡಿದಳಾ ಚಿತ್ರಲೇಖೆ ೩೬

ಗಾಯಕಿಯರಿಂದ ಹಾಡುಗಳನ್ನು ಹಾಡಿಸಬೇಡ, ಬಗೆಬಗೆಯ ವಾದ್ಯಗಳನ್ನು ನುಡಿಸಲು ಹೇಳಬೇಡ, ಯಾರೊಡನೆಯೂ ಆಟವಾಡಬೇಡ ಸ್ವಸ್ಥವಾಗಿ ನಿದ್ದೆ ಮಾಡು ಎಂದು ಚಿತ್ರಲೇಖೆ ಹೇಳಿದಳು

ಯೋಗನಿದ್ರೆಯೊಳೊರಗಿರಲು ಪಾರ್ವತಿ ಪೇಳ್ದ
ಪೂಗೋಲನ ಸಮರೂಪನು
ಈಗ ನಿನ್ನೊಡನೆ ಸ್ವಪ್ನದಿ ಬಂದು ಪರಮ ಸಂ
ಭೋಗವ ಮಾಳ್ಪ ನಿಶ್ಚಯದಿ ೩೭

ನೀನು ಯೋಗನಿದ್ರೆಯಲ್ಲಿ ಮಲಗಿದ್ದರೆ, ಪಾರ್ವತಿ ಹೇಳಿದ ಮನ್ಮಥನ ತದ್ರೂಪನು ನಿನ್ನ ಸ್ವಪ್ನದಲ್ಲಿ ಬಂದು ನಿನ್ನೊಡನೆ ಸಂಭೋಗಿಸುವನು

ಎಂದೊಡಾ ಮಾತಿಂಗೆ ನಸುನಾಣ್ಚಿ ಹೃದಯಾರ
ವಿಂದದುಲ್ಲಾಸ ಪೂರಯಿಸಿ
ಚಂದನ ಸೌರಭ್ಯವಡೆದ ದೇಹಜಾತ
ಸಂದೋಹ ಗುಡಿಗಟ್ಟಿತವಳ ೩೮

ಎಂದು ಚಿತ್ರಲೇಖೆ ಹೇಳಿದಾಗ, ಆ ಮಾತಿಗೆ ನಾಚಿಕೊಂಡು, ಹೃದಯದಲ್ಲಿ ಉಲ್ಲಾಸ ಉತ್ಸಾಹಗಳು ತುಂಬಿಕೊಂಡು, ಚಂದನ ಗಂಧ ಲೇಪಿತ ದೇಹಜಾತ(ರೋಮ) ಸಂದೋಹ ಪುಳಕಗೊಂಡು ನಿಮಿರಿ ನಿಂದವು

ಜನನಸ್ಥಾನದಿಂದಗಲದ ಬಿರುದುಳ್ಳ
ಘನಕುಚ ತೋರಹಾರಗಳು
ತೊನೆದಾಡೆ ಜಟ್ಟಿಯರು ತೊಡೆ ತಟ್ಟಿದರು ಜ
ವ್ವನಗಾತಿ ಕಣ್ಮುಚ್ಚುವಂತೆ ೩೯

ಜನನ ಸ್ಥಾನದಿಂದ ಬೇರೆಯಾಗದ ಬಿರುದುಳ್ಳ ಘನಕುಚ, ತೋರ ಹಾರಗಳು ಅಲುಗಾಡಲು ಕಟ್ಟರೆಯದ ಕಟ್ಟಾಣಿ ಕಣ್ಮುಚ್ಚುವಂತೆ ವೀರರು ತೊಡೆ ತಟ್ಟಿದರು.

ಎಡದ ನುಣ್ದೋಳು ಸೆಳ್ಳುಗುರ್ಗೆಯ್ಯ ಸುಖವ
ಪಡೆದು ಮೊಲೆಗಳ ಮೇಲಿರಲು
ಮಡದಿ ಮಾಣಿಕದ ದಕ್ಷಿಣ ಬಾಹು ತಲೆಗಿಂಬಿ
ಗಡರ್ದಿರೆ ಮರೆದೊರಗಿದಳು ೪೦

ಚೂಪಾದ ಉಗುರಿನ ಕೈಯಿಂದ ಸುಖ ಪಡೆದ ಎಡದ ತೋಳು ಮೊಲೆಗಳ ಮೇಲಿರಲು, ಬಲದ ತೋಳು ತಲೆದಿಂಬಿನ ಮೇಲಿರಲು ಕುಮಾರಿ ಮರೆದು ಮಲಗಿದ್ದಳು

ನಿದ್ರಾನ್ವಿತೆಯಾಗಿ ಕಣ್ದಿಟ್ಟಿಯೊಳಗನಿ
ರುದ್ಧನ ಕಂಡಮರ್ದಪ್ಪಿ
ಮುದ್ದಾಡಿ ಬಾಯೊಳು ಬಾಯಿಟ್ಟು ಚುಂಬಿಸು
ತಿದ್ದಳು ರತಿಶಾಸ್ತ್ರದಂತೆ ೪೧

ನಿದ್ರೆಯಲ್ಲಿ ಅನಿರುದ್ಧನನ್ನು ಕಂಡು ಬಾಚಿ ತಬ್ಬಿಕೊಂಡು, ಮುದ್ದಾಡಿ, ಬಾಯೊಳಗೆ ಬಾಯಿಟ್ಟು ಮುತ್ತಿಕ್ಕುತ್ತಿದ್ದಳು ರತಿಶಾಸ್ತ್ರಕ್ಕನುಗುಣವಾಗಿ

ನಿಜವಾಗಿ ತನ್ನ ತೋಳವನ ತೋಳುಗಳೆಂದು
ದ್ವಿಜಮುದ್ರಾಂಕಿತಗೆಯ್ದು
ಗಜಕುಂಬನಿಭಸ್ತನ ಪ್ರಾಣಕಾಂತನ
ಭುಜವೆಂದು ನಖದೊಳೊತ್ತಿದಳು ೪೨

ನಿಜವಾಗಿ ತನ್ನ ತೋಳುಗಳು ಅವನ ತೋಳುಗಳೆಂದು ದ್ವಿಜ(ಹಲ್ಲು) ಮುದ್ರಾಂಕಿತವನ್ನು ಒತ್ತಿ, ತನ್ನ ಗಜಕುಂಭನಿಭಸ್ತನ(ಆನೆ ನೆತ್ತಿಗೆ ಸದೃಶವಾದ ಮೊಲೆ)ವನ್ನೇ ಪ್ರಾಣಕಾಂತನ ಭುಜವೆಂದು ಭಾವಿಸಿ ಉಗುರಿನ ಮುದ್ರೆಯೊತ್ತಿದಳು

ತಳುಕಿಕ್ಕಿ ಕನಕಲತೆಗಳಂತೆ ತೋಳ್ತೊಡೆ
ಗಳು ಪರಸ್ಪರ ದಳೆದುಕೊಂಡು
ಪುಳಕಿತಮಪ್ಪಂತೆ ರಮಿಸಲ್ಕೆ ಕಾಮಾಂಬು
ತುಳುಕಿತು ನಾಣತಾಣದಲಿ ೪೩

ತೋಳುಗಳು ಕನಕಲತೆಗಳಂತೆ ತಳುಕಿಕ್ಕಿ (ಪರಸ್ಪರ ಹಗ್ಗದಂತೆ ನುಲಿದುಕೊಂಡು, ಜಡೆಯಂತೆ ಹೆಣೆದುಕೊಂಡು)ತೊಡೆಗಳು ಪರಸ್ಪರ ದಳೆದುಕೊಂಡು (ಹೊಲಿಗೆಗೊಂಡು) ಮೈನವಿರೇಳುವಂತೆ ಕ್ರೀಡಿಸಲು ನಾಣತಾಣದಲಿ (ಯೋನಿಯಲ್ಲಿ)ಕಾಮಾಂಬು ಜಿನುಗಿತು

ಕೀಲಿದೊಡಲ್ಗಳ ರತಿಯಾದಿ ಮಧ್ಯಾಂತ
ಲಾಲಿತ ಕೈಮಾಟದಿಂದ
ಸೋಲಿಸಿದನು ಕಾಂತಕಾಂತೆಯ ದ್ವಿತಯ ಕ
ಣ್ಣಾಲಿಗಳು ಬೆಂಡೇಳುವಂತೆ ೪೪

ಬೆಸುಗೆಗೊಂಡ ಶರೀರಗಳ ರತಿಕ್ರೀಡೆಯ ಆದಿ, ಮಧ್ಯ, ಅಂತ್ಯ ಅವಸ್ಥೆಗಳಲ್ಲಿ ಕಾಂತ ತನ್ನ ಕೈಮಾಟ(ಕೌಶಲ್ಯ)ದಿಂದ ಕಾಂತೆಯು ಎರಡು ಕಣ್ಣುಗಳು ಬೆಂಡೇಳುವಂತೆ ಸೋಲಿಸಿದನು

ಚಾಪಲಾಕ್ಷಿ ಪರವಶತೆ ಬೀತು ಕಾಮೋ
ದ್ದೀಪನ ತಲೆದೋರೆ ಮಗುಳೆ
ರೂಪಕಂದರ್ಪನೆಂದೆನಿಸುವ ತನ್ನ ಪ್ರಾ
ಣೋಪನ ತಡವಿ ನೋಡಿದಳು ೪೫

ಚಾಪಲಾಕ್ಷಿ(ಚಂಚಲಾಕ್ಷಿ) ಪರವಶತೆ ಇಲ್ಲವಾಗಿ ಮತ್ತೆ ಕಾಮೋದ್ದೀಪನ ತಲೆದೋರಲು ತನ್ನ ಮನ್ಮಥ ರೂಪನಾದ ಪ್ರಾಣೋಪ (ಪ್ರಾಣಪ್ರಿಯ) ನನ್ನು ತಡವಿ ನೋಡಿದಳು

ಕಾಣದೆ ಕಂಗೆಟ್ಟಳು ಭ್ರಾಂತಿಗೊಂಡಳು
ಮಾಣದೆ ಮಗುಳರಸಿದಳು
ಏಣನಿಭಾಯತೇಕ್ಷಣೆ ಕಾಮದೇವನ
ಬಾಣಕೆ ಗುರಿಯಾದಳಾಗ ೪೬

ಕಾಣದೆ ಕಂಗೆಟ್ಟು, ಭ್ರಾಂತಿಗೊಂಡು, ಮತ್ತೆ ಹುಡುಕಿ ತಡಕಿ ಸೋತು ಸುಣ್ಣವಾಗಿ ಜಿಂಕೆಗಣ್ಣಿನ ಕನ್ನೆ ಮನ್ಮಥನ ಬಾಣಕ್ಕೆ ಗುರಿಯಾದಳು

ಆತಂಕದಿಂದಲಾಳ್ದನ ಪೆಸರ್ಗೊಂಡಳು
ನೂತನಕಂದರ್ಪ ರೂಪ
ಸೋತವಳೊಡನೆ ವಂಚನೆ ಬೇಡ ಮತ್ಪ್ರಾಣ
ನಾಥ ಮೆಯ್ದೋರೆಂದಳಬಲೆ ೪೭

ಆತಂಕದಿಂದ ತನ್ನೊಡೆಯನ ಹೆಸರನ್ನು ನೂತನ ಮನ್ಮಥ ರೂಪ ಎಂದು ಉಚ್ಚರಿಸಿದಳು ಸೋತವಳೊಡನೆ (ಮನಸೋತವಳೊಡನೆ)ವಂಚನೆ ಸಲ್ಲದು ಪ್ರಾಣನಾಥ, ನನಗೆ ಮೈದೋರು ಎಂದು ಆಲ್ಪರಿದಳು

ಕದ್ದಡಗಿರಬೇಡ ಕಮನೀಯ ರೂಪ ನೀ
ನಿದ್ದೆಡೆ ನುಡಿದೊಡಾಂ ಬಂದು
ಮುದ್ದಿಸಿ ಮುನಿಸ ನಿವಾರಿಸಿ ಪಾದಕೆ
ಬಿದ್ದಮರ್ದಪ್ಪಿ ಚುಂಬಿಸುವೆ ೪೮

ಸುಂದರ ರೂಪನೆ, ನೀನು ಕದ್ದು ಬಚ್ಚಿಟ್ಟುಕೊಳ್ಳಬೇಡ, ನೀನಿರುವ ಜಾಗದ ಸುಳಿವು ನೀಡಿದರೆ ನಾನೇ ಬಂದು ಮುದ್ದಿಸಿ, ಮುನಿಸನ್ನು ನಿವಾರಿಸಿ, ಪಾದಕ್ಕೆ ಬಿದ್ದು, ಬಲವಾಗಿ ಅಪ್ಪಿಕೊಂಡು ಮುತ್ತಿಕ್ಕುವೆನು

ಬರಿಸೊಲ್ಲುಗಾತಿಯೆಂದೆನ್ನ ಮಾತಿಗೆ ಚಿತ್ತ
ಕರಗದೆ ಬಾರದಿರ್ದಪೆಯೊ

ಅರಸಿ ಕಾಲ್ಗೆರಗುವೆನೆನುತೆದ್ದು ತನು ತರ
ಹರಿಸುತ ತೊಳಲ್ದಳಾಲಯದಿ ೪೯

ಬರಿ ಮಾತುಗಾತಿಯೆಂದು ನನ್ನ ಮಾತಿಗೆ ಮನಸ್ಸು ಕರಗದೆ ಬರದೆ ಇರುವೆಯ? ಇರು, ನಾನೇ ಹುಡುಕಿ, ಕಾಲುಗಳಿಗೆ ಬಿದ್ದು, ನಿನ್ನ ಮನ ಒಲಿಸುತ್ತೇನೆ ಎಂದು ಮೇಲೆದ್ದು ತಟ್ಟಾಡುತ್ತ ಮನೆಯಲ್ಲಿ ತೊಳಲಾಡಿದಳು

ನಿಖಿಳ ಜ್ಯೋತಿರ್ಮಯ ಮಣಿವೆಳಗಲಿ ಮೃಗಾಂ
ಬಕಿ ನಲ್ಲನನರಸುತಲಿ
ಸಖಿ ಶಿರೋಮಣಿ ಮಲಗಿರ್ದ ಮಂಚಕೆ ಚಂದ್ರ
ಮುಖಿ ಬಂದಳು ದುಃಖವೆರಸಿ ೫೦

ಜ್ಯೋತಿರ್ಮಯ ರತ್ನಗಳ ಬೆಳಕಿನಲ್ಲಿ ಜಿಂಕೆಗಣ್ಣೆ ತನ್ನ ಪ್ರಿಯತಮನನ್ನು ಅರಸುತ್ತ ತನ್ನ ಸಖಿ ಚಿತ್ರಲೇಖೆ ಮಲಗಿದ್ದ ಮಂಚದೆಡೆಗೆ ಬಂದಳು ದುಃಖದಿಂದ.

ವಂಚನೆಗೆಯ್ದು ಮತ್ಪ್ರಾಣಮಿತ್ರೆಯ ಹೊನ್ನ
ಮಂಚದೊಳೊರಗಿರಬಹುದೆ
ಪಂಚಬಾಣನ ರೂಪ ಬಾರೆಂದು ಮರುಳ್ಗೊಂಡು
ಚಂಚಲಾಕ್ಷಿಯ ತುಡುಕಿದಳು ೫೧

ನನಗೆ ಕೈಕೊಟ್ಟು ನನ್ನ ಪ್ರಾಣಸಮಾನ ಗೆಳತಿಯ ಮಂಚದಲ್ಲಿ ಮಲಗಿರಬಹುದೆ? ಎಂದು ಭಾವಿಸಿ, ಮನ್ಮಥರೂಪನೆ ಬಾರೆಂದು ಹೊದಿಕೆ ಹೊದ್ದು ಮಲಗಿದ್ದ ಗೆಳತಿಯನ್ನು ತಬ್ಬಿ ಹಿಡಿದುಕೊಂಡು ಮಲಗಿದಳು

ಹುಟ್ಟಿದ ವಿರಹಾಗ್ನಿ ಕೈಯಿಂದ ಸಖಿಯನು
ಮುಟ್ಟಿದರವಳೊಡಲು ಬೆಂದು
ಮೆಟ್ಟಿ ಬಿದ್ದೆದ್ದು ನೋಡಿದಳು ತನ್ನೊಡನೆ
ಪಟ್ಟಿರ್ದ ಪ್ರಮತ್ತ ಸಖಿಯ ೫೨

ಸುಡುವ ವಿರಹಾಗ್ನಿ ಹಸ್ತದಿಂದ ಸಖಿಯನ್ನು ಮುಟ್ಟಿದಾಗ ಸುಟ್ಟಂತಾಗಿ ಮೆಟ್ಟಿಬಿದ್ದು, ಎದ್ದು ನೋಡಿದಳು ತನ್ನ ಪಕ್ಕದಲ್ಲಿ ಮಲಗಿದ್ದ ಪ್ರಮತ್ತ ಒಡತಿಯನ್ನು

ನಾಕೆಟ್ಟೆ ನನ್ನೊಡಲುರಿದುದು ನೀನಿಲ್ಲಿ
ಗೇಕೆದ್ದು ಬಂದೆ ನನಕಂದ
ಈ ಕಡು ಜ್ವರವೇನು ಕಾರಣ ಹೇಳೆಂದು
ಶೋಕಾಶ್ರುಗರೆದಳಕ್ಷಿಯಲಿ ೫೩

ಅಯ್ಯೋ ನಾನು ಕೆಟ್ಟೆ, ನನ್ನೊಡಲು ಉರಿಯಿತು, ನೀನಿಲ್ಲಿಗೇಕೆ ಬಂದೆ ನನ್ನ ಕಂದ? ಈ ಸುಡುವ ಜ್ವರಕೆ ಏನು ಕಾರಣ ಹೇಳು ಎಂದು ಚಿತ್ರಲೇಖೆ ಅಳತೊಡಗಿದಳು

ಸಗ್ಗ ಪಾತಾಳ ಮರ್ತ್ಯಾನ್ವಿತ ಪುರುಷರ್ಗೆ
ವೆಗ್ಗಳ ರೂಪಸ್ಥ ನನ್ನ
ಮಗ್ಗುಲೊಳು ಮಲಗಿ ವಂಚಿಸಿ ಪೋಗೆ ಪುಡುಕು
ತೆಗ್ಗರಿಯದೆ ಬಂದೆ ತಾಯೆ ೫೪

ಸ್ವರ್ಗಲೋಕ, ಪಾತಾಳಲೋಕ, ಮರ್ತ್ಯಲೋಕಗಳ ಪುರುಷರನ್ನು ಮೀರಿಸುವ ಸುಂದರ ರೂಪಸ್ಥ ನನ್ನ ಮಗ್ಗುಲಲ್ಲಿ ಮಲಗಿ ಸುಖಪಟ್ಟು ವಂಚಿಸಿ ಹೋಗಲು, ಹುಡುಕುತ್ತ ಎಗ್ಗರಿಯದೆ ಬಂದೆ.

ಕನಸಿನ ಭತ್ತಕೆ ಗೋಣಿಯನಾಂತರೆಂ
ದೆನಿಸಿದೆ ನೀ ಮರುಳುವೆಣ್ಣೆ
ನೆನಸಿಕೊ ನೀಲಕಂಠನ ವಧೂಟಿಯ ಮಾತ
ಮನಸಿಗೆ ತಾರ್ಕಣೆಯಪ್ಪುದು ೫೫

ಅಯ್ಯೋ ಮರುಳು ಹೆಣ್ಣೆ, ಕನಸಿನ ಭತ್ತಕ್ಕೆ ಗೋಣಿಚೀಲವನ್ನು ಹಿಡಿದಂತಾಗಿದೆ ನಿನ್ನ ವರ್ತನೆ. ಪಾರ್ವತಿಯ ಮಾತನ್ನು ನೆನಸಿಕೊ. ಮನಸ್ಸಿಗೆ ಹೊಂದಿಕೆ ಖಾತ್ರಿಯಾಗುತ್ತದೆ

ಖೋಡಿಯ ಹೊರಿಸಬೇಡೆನಗೆ ಸಂಭೋಗವ
ಮಾಡಿದ ಕಲೆ ಮೈಯೊಳಿದೆಕೊ
ನೋಡಿ ಭುವನಾಂತರದೊಳಡಗಿದ್ದರೂ
ಗಾಡಿಕಾರನ ತೋರಿಸವ್ವ ೫೬

ನನ್ನ ಮೇಲೆ ದೋಷವನ್ನು ಹೊರಿಸಬೇಡ. ಸಂಭೋಗವನ್ನು ಮಾಡಿದ ಕಲೆ ಮೈಯಲ್ಲಿದೆ ನೋಡು. ಆ ಗಾಡಿಕಾರ (ಸುಂದರ) ಬ್ರಹ್ಮಾಂಡದಲ್ಲಿ ಅಡಗಿದ್ದರೂ ನನಗೆ ತೋರಿಸವ್ವ

ಸುಮ್ಮನೆ ಧೃತಿಗೆಟ್ಟು ಮಾತಾಡದಿರು ಎ
ನ್ನಮ್ಮ ನಿನ್ನಯ ಸುದ್ದಿ ಹೊರಗೆ
ಹೊಮ್ಮಿದೊಡಿತರರೇಳಿಸುವರೆಂದುಸುರುತ
ನೆಮ್ಮಿಸಕೊಂಡಳಂಗದಲಿ ೫೭

ಸುಮ್ಮನೆ ದೈರ್ಯಗೆಟ್ಟು ಮಾತಾಡದಿರು ನನ್ನಮ್ಮ. ಈ ಸುದ್ದಿ ಹೊರಗೆ ಹಬ್ಬಿದರೆ ತಮಾಷೆ ಮಾಡುವವರೆಂದು ಹೇಳುತ್ತ ಗೆಳತಿಯನ್ನು ತನ್ನ ಮೈಗೆ ಒರಗಿಸಿಕೊಂಡಳು

ಕುಂದಣವನು ರಸಗೆಯ್ದೊಡಾಕ್ಷಣ ಕರು
ವಿಂದ ಬೇರ್ಪಡಿಸಿ ಪುತ್ತಳಿಯ
ತಂದಡರ್ಚಿದರೆನೆ ಬಿಸಿವೆತ್ತ ಪ್ರಾಣ ಸಂ
ಬಂಧಿಯನು ಬಿಗಿಯಪ್ಪಿದಳು ೫೮

ಅಪರಂಜಿಯನ್ನು ಕರಗಿಸಿ ರಸ ಮಾಡಿದ ತಕ್ಷಣ ಎರಕಕ್ಕಾಗಿ ಬಳಸುವ ಪಡಿಯಚ್ಚಿನಿಂದ ಗೊಂಬೆಯನ್ನು ತಂದು ಅಡರಿಸಿದರು(ಮೇಲೆ ಹೇರಿದರು) ಎಂಬಂತೆ ಬಿಸಿಗೊಂಡ ಪ್ರಾಣಸಮಾನಳನ್ನು ಬಿಗಿಯಾಗಿ ತಬ್ಬಿಕೊಂಡಳು

ತೆಕ್ಕೆಗೊಂಡೆನ್ನ ಪೀಡಿಸಬೇಡ ಕಡು ಶೈತ್ಯ
ವಕ್ಕೆಯೊಳಿರಿಸು ಮೆಯ್ಯೊಳಗೆ
ಉಕ್ಕೆಸರಾಡುವ ಮಹದಾದಿ ಜ್ವರ ಮರ
ಣಕ್ಕೆ ಕಾರಣವೆಂದಳಳುತ ೫೯

ತಬ್ಬಿಕೊಂಡು ನನ್ನನ್ನು ಪೀಡಿಸಬೇಡ. ತುಂಬ ಶೀತಲ ನೆಲೆಯಲ್ಲಿರಿಸು. ನನ್ನ ಮೈಯಲ್ಲಿ ಕುದಿನೀರಿ(ಉಕ್ಕೆಸರು=ಕುದಿದು ಉಕ್ಕುವ ನೀರು)ನಂತೆ ಸುಡುವ ಮಹತ್ತರ ಜ್ವರ ಮರಣಕ್ಕೆ ಕಾರಣವಾಗುವುದು ಎಂದು ಅಳುತ್ತಾ ಹೇಳಿದಳು

ಸೊಲ್ಲಿಪ ದೈನ್ಯ ವೃತ್ತಿಯ ಕೇಳ್ದು ಪನ್ನೀರ
ಚೆಲ್ಲಿದಳವಳ ಉರಸ್ಥಳದಿ
ಅಲ್ಲಿಯದು ಭೋರ್ಗರೆಯುತಿರ್ದುದು ಸುಣ್ಣ
ಕಲ್ಲಿಗೆ ನೀರನೆರೆದಂತೆ ೬೦

ದೈನ್ಯತೆಯ ಅವಳ ಸೊಲ್ಲನ್ನು (ಮಾತನ್ನು) ಕೇಳಿ ಅವಳ ವಕ್ಷಸ್ಥಲಕ್ಕೆ

ಪನ್ನೀರನ್ನು ಚೆಲ್ಲಿದಳು. ಅಲ್ಲಿ ಅದು ಸುಣ್ಣಕಲ್ಲಿಗೆ ನೀರು ಬಿಟ್ಟಂತೆ ಕೊತಕೊತನೆ ಕುದಿಯತೊಡಗಿತು

ಕಾಮಾಗ್ನಿಯಲಿ ಕಾದ ಹೃದಯಸ್ಥ ಗಳ ಜ್ವಾಲೆ
ರೋಮ ಕೂಪದಿ ಹೊರಹೊಮ್ಮಿ
ಧೂಮ ತಳ್ತುದು ಸಖಿ ಚಿತ್ರಲೇಖೆಯ ಮುಖ
ಸೋಮಂಗೆ ಸ್ವರ್ಭಾನುವೆನಿಸಿ ೬೧

ಕಾಮಾಗ್ನಿಯಲ್ಲಿ ಕಾದ ಹೃದಯದ ಕೊರಳ ಜ್ವಾಲೆ ರೋಮ ಭಾವಿಯಿಂದ ಹೊರಹೊಮ್ಮಿ, ಅದರ ಹೊಗೆ ಸಖಿ ಚಿತ್ರಲೇಖೆಯ ಮುಖಕ್ಕೆ ಅಡರಿತು – ಆಕೆಯ ಮುಖಚಂದ್ರಕ್ಕೆ ರಾಹು ಬಡಿದಂತೆ

ಆಳಿಯರು ಬೀಸುವ ಚಮರಾಲವಟ್ಟ ತ
ಣ್ಣಾಗಳಿಯಿಂದವಳೊಡಲ್ಗಿಚ್ಚು
ತಾಳಿಯ ಹಾಕಿ ಪೇರುರಿಗೊಂಡ ತೆರದಿ ಛ
ಡಾಳಿಸಿತುಷ್ಣ ಸಂಘಟಿಸಿ ೬೨

ಸೇವಕಿಯರು ಬೀಸುವ ಚಮರೀ ಮೃಗದ ಕೂದಲ ಬೀಸಣಿಗೆಯ ತಂಗಾಳಿಯಿಂದ ಅವಳ ಒಡಲಬೆಂಕಿ, ಹಾಕಿದ ತಾಳಿ (ಬೆರಣಿಯ ರಾಶಿ)ಯಿಂದ ದೊಡ್ಡ ಉರಿ ಅಡ್ಡಾದಿಡ್ಡಿಯಾಗಿ ನಾಲಿಗೆ ಚಾಚುವಂತೆ ಪ್ರಜ್ವಲಿಸಿತು, ಎಟ್ಟೆ (ಉಷ್ಣ) ಒಟ್ಟುಗೂಡಿ.

ಅಸಿಯಳ ಮನದನುತಾಪವ ಸಖಿ ನಿವಾ
ರಿಸಿ ನೊಂದಳಿರುಳ್ಗಳೆವುದಕೆ
ಬಿಸಿಗದಿರನ ಹುಟ್ಟುಗೆಟ್ಟುದೊ ರೋಮಶ
ವಸು ಕಲ್ಪಕೋಟಿ ತೀರ್ವನಕ ೬೩

ಕೋಮಲೆಯ ಮನಸ್ಸಿನ ತಾಪವನ್ನು ನಿವಾರಿಸುವುದು ಹೇಗೆಂದು ಗೆಳತಿ ನೋಯತೊಡಗಿದಳು– ಸೂರ್ಯನು ಅಸ್ತಮಿಸಿದ ಕೂಡಲೆ ಗುಂಪು ಕೂಡಿದ ಕೋಟಿ ಕರಡಿಗಳ ವಸು(ಸಂಪತ್ತು) ತೀರುವ ತನಕ ಅರ್ಥಾತ್ ಕರ್ಪಿರುಳು ಕಳೆವತನಕ.

ನಂದಿತು ಬೆಳದಿಂಗಳ ಕಿಚ್ಚು ಪಾಪಿಷ್ಠ
ಚಂದಿರನಸ್ತಮಿಸಿದನು
ಕುಂದಿತು ನಕ್ಷತ್ರ ಮುಖಕಾಂತಿ ಬೆಳಗಾಗ
ಬಂದಿತು ಬೆದರ ಬೇಡವ್ವ ೬೪

ಬೆಳುದಿಂಗಳ ಬೆಂಕಿ ನಂದಿತು, ಏಕೆಂದರೆ ಚಂದ್ರಮ ಮುಳುಗಿದನು. ಚುಕ್ಕೆಗಳ ಕಾಂತಿ ಕುಂದಿತು. ಬೆಳಗಾಗತೊಡಗಿತು. ಬೆದರ ಬೇಡವ್ವ ಎಂದು ಉಷಾದೇವಿಗೆ ಧೈರ್ಯ ಹೇಳಿದಳು

ಬೇಸರುಗೊಂಬ ತತ್ಕುವರಿಯ ಮನದೊಳಗೆ
ಆಸರು ಬಹಳ ವೆಗ್ಗಳಿಸಿತು
ಈಸರಿಂದಿನ್ನು ಕಾಡುವುದೊಳಿತಲ್ಲೆಂದು
ನೇಸರು ತಲೆಯ ತೋರಿಸಿತು ೬೫

ಬೇಸರದಿಂದ ಆ ಕುಮಾರಿಯ ಮನಸ್ಸಿನ ಅಸಹನೆ ಅಧಿಕವಾಗತೊಡಗಿತು. ಇಷ್ಟಾದ ಮೇಲೂ ಆಕೆಯನ್ನು ಕಾಡುವುದು ಒಳ್ಳಿತಲ್ಲವೆಂದು ಸೂರ್ಯ ಉದಿಸಿದನು

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೬

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳುವ ಜನರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು

## ೨೮. ಉಷೆಯ ವಿರಹ

ಅಜಮಿಳ ತನ್ನ ಪುತ್ರನ ಪೆಸರ್ಗೊಂಡೊಡೆ
ನಿಜಭಕ್ತನೆಂದು ಮನ್ನಿಸಿದ
ಭುಜಚತುಷ್ಟಯನ ಪಾದವ ಕೂರ್ತು ಕೃತಿವೇಳು
ಸುಜನಾನಂದವೆಂದೆನಿಸಿ ೧

ಅಜಾಮಿಳನೆಂಬ ಬ್ರಾಹ್ಮಣ ಕುಲಾಚಾರಗಳನ್ನು ಬಿಟ್ಟು ಅನಾಚಾರಗಳನ್ನು ಕಟ್ಟಿಕೊಂಡು ಬದುಕುತ್ತಿದ್ದವನು ಸಾವಿನ ಸಂದರ್ಭದಲ್ಲಿ ಯಮದೂತರ ಬಿಂಬ (ಪಡಿನೆಳಲು)ವನ್ನು ಕಂಡು ಹೆದರಿ ತನ್ನ ಕಿರಿಯ ಮಗನಾದ ನಾರಾಯಣನ ಹೆಸರನ್ನು ಹಿಡಿದು ಕೂಗಿದಾಗ ಇವನು ನಿಜವಾದ ತನ್ನ ಭಕ್ತನೆಂದು ಚತುರ್ಭುಜನಾದ ಶ್ರೀಹರಿ ಅವನಿಗೆ ವೈಕುಂಠಪ್ರವೇಶ ಭಾಗ್ಯವನ್ನು ನೀಡಿದ. ಅಂಥ ಶ್ರೀಹರಿಯ ಪಾದವನ್ನು ಕುರಿತು ಕೃತಿಯನ್ನು ವಿಸ್ತರಿಸು ಎಂದು ಪತ್ನಿ ಸಂಜ್ಞಾನ ವಧೂಟಿ ಕೇಳಿದಳು

ಇನಿವಾತುಗಳ ಸತ್ಪದಬಂಧ ವ್ಯಂಗ್ಯೋಕ್ತಿ
ಧ್ವನಿಯರ್ಥ ಗೌರವದಿಂದ
ತನಿರಸವಡೆದ ಸತ್ಕೃತಿಯ ವಿಸ್ತರಿಪೆ ಕೇಳು
ವನಿತೆಯರ ಮಂಡೆ ಮಾಣಿಕವೆ ೨

ಸವಿಮಾತುಗಳ ಸತ್ಪದ ಶಯ್ಯೆ, ವ್ಯಂಗ್ಯೋಕ್ತಿ, ಧ್ವನ್ಯರ್ಥಗಳ ಗುರುತ್ವಶಕ್ತಿಯಿಂದ ರಸದುಂಬಿದ ಸತ್ಕೃತಿಯನ್ನು ವಿಸ್ತರಿಸುತ್ತೇನೆ, ಸ್ತ್ರೀ ಸಮುದಾಯದ ಶಿರೋರತ್ನವಾದ ಮನದನ್ನೆ ನೀನು ಕೇಳು ಎಂದು ಕನಕ ತನ್ನ ಪತ್ನಿಗೆ ಹೇಳಿದನು

ಪೋದುದು ಕಮಳಕಂಟಕ ಚಕ್ರಯುಗಳಕೆ
ತೀದುದು ಹೃದಯ ಸಂತಾಪ
ತೋದುದು ಮಕರಂದ ಜಲದಿ ಷಟ್ಪದ ಬೆಳ
ಗಾದುದು ಕೇಳಾಯತಾಕ್ಷಿ ೩

ಕಮಲಕಂಟಕ(ಚಂದ್ರ) ಮುಳುಗಿದನು. ಚಕ್ರವಾಕ ಪಕ್ಷಿಗಳ ಹೃದಯಸಂತಾಪ ಮುಗಿಯಿತು. ಷಟ್ಪದ(ದುಂಬಿ) ಮಕರಂದ ಜಲದಲ್ಲಿ ತೊಯ್ದು ಹೋಗಿತ್ತು. ಅರುಣೋದಯದ ಬೆಳಕು ಮೂಡತೊಡಗಿತು

ಮಾರಜ್ವರವೆತ್ತ ಮಡದಿ ರನ್ನೆಗೆ ರತಿ
ಚೋರನ ತೋರುವೆನೆನುತ
ತೋರದಾಸೆಯನಿಕ್ಕಿ ಚೈತನ್ಯವಡೆಸಿದ
ಳಾ ರಾಜಮುಖಿ ತನ್ನ ಸಖಿಯ ೪

ಮಾರ(ಮನ್ಮಥ)ಜ್ವರದಿಂದ ನರಳುವ ಸ್ತ್ರೀ ರತ್ನ ಉಷಾದೇವಿಗೆ ರತಿಚೋರನಾದ ಅನಿರುದ್ಧನನ್ನು ಹಿಡಿದು ತಂದು ತೋರಿಸುವೆನು ಎಂಬ ದೊಡ್ಡ ಆಸೆಯನ್ನು ಒಡ್ಡಿ ಚಂದ್ರಮುಖಿಯಾದ ಚಿತ್ರಲೇಖೆ ತನ್ನ ಸಖಿಯಲ್ಲಿ ಚೈತನ್ಯ ಮೂಡಿಸಿದಳು

ನಂಬಿಯವಳ ವಾಕ್ಯವ ಕೇಳ್ದು ಕಮ್ಮಲ
ರಂಬಿನ ಗಾಯವ ಮರೆದು
ಬೆಂಬಿಡದಾರಯ್ವ ಹೆಂಗಳ ಮೊಗವ ನಿ
ತಂಬಿನಿಯಾಗ ನೋಡಿದಳು ೫

ಗೆಳತಿಯ ಮಾತನ್ನು ನಂಬಿ ಹೂಬಾಣದ ಗಾಯವನ್ನು ಮರೆತು, ಬೆಂಬಿಡದೆ ಆರೈಕೆ ಮಾಡುವ ಹೆಣ್ಣುಗಳ ಮುಖವನ್ನು ಉಷೆ ನೋಡಿದಳು.

ತೆಗೆದರು ವಸ್ತ್ರಭೂಷಣವ ಸೋರ್ಮುಡಿಯಲಿ
ಬಿಗಿದರು ಬಟ್ಟ ಪಾವುಡವ
ಮೃಗನಾಭಿಯ ನಾದು ಪೂಸಿದರು ಪಣೆಯಲ್ಲಿ
ದುಗುಡ ಸಿಂಗರ ಮೆರೆವಂತೆ ೬

ಸೋರ್ಮುಡಿಯಲ್ಲಿರುವ ಒಡವೆ ವಸ್ತುಗಳನ್ನು ತೆಗೆದು, ಗುಂಡಗೆ ಪಾವುಡ (ತೆಳುವಾದ ಬಟ್ಟೆ)ವನ್ನು ಬಿಗಿದು, ಕಸ್ತೂರಿಯನ್ನು ತೇರು ಮಿದ್ದು ಹಣೆಗೆ ಹಚ್ಚಿದರು – ದುಃಖದ ಅಲಂಕಾರ ಮೆರೆಯುವಂತೆ

ಲಾಲಿತ ಚೆಂಬಾವುಗೆ ಮೆಟ್ಟಿ ಮೃದುವೆತ್ತ
ಸಾಲಿಯ ದುಪ್ಪಟ್ಟ ತಳೆದು
ಸೋಲಿಸಿ ತೊಲಗಿ ಪೊದವನ ನಿಟ್ಟಿಸುವ ಸ
ಲ್ಲೀಲೆಯಿಂದೆದ್ದಳಾ ಕುವರಿ ೭

ಸುಂದರ ಕೆಂಪು ಪಾದುಕೆಯನ್ನು ಮೆಟ್ಟಿ, ಮೆದುವಾದ ವಸ್ತ್ರದ ದುಪ್ಪಟ್ಟ(ಎರಡು ಪದರ) ವನ್ನು ಧರಿಸಿ, ತನ್ನನ್ನು ಸೋಲಿಸಿ ಕೈಕೊಟ್ಟವನನ್ನು ನಿಟ್ಟಿಸುವ ಸಲುವಾಗಿ ಮೇಲೆದ್ದಳು

ಸುಳಿರುಳಬಗುಲೆಯ ಕೈಲಾಗಿನಲಿ ಮಾಂ
ದಳಿರಡಿಯಿಟ್ಟು ಕಂಪಿಸುತ
ಗಳೆಯಾಂತು ನೆಲೆನೆಲೆ ಬುರುಜುಗಳೊಳು ನೋಡು
ತಿಳಿದಳುಪ್ಪರಿಗೆಯಿಂದವಳು ೮

ಗುಂಗುರುಗುರುಳ ಕೆಳದಿಯ ಕೈಹಿಡಿತದಲ್ಲಿ ಮಾವಿನ ತಳಿರಂಥ ಅಡಿಯಿಟ್ಟು ಕಂಪಿಸುತ್ತ, ದೊಣ್ಣೆ ಹಿಡಿದು ಪ್ರತಿಯೊಂದು ನೆಲೆ(ಹಂತ)ಯ ಗುಮ್ಮಟಗಳಲ್ಲಿ ನೋಡುತ್ತ ಉಪ್ಪರಿಗೆಯಿಂದ ಕೆಳಗಿಳಿದಳು

ನಿಡಿಗಣ್ಣಿಂದ ನಿಟ್ಟಿಸಿ ಕಮ್ಮಲರ್ಗೋಲಗಿ
ಮ್ಮಡಿ ರೂಪದಾ ವಲ್ಲಭನ
ಅಡಿದಾವರೆಗಳ ಕಾಣದೆ ಕಂಬನಿಗಳ
ಮಿಡಿದಳು ದುಃಖ ಭಾರದಲಿ ೯

ವಿಶಾಲಾಕ್ಷಿಯಿಂದ ನಿಟ್ಟಿಸಿ ಹೂಬಾಣನಿಗಿಂತ ಇಮ್ಮಡಿ ರೂಪವುಳ್ಳ ತನ್ನ ಗಂಡನ ಕಾಣದೆ ಕಂಬನಿಯನ್ನು ಸುರಿಸಿದಳು

ಅಳಬೇಡ ಬಾರೆನ್ನ ಕಂದಯೆಂದಮರ್ದಪ್ಪಿ
ಕೆಳದಿಯ ಮಾಣಿಕ ಮಂಚದಿ
ಕಳಹಂಸ ತುಪ್ಪುಳ ಮೃದುವಾಸೊಳೊರಗಿಸಿ
ಹೊಳೆವ ವಿಗ್ರಹವ ನೋಡಿದಳು ೧೦

ಅಳಬೇಡ ಬಾ ಎನ್ನ ಕಂದ ಎಂದು ಬಾಚಿ ತಬ್ಬಿಕೊಂಡು ಕೆಳದಿಯನ್ನು ರತ್ನಮಂಚದ ಮೇಲೆ ಕಳಹಂಸ ತುಪ್ಪುಳದ ಮೆದು ಹಾಸಿಗೆಯಲ್ಲಿ ಮಲಗಿಸಿ ಹೊಳೆವ ದೇಹವನ್ನು ನೋಡಿದಳು

ಧರೆಗತಿ ಚಲುವೆ ತವಕುಚ ಹೇಮಕಲಶವೆಂ
ದರೆ ಬಾಹುಮೂಲದಿ ರದನ
ಗೆರೆ ಕಾಣುತಿದೆ ಕನಸಿನ ಫಲವಿದ ನೋಡಿ
ದರೆ ನನ್ನ ದಿಟ್ಟಿಗಚ್ಚರಿ ೧೧

ಭೂಲೋಕದೊಳಗೆ ಅತಿ ಚೆಲುವೆ, ನಿನ್ನ ಕುಚ ಚಿನ್ನದ ಕಳಶವೆಂದರೆ ತೋಳ ಮೂಲದಲ್ಲಿ ಹಲ್ಲಿನ ಗೆರೆ ಕಾಣುತ್ತಿದೆ, ಕನಸಿನ ಈ ಫಲವನ್ನು ಕಂಡರೆ ನನಗೆ ಆಶ್ಚರ್ಯ

ನೋಡಿದಳು ಕುವರಿ ತನ್ನಯ ಮೊಲೆಗೆಲದಲಿ
ಮೂಡಿರ್ದ ಮೋಹನ ಗೆರೆಯ
ಸೂಡಿರ್ದ ನುಣ್ದೋಳ ಮಣಿಗಂಡ ಮಾತ್ರದಿ
ಕೋಡಿದುವೆದೆಯ ಪೂಸರಳು ೧೨

ಕುಮಾರಿ ತನ್ನ ಮೊಲೆಯ ಸನಿಹದಲ್ಲಿ ಮೂಡಿದ್ದ ಮೋಹನಗೆರೆಯನ್ನು ನೋಡಿದಳು. ಧರಿಸಿದ್ದ ನುಣ್ಣನೆಯ ತೋಳಿನ ರತ್ನ ಕಂಡ ತಕ್ಷಣ ಹೃದಯದ ಹೂಬಾಣ ಬಾಡಿ ನಲುಗಿತು.

ಉಂಟಾದ ಧೈರ್ಯ ತೀರ್ಕಣಿಸಿತು ಹೃದಯದೊ
ಳೆಂಟೆರಡವತೆ ಸಂಭವಿಸೆ
ಕಂಠಗತ ಪ್ರಾಣದ ಕುಮಾರಿಯನು ತಳಿ
ರ್ಮಂಟಪದೆಡೆಗೆ ಸಾರ್ಚಿದರು ೧೩

ಮೂಡಿದ ಧೈರ್ಯ ಮುಗಿಯಿತು. ಹೃದಯದಲ್ಲಿ ದಶಾವಸ್ಥೆ (ಎಂಟು +ಎರಡು+ಅವತೆ= ಎಂಟೆರಡವತೆ) ಉಂಟಾಗಲು ಕಂಠಗತ ಪ್ರಾಣದ ಕುಮಾರಿಯನ್ನು ತಳಿರುಮಂಟಪದ ಸ್ಥಳಕ್ಕೆ ಕೊಂಡೊಯ್ದರು

ನೀಲದ ನೆಲಗಟ್ಟು ಪರಿವೇಷ್ಟಿಸಿರ್ದ ತ
ಣ್ಗಾಲುವೆ ತಳಿರ್ವಾಸಿನಲಿ
ಮೂಲೋಕ ಮೋಹನ ಕನ್ನೆಯ ಸೈತಿಡಲು
ಕೋಲಾಹಲವಾದುರಾಗ ೧೪

ನೀಲರತ್ನದ ನೆಲಗಟ್ಟಿನಿಂದ ಸುತ್ತುವರಿದಿದ್ದ ತಣ್ಗಾಲುವೆಯ ತಳಿರು

ಹಾಸಿನಲ್ಲಿ ಮೂಲೋಕದ ಮೋಹನ ರತ್ನವನ್ನು ಇಟ್ಟಾಗ ಕೋಲಾಹಲ ಉಂಟಾಯಿತು

ಅಬ್ಬರದಿಂದ ಕೂಗುವ ಕೇಕಿ ಕೋಕಿಲೆ
ಸಬ್ಬ ದ್ವಿಜಪಕ್ಷಿ ನಿಚಯದ
ಬೊಬ್ಬೆಯೊಳಂಗಜಾತಗೆ ವೀರರಸವುಕ್ಕಿ
ನಿಬ್ಬರದಲಿ ಕೋಲ ಕರೆದ ೧೫

ನವಿಲು, ಕೋಗಿಲೆ ಮೊದಲಾದ ಸಬ್ಬ(<ಸರ್ವ)ದ್ವಿಜಪಕ್ಷಿ(ದ್ವಿಜ= ಪಕ್ಷಿ, ಜೋಡುನುಡಿ)ಗಳ ಸಾಮೂಹಿಕ ಬೊಬ್ಬೆಯ ಅಬ್ಬರದಿಂದ ಮನ್ಮಥನಿಗೆ ವೀರ ರಸವುಕ್ಕಿ ನಿರ್ಭರದಿಂದ ಬಾಣಗಳನ್ನು ಒಂದೇಸಮನೆ ಕರೆದನು (ಬಿಟ್ಟನು)

ನೆಟ್ಟುದು ಕೂರ್ಗಣೆ ಕುವರಿಯ ಹರಣ ಕಂ
ಗೆಟ್ಟುದು ಸಂತಾಪವೆರಸಿ
ಬಿಟ್ಟುದು ದೇಹಾಭಿಮಾನ ವಿಗ್ರಹ ಮರ
ವಟ್ಟುದು ಕೇಳಾಯತಾಕ್ಷಿ ೧೬

ಹರಿತವಾದ ಬಾಣ ನೆಟ್ಟುಕೊಂಡಿತು. ಕುಮಾರಿಯ ಪ್ರಾಣ ಸಂತಾಪದಿಂದ ಕಂಗೆಟ್ಟಿತು ದೇಹಾಭಿಮಾನ ಬಿಟ್ಟಿತು, ದೇಹ ಮರಗಟ್ಟಿತು

ತುರುಗಿದ ತನುತಾಪದಿಂದ ಪಕ್ಕೆಯ ತಳಿರು
ತರಗೆಲೆಯಾಗಿ ತೋರಿದುದು
ಒರಗಿದ್ದ ಕುವರಿಯ ಕಂಡು ಕುಂಭಾಂಡಜೆ
ಮರುಗಿದಳಧಿಕ ದುಃಖದಲಿ ೧೭

ತುಂಬಿದ ಒಡಲಬೇಗೆಯಿಂದ ಪಕ್ಕೆಯಲ್ಲಿದ್ದ ಚಿಗುರು ತರಗೆಲೆಯಾಯಿತು. ಮಲಗಿದ್ದ ಗೆಳತಿಯನ್ನು ಕಂಡು ಮಂತ್ರಿಜೆ ಅಧಿಕ ದುಃಖದಿಂದ ಮರುಗಿದಳು

ನಾಸಿಕದುಸಿರ ದಳ್ಳುರಿಗೆ ಮೂಗುತಿ ಗಂಧ
ಗ್ರಾಸದಂತಾಗಿ ಮೆಯ್ಯೊಳಗೆ
ಪೂಸಿದ ಸಿರಿಗಂಧ ಕರಿಕಾದುದು ಸದ್ವಿ
ಲಾಸಿನಿಯರು ಭೀತಿ ಗೊಂಡರು ೧೮

ಮೂಗಿನ ಉಸಿರ ದಳ್ಳುರಿಗೆ ಮೂಗುತಿಗಂಧ ಉಣಿಸಾಗಿ, ಮೈಗೆ ಲೇಪಿಸಿದ ಶ್ರೀಗಂಧ ಕರಿಕಲು ಆದುದನ್ನು ಕಂಡು ವಿಲಾಸಿನಿಯರು ಭೀತಿಗೊಂಡರು

ಮುಟ್ಟಲಮ್ಮದೆ ಕುಂಕುಮರಸ ಪನ್ನೀರ
ಬಟ್ಟ ಬಲ್ಮೊಲೆಗೆ ಸಿಂಪಿಸಲು
ಇಟ್ಟ ಮಂಡವಿಗೆಯ ಬುದ್ದಣಿ ತೈಲ ಸಂ
ಘಟ್ಟದಿಂ ಪೊಂಗಿದಂತಾಯ್ತು ೧೯

ಮುಟ್ಟಲಾಗದೆ ಕುಂಕುಮರಸ ಪನ್ನೀರುಗಳನ್ನು ಬಟುವಾದ ಬಲ್ಮೊಲೆಗಳಿಗೆ ಚಿಮುಕಿಸಲು ಪುಟ್ಟ ಮಂಟಪದಲ್ಲಿಟ್ಟ ಚರ್ಮದ ಚೀಲದ ಎಣ್ಣೆ ಸಂಘಟ್ಟಣೆಯಿಂದ ಕೊತಕೊತನೆ ಕುದಿಯುವಂತಾಯ್ತು

ಮುದ್ದಿಸಿ ಚುಬುಕಾಗ್ರವಿಡಿದಡೆ ಬೆರಲ್ಗಳ
ಹೊದ್ದಿದ ಉರಿ ಬೊಕ್ಕೆಗೆಯ್ಯೆ
ಬದ್ದಿಸಿ ಬಿಡದೆ ಕಾಲುವೆಯ ತಣ್ಣೀರೊಳ
ಗದ್ದಿದರವಳ ಹಸ್ತವನು ೨೦

ಗದ್ದವನ್ನು ಹಿಡಿದು ಮುದ್ದಿಸಿದರೆ ಬೆರಳಿಗೆ ತಾಕಿದ ಉರಿ, ಬೊಬ್ಬೆ (ಗುಳ್ಳೆ) ಎಬ್ಬಿಸಲು, ಪರೀಕ್ಷಿಸಿ, ಬಿಡದೆ ಕಾಲುವೆಯ ತಣ್ಣೀರಿನಲ್ಲಿ ಚಿತ್ರಲೇಖೆಯ ಹಸ್ತವನ್ನು ಅದ್ದಿದರು.

ಸೋಂಕಿದ ಜಲವರತು ಚುರ್ ಚುರ್ ಚುರೆಂದು
ಮುಂಕೊಂಡು ಪರಿದು ಕಿಗ್ಗಡೆಯ
ಅಂಕುವಡೆದ ಪೂಗಿಡ ವೃಕ್ಷ ಲತೆವೇರ್ಗೆ
ಬೆಂಕಿಯ ಹರಹಿದಂತಾಯ್ತು ೨೧

ಸೋಕಿದ ನೀರು ಒಣಗಿ (ಬಿಸಿಗೊಂಡು) ಚುರುಚುರು ಮುಂದಕ್ಕೆ ಹರಿದು, ಕೆಳಗಡೆಯ ಮೊಳಕೆ ಹೊಡೆದ ಹೂಗಿಡ ಮರ ಬಳ್ಳಿ ಬೇರಿಗೆ ಬೆಂಕಿಯನ್ನು ಹರಡಿದಂತಾಯ್ತು

ವರವೊ ಪಾರ್ವತಿದೇವಿ ಕೊಟ್ಟುದು ಪ್ರಾಣ ಸಂ
ಹರವೊ ನನಗಲಗೋರ್ಽಲನ
ಗರವೋ ನನ್ನೊಳು ದೇವಿ ಮುಳಿದು ಮಾತಾಡ
ದಿರವ ಪೇಳೆಂದಳಲಿದಳು ೨

ಪಾರ್ವತಿ ನನಗೆ ಕೊಟ್ಟದ್ದು ವರವೊ ಅಥವಾ ಪ್ರಾಣಸಂಹರವೊ ಅಥವಾ

ಹೂಬಾಣನ ಗರವೊ(<ಗ್ರಹವೊ)? ನನ್ನಲ್ಲಿ ದೇವಿ ಮುನಿದು ಮಾತಾಡದಿರುವ ಪರಿಯನ್ನು ಹೇಳೆಂದಳು ಉಷೆ

ಏತರಿಂದ ಮಾಣ್ದಪುದು ನಿನ್ನಾಯಾಸ
ನಾ ತಂದುಕೊಡುವೆ ನಿನ್ನವನ
ಭೂತಳವ್ಯವಹಾರ ತೃಣವಾದುದೆನಗೆ ನೀ
ಮಾತಾಡು ಮಾನಿನಿ ರನ್ನೆ ೨೩

ನಿನ್ನ ಆಯಾಸ ಯಾವುದರಿಂದ ಇಲ್ಲವಾಗುವುದು? ನಾನು ನಿನ್ನವನನ್ನು ತಂದು ಕೊಡುತ್ತೇನೆ. ಭೂಲೋಕದ ವ್ಯವಹಾರ ನನಗೆ ತೃಣ ಸಮಾನ. ನೀನು ಮಾತಾಡು ಮಾನಿನಿ ರನ್ನೆ.

ವೃತ್ತಾಂತವ ಕೇಳ್ದಾಕ್ಷಣ ಹೃದಯಾಬ್ಜ
ಪತ್ತರ ಪ್ರಕಾಶನನೆಯ್ದು
ಚಿತ್ತವೇಗದಿ ಕಣ್ದೆರೆದಳು ಸೌಗಂಧ
ಗಾತ್ತರೆಯನು ನಿಟ್ಟಿಸುತ್ತ ೨೪

ಚಿತ್ರಲೇಖೆ ಹೇಳಿದ ವಿಷಯ ಕೇಳಿದಾಕ್ಷಣ ಉಷೆಯ ಹೃದಯಕಮಲದಳ ವಿಕಾಸಗೊಂಡು ಮನಸ್ಸಿನ ವೇಗದಲ್ಲಿ ಕಣ್ಣನ್ನು ತೆರೆದಳು –ಸುಗಂಧ ಗಾತ್ತರೆ(ಗಾತ್ರೆ=ಶರೀರೆ)ಯನ್ನು ನಿಟ್ಟಿಸುತ್ತ.

ಮುಚ್ಚಿದ ನೇತ್ರಯುಗ್ಮವನೆನ್ನ ಪುಣ್ಯದಿ
ಬಿಚ್ಚಿದೆ ಸಖಿ ನಿನ್ನ ನೆರೆದು
ಮಚ್ಚಿಸಿ ಪೋದಾತನಾರೆಂದು ಪೇಳಿದೊ
ಡೊಚ್ಚತದಿ ನಾ ತಂದು ಕೊಡುವೆ ೨೫

ಮುಚ್ಚಿದ ನೇತ್ರದ್ವಯವನ್ನು ನನ್ನ ಪುಣ್ಯದಿಂದ ಬಿಚ್ಚಿದೆ. ಗೆಳತಿ ನಿನ್ನನ್ನು ಸಂಭೋಗಿಸಿ ಗಾಯದ ಗುರುತು ಮಾಡಿ ಹೋದವನು ಯಾರೆಂದು ಹೇಳಿದರೆ ಕೂಡಲೇ ತಂದುಕೊಡುವೆ.

ಮಕರಧ್ವಜರೂಪನಾವ ರಾಯನ ಕುಮಾ
ರಕನೆಂದು ಪೆಸರು ಗೊತ್ತಿಲ್ಲ

ಮುಖ ಪರೀಕ್ಷೆಯ ಬಲ್ಲೆನಾತನ ತಂದೆನ್ನ
ಸುಖಬಡಿಸುವುದೆಂದಳೊಲಿದು ೨೬

ಅವನು ಮನ್ಮಥನ ತದ್ರೂಪು. ಯಾವ ರಾಜನ ಮಗನೆಂದು ಹಾಗೂ ಹೆಸರೇನೆಂದು ಗೊತ್ತಿಲ್ಲ. ಆದರೆ ಮುಖಚರ್ಯೆ ಚೆನ್ನಾಗಿ ಬಲ್ಲೆ. ಆತನನ್ನು ತಂದು ನನಗೆ ಸುಖನೀಡು ಎಂದು ಗೆಳತಿಗೆ ವಿನಂತಿಸಿದಳು.

ಮಂಡಲದೊಳಗೆ ಮಾನಿನಿಯರಾತನ ರೂಪ
ಕಂಡುದುಂಟಾದೊಡೆ ತಮ್ಮ
ಗಂಡರ ಮರೆದು ಹುಚ್ಚರಹರು ಇಕ್ಷುಕೋ
ದಂಡನ ಸರಲ್ಗೆದೆಯನಿತ್ತು ೨೭

ಭೂಮಂಡಲದಲ್ಲಿ ಸ್ತ್ರೀಯರು ಆತನ ರೂಪ ಕಂಡದ್ದೇ ಆದರೆ, ಮನ್ಮಥನ ಬಾಣಕ್ಕೆ ಎದೆಯನ್ನೊಡ್ಡಿ ತಮ್ಮ ತಮ್ಮ ಗಂಡಂದಿರನ್ನೆ ಮರೆತು ಹುಚ್ಚರಾಗುವರು

ಮುಂಚೆ ನಿಂದು ಆವನೂ ಎನ್ನ ವಸ್ತುವ
ವಂಚಿಸಿ ಕೈಕೊಂಡುದಿಲ್ಲ
ಪಂಚಕರಣ ದೃಷ್ಟನನೆನ್ನ ಪಾಲಿಗೆ
ಹಂಚಿಕೊಟ್ಟೆನ್ನ ಪಾಲಿಪುದು ೨೮

ಮುಂದೆ ನಿಂತು ಯಾರೂ ನನ್ನ ವಸ್ತುವನ್ನು ವಂಚಿಸಿ ಕೈಕೊಂಡುದಿಲ್ಲ. ಐದು ಜ್ಞಾನೇಂದ್ರಿಯಗಳಿಂದ ನೋಡಿದವನನ್ನು (ಪಂಚಕರಣ ದೃಷ್ಣನ) ನನ್ನ ಪಾಲಿಗೆ ಹಂಚಿಕೊಟ್ಟು ರಕ್ಷಿಸು ಓ ನನ್ನ ಗೆಳತಿ.

ಕಂಗೆಡವೇಡೆಲೆ ಸಖಿ ನಿನಗವನೊಡನೆ
ಸಂಗವಪ್ಪಂತೆ ಮಾಡುವೆನು
ಹೊಂಗೋಪುರ ಶಿಖರಕೆ ಪೋಪ ನಡೆ ನಿನ್ನ
ಮುಂಗಜ್ಜವ ನೆಗಳ್ದಪೆನು ೨೯

ಕಂಗೆಟ್ಟು ಕೂಡಬೇಡ, ನಿನಗೆ ಅವನೊಡನೆ ಸಂಗ ಸಿದ್ಧಿಸುವಂತೆ ಮಾಡುವೆನು. ನಿನ್ನ ಮುಂದಿನ ಕಾರ್ಯವನ್ನು ಮಾಡಲೋಸ್ಕರ ಹೊನ್ನ ಗೋಪುರದ ಶಿಖರಕ್ಕೆ ಹೋಗೋಣ ನಡೆ ಎಂದಳು.

ಉಭಯ ಕುಲಾನ್ವಿತೆ ಭಾಷೆಗೆ ತಪ್ಪೆನೆಂ
ದಭಯವನೆನಗೀವುದೆನಲು
ನಭಕೇಶನಾಣೆ ತಪ್ಪಿದರೆಂದು ಹಸ್ತವ
ಕಬರಿ ಮಸ್ತಕದೊಳಿಕ್ಕಿದಳು ೩೦

ಉಭಯ ಕುಲಾನ್ವಿತೆಯಾದ ನೀನು ಭಾಷೆಗೆ ತಪ್ಪುವುದಿಲ್ಲ ಎಂದು ನನಗೆ ಅಭಯವನ್ನು ನೀಡು ಎನ್ನಲು, ನಾನು ಮಾತಿಗೆ ತಪ್ಪಿದರೆ ಈಶ್ವರನ ಮೇಲಾಣೆ ಎಂದು ಗೆಳತಿಯ ತುರುಬಿನ ತಲೆಯ ಮೇಲೆ ಕೈಯನ್ನಿಟ್ಟಳು.

ಬದ್ಧವಿದಹುದೆಂದು ಭ್ರಮರ ಕುಂತಲೆ ನಲಿ
ದೆದ್ದಳಾ ಕ್ಷಣದಲಿ ಸಖಿಯ
ಮುದ್ದಾಡಿ ಬಿಗಿದಪ್ಪಿ ಹೃದಯದೊಳಗೆ ನೆ
ಟ್ಟಿದ್ದ ಪೂಗೋಲ್ಕಿತ್ತಳಾಗ ೩೧

ದುಂಬಿಗುರುಳ ಉಷಾದೇವಿ ಇದು ಕಟ್ಟುನಿಟ್ಟಿನ ಸತ್ಯವೆಂದು ಸಂತೋಷಗೊಂಡು ಮೇಲೆದ್ದು ಸಖಿಯನ್ನು ಮುದ್ದಾಡಿ, ಬಿಗಿಯಾಗಿ ಅಪ್ಪಿಕೊಂಡು ಹೃದಯದೊಳಗೆ ನೆಟ್ಟಿದ್ದ ಹೂಬಾಣವನ್ನು ಕಿತ್ತಳು.

ಮೀನಕೇತನನುಪಟಳ ತಾಪ ಕುವರಿಗೆ
ನಾನಾ ದುಃಖ ಮಂತ್ರಿಜೆಗೆ
ಗೋನಾಳಿಗತ ಪ್ರಾಣವ್ಯಾಧಿಗೆ ಮದ್ದೆಂದು
ಸ್ನಾನವ ಮಾಡಿದರೊಲಿದು ೩೨

ಮನ್ಮಥನ ಉಪಟಳದ ತಾಪ ಉಷೆಗೆ ನಾನಾ ದುಃಖಕ್ಕೆ ಕಾರಣವಾಗಿದೆ, ಮಂತ್ರಿಜೆಯಾದ ಚಿತ್ರಲೇಖೆಗೆ ಗೋನಾಳಿಗತ(ಕಂಠಗತ)ಪ್ರಾಣವಾಗಿದೆ. ಈ ತಮ್ಮಿಬ್ಬರ ವ್ಯಾಧಿಗಳಿಗೆ ಮದ್ದೆಂದು ಎದ್ದು ಸ್ನಾನವನ್ನು ಮಾಡಿದರು.

ಲಿಂಗಾರ್ಚನೆಯ ಮಾಡಿದಳು ತನ್ನಯ ಸಖಿ
ವೆಂಗಳೊಡನಾಗಮ ರೀತಿಯಲಿ
ಮಂಗಳ ವೈಭವಕೆ ನಿಖಿಳ ದೇವಸ್ಥಾ
ನಂಗಳಿಗಿತ್ತಳರ್ಥವನು ೩೩

ತನ್ನ ಗೆಳತಿಯರೊಂದಿಗೆ ಶಾಸ್ತ್ರರೀತಿಯಲ್ಲಿ ಲಿಂಗಾರ್ಚನೆಯನ್ನು

ಮಾಡಿದಳು. ಶುಭ ಕಾರ್ಯಕ್ಕಾಗಿ ಮಂಗಳ ವೈಭವಕ್ಕಾಗಿ ಎಲ್ಲ ದೇವಸ್ಥಾನಗಳಿಗೂ ಹಣವನ್ನು ಹಂಚಿದಳು.

ಮಾಡಿದಳೀಶ ಪ್ರಸಾದ ಭುಕ್ತವ ಸಖಿ
ಗೂಡಿ ಹರ್ಮ್ಯಾಗ್ರವನಡರ್ದು
ಪೋಡಿಯ ಪೊಗ ಬೆಳ್ಳೆಲೆಯ ಸ್ವೀಕರಿಸಿ ಮಾ
ತಾಡಿದಳು ಮಂತ್ರಿಜೆಯೊಡನೆ ೩೪

ಸಖಿಯ ಜೊತೆಗೂಡಿ ಈಶ ಪ್ರಸಾದವನ್ನು ಸೇವಿಸಿದಳು. ಸೌಧವನ್ನೇರಿ ಪೋಡಿಯಡಕೆ ಬಿಳಿಎಲೆ ಸ್ವೀಕರಿಸುತ್ತಾ ಗೆಳತಿಯೊಡನೆ ಮಾತಾಡಿದಳು.

ಅಕ್ಕ ನೀನೆನಗೋಸ್ಕರ ಮೂಜಗವನು
ತುಕ್ಕಬೇಹುದು ರಾತ್ರಿಯಲಿ
ರಕ್ಕಸ ಭೂತ ಭೇತಾಳ ಶಂಕೆಯ ವಿಜ
ಯಕ್ಕೇನ ನೆಗಳುವೆ ಪೇಳು ೩೫

ಅಕ್ಕ ನನಗೋಸ್ಕರ ನೀನು ಮೂರುಲೋಕಗಳನ್ನು ಸುತ್ತಬೇಕು. ರಾತ್ರಿ ಹೊತ್ತಿನಲ್ಲಿ ರಕ್ಕಸ ಭೂತಭೇತಾಳ ಶಂಕೆಯ ವಿಜಯಕ್ಕೇನ ಮಾಡುವೆ ಹೇಳು ಎಂದು ಕೇಳಿದಳು.

ಅಧ್ಯಾಪಕ ಶುಕ್ರದೇವರು ಕಲಿಸಿದ
ವಿದ್ಯಾ ಚಮತ್ಕೃತಿಯಿಂದ
ಉದ್ಯೋಗಿಸುವೆ ನಾನಾ ರೂಪ ಬ್ರಹ್ಮಾಂಡ
ಮಧ್ಯದೊಳೆನಗೊರ್ವರಿದಿರೆ ೩೬

ಗುರುಶುಕ್ರದೇವರು ಕಲಿಸಿದ ವಿದ್ಯಾಚಮತ್ಕಾರದಿಂದ ನಾನಾ ರೂಪಗಳನ್ನು ತಾಳುವೆನು, ಬ್ರಹ್ಮಾಂಡದಲ್ಲಿ ನನಗೆ ಇದಿರು ಯಾರು?

ಆವಾವ ಲೋಕಾದಿ ಲೋಕಗಳ ಹೊಕ್ಕು
ದೇವಾಸುರ ನರೋರಗರ
ಭಾವಚಿತ್ರವ ಬರೆದು ತಂದಪೆ ನೋಡವ್ವ
ಪೀವರ ಕುಚೆಯೆ ನಿನಗಾಗಿ ೩೭

ನಿನಗಾಗಿ ನಾನು ಯಾವ ಯಾವ ಲೋಕಾದಿಲೋಕಗಳನ್ನು ಹೊಕ್ಕು ಸುರನರೋರಗರ ಭಾವಚಿತ್ರಗಳನ್ನು ಬರೆದು ತರುತ್ತೇನೆ ಎಂಬುದನ್ನು ನೋಡವ್ವ.

ಇದು ನಿನ್ನ ಪ್ರಾಣಕಾಂತನ ಚಿತ್ರವೆಂಬುದ
ವಿಧುಮುಖಿಯೆನಗೆ ತೋರಿದರೆ
ಸದುಹೃದಯನ ತಂದು ನಿನ್ನವಯವದಲ್ಲಿ
ಪುದುಗೂಡಿಪೆನೆಂದಳೊಲಿದು ೩೮

ಚಂದ್ರಮುಖಿ, ಇದು ನನ್ನ ಪಾಣಕಾಂತನ ಚಿತ್ರ ಎಂದು ತೋರಿಸಿದರೆ, ಅಂಥವನನ್ನು ತಂದು ನಿನ್ನೊಡನೆ ಒಂದುಗೂಡಿಸುವೆನು ಎಂದಳು

ಆಗಳಾ ಬಾಣಪುತ್ರಿಗೆ ಮುನ್ನಿನಂತೆ
ಪೂಗ ವೀಳೆಯವನಿತ್ತಳು
ಕಾಗದ ನಿಚಯವ ಕೈಗೊಂಡು ಪಯಣೋ
ದ್ಯೋಗವ ನೆನದಳರ್ತಿಯಲಿ ೩೯

ಬಾಣನಂದನೆಗೆ ಎಲೆಯುಡಿಕೆ(ತಾಂಬೂಲ)ಯನ್ನು ಕೊಟ್ಟು, ತಾನು ಕಾಗದಪತ್ರ ಕೈಗೊಂಡು ಪಯಣೋದ್ಯೋಗವನ್ನು ಪ್ರೀತಿಯಿಂದ ನೆನೆದಳು.

ವಿಗಡವಾಗಿದೆ ನಿನ್ನ ಪಯಣಕ್ಕೆನ್ನೆದೆ
ದಿಗಿಲಾಂತುದೀ ಗಳಿಗೆಯೊಳು
ಅಗಲಿದೊಡೆಂತು ಜೀವಿಪೆನೆಂದು ಬಿಸಿಯುಸಿರ
ನುಗಿದಳು ಕಂಬನಿಗರೆದು ೪೦

ನನ್ನ ಮನಸು ನಿನ್ನ ಪ್ರಯಾಣದಿಂದ ದುಗುಡುಗೊಂಡಿದೆ. ಈ ಗಳಿಗೆಯಲ್ಲಿ ಅಗಲಿದರೆ ಹೇಗೆ ಜೀವಿಸಲಿ ಎಂದು ದಿಗಿಲುಗೊಂಡು ಕಂಬನಿಗೆರೆಯುತ್ತಾ ನಿಟ್ಟುಸಿರುಬಿಟ್ಟಳು.

ಮಾರಜ್ವರ ಪಾವಕಜ್ವಾಲೆಯೆನಲು ಕು
ಮಾರತಿಯುಸಿರ ಪೊಗೆಯೇಳಲು
ನೀರಡಿಸಿದ ಕುದುರೆಗೆ ನೀರ್ಗುಡಿಸಲು
ಸೂರಿಯನಿಳಿದನಂಬುಧಿಗೆ ೪೧

ಮನ್ಮಥಜ್ವರ ಅಗ್ನಿಜ್ವಾಲೆಯೆಂಬಂತೆ ಕುಮಾರಿಯ ಉಸಿರು ಹೊಗೆಯಾಡುವಾಗ, ಬಾಯಾರಿದ ಕುದುರೆಗಳಿಗೆ ನೀರು ಕುಡಿಸಬೇಕೆಂದು ಸೂರ್ಯ ಸಮುದ್ರಕ್ಕೆ ಇಳಿದನು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೨

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳುವ ಜನರನ್ನು ಸೂರ್ಯ ಚಂದ್ರ ಇರುವ ತನಕ ಲಕ್ಷ್ಮೀಕಾಂತ ತಪ್ಪದೆ ರಕ್ಷಿಸುವನು.

## ೨೯. ಚಿತ್ರಪಟ ತಂದುದು

ನಿಖಿಲ ಲೋಕವನೆವೆಯಾಟದಿ ಸೃಜಿಸುವ
ಮುಖಚತುಷ್ಟಯನ ನಿರ್ಮಿಸಿದ
ಅಕಳಂಕ ಮೂರ್ತಿಯ ಮನದೊಳಗಿಂಬಿಟ್ಟು
ಪ್ರಕಟಿಸು ನನಗೆ ಮೇಲ್ಗತೆಯ ೧

ಕಣ್ಣರೆಪ್ಪೆ ಮುಚ್ಚಿ ತೆರೆಯುವಷ್ಟರಲ್ಲಿ ಸಕಲ ಲೋಕವನ್ನು ಸೃಜಿಸುವ ಬ್ರಹ್ಮನಿಗೆ ಜನ್ಮ ನೀಡಿದ ಅರಳಂಕ ಮೂರ್ತಿ ಶ್ರೀಹರಿಯನ್ನು ಮನಸ್ಸಿನೊಳಗೆ ಇಂಬಿಟ್ಟುಕೊಂಡು ನನಗೆ ಮೇಲ್ಗತೆಯನ್ನು ಹೇಳು

ಎಲ್ಲ ವೇದ ಶಾಸ್ತ್ರಾಗಮ ಪೌರಾಣಗ
ళೆಲ್ಲೆ ಮೀರ್ದ ಶ್ರೀಹರಿಕಥೆಯ
ಉಲ್ಲಾಸದಿಂದ ಪೇಳುವೆ ಕೇಳು ವ್ಯರ್ಥ
ವಲ್ಲದ ಪರಮ ಮುತ್ತೈದೆ ೨

ಎಲ್ಲ ವೇದ ಶಾಸ್ತ್ರಾಗಮ ಪೌರಾಣಗಳ ಎಲ್ಲೆ ಮೀರಿದ ಶ್ರೀಹರಿಯ ಕಥೆಯನ್ನು ಉಲ್ಲಾಸದಿಂದ ಹೇಳುತ್ತೇನೆ ಸಾರ್ಥಕ ಪರಮ ಮುತ್ತೈದೆ, ಮೈಯೆಲ್ಲ ಕಿವಿಯಾಗಿ ಕೇಳು.

ಮುದ್ದುವೆಣ್ಣಿಗೆ ಪೇಳಿದಳು ನಿನ್ನ ಬಿಟ್ಟು ನಾ
ಕದ್ದು ಪೋಪೆನೆ ಪೋಪುದಿಲ್ಲ
ಗೆದ್ದು ನಿನ್ನಸುಗೊಂಡು ಪೋದಾತನ ತರ
ದಿದ್ದರಿದ್ದೇನು ಫಲ ಮಗಳೆ ೩

ನಿನ್ನನ್ನು ಬಿಟ್ಟು ನಾನು ಕದ್ದುಹೋಗುತ್ತೇನೆಯೆ? ಹೊಗುವುದಿಲ್ಲ. ನಿನ್ನ ಪ್ರಾಣ ಕೊಂಡು ಹೋದಾತನನ್ನು ನಾನು ತರದಿದ್ದರೇನು ಫಲ? ಎಂದು ಮುದ್ದುಗುವರಿಗೆ ಹೇಳಿದಳು

ಅಳಬೇಡಒಡತಿ ಕೇಳೀಗ ಬ್ರಹ್ಮಾಂಡ
ದೊಳಗಿರ್ದ ನಿಖಿಲ ಚೆನ್ನಿಗರ
ತೊಳಗುವ ಭಾವಚಿತ್ರಂಗಳ ಬರಕೊಂಡು
ಬೆಳಗಹ ಮುನ್ನ ಬಂದಪೆನು ೪

ಅಳಬೇಡ ಕೇಳು, ಬ್ರಹ್ಮಾಂಡದೊಳಗಿರುವ ಎಲ್ಲ ಸುಂದರಾಂಗರ ಹೊಳೆಯುವ ಭಾವಚಿತ್ರಗಳನ್ನು ಬರೆದುಕೊಂಡು ಬೆಳಗಾಗುವ ಮೊದಲೆ ನಾನಿಲ್ಲಿಗೆ ಬರುವೆನು.

ಬಪ್ಪನ್ನಂ ಪೊರಮಡಬೇಡ ಕುವರಿ ನೀ
ನುಪ್ಪರಿಗೆಯೊಳಿಹುದೆನುತ
ದಪ್ಪಕಾದ್ಯಖಿಳ ಗ್ರಹಂಗಳಿಗೆ ಮಂತ್ರಿಸಿ
ಕಪ್ಪನಿಕ್ಕಿದಳು ಭಾಳದಲಿ ೫

ನಾನು ಬರುವತನಕ ಹೊರಹೋಗಬೇಡ, ಉಪ್ಪರಿಗಯಲ್ಲೇ ಇರು ಎಂದು ಮನ್ಮಥ ಮೊದಲಾದ ಸಕಲ ಗ್ರಹಗಳಿಗೆ ಮಂತ್ರಿಸಿ ಸಖಿಯ ಹಣೆಗೆ ಕಪ್ಪನ್ನು (ಬೊಟ್ಟನ್ನು)ಇಕ್ಕಿದಳು.

ನಿಟ್ಟಿಸಿದಡೆ ಭೂತ ಬೇತಾಳ ಕೋಟಿಯ
ಮೆಟ್ಟಿ ನೆಗ್ಗಿಸುವ ಯಂತ್ರಗಳ
ಕಟ್ಟಿದಳು ತನ್ನ ಸಖಿಯ ಸಂದೇಹವ
ನಟ್ಟಿದಳಿನಿತಿಲ್ಲದಂತೆ ೬

ನೋಡಿದರೆ ಸಾಕು ಭೂತ ಭೇತಾಳ ಕೋಟಿಯನ್ನು ಮೆಟ್ಟಿ ನುಚ್ಚುನುರಿ ಮಾಡುವ ಯಂತ್ರವನ್ನು ಕಟ್ಟಿ, ಗೆಳತಿಯ ಅನುಮಾನ ಕೊಂಚವೂ ಇರದಂತೆ ಹೊಡೆದೋಡಿಸಿದಳು.

ಹಲವುಪಾಯದಿ ಬುದ್ದಿವೇಳ್ದು ಮನದ ವ್ಯಾ
ಕುಲವ ತೀರ್ಕಣಿಸಿ ಬೀಳ್ಕೊಂಡು
ಗೆಲುವಾಂತು ಗುರುಪಾದವ ಕೂರ್ತು ನಡೆದಳು
ಜಲಜಾಕ್ಷಿ ಗಗನವಟ್ಟೆಯಲಿ ೭

ಹಲವು ಉಪಾಯಗಳಿಂದ ಬುದ್ದಿ ಹೇಳಿ, ಗೆಳತಿಯ ಮನಸ್ಸಿನ ಆತಂಕವನ್ನು

ಹೋಗಲಾಡಿಸಿ ಬೀಳ್ಕೊಂಡು, ಗುರುಪಾದವನ್ನು ಸ್ಮರಿಸಿ ಆಕಾಶಮಾರ್ಗದಲ್ಲಿ ನಡೆದಳು ಚಿತ್ರಲೇಖೆ.

ಎವೆಯಿಟ್ಟು ಕಣ್ಮುಚ್ಚಿದಂತೆ ಮೂಲೋಕಕೆ
ಜವೆಯ ಮೋಹವ ಕವಿಸಿದಳು
ಸವೆಯದ ಕಾರ್ಗತ್ತಲೆಯ ತುಂಬಿದಳು ಹು
ಣ್ಣಿಮೆಯ ಬೆಳ್ದಿಂಗಳ ಕಿಡಿಸಿ ೮

ರೆಪ್ಪೆ ತೆರೆದು ರೆಪ್ಪೆ ಮುಚ್ಚುವಷ್ಟರಲ್ಲಿ ಮೂರು ಲೋಕಕ್ಕೆ ಜವೆಯ (ಮಾಟದ) ಮಾಯವನ್ನು ಕವಿಸಿದಳು.ಹುಣ್ಣಿಮೆಯ ಬೆಳುದಿಂಗಳನ್ನು ಕೆಡಿಸಿ ಸವೆಯದ ಕಗ್ಗತ್ತಲೆಯನ್ನು ತುಂಬಿದಳು.

ಅಗರೂಪವಳಿದು ನೀಲಾಚಲ ನಿಖಿಳ ಸ
ಗ್ಗಿಗರೂರು ಕಡಲನು ನುಂಗಿ
ಹೊಗೆ ಮುತ್ತುವಂತೆ ಕಾರ್ಗತ್ತಲೆ ಬ್ರಹ್ಮಾಂಡ
ದಗಲದೊಳು ಭರದಿ ತುಂಬಿದುದು ೯

ಅಗ(ಬೆಟ್ಟ)ಕಾಣದಂತೆ ನೀಲಾಚಲ ಕಡಲು, ಸುರರನ್ನು ನುಂಗಿ ದಟ್ಟ ಹೊಗೆ ಮುತ್ತುವಂತೆ ಕಗ್ಗತ್ತಲೆ ಬ್ರಹ್ಮಾಂಡದಗಲ ಉದ್ದಕ್ಕೂ ಶರವೇಗದಲ್ಲಿ ತುಂಬಿ ತುಳುಕಿತು.

ಕಾಳೆಗದೊಳು ಬೊಮ್ಮ ಜಟ್ಟಿಗ ಬೀರ ಭೇ
ತಾಳ ಶಾಕಿನಿ ಡಾಕಿನಿಯರು
ತೂಳದಿ ಹೊಯ್ದಾಡಿ ವಿಜೃಂಭಿಸಿ ಗಗನಾಂತ
ರಾಳದಿ ಬೊಬ್ಬಿಕ್ಕುತಿಹರು ೧೦

ಕದನದಲ್ಲಿ ಬೊಮ್ಮ ಜಟ್ಟಿಗ, ಬೀರ, ಬೇತಾಳ, ಶಾಕಿನಿ ಡಾಕಿನಿಯರು ಆಕ್ರಮಣದಿಂದ ಹೋರಾಡಿ ವಿಜೃಂಭಿಸಿ ಆಕಾಶದ ಅಂತರಾಳದಲ್ಲಿ ಬೊಬ್ಬೆ ಹಾಕುತ್ತಿರುವರು.

ಜುಂಜುರುದಲೆಯೂರ್ಧ್ವ ರೋಮ ಕೆಮ್ಮೀಸೆ ಕೈ
ಪಂಜುಗಳೆನೆ ಬೆಂಕಿಗಣ್ಣು

ನಂಜೊರೆವಾಯ ಗೋದಣೆವಲ್ಲ ಭೂತಗಳು
ಮುಂಜದುಗುರ್ಗಳ ನೆಗಹಿದುವು ೧೧

ಗುಂಗುರುಗೂದಲ ತಲೆ, ಮೇಲೆದ್ದ ರೋಮ, ಕೆಮ್ಮೀಸೆ, ಕೈಪಂಜುಗಳಂತೆ ಉರಿಯುವ ಬೆಂಕಿಗಣ್ಣುಗಳ,ನಂಜು(ವಿಷ)ಸುರಿವ ಬಾಯಿಯ, ಗುದ್ದಲಿ ಹಲ್ಲುಗಳ ಭೂತಗಳು ನೇಗಿಲ ಗುಳದಂಥ ಉಗುರುಗಳನ್ನು ಮೇಲೆತ್ತಿದುವು.

ಪರಿದ ಮಸ್ತಕ ಉಡಿದ ಬಾಹು ಹಸ್ತದಿ
ಮುರಿದ ಕಾಲ್ಗಳನೆಳಕೊಂಡು
ಇರಿದಾಡುವಾಕಾಶವೀರರ ಕಂಡಳು
ಹರಿಣಾಂಬಕಿ ಮುಗುಳು ನಗುತ ೧೨

ಕೊಯ್ದ ತಲೆ, ತುಂಡಾದ ತೋಳು ಕೈಗಳು, ಮುರಿದ ಕಾಲುಗಳನ್ನು ಎಳೆದುಕೊಂಡು ತಿವಿದಾಡುವ ಆಕಾಶವೀರರನ್ನು ಕಂಡಳು –ಜಿಂಕೆಗಣ್ಣ ಚಿತ್ರಲೇಖೆ.

ನಡುವಿರುಳಾಕಾಶ ಮಾರ್ಗದಿ ದೈತ್ಯರು
ಮುಡುಮುಡು ಹಳಚಿ ಮತ್ಸರದಿ
ಕಡಿದಾಡುವ ಖಡ್ಗಧಾರೆಯಿಂದುದುರ್ವ ಕೆಂ
ಗಿಡಿಗಳ ನೋಡುತೆಯ್ದಿದಳು ೧೩

ಅರ್ಧರಾತ್ರಿಯಲ್ಲಿ ಆಕಾಶಮಾರ್ಗದಲ್ಲಿ ರಾಕ್ಷಸರು ಮುಡುಮುಡುಗಳನ್ನು (ಮುಡುಹು+ಮುಡುಹು<ಮುಡುಪು+ಮುಡುಪು=ಭುಜಭುಜಗಳನ್ನು) ಅಪ್ಪಳಿಸಿ ಮಾತ್ಸರ್ಯದಿಂದ ಕಡಿದಾಡುವ ಕತ್ತಿಗಳ ಬಾಯಿಂದ ಉದುರುವ ಕೆಂಗಿಡಿಗಳನ್ನು ನೋಡುತ್ತಾ ನಡೆದಳು.

ಪಾತಕರುಗಳ ಕಂಧರ ತೊಗಲಪಾಶದಿ
ನೇತಾಡೆ ಮುಂಬಿಗರನೆಳೆದು
ಚೇತನಗಿಡಿಸಿ ಕೊಂದು ಕೊಂಡು ಪೋಪ ಯಮ
ದೂತರ ನೋಡುತ್ತೈದಿದಳು ೧೪

ಪಾಪಿಗಳ ಕೊರಳು ಚರ್ಮದ ಹಗ್ಗದಲ್ಲಿ ನೇತಾಡುತ್ತಿರಲು, ಮುಂಭಾಗದಲ್ಲಿರುವವರನ್ನು ಎಳೆದು ಚೈತನ್ಯಗೆಡಿಸಿ, ಸಾಯಿಸಿ ತೆಗೆದುಕೊಂಡು ಹೋಗುವ ಯಮದೂತರನ್ನು ನೋಡುತ್ತ ಮುಂದುವರಿದಳು.

ಸನುಮತದಿಂದರನು ಕಾಣುವಳು ತನ್ನ
ತನುವವರಿಂಗೆ ಕಾಣಿಸದು
ಅನುಪಮ ಮಾಯಾ ರಣಾನ್ವಿತೆ ಮಿಕ್ಕಿನ
ಬಿನುಗರ ಭಯವ ಲೆಕ್ಕಿಪಳೆ ೧೫

ಸಮ್ಮತದಿಂದ ಅವರನ್ನು ಕಾಣುವಳು, ತನ್ನ ದೇಹ ಅವರಿಗೆ ಕಾಣಿಸದು, ನಿರುಪಮ ಮಾಯಾ ರಣಾನ್ವಿತೆ ಉಳಿದ ಕ್ಷುದ್ರರ ಭಯವನ್ನು ಲಕ್ಷಿಸುವಳೆ?

ಭೂತಂಗೆ ಭೂತಾಕೃತಿವೆತ್ತು ಮಂತ್ರಿಸಿ
ಕೋತಿಯೊಲು ಕುಣಿಸಿ ನಿಟ್ಟಿಸುತ
ಭೀತಿಯೆಳ್ಳನಿತಿಲ್ಲದೆ ಪೊಕ್ಕಳು ಬಲಾ
ರಾತಿಯ ಪಟ್ಟಣದೊಳಕ್ಕೆ ೧೬

ದೆವ್ವ ಪಿಶಾಚಿಗಳಿಗೆ ದೆವ್ವಪಿಶಾಚಿಗಳ ಆಕೃತಿಧರಿಸಿ, ಮಂತ್ರಿಸಿ ಕೋತಿಗಳಂತೆ ಕುಣಿಸುತ್ತ ಎಳ್ಳಷ್ಟು ಭಯವಿಲ್ಲದೆ ಬಲಾರಾತಿಯ (ಬಲ ಎಂಬ ರಾಕ್ಷಸನ ಶತ್ರುವಾದ ಇಂದ್ರನ) ಪಟ್ಟಣದೊಳಕ್ಕೆ ಹೊಕ್ಕಳು.

ಪಾಕಶಾಸನ ಚತುರ್ದಶ ದಿಕ್ಪಾಲರ
ನೇಕ ದೇವರ್ಕಳಾಲಯವ
ತಾ ಕಾಣಿಸಿಕೊಳದೊಳಪೊಕ್ಕು ಚಿತ್ರಪಟ
ಲೇಖನಗೆಯ್ದಳೆಲ್ಲರನು ೧೭

ಪಾಕಶಾಸನ (ಪಾಕ ಎಂಬ ರಾಕ್ಷಸನಿಗೆ ಶತ್ರುವಾದ ಇಂದ್ರ), ಹದಿನಾಲ್ಕು ದಿಕ್ಪಾಲಕರ, ಅನೇಕ ದೇವತೆಗಳ ಮಂದಿರವನ್ನು ಯಾರಿಗೂ ಕಾಣಿಸಿಕೊಳ್ಳದೆ ಒಳಹೊಕ್ಕು ಚಿತ್ರಪಟಗಳನ್ನು ಲೇಖನಗಳನ್ನು ಸಿದ್ಧಪಡಿಸಿಕೊಂಡಳು.

ಒರೆದು ನೋಡಿದೆ ನಿರ್ಜರರ ಲಾವಣ್ಯವ
ಬರೆದು ನೋಡಿದೆನು ಮತ್ಸಖಿಯ
ನೆರೆದು ಪೋದಾತ ಸಂಧಿಸನೆಂದು ಚಿಂತಾ
ತುರದಿ ಹೊರಬಂದಳಾಲಯದಿಂ ೧೮

ಒರೆಹಚ್ಚಿ ನೋಡಿದೆನು ದೇವತೆಗಳ ಲಾವಣ್ಯವನ್ನು ಮತ್ತೆ ಬರೆದು ನೋಡಿದೆನು ನನ್ನ ಗೆಳತಿಯನ್ನು ಕೂಡಿ ಹೋದಾತ ಮತ್ತೆ ಭೇಟಿಯಾಗಲಾರನೆಂದು ಚಿಂತೆ ಮತ್ತು ಆತುರದಿಂದ ಮನೆಬಿಟ್ಟು ಹೊರಬಂದಳು.

ಇಳಿದಳು ಸಪ್ತಪಾತಾಳಲೋಕವ ಪೊಕ್ಕು
ಸುಳಿದಳನೇಕ ರೂಪಿನಲಿ
ತಿಳಿದಳು ಫಣಿರಾಜ ಮುಖ್ಯ ನಾಗರ ರೂಹ
ಬಳಿದಳು ಪಟದ ಚಿತ್ರಗಳಲಿ ೧೯

ಕೆಳಗಿನ ಏಳು ಲೋಕಗಳನ್ನು ಹೊಕ್ಕು ಬಗೆಬಗೆಯ ರೂಪಿನಲ್ಲಿ ಸುಳಿದಾಡಿದಳು, ಆದಿಶೇಷ ಮುಖ್ಯ ನಾಗರರೂಪಗಳನ್ನು ತಿಳಿದಳು. ಪಟದ ಚಿತ್ರಗಳಲ್ಲಿ ಕೂಡಲೇ ಲೇಪಿಸಿದಳು.

ತೆತ್ತಿಸಿ ನೋಡಲು ಕುವರಿಯ ರೂಹಿಂಗೆ
ಪತ್ತುಗೆಗಾರರಿಲ್ಲೆನುತ
ಬತ್ತಿದ ಹರ್ಷಾಶ್ರುಗಳಿಂದ ಧರಣಿಗೆ
ಹತ್ತಿದಳಾಕೆ ಬೇಗದಲಿ ೨೦

ಜೋಡಿಸಿ ನೋಡಲು ಕುಮಾರಿಯ ರೂಪಿಗೆ ಜೊತೆಗಾರರಿಲ್ಲೆಂದು ಬತ್ತಿದ ಹರ್ಷಾಶ್ರುಗಳಿಂದ ಭೂಲೋಕಕ್ಕೆ ಏರಿದಳು

ಪುಟನೆಗೆದಖಿಳ ದ್ವೀಪಂಗಳೊಳಗೆ ಜಲ
ತಟದೊಳಗಾದ ಮೇದಿನಿಯ
ಚಟುಲದಿಂದರಸಿ ಅರಸುಕುವರರ ಚಿತ್ರ
ಪಟಗಳ ಬರೆದಳಾಕ್ಷಣದಿ ೨೧

ಪುಟನೆಗೆದು ಸಕಲ ದ್ವೀಪಗಳಲ್ಲಿ ಹಾಗೂ ನೀರಿನ ತಡಿಯ ಭೂಭಾಗದಲ್ಲಿ ವೇಗವಾಗಿ ಅರಸಿ (ಹುಡುಕಿ) ಅರಸುಕುವರರ ಚಿತ್ರಪಟಗಳನ್ನು ಬರೆದಳು.

ಆರಾರದೋ ಭಾವಚಿತ್ರಗಳ ಬರೆದು ಕು
ಮಾರತಿಗೆಣೆಗಾಣೆನೆನುತ
ನೀರಜದಳನೇತ್ರೆ ಪುರುಷೋತ್ತಮನಿರ್ದ
ದ್ವಾರಾವತಿಗೆಯ್ದಿದಳು ೨೨

ಯಾರು ಯಾರದೋ ಭಾವಚಿತ್ರಗಳನ್ನು ಬರೆದು ಕುಮಾರಿಗೆ ಸಾದೃಶ್ಯ ಸಮಾನತೆಗಳನ್ನು ಕಾಣೆನೆಂದು ಕಮಲಾಕ್ಷಿ ಪುರುಷೋತ್ತಮನಿದ್ದ ದ್ವಾರಾವತಿಗೆ ಆಗಮಿಸಿದಳು.

ಆಗಮನಿಗಮಗಳಿತಿಹಾಸ ಉಪನಿಷ
ದ್ಭಾಗವತಾದಿ ಪೌರಾಣ

ಯೋಗಶಾಸ್ತ್ರಗಳು ದ್ವಾರಕಿಯ ತುಂಬಿರ್ದುವು
ಸಾಗರದಂತೆ ಕಣ್ಗೊಳಿಸಿ ೨೩

ನಿಗಮಾಗಮ, ಇತಿಹಾಸ, ಉಪನಿಷತ್ತು, ಭಾಗವತಾದಿ ಪೌರಾಣ, ಯೋಗಶಾಸ್ತ್ರಗಳು ದ್ವಾರಕಿಯನ್ನು ತುಂಬಿದ್ದವು – ಕಂಗೊಳಿಸುವ ಸಾಗರದಂತೆ.

ಕೇಶವ ಸರ್ವೋತ್ತಮಯೆಂದು ತತ್ವ ವಿ
ಲಾಸದಲಿ ನುಡಿದಾಮ್ನಾಯ
ಘೋಷಣೆಯೆಂಬಂತೆ ಲವಣಾಬ್ಧಿ ಪರಮ ಸಂ
ತೋಷದಿಂದೊದರಿ ರಾಜಿಸಿತು ೨೪

ಕೇಶವನು ಸರ್ವೋತ್ತಮನೆಂದು ನುಡಿದ ವೇದ ಘೋಷಣೆ ಎಂಬಂತೆ ಲವಣಸಮುದ್ರ ಪರಮ ಸಂತೋಷದಿಂದ ಒದರಿ ರಂಜಿಸಿತು.

ಕೊತ್ತಳ ಮುಗಿಲಟ್ಟಳೆ ಕೋಂಟೆಯ ತೆನೆ
ಹೊತ್ತ ಹೊಂಗಳಸಂಗಳಿಂದ
ಸುತ್ತ ನೋಡಿದಡೆ ಜ್ಯೋತಿ ಷ್ಚಕ್ರದಂತೆ ದೇ
ವೋತ್ತಮನೂರು ರಂಜಿಸಿತು ೨೫

ಕೋಟೆಯ ಮೇಲ್ಭಾಗದ ವೇದಿಕೆ, ಕೋಟೆಯ ತೆನೆ(ಕೊತ್ತಳ)ಹೊತ್ತ ಚಿನ್ನದ ಕಲಶಗಳಿಂದ ಜ್ಯೋತಿಷ್ಚಕ್ರದಂತೆ ದೇವೋತ್ತಮನಾದ ಕೃಷ್ಣನೂರು ರಾರಾಜಿಸಿತು.

ಬಿಸಜ ಭವಾಂಡ ಮಂಡಲ ಮಧ್ಯದಲಿ ಕ
ಣ್ಗೆಸೆವ ಪಟ್ಟಣವ ನೋಡಿದಳು
ವಸು ರತ್ನಖಚಿತ ಕವಾಟಬಂಧಗಳಿಂದ
ಹಸನಾಗೆಸೆಯೆ ಕೃಷ್ಣನಗರ ೨೬

ಬ್ರಹ್ಮಾಂಡ ಮಂಡಲ ಮಧ್ಯದಲ್ಲಿ ಕಂಗೊಳಿಸುವ ಪಟ್ಟಣವನ್ನು ನೊಡಿದಳು. ಬಂಗಾರದ ರತ್ನಖಚಿತ ಬಾಗಿಲುಕದಗಳಿಂದ ಕೃಷ್ಣನಗರ ಹಸನಾಗಿ ಹೊಳೆಯುತ್ತಿತ್ತು.

ವ್ಯರ್ಥವಾದುದು ಮನ್ಮಥನ ಸೃಷ್ಟಿಸಿದ ಸ
ಮರ್ಥ ಪೆರ್ಗ್ಗಾಪು ಐಶ್ವರ್ಯ
ಕರ್ತಳೀತನ ರಾಣಿಯ ನಿಖಿಳ ವೈಭವ
ದರ್ಥವು ದೊಡ್ಡಿತೆ ದ್ವಾರಕಿಗೆ ೨೭

ಮನ್ಮಥನನ್ನು ಸೃಷ್ಟಿಸಿದ ಸಮರ್ಥ ಪೆರ್ಗ್ಗಾಪು (ಮಗು ಹುಟ್ಟಿದ ಏಳನೆಯ ದಿನ ಮಾಡುವ ಒಂದು ಶುಭಕಾರ್ಯ) ವ್ಯರ್ಥವಾಯಿತು; ಐಶ್ವರ್ಯ ಕರ್ತೆಯಾದ ಲಕ್ಷ್ಮಿಯು ಸಕಲ ವೈಭವದ ಅರ್ಥ(ದ್ರವ್ಯ, ಐಶ್ವರ್ಯ) ದ್ವಾರಕಿಗಿಂತ ದೊಡ್ಡದೆ?

ಪಗಲಾಣ್ಮನ ಕೋಟಿ ತೇಜೋಮಯ ಚಕ್ರ
ದಗದಗಿಸುವ ಜ್ವಾಲೆವೆರಸಿ
ನಗರವ ರಕ್ಷಿಸುತಿರಲು ಕಂಡು ತೀವ್ರದಿ
ಹುಗಗುಡದೆಂದಳಲಿದಳು ೨೮

ಸೂರ್ಯನ ತೇಜೋಮಯ ಚಕ್ರ ಧಗಧಗಿಸುವ ಜ್ವಾಲೆಯಿಂದ ಕೂಡಿ ನಗರವನ್ನು ರಕ್ಷಿಸುತ್ತಿರಲು ಒಳಹೋಗುವುದು ಕಷ್ಟವೆಂದು ದುಃಖಿಸಿದಳು.

ಮಿಸುಕಿದೊಡಣು ಪರಮಾಣುವನು ಸಹ ತುಂ
ಡಿಸುತಿಹುದು ದೃಷ್ಟಿಗಭೇದ್ಯ
ನುಸಿದು ಪೋಪೊಡೆ ಶಕ್ಯವಲ್ಲೆಂದು ತನ್ನೊಳು
ಬಿಸುಸಯ್ದಳಾ ಚಿತ್ರಲೇಖೆ ೨೯

ಕೊಂಚ ಅಲುಗಾಡಿದರೆ ಸಾಕು ಅಣು ಪರಮಾಣುವನ್ನು ಸಹ ತುಂಡು ಮಾಡುವುದು. ದೃಷ್ಟಿಗೆ ಅಭೇದ್ಯವಾದ ಇದರ ಒಳಕ್ಕೆ ನುಸುಳಿ ಹೋಗುವುದು ಸಾಧ್ಯವಿಲ್ಲವೆಂದು ಚಿತ್ರಲೇಖೆ ತನ್ನೊಳಗೆ ಬಿಸುಸುಯ್ದಳು.

ಗಟ್ಟಿತನದಿ ಮಂತ್ರಿಸಿ ಮಹಾಜ್ವಾಲೆಯ
ಕಟ್ಟುವಳು ಕಡುನೀತಿಯಿಂದ
ಅಟ್ಟುವಳಾ ಚಕ್ರ ಕೌಳಿಕವನು ಮುರಿ
ದಟ್ಟುವುದುಪಮಿಸಗುಡದೆ ೩೦

ಗಟ್ಟಿಯಾಗಿ ಮಂತ್ರಿಸಿ ಮಹಾಜ್ವಾಲೆಯನ್ನು ಕಟ್ಟುವಳು, ಕಡುನೀತಿಯಿಂದ ಅಟ್ಟುವುದು, ಚಕ್ರದ ಮೋಸವನ್ನು ಮುರಿದಟ್ಟುವುದು ಹೋಲಿಕೊಡಲಾಗದಂತೆ.

ಈ ಪಾಟಿಯ ಚಕ್ರಶಕ್ತಿಯಿಂದಸುರ ಚ
ಮೂಪರ ಶಿರವ ಚೆಂಡಾಡಿ
ಜೋಪಾನಗೆಯ್ದು ಜಗವ ರಕ್ಷಿಸುವ ಮ
ಹೀಪತಿ ಶರಣೆಂದಳವಳು ೩೧

ಇಷ್ಟೊಂದು ಚಕ್ರಶಕ್ತಿಯಿಂದ ರಾಕ್ಷಸ ರಾಜರ ಶಿರಗಳನ್ನು ಚೆಂಡಾಡಿ, ಜೋಪಾನದಿಂದ ಜಗತ್ತನ್ನು ರಕ್ಷಿಸುವ ಒಡೆಯನಿಗೆ ಶರಣೆಂದಳು.

ಹೇರಾನೆಯ ಗಂಧಲೇಪನ ಮದ ಕಂ
ಠೀರವನ ಬಾಯಿ ಕಟ್ಟುವುದೆ
ಘೋರಾಕಾರದಸುರ ಕರ್ಮ ದುರಿತ ವಿ
ದೂರನ ಪುರಕೆ ಸಿದ್ಧಿಪುದೆ ೩೨

ದೊಡ್ಡ ಆನೆಯ ಗಂಧ ಲೇಪನ, ಮದಿಸಿದ ಸಿಂಹದ ಬಾಯನ್ನು ಕಟ್ಟುವುದೆ? ಘನಘೋರ ರಾಕ್ಷಸ ಕಾರ್ಯ, ಪಾಪವಿದೂರನ ಪಟ್ಟಣದಲ್ಲಿ ಸಿದ್ಧಿಸುವುದೆ?

ಮಾರಿಯ ಜಠರದಿ ಹೊಕ್ಕು ಕನ್ನವನಿಕ್ಕಿ
ಕಾರಿಯವನು ಕಂಡುದುಂಟೆ
ತೋರಿಯ ಖಳ ಮಂತ್ರ ಮಾಯದ ತಾಣ ದೈ
ತ್ಯಾರಿಯ ಪುರಕೆ ಸಿದ್ಧಿಪುದೆ ೩೩

ಮಾರಿಯ ಜಠರವನ್ನು ಹೊಕ್ಕು, ಕನ್ನ ಹಾಕಿ, ಕಾರಿಯ (ಹೊಳೆದಾಟುವ ಸ್ಥಳ, ಹಾಯ್ಗಡ)ವನ್ನು ಕಂಡುದುಂಟೆ?ಭಾರಿ ಖಳನ ಮಂತ್ರಮಾಯದ ಶಿಬಿರ, ರಾಕ್ಷಸ ಶತ್ರುವಾದ ಕೃಷ್ಣನ ನಗರದಲ್ಲಿ ಸಿದ್ಧಿಸುವುದೆ?

ಮಂದರಗಿರಿಯನೆತ್ತುವಡೆ ನುಗ್ಗೆಯ ದೊಣ್ಣೆ
ಯಿಂದ ಮೀಂಟಿದೊಡೇಳುವುದೆ
ಎಂದಳಲ್ದಳು ಮನ್ಮಾಯ ವ್ಯರ್ಥವೆಂದು ಗೊ
ವಿಂದನ ಪುರವ ನಿಟ್ಟಿಸುತ ೩೪

ಮಂದರ ಪರ್ವತವನ್ನು ಎತ್ತಲು, ನುಗ್ಗೆಯ ಕಾಯನ್ನು ದೊಣ್ಣೆಯಾಗಿ ಮಾಡಿಕೊಂಡು ಮೀಟಿದರೆ ಮೇಲೇಳುವುದೆ? ಕೃಷ್ಣನ ಪುರವನ್ನು ನೋಡುತ್ತ ನನ್ನ ಮಾಯ ವ್ಯರ್ಥವೆಂದು ವ್ಯಥೆಗೊಂಡಳು.

ಬಿಟ್ಟಳಸುರ ಕರ್ಮವ ಶುಕ್ರದೇವರು ಕೊಟ್ಟ
ವೈಷ್ಣವ ಮಂತ್ರದಿಂದ
ಬಟ್ಟ ಚಕ್ರವ ಬಲಗೊಂಡು ಪ್ರಾರ್ಥಿಸಲಾಗಿ
ತಟ್ಟನೆ ಪಥವ ಪಾಲಿಸಿತು ೩೫

ರಾಕ್ಷಸ ಕರ್ಮವನ್ನು ಬಿಟ್ಟಳು. ಶುಕ್ರದೇವರು ಕೊಟ್ಟ ವೈಷ್ಣವ ಮಂತ್ರದಿಂದ ದುಂಡು ಚಕ್ರವನ್ನು ಪ್ರದಕ್ಷಿಣೆ ಮಾಡಿ ಪ್ರಾರ್ಥಿಸಲು ಥಟ್ಟನೆ ದಾರಿಯನ್ನು ಬಿಟ್ಟಿತು.

ಹರಿದು ಚಟುಲದಿ ಹೊಕ್ಕಳು ನೀರೆ ದ್ವಾರಕಾ
ಪುರದ ವೀದಿವೀದಿಗಳೊಳು
ಸಿರಿವೆತ್ತ ನಿಖಿಳ ಹರ್ಮ್ಯದ ಹೊನ್ನಕಳಸಗ
ಳುರಿಯುತಿರ್ದುವು ಜ್ಯೋತಿಯಂತೆ ೩೬

ಮನೋವೇಗದಲ್ಲಿ ಪುರವನ್ನು ಹೊಕ್ಕು ಬೀದಿಬೀದಿಗಳಲ್ಲಿ ಸಂಚರಿಸಿದಳು. ಸಕಲ ಸೌಧಗಳ ಹೊನ್ನ ಕಳಶಗಳು ಹೊಳೆಯುತ್ತಿದ್ದವು ಜ್ಯೋತಿಯಂತೆ.

ಕೇಣವಿಲ್ಲದೆ ರತ್ನದೀಪಗಳಾವಾವ
ತಾಣದೊಳು ಮೆರೆಯೆ ತನ್ನೊಡಲ
ಕಾಣಲೀಯದೆ ಹೊಕ್ಕಳು ಕೃಷ್ಣರಾಯ ದಿ
ವಾಣ ದ್ವಾರಂಗಳ ಕಳೆದು ೩೭

ಕೇಣವಿಲ್ಲದೆ(ಕೊರತೆ ಇಲ್ಲದೆ)ರತ್ನ ದೀಪಗಳು ಯಾವ ಯಾವ ಸ್ಥಳದಲ್ಲಿ ಹೊಳೆಯುತ್ತಿದ್ದವು ಅಲ್ಲಿ ತನ್ನ ಶರೀರ ಕಾಣದಂತೆ ಪ್ರವೇಶಿಸಿ ಕೃಷ್ಣನ ಓಲಗಶಾಲೆಯ ಬಾಗಿಲುಗಳನ್ನು ದಾಟಿ ಮುಂದೆ ಹೋದಳು.

ಬಾಗಿಲೊಳು ಬ್ರಹ್ಮಾದಿ ಸುರ ಮನುಮುನಿಗಳು
ಯೋಗಿಗಳು ಪುಗಬಾರದಲ್ಲಿ
ಪೋಗಿ ನೈಶಾಚರಿ ಪೊಕ್ಕ ಭಾವವ ಕಿವಿ
ತಾಗಿಸು ಮತ್ಪ್ರಾಣನಾಥ ೩೮

ಬ್ರಹ್ಮನೇ ಮೊದಲಾದ ದೇವಾನುದೇವತೆಗಳು, ಮನುಮುನಿಗಳು, ಯೋಗಿಗಳು ಪ್ರವೇಶಿಸಬಾರದಂಥ ಬಾಗಿಲನ್ನು ದಾಟಿ ಒಳಹೋದಂಥ ಅಸುರೆಯ ಭಾವವನ್ನು ನನ್ನ ಕಿವಿಗೆ ಎರೆ ಎಂದು ಸುಜ್ಞಾನವಧೂಟಿ ತನ್ನ ಪ್ರಿಯತಮ ಕನಕನನ್ನು ಕೇಳಿದಳು.

ಪರಿಪೂರ್ಣ ಭಾವಶುದ್ಧಿಯನುಳ್ಳ ಜಗದಂ
ತರಿಯಾಮಿ ಮುಂಗೆಲಸಕ್ಕೆ
ತುರಿಹದಿಂದವಳ ಪ್ರೇರಕನಾಗಿ ಪರಮ ತಾ
ತ್ವರಿಯದಿಂದೊಳವುಗಿಸಿದನು ೩೯

ಪೂರ್ಣ ಭಾವಶುದ್ಧಿಯುಳ್ಳ ಜಗದಂತರ್ಯಾಮಿ ಮುಂದಿನ ಕಾರ್ಯವಿಶೇಷಕ್ಕಾಗಿ ಅವಳ ಪ್ರೇರಕನಾಗಿ ಪರಮ ತಾತ್ಪರಿಯ(ಆಸಕ್ತಿ)ದಿಂದ ಸರ್‍ರನೆ ಒಳಕ್ಕೆ ಪ್ರವೇಶ ದೊರಕುವಂತೆ ಮಾಡಿದನು.

ಪೇಳಲಚ್ಚರಿ ಕೃಷ್ಣನರಮನೆಯೊಳು ರತ್ನ
ಮೇಳಕೀಲಿತ ಹೊನ್ನ ಕಳಸ
ಸೋಳಸಾಸಿರ ಸೂರ್ಯ ಪ್ರಭೆ ಗಗನಾಂತ
ರಾಳದಿ ಮೆರೆದುದುನ್ನತಿಯ ೪೦

ಕೃಷ್ಣನ ಅರಮನೆಯಲ್ಲಿ ರತ್ನರಾಶಿಯಿಂದ ಜೋಡಣೆಗೊಂಡ ಚಿನ್ನದ ಕಳಶ, ಹದಿನಾರು ಸಾವಿರ ಸೂರ್ಯ ಪ್ರಭೆಯನ್ನು ಗಗನಾಂತರಾಳದಲ್ಲಿ ಬೆಳಗಿದ ಉನ್ನತಿಯನ್ನು ಹೇಳಲು ಅಶ್ಚರ್ಯವಾಗುತ್ತದೆ.

ಓರಣಿಸಿದ ಗೋಪುರ ಮಧ್ಯದ ಚಂದ್ರ
ಪಾರಾವತ ಶಯ್ಯೆಯೊಳಗೆ
ತೋರ ಮಾಣಿಕ ಮಂಚ ಮೃದುವಾಸೊಳೊರಗಿದ
ನಾರಾಯಣನ ನೋಡಿದಳು ೪೧

ಒಪ್ಪ ಓರಣವುಳ್ಳ ಗೋಪುರ ಮಧ್ಯದ ದೊಡ್ಡ ರತ್ನಮಂಚದ ಪಾರಾವತ(ಪಾರಿವಾಳ) ಶಯ್ಯೆಯ ಮರದು ಹಾಸಿಗೆಯಲ್ಲಿ ಮಲಗಿದ್ದ ಕೃಷ್ಣನನ್ನು ನೋಡಿದಳು.

ರತಿಗಿಂತ ಚೆಲುವು ಪಾರ್ವತಿಗಿಂತ ಸೊಬಗು ಭಾ
ರತಿಗಿಂತ ಲಾವಣ್ಯವಡೆದ
ಸತಿ ಶಿರೋಮಣಿ ರುಕ್ಮಿಣಿಯ ಯೋಗದಿ ಜಗ
ತ್ಪತಿ ಕೃಷ್ಣನಿಗೆ ಕಂಡಳಬಲೆ ೪೨

ರತಿಗಿಂತಲೂ ಚೆಲುವುಳ್ಳ, ಪಾರ್ವತಿಗಿಂತಲೂ ಸೊಬಗುಳ್ಳ, ಭಾರತಿ

(ಸರಸ್ವತಿ ಶಾರದೆ)ಗಿಂತಲೂ ಲಾವಣ್ಯವುಳ್ಳ ಸತಿಶಿರೋಮಣಿ ರುಕ್ಮಿಣಿಯ ಕೂಟದಲ್ಲಿ ಜಗತ್ ಪತಿ ಕೃಷ್ಣ ಇರುವುದನ್ನು ಚಿತ್ರಲೇಖೆ ಕಂಡಳು.

ನೀಲ ಮೇಘಂಗಳ ನಡುವೆ ಕಂಗೊಳಿಸುವ
ಬಾಲ ಭಾಸ್ಕರನ ಕೀಳ್ಪಡಿಸಿ
ಮಾಲೆಯ ಮಧ್ಯದಲ್ಲಿ ಕೌಸ್ತುಭವೆಸೆವ ವಿ
ಶಾಲ ವಕ್ಷನ ನಿಟ್ಟಿಸಿದಳು ೪೩

ಕರಿಮೋಡಗಳ ಮಧ್ಯೆ ಕಂಗೊಳಿಸುವ ಬಾಲಸೂರ್ಯನನ್ನು ಮಂಕಾಗಿಸಿ, ಕೊರಳ ಹಾರದ ಮಧ್ಯದಲ್ಲಿ ಥಳಥಳಿಸುವ ಕೌಸ್ತುಭರತ್ನದ ವಿಶಾಲವಕ್ಷನನ್ನು (ಶ್ರೀ ಕೃಷ್ಣನನ್ನು) ನೋಡಿದಳು.

ಪಾದದೊಳಮೃತ ತರಂಗಿಣಿ ಪೊರ್ಕುಳೊಳು
ವೇದಾಗಮ ಸೃಷ್ಟಿಕರ್ತ
ಮೂದೇವರೂಪ ಚಂದ್ರನ ಕಣ್ಣೊಳಗಾಂತ
ಮಾಧವನಿರವ ನೋಡಿದಳು ೪೪

ಪಾದದಲ್ಲಿ ಗಂಗೆ, ಹೊಕ್ಕುಳಲ್ಲಿ ವೇದಾಗಮ ಸೃಷ್ಟಿಕರ್ತನಾದ ಬ್ರಹ್ಮ ಮೂದೇವ ರೂಪ(ಬ್ರಹ್ಮ ವಿಷ್ಣು ಮಹೇಶ್ವರ)ನೂ ಚಂದ್ರನನ್ನು ಕಣ್ಣೊಳಗೆ ಉಳ್ಳವನೂ ಆದ ಕೃಷ್ಣನ ಇರುವಿಕೆಯನ್ನು ಗಮನಿಸಿದಳು.

ಕ್ರಮವರಿದಿತನ ನುಡಿಸಲ್ಕೆ ನಿಗಮಾ
ಗಮಶಾಸ್ತ್ರ ಕಡೆಗಂಡುದಿಲ್ಲ
ಮಮ ಜಿಹ್ವೆ ಪೊಗಳಲ್ಕೆ ಹವಣಲ್ಲವೆಂದು ಶ್ರೀ
ರಮಣನ ನೋಡಿ ಹಿಗ್ಗಿದಳು ೪೫

ಕ್ರಮವರಿತು ಈತನನ್ನು ಹೊಗಳಲು ನಿಗಮಾಗಮ ಶಾಸ್ತ್ರಗಳಿಗೆ ಕೊನೆಯೇ ಇಲ್ಲ. ನನ್ನ ಒಂದು ನಾಲಗೆಯಲ್ಲಿ ಇವನನ್ನು ಹೊಗಳುವುದು ಸಾಧ್ಯವಿಲ್ಲವೆಂದು ಶ್ರೀಕಾಂತನನ್ನು ನೋಡಿ ಹಿಗ್ಗಿದಳು.

ಒಪ್ಪದಿ ನೋಡಲ್ಕೆ ದೃಗುಪುಣ್ಯ ನುತಿಸಲ್ಕೆ
ಬಪ್ಪುದು ಜಿಹ್ವೆಗಾಮ್ನಾಯ

ಸುಪ್ಪಾಣಿ ಪ್ರೌಢಾನ್ವಿತೆ ಬರೆದಳು ಕೋಟಿ
ದಪ್ಪಕ ರೂಪನ ಚಿತ್ರವನು ೪೬

ಒಪ್ಪ ಓರಣದಿಂದ ನೋಡಿದರೆ ಅದು ಕಣ್ಣಿನ ಪುಣ್ಯ. ಹೊಗಳಿದರೆ ನಾಲಗೆಗೆ ವೇದದ ಸ್ಥಾನ ದೊರಕುವುದು. ಸುಪ್ಪಾಣಿ(ಶ್ರೇಷ್ಠ) ಪ್ರೌಢೆ ಮನ್ಮಥ ರೂಪನ ಚಿತ್ರವನ್ನು ಬರೆದಳು.

ಶ್ರೀಮನ್ನಾರಾಯಣಗೆ ವಂದಿಸಿ ಬಲ
ರಾಮಾದ್ಯಖಿಳ ಯಾದವರ
ಕೋಮಲ ಭಾವಚಿತ್ರಂಗಳ ಬರೆಕೊಂಡು
ಕಾಮನ ನಿಳಯಕೈದಿದಳು ೪೭

ಶ್ರೀಕೃಷ್ಣನಿಗೆ ವಂದಿಸಿ, ಬಲರಾಮಾದಿ ಅಖಿಳ ಯಾದವರ ಕೋಮಲ ಭಾವಚಿತ್ರಗಳನ್ನು ಬರೆದುಕೊಂಡು ಕಾಮನ ಮನೆಗೆ ಬಂದಳು.

ಲೋಲೇಕ್ಷಣೆ ಕಂಡಳು ಕಾಮರತಿ ಚಂದ್ರ
ಶಾಲೆಯ ಮಣಿಮಂಚದಲ್ಲಿ
ಲೀಲೆಯಿಂದೊರಗಿರ್ದರು ಮೇಲೆ ಮಂದಾರ
ಮಾಲೆಯ ಮಕರಂದ ಸುರಿಯಲು ೪೮

ಉಪ್ಪರಿಗೆಯ ಮಣಿಮಂಚದಲ್ಲಿ ರತಿಕಾಮರು ಲೀಲೆಯಿಂದ ಮಲಗಿದ್ದರು, ಮೇಲೆ ಮಂದಾರ ಮಾಲೆಯ ಮಕರಂದ ಸುರಿಯುತ್ತಿರುವುದನ್ನು ಆಸ್ವಾದಿಸುತ್ತಾ. ಅದನ್ನು ಚಂಚಲಾಕ್ಷಿಯಾದ ಚಿತ್ರಲೇಖೆ ಗಮನಿಸಿದಳು

ಬೆಂಡಾದಳಂಗಜನ ಅಸ್ತ್ರಗಳು ನಾಟಿ
ಕೊಂಡವು ಕುಚದ ಮಧ್ಯದಲಿ
ದುಂಡುರುಮೆಯ ಮಾಡುತಿರಲುಚ್ಚರಿಸಿದಳು
ಕೆಂಡಗಣ್ಣನ ಮಂತ್ರವನು ೪೯

ಮನ್ಮಥನ ಹೂಬಾಣಗಳು ಕುಚಗಳ ಮಧ್ಯೆ ನಾಟಿಕೊಂಡು, ದುಂಡುರುಮೆ(ಆಕ್ರಮಣಕಾರಿ ವಾದ್ಯಬಡಿತ)ಯನ್ನು ಮಾಡುತ್ತಿರಲು ಚಿತ್ರಲೇಖೆ ಬೆಂಡಾಗಿ ಬಸವಳಿದು ಈಶ್ವರನ ಮಂತ್ರವನ್ನು ಜಪಿಸಿದಳು.

ಗರುಡನ ಭೂಮಿಯೆಂದರಿಯದೆ ಫಣಿ ಹೊಕ್ಕು
ಹೊರಡುವಂತವಳೆರ್ದೆಯಿಂದ
ಬರಡಾಗಿ ಮರಳ್ದ ತಾವರೆಗೋಲು ಕಂತುವಿ
ನೆರಡಕ್ಷಿಯೊಳು ನೆಲಸಿದವು ೫೦

ಗರುಡನ ಭೂಮಿಯೆಂದು ತಿಳಿಯದೆ ಹಾವು ಹುತ್ತದ ಒಳಗೆ ಹೋಗಿ ಹೊರಗೆ ಬರುವಂತೆ ಅವಳ ಎದೆಯಿಂದ ಬರಡಾಗಿ ಬಂದ ಹೂಬಾಣ ಕಾಮನ ಎರಡು ಕಣ್ಣುಗಳಲ್ಲಿ ತಂಗಿದವು.

ಮುನ್ನ ಮತ್ಸಖಿಗೆ ನೀನೆಚ್ಚರಳಂಬು
ಬೆನ್ನೊಳು ನೆಟ್ಟುರ್ಚಿ ಬಂದು
ಎನ್ನೆದೆಯೊಳು ಮೂಡಿತು ಪಾಪಿ ಮದನ ಮ
ತ್ತಿನ್ನಿಸ ಬೇಡೆಂದಳವಳು ೫೧

ಮುಂಚೆ ನೀನು ನನ್ನ ಗೆಳತಿಗೆ ಪ್ರಯೋಗಿಸಿದ ಹೂಬಾಣಗಳು ಬೆನ್ನಿಗೆ ನಾಟಿ ಅಲ್ಲಿಂದ ಹೊರಬಂದು ನನ್ನೆದೆಗೆ ನೆಟ್ಟುಕೊಂಡವು ಪಾಪಿ ಮನ್ಮಥ ಮತ್ತಿನ್ನಿಸಬೇಡ(ಮತ್ತೆ +ಇನ್ನು+ಇಸಬೇಡ;ಇಸು=ಬಾಣ ಪ್ರಯೋಗಿಸು)ಎಂದಳು.

ಈತನ ಗರ್ವವ ನೆಗ್ಗೊತ್ತಿ ಭಸ್ಮೀ
ಭೂತನ್ನಾಗಿಸಿದ ಶಿವನು
ಏತಕ್ಕೆ ಮಗುಳೆ ನಿರ್ಮಿತಗೈದನೆಂದು
ಪೀತಾಂಬರನ ದೂರಿದಳು ೫೨

ಈತನ ಅಹಂಕಾರವನ್ನು ನುರುಕಿ ಪುಡಿಮಾಡಿ ಬೂದಿ ಮಾಡಿದ ಶಿವನು ಮತ್ತೆ ಏಕೆ ಅವನಿಗೆ ಜೀವವಿತ್ತನು ಎಂದು ಪೀತಾಂಬರ(ಶಿವ)ನನ್ನು ದೂರಿದಳು.

ಸೊನೆವೆಮರಾಂತು ಕತ್ತುರಿಗಂಧಿ ಬರೆದಳು
ನನೆಯಂಬನ ಚಿತ್ರಪಟವ
ವಿನಯದಿ ಕೈಕೊಂಡು ಬಂದಳು ಸ್ಮರವರ
ತನಯನ ಶಯನ ಮಂದಿರಕೆ ೫೩

ಸೊನೆ ಬೆವರನ್ನು ಹೊಂದಿ, ಕಸ್ತೂರಿಗಂಧಿಯಾದ ಚಿತ್ರಲೇಖೆ ಹೂಬಾಣನ ಚಿತ್ರಪಟವನ್ನು ಬರೆದಳು. ಅದನ್ನು ವಿನಯದಿಂದ ತೆಗೆದುಕೊಂಡು ಸ್ಮರನ ಮಗನಿರುವ ಮಂದಿರಕ್ಕೆ ಬಂದಳು

ಸಂಧಿಸಿ ನೋಡಿದಳು ಮೆದುವಾಸಿಗೆಯಲಿ ಮರ
ಲುಂದಿದ ನವ ಕಂದರ್ಪನ
ಇಂದೀವರದಳಲೋಚನೆಯ ವಿರಹದಿ
ಕಂದಿದ ಮುಖಾರವಿಂದವನು ೫೪

ಕನ್ನೈದಿಲೆದಳ ಲೋಚನೆಯಾದ ಉಷಾದೇವಿಯ ವಿರಹದಿಂದ ಕಂದಿದ ಮುಖಕಮಲದ ನವಮನ್ಮಥ ಮಿದು ಹಾಸಿಗೆಯಲ್ಲಿ ಮಲಗಿರುವುದನ್ನು ಚಿತ್ರಲೇಖೆ ನೋಡಿದಳು.

ನೆರೆ ರೂಪುವಡೆದ ಮನ್ಮಥನೆಂಬುವನ ಹೊ
ನ್ನೊರೆಯಿಂದುಗಿದ ಕೂರಸಿಯ
ಮರೆಯಬಹುದೆ ಮಹಾದೇವ ಸತ್ಕುವರಗೆ
ಹೆರಹಿಂಗಬಹುದೆ ಕಂಡವರು ೫೫

ಮನ್ಮಥನ ರೂಪವನ್ನು ಪಡೆದ ಹಾಗೂ ಅವನ ಹೊನ್ನೊರೆಯಿಂದ (ಚಿನ್ನದ ಕತ್ತಿ ಇಡುವ ಚೀಲ)ಹೊರಬಂದ ಹರಿತವಾದ ಕತ್ತಿಯನ್ನು ಮರೆಯಬಹುದೆ? ಸತ್ಕುವರನಾದ ಅನಿರುದ್ಧನಿಗೆ ಕಂಡವರು(ಅನ್ಯರು) ಹಿಮ್ಮೆಟ್ಟಬಹುದೆ?

ಇವನಿರಬೇಕು ಸತ್ಕುವರಿಗೆ ಸ್ವಪ್ನ ಭೋ
ಗವನಿತ್ತ ಬಲುಜಾಣನೆನುತ
ಅವಯವರೂಪ ಚಿತ್ರಿಸಿಕೊಂಡು ಬಂದಳು
ಜವದಿಂದ ಶೋಣಿತಪುರಕೆ ೫೬

ನನ್ನ ಗೆಳತಿಗೆ ಸ್ವಪ್ನಭೋಗವನ್ನು ಕೊಟ್ಟ ಕಡುಜಾಣ ಇವನೇ ಇರಬೇಕು ಎಂದು ಅವನ ಅಂಗಾಂಗ ರೂಪವನ್ನು ಚಿತ್ರಿಸಿಕೊಂಡು ಶೋಣಿತಪುರಕ್ಕೆ ಶರವೇಗದಿಂದ ಬಂದಳು.

ವಿಕಸಿತ ಪದ್ಮದಳಾಯತೇಕ್ಷಣೆ ಹರ್ಮ್ಯ
ಶಿಖಿರದೊಳಿಹ ಕುಮಾರತಿಯ
ಮುಖ ದರುಶನ ಮಾಡಿದ ಮಾತ್ರದಿ ದುಃಖ
ನಿಕರ ನಿವಾರಣೆಯಾದುದು ೫೭

ಅರಳಿದ ಕಮಲದಂಥ ವಿಶಾಲಾಕ್ಷಿಯಾದ ತನ್ನ ಗೆಳತಿ ಸೌಧದ ಶಿಖಿರಭಾಗದಲ್ಲಿರುವುದನ್ನು ಕಂಡು, ದುಃಖ ನಿವಾರಣೆಗೊಂಡಂತೆ ಸಂತೃಪ್ತಳಾದಳು.

ಅಂಡಲೆದು ಬಂದಬಲೆಯನು ಕಣ್ಣಾರೆ
ಕಂಡಮರ್ದಪ್ಪಿ ಕುಸ್ತರಿಸಿ
ಮುಂಡಾಡಲಿರ್ವರ ಪರಿತೋಷ ಪೂರ್ವದಿ
ಙ್ಮಂಡಲಕೆ ರಂಗೇರಿಸಿತು ೫೮

ತನಗಾಗಿ ಅಲೆದಾಡಿ ಬಂದ ಅಬಲೆಯನ್ನು ಕಂಡು ಉಷೆ ಬಲವಾಗಿ ಅಪ್ಪಿಕೊಂಡು ಮುದ್ದಾಡಲು ಇಬ್ಬರ ಹರ್ಷ ಪೂರ್ವ ದಿಕ್ಕಿಗೆ ಅರುಣೋದಯದ ರಂಗೇರಿಸಿತು.

ಆಡಿದೆ ಬೆಳಗಾಗದ ಮುನ್ನ ಬಹೆನೆಂದು
ಮಾಡಿದ ಭಾಷೆ ಸಿದ್ಧಿಸಿತು
ಜೋಡಿಸಿ ನೀ ಬರ್ಪ ವೇಳೆಗೆ ಭಾಸ್ಕರ
ಮೂಡಿದನೆಂದಳಾ ಕುವರಿ ೫೯

ಬೆಳಗಾಗುವ ಮುನ್ನ ನಾನು ಬರುತ್ತೇನೆ ಎಂದು ನಿನಗೆ ಭಾಷೆ ಕೊಟ್ಟಿದ್ದೆ, ಅದು ಸಿದ್ಧಿಸಿತು ಎಂದು ಚಿತ್ರಲೇಖೆ ಹೇಳಿದಾಗ ಉಷಾದೇವಿ ನೀನು ಬರುವ ವೇಳೆಗೆ ಸೂರ್ಯ ಮೂಡಿದ ಎಂದಳು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೦

ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೩೦. ಚಿತ್ರಪಟ ದರ್ಶನ

ಪಿಡಿಯವಲಕ್ಕಿಗೋಸ್ಕರ ಕುಚೇಲಗೆ ನಾ
ಲ್ಮಡಿ ಭಾಗ್ಯವಿತ್ತ ಮಾಧವನ
ಅಡಿದಾವರೆಯ ಪ್ರಾರ್ಥಿಸಿ ಪೇಳು ಕತೆಯ ಮೆ
ಲ್ನುಡಿಗಳ ಮಣಿಮಾಲೆಯೆನಿಸಿ ೧

ಒಂದು ಹಿಡಿ ಅವಲಕ್ಕಿಗೋಸ್ಕರ ಕುಚೇಲನಿಗೆ ನಾಲ್ಮಡಿ ಭಾಗ್ಯವನ್ನು ಕೊಟ್ಟ ಶ್ರೀಕೃಷ್ಣನ ಪಾದಕಮಲವನ್ನು ಪ್ರಾರ್ಥಿಸಿ ಮಿದು ಮಾತುಗಳ ರತ್ನಮಾಲೆಯೆನ್ನುವಂತೆ ಕಥೆಯನ್ನು ಹೇಳು.

ಆದೊಡೆ ಕೇಳಾಯತನೇತ್ರೆ ನಿಬಿಡ ಪ
ಯೋಧರೆ ಮತ್ಕಾವ್ಯ ರಚನೆ
ಸ್ವಾದು ರಸಾಯನ ತವ ಕರ್ಣಯುಗಳಕೆ
ತೀದರೆ ಮಗುಳೆ ತುಂಬಿಸುವೆ ೨

ಓ ನನ್ನ ವಿಶಾಲಾಕ್ಷಿ ಸ್ಥೂಲ ಸ್ತನೆ, ನನ್ನ ಕಾವ್ಯ ರಚನೆ ರುಚಿಕರವಾದ ರಸಾಯನ. ನಿನ್ನ ಕರ್ಣದ್ವಯಕ್ಕೆ ಸಾಲದಾದರೆ, ಮತ್ತೆ ಕಿವಿತುಂಬಿ ಕೋಡಿ ಬೀಳುವಂತೆ ಮಾಡುವೆನು.

ಜಗದೊಳು ತುರುಗಿರ್ದ ಮಾಯಾರಜನಿಯ
ತೆಗೆದಳು ತತ್‌ಕ್ಷಣದಲ್ಲಿ
ಪಗಲಾಣ್ಮನ ಕಾಂತಿ ಪಸರಿಸಲಿರ್ವರು
ಮೊಗಮಜ್ಜನವ ಮಾಡಿದರು ೩

ಜಗತ್ತಿನಲ್ಲಿ ತುಂಬಿದ್ದ ಮಾಯಾ ರಾತ್ರಿಯನ್ನು ತೆಗೆದಳು, ಕೂಡಲೇ ಸೂರ್ಯನ ಕಾಂತಿ ಹರಡಲು ಇಬ್ಬರೂ ಮುಖಗಳನ್ನು ತೊಳೆದರು.

ಗಾಡಿಯಿಂದೋರ್ರೋರ್ವರು ದೇವಪೂಜೆಯ
ಮಾಡಿದರಾಗಮೋಕ್ತಿಯಲಿ
ಊಡಿದರಮೃತ ತಾಂಬೂಲವ ಕೈಕೊಂಡು
ಪಾಡಿದರೀಶನಂಘ್ರಿಗಳ ೪

ಆಗಮ ಶಾಸ್ತ್ರದ ಪ್ರಕಾರ ಒಬ್ಬೊಬ್ಬರು ಸುಂದರವಾಗಿ ದೇವಪೂಜೆ ಮಾಡಿದರು, ತಾಂಬೂಲವನ್ನು ನಿವೇದಿಸಿದರು, ಈಶ್ವರ ಪಾದಭಜನೆ ಮಾಡಿದರು.

ನಾದ ತಾತ್ಪರ್ಯನ ವಕ್ಷದೊಳಿಂಸಿ ಪ್ರ
ಸಾದ ತಾಂಬೂಲವ ಸವಿದು
ಪೋದ ಕಾರಿಯವೇನಾಯ್ತೆಂದು ಕುವರಿ ವಿ
ನೋದದಿ ಸಖಿಯ ಕೇಳಿದಳು ೫

ನಾದಮೂರ್ತಿ (ಓಂಕಾರಮೂರ್ತಿ)ಯಾದ ಶಿವನನ್ನು ವಕ್ಷದಲ್ಲಿರಿಸಿ, ಪ್ರಸಾದ ಹಾಗೂ ತಾಂಬೂಲವನ್ನು ಸವಿದು, ಹೋದ ಕಾರ್ಯ ಏನಾಯಿತೆಂದು ವಿನೋದದಿಂದ ಕುಮಾರಿ ಗೆಳತಿಯನ್ನು ಕೇಳಿದಳು.

ಎದೆಗೆಡಬೇಡ ಕುವರಿ ನಿನ್ನಿಂದ ನೋ
ಡಿದೆ ಮಹದಾದಿ ಲೋಕಗಳ
ಎದೆಎಂಟರಿಂದ ಒಳ ಹೊಕ್ಕೆಲ್ಲರ ರೂಹ ಬ
ರೆದು ತಂದಿಹೆ ನೋಡೆಂದಳು ೬

ಧೈರ್ಯಗೆಡಬೇಡ, ನಿನ್ನಿಂದ ಮಹದಾದಿ ಲೋಕಗಳನ್ನು ನೋಡಿದೆ, ಎದೆ ಎಂಟರಿಂದ (ಎಂಟೆದೆಯಿಂದ=ಯಮಧೈರ್ಯದಿಂದ)ಒಳಹೊಕ್ಕು ಎಲ್ಲರ ರೂಪವನ್ನು ಬರೆದು ತಂದಿದ್ದೇನೆ ನೋಡೆಂದಳು.

ಅಮರೇಶ್ವರನ ರೂಹಿದೆ ನೋಡು ವಿಬುಧೋ
ತ್ತಮ ಯಜ್ಞಪುರುಷನ ನೋಡು
ಸಮವರ್ತಿ ನೈರುತ್ಯನ ಚಿತ್ರಪಟಗಳ
ಕಮಲೇಕ್ಷಣೆಗೆ ತೋರಿದಳು ೭

ದೇವೇಂದ್ರನ ಆಕೃತಿ ಇದೆ ನೋಡು ಯಜ್ಞಪುರುಷನಾದ ಅಗ್ನಿಯ ರೂಪವನ್ನು ನೋಡು, ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳ ಮಧ್ಯದ ನೈರುತ್ಯ ದಿಕ್ಕಿನ ಒಡೆಯ ನಿರುತಿಯ ರೂಪವನ್ನು ನೋಡು ಎಂದು ಕಮಲಾಕ್ಷಿಗೆ ಚಿತ್ರಪಟಗಳನ್ನು ತೋರಿಸಿದಳು.

ವಾರಾಸಿಯಾಳ್ದನ ನೋಡು ವಾಯವ್ಯ ಕು
ಬೇರರ ರೂಹಿದೆ ನೋಡು
ರಾರಾಜಿಸುವೀಶಾನ್ಯನ ನೋಡೆಂದು
ನೀರಜಗಂಧಿ ತೋರಿದಳು ೮

ವಾರಾಸಿಯಾಳ್ದನ (ಸಮುದ್ರದ ಒಡೆಯನಾದ ವರುಣನನ್ನು) ನೋಡು, ವಾಯವ್ಯದ (ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ಮಧ್ಯದ ವಾಯುವ್ಯ ದಿಕ್ಕಿನ ಒಡೆಯ) ವಾಯುವಿನ ರೂಪವನ್ನು ನೋಡು, ಕುಬೇರ(ಉತ್ತರ ದಿಕ್ಕಿನ ಒಡೆಯ)ನ ರೂಪಿದೆ ನೋಡು, ಹಾಗೆಯೇ ಈಶಾನ್ಯ ಉತ್ತರ ಮತ್ತು ಪೂರ್ವದಿಕ್ಕಿನ ಮಧ್ಯದ ದಿಕ್ಕಿನ ಒಡೆಯ) ಈಶನನ್ನು ನೋಡು ಎಂದು ಕಮಲಗಂಧಿ ಚಿತ್ರಲೇಖೆ ತೋರಿಸಿದಳು.

ಪರಮಸಿಂಗರವೆತ್ತು ರಂಜಿಪ ಚತುರ್ದಶ
ವರ ಮನುಗಳ ಚಿತ್ರವಿದೆಕೊ
ಸುರಮುಖ್ಯರ ಚಿತ್ರಪಟವೀವೆ ನಳ ಕೂ
ಬರ ಜಯಂತರ ನೋಡು ತಾಯೆ ೯

ಶೃಂಗಾರ ಪ್ರಿಯರಾದ ಹದಿನಾಲ್ಕು ಜನ ಮನುಗಳ ಚಿತ್ರಗಳನ್ನು ನೋಡು ಸುರಮುಖ್ಯರಲ್ಲಿ ಕುಬೇರನ ಮಗ ನಳಕೂಬರ ಹಾಗೂ ಇಂದ್ರನ ಮಗ ಜಯಂತ – ಇವರನ್ನು ನೋಡು ಎಂದು ತೋರಿಸಿದಳು.

ಗೀರ್ವಾಣ ಯಕ್ಷಗುಹ್ಯಕ ಸಿದ್ಧ ಸಾಧ್ಯ ಗಂ
ಧರ್ವ ಕಿಂಪುರುಷ ಕಿನ್ನರರ
ತರ್ವಾಯ ಮೇಲೇಳು ಲೋಕಗಳಲಿರ್ಪ
ಸರ್ವರ ರೂಹ ತೋರಿದಳು ೧೦

ದೇವ, ಯಕ್ಷ, ಗುಹ್ಯಕ, ಸಿದ್ಧ, ಸಾಧ್ಯ, ಗಂಧರ್ವ, ಕಿಂಪುರುಷ, ಕಿನ್ನರರ ತರುವಾಯ ಮೇಲೇಳು ಲೋಕದವರ ಆಕೃತಿಗಳನ್ನು ತೋರಿಸಿದಳು.

ಸಾವಿರ ಪೆಡೆವಣಿಗಳ ಕಾಂತಿ ಮೆಯ್ಯೊಳು
ತೀವಿರ್ದ ತೇಜೋನ್ನತ
ಕೋವಿದ ಧರಣೀಧರನ ಚಿತ್ರವನುಷಾ
ದೇವಿಗೆ ತೋರಿದಳು ಮುದದಿ ೧೧

ಸಾವಿರ ಹೆಡೆಗಳಲ್ಲಿರುವ ರತ್ನಗಳ ಕಾಂತಿಯಿಂದ ತೇಜಸ್ವಿಯಾದ ಶೇಷ ಭೂಮಂಡಲವನ್ನು ಹೊತ್ತುಕೊಂಡಿರುವುದೇ ಅಲ್ಲದೆ, ವಿಷ್ಣುವಿಗೆ ಹಾಸಿಗೆಯಾಗಿಯೂ ಇದ್ದಾನೆ.ಅಂಥ ಧರಣೀಧರ (ಆದಿಶೇಷ)ನನ್ನು ನೋಡು ಎಂದು ತೋರಿಸಿದಳು

ಗೂಢಪದಾನ್ವಿತೆ ನಿಖಿಳಚಿತ್ರಗಳ ಕೈ
ವಾಡವ ತೋರಿ ಪಾತಾಳ
ನಾಡೊಳು ಬಲಿಮುಖ್ಯ ಖಳರ ಚಿತ್ರಂಗಳ
ನೋಡೆಂದು ತೋರಿದಳೊಲಿದು ೧೨

ತನ್ನ ಎಲ್ಲ ಚಿತ್ರಗಳ ಕೈವಾಡವ್ನನ್ನು ತೋರಿಸಿ ಬಳಿಕ ಪಾತಾಳಲೋಕದ ಬಲಿಚಕ್ರವರ್ತಿ ಮೊದಲಾದ ಖಳರ ಚಿತ್ರಗಳನ್ನು ನೋಡೆಂದು ತೋರಿಸಿದಳು.

ಆತನು ನಿನ್ನಯ  ಪಿತನಿಂಗೆ ಪಿತನು ತ
ತ್ತಾತ ಬಲೀಂದ್ರ ಬಲ್ಲಿದನು
ಪಾತಾಳ ಲೋಕದ ಪರಿಣಾಮವೆಂತೆಂಬ
ಮಾತ ಕೇಳು ಮದಗಜಗಮನೆ ೧೩

ಆತನು(ಬಲಿ) ನಿನ್ನ ಪಿತ(ಬಾಣಾಸುರ)ನಿಗೆ ಪಿತ. ಆ  ನಿನ್ನ ತಾತನಾದ ಬಲೀಂದ್ರ ತುಂಬ ಬಲ್ಲಿದನು .ಆ ಪಾತಾಳಲೋಕದ ಪರಿಣಾಮ ಎಂತಹುದು ಎಂಬುದನ್ನು ಕೇಳು (ಪ್ರಹ್ಲಾದ>ವಿರೋಚನ>ಬಲಿ–ಬಾಣಾಸುರ>ಉಷಾದೇವಿ)

ಶುಕ್ರದೇವರ ಶಿಷ್ಯ ಸಂಪನ್ನರೊಳು
ಚಕ್ರವರ್ತಿಯ ಭಾಗ್ಯ ಮಿಗಿಲು
ಶಕ್ರ  ಮುಂತಾದ ನಿರ್ಜರರೈಶ್ವರ್ಯವ
ವಿಕ್ರಯಗೊಂಬ ಪೌರುಷದಿ ೧೪

ಶುಕ್ರನ ಶಿಷ್ಯನಾದ ಬಲಿ ಇಂದ್ರ ಮೊದಲಾದ ದೇವತೆಗಳ ಐಶ್ವರ್ಯವನ್ನು ಪೌರುಷದಿಂದ ಕೊಂಡುಕೊಳ್ಳುಬಲ್ಲಂಥ ವ್ಯಕ್ತಿ. (ಹಿಂದೊಮ್ಮೆ ಇವನು ಇಂದ್ರನಿಂದ ಹತನಾಗಿ ಶುಕ್ರಾಚಾರ್ಯರ ಮೃತಸಂಜೀವಿನಿ ವಿದ್ಯೆಯ ಬಲದಿಂದ ಬದುಕಿ, ವಿಶ್ವಜಿತ್ತೆಂಬ ಯಾಗ ಮಾಡಿ, ಅಗ್ನಿಯಿಂದ ರಥಾಶ್ವಗಳನ್ನೂ, ಪ್ರಹ್ಲಾದನಿಂದ ಮಹಾಧನುಸ್ಸನ್ನೂ ಅಕ್ಷಯ ಬತ್ತಳಿಕೆಯನ್ನೂ ಪಡೆದು ಇಂದ್ರನನ್ನು ಗೆದ್ದು ಸ್ವರ್ಗಕ್ಕೆ ಒಡೆಯನಾಗಿದ್ದನು.)

ಪಜ್ವಳಿಸಿತು ಪಾತಾಳಲೋಕದಿ ನಿ
ಮ್ಮಜ್ಜನೈಸಿರಿಯು ಕೇವಲವೆ
ನಿಜ್ಜರಪತಿ ವಿಷ್ಣು ಬಾಗಿಲ ಕಾದಿರ್ಪ
ಸಜ್ಜನ ಸಂಪತ್ತು ಬಡವೆ ೧೫

ಪಾತಾಳಲೋಕದಲ್ಲಿ ನಿಮ್ಮಜ್ಜನಾದ ಬಲಿಚಕ್ರವರ್ತಿಯ ಐಶ್ವರ್ಯ ಪ್ರಜ್ವಲಿಸಿತು. ದೇವತೆಗಳ ಒಡೆಯನಾದ ವಿಷ್ಣು ಬಾಗಿಲು ಕಾಯುವ ಕಾಯಕ ಮಾಡಬೇಕಾದರೆ ಅಂಥ ಸಂಪತ್ತು ಬಡವು(ಕೃಶ) ಎನ್ನಬಹುದೆ?

ಬಗೆವೆತ್ತು ವಿಧಿ ಭವಾದಿಗಳಿತ್ತ ಪದವಿಯ
ಹಗೆಗೊಂಡು ಹರಿ ಕೆಡಿಸುವನು
ಮಿಗೆ ಕರುಣದೊಳಾತ ಕೊಟ್ಟ ಸೌಭಾಗ್ಯವ
ತೆಗೆಯಲೊರ್ವರಿಗಳವಲ್ಲ ೧೬

ಮನಸ್ಸು ಮಾಡಿ ಬ್ರಹ್ಮ ಶಿವ ಕೊಟ್ಟ ಪದವಿಯನ್ನು ಹಗೆತನದಿಂದ ವಿಷ್ಣು ಕೆಡಿಸುವನು. ಆದರೆ ಅವನು ಕೊಟ್ಟ ಸೌಭಾಗ್ಯವನ್ನು ತೆಗೆಯಲು ಯಾರಿಗೂ ಸಾಧ್ಯವಿಲ್ಲ.

ಶ್ರೀವರನಿಂದ ನಿತ್ಯವ ತಡೆದರು ಧ್ರುವ
ದೇವ ವಿಭೀಷಣಾದಿಗಳು
ಕೇವಲ ಸುಜ್ಞಾನಿ ಬಲಿಚಕ್ರವರ್ತಿಗಿ
ನ್ನಾವ ಕಾಲಕು ಕೇಡಿಲ್ಲ ೧೭

ಲಕ್ಷ್ಮೀಕಾಂತನಿಂದ ಧ್ರುವ, ವಿಭೀಷಣಾದಿಗಳು ನಿತ್ಯ(ಮೋಕ್ಷ)ವನ್ನು ಪಡೆದರು. ಸುಜ್ಞಾನಿಯಾದ ಬಲಿಚಕ್ರವರ್ತಿಗೆ ಯಾವ ಕಾಲಕ್ಕೂ ಕೇಡು ಎಂಬುದಿಲ್ಲ.

ಸಾಕದಂತಿರಲಾತನ ಪೆಂಪು ಕೆಳಗೇಳು
ಲೋಕದವರ ರೂಹು ನಿನಗೆ
ಬೇಕಾದುದಲ್ಲೆಂದು ತೋರಿದಳು ಶೋ
ಭಾಕರ ನೃಪ ಚಿತ್ರಪಟಗಳ ೧೮

ಆತನ ಹಿರಿಮೆ ಸಾಕು ಅದು ಹಾಗಿರಲಿ . ಕೆಳಗಿನ ಏಳುಲೋಕಗಳವರ ರೂಪ ನಿನಗೆ ಇಷ್ಟವಿಲ್ಲವೆಂದು ಸುಂದರ ರಾಜರ ಚಿತ್ರಪಟಗಳನ್ನು ತೋರಿದಳು.

ಬೇಸರದೊಂದೊಂದ  ತೋರಿದಳು ಚಪ್ಪನ್ನ
ದೇಶಾಧಿಪರ ಚಿತ್ರಗಳ
ದೂಷಣೆಗೆಯ್ದು ನಿಟ್ಟಿಸಲೊಲ್ಲದವಳಲಿ
ಆಯಾಸವ ಕಂಡಳು ಕೆಳದಿ ೧೯

ಚಪ್ಪನ್ನದೇಶದ ರಾಜರ ಚಿತ್ರಪಟಗಳನ್ನು ಬೇಸರ ಮಾಡಿಕೊಳ್ಳದೆ ಒಂದೊಂದನ್ನೆ ತೆಗೆದು ತೋರಿಸತೊಡಗಿದಳು. ಅವುಗಳನ್ನು ನೋಡಲಿಚ್ಚಿಸದ ಗೆಳತಿ ಉಷೆಯಲ್ಲಿ ಆಯಾಸವನ್ನು ಕಂಡಳು.

ತಂಗಿ ನೀಕೇಳು ಸಮಸ್ತ ಚಿತ್ರಂಗಳ
ಭಂಗಿಸಿಬಿಟ್ಟೆ ನಿನ್ನೆದೆಯ
ಅಂಗೀಕೃತ ಪ್ರಾಣಾಕಾಂತನಾರೆಂದು ಪ್ರ
ಸಂಗಿಸಿದಳು ನಸುನಗುತ ೨೦

ತಂಗಿ ನಾನು ತೋರಿಸಿದ ಸಮಸ್ತ ಚಿತ್ರಗಳನ್ನು ನೀನು ಭಂಗಿಸಿಬಿಟ್ಟೆ. ನಿನ್ನೆದೆಯ ಅಚ್ಚುಮೆಚ್ಚಿನ ಪ್ರಾಣಕಾಂತನಾರೆಂದು ಸೂಚಿಸು ಎಂದಳು ನಸನಗುತ್ತ

ಸೊದೆಯನೀಂಟುವ ರಾಜಹಂಸದ ಮರಿಗೆ ಮೇ
ಲುದಕ ತೋರಿದಡೆ ಪೀರ್ದಪುದೆ
ಎದೆಗಿಚ್ಚನಿಕ್ಕಿ ಪೋದಾತನಲ್ಲದೆ ಮಿಕ್ಕ
ಸದೆಗರ ತಂದರೊಪ್ಪುವೆನೆ ೨೧

ಅಮೃತ ಕುಡಿಯುವ ಅರೆಸಂಚೆಗೆ ತಿಳಿನೀರನ್ನು ನೀಡಿದರೆ ಕುಡಿಯುವುದೆ? ನನ್ನೆದೆಗೆ ಕಿಚ್ಚುಹಚ್ಚಿ ಹೋದಾತನನ್ನಲ್ಲದೆ ಅನ್ಯ ಸದೆಗ(ಕ್ಷುದ್ರ)ರನ್ನು ತೋರಿಸಿದರೆ ಒಪ್ಪುವೆನೆ?

ತರಳ ಭಾಸ್ಕರನಂತೆ ಮೆರೆವ ಮಾಣಿಕವೆನ್ನ
ಕೊರಲೊಳಗಿರ್ದು ಪೋದುದಕೆ
ಇರುಳೆರಡೇಳು ಲೋಕವ ತುಕ್ಕಿ ಟಿಕ್ಕೆಯ
ಹರಳ ತಂದೆನಗೆ ತೋರಿಸಿದೆ ೨೨

ಬಾಲಸೂರ್ಯನಮತೆ ಹೊಳೆವ ಮಾಣಿಕ್ಯ ನನ್ನ ಕೊರಳಲ್ಲಿದ್ದು ಇಲ್ಲವಾದುದಕ್ಕೆ ಪ್ರತಿಯಾಗಿ ನೀನು ರಾತ್ರಿ ಎರಡೇಳು(ಹದಿನಾಲ್ಕು: ಮೇಗೇಳುಲೋಕ ಹಾಗೂ

ಕೆಳಗೇಳು ಲೋಕ)ಲೋಕಗಳನ್ನು ಸುತ್ತಿ ಸುಣ್ಣವಾಗಿ ಟಿಕ್ಕೆಯ (ಕುತಾಭರಣ ಅಡ್ಡಿಕೆಯ) ಹರಳನ್ನು ತಂದು ನನಗೆ ತೋರಿಸಿದೆ.

ನಕ್ಕಳಾಯಕನ ಮಾತಿನ ಜಾಣ್ಮೆಯ ಕೇಳಿ
ಹೆಕ್ಕಳವಾಗಿ ಶೋಭಿಸುವ
ಹೊಕ್ಕುಳಹೂವನ ರೂಹುತೋರಿದಳು ಪೆ
ಣ್ಣಕ್ಕಳ ಮಂಡೆ ಮಾಣಿಕಕೆ ೨೩

ಆಯಕನ( ಆ ಅಕ್ಕನ) ಜಾಣ್ಮೆಯ ಮಾತನ್ನು ಕೇಳಿ ನಕ್ಕಳು. ಅಧಿಕವಾಗಿ ಶೋಭಿಸುವ ಹೊಕ್ಕುಳಹೂವ(ಕಮಲನಾಭನಾದ ವಿಷ್ಣು)ನನ್ನು ಸ್ತ್ರೀರತ್ನ ಉಷಾದೇವಿಗೆ ತೋರಿಸಿದಳು.

ಇದು ಯಾರ ಚಿತ್ರ ಪೆಸರ ಪೇಳೆನಲಾಗಿ
ಯದುಕುಲ ದುಗ್ಧಾಬ್ದಿ ಚಂದ್ರ
ಮಧುಸೂದನನೆಂದು ಬೆಸಸಲ್ಕೆ ಹರಿಯ ಶ್ರೀ
ಪದಕುರೆ ಪಣೆಯ ಚಾಚಿದಳು ೨೪

ಇದು ಯಾರ ಚಿತ್ರ ಹೆಸರನ್ನು ಹೇಳು ಎಂದು ಕೇಳಿದಾಗ ಚಿತ್ರಲೇಖೆ ಇದು ಯದುವಂಶವೆಂಬ ದುಗ್ಧಾಬ್ಧಿ (ಹಾಲ್ಗಡಲು)ಯ ಚಂದ್ರನೆನ್ನಿಸಿದ ಮಧುಸೂದನ(ವಿಷ್ಣು) ನೆಂದು ಹೇಳಿದಾಗ ಉಷಾದೇವಿ ಕೂಡಲೇ ಶ್ರೀಹರಿಯ ಪಾದಕ್ಕೆ ಹಣೆ ಚಾಚಿದಳು.

ಭೂಮಿಯೊಳೀ ಚಿತ್ರಕೆಣೆಗಾಣೆ ಮನ್ಮನ
ಕಾಮಿಸಿ ಪರಮ ಭಕ್ತಿಯಲಿ
ಸ್ವಾಮಿಯೆಂದೆಂಬ ವಾತ್ಸಲ್ಯ ತೋರುತಿದೆ
ಗೋಮಿನೀವರ ಮೂರ್ತಿಯಲಿ ೨೫

ಭೂಲೋಕದಲ್ಲಿ ಈ ಚಿತ್ರಕ್ಕೆ ಎಣೆ(ಸರಿಸಮಾನ)ಕಾಣೆ. ನನ್ನ ಮನಸು ಕಾಮಿಸಿ(ಬಯಸಿ) ಭಕ್ತಿಯಿಂದ ಸ್ವಾಮಿಯೆಂಬ ಭಾವನೆಯನ್ನು ಮೂಡಿಸುತ್ತಿದೆ ಈ ಗೋಮಿನೀಕಾಂತ(ಲಕ್ಷ್ಮೀಕಾಂತ)ಮೂರ್ತಿ.

ಜಲರುಹ ಗಂಧಿ ನೀ ನೋಡೆಂದು ಯಾದವ
ಕುಲರತ್ನಕಿಂ ಮುಂಪುಟ್ಟಿ
ಬಲರಾಮನಾಮದಿಂ ಮೆರೆವ ದೇವನ ಕೇ
ವಲರೂಪ ತೆಗೆದು ತೋರಿದಳು 	೨೬

ಕಮಲಗಂಧಿ ನೀನು ನೋಡು ಎಂದು ಕೃಷ್ಣನಿಗಿಂತ ಮೊದಲು ಹುಟ್ಟಿದ ಬಲರಾಮನ ರೂಪವನ್ನು ತೆಗೆದು ತೋರಿಸಿದಳು.

ಮರುತಭುಕ್ತಾಧಿಪನಪರಾವತಾರನ
ಉರುತರ ದಿವ್ಯ ವಿಗ್ರಹದಿಂ
ಗುರು ತಾತ್ಪರ್ಯವಾಗಿದೆ ಮಿಕ್ಕರೆಲ್ಲರ
ನಿರುತದಿ ತೋರೆಂದಳವಳು 	೨೭

ಮರುತಭುಕ್ತ(ಗಾಳಿಗೂಳ ಅಂದರೆ ಗಾಳಿಯನ್ನೇ ಆಹಾರವನ್ನಾಗಿ ಭುಂಜಸುವ ಸರ್ಪ)ನಾದ ಶೇಷನ ಅವತಾರಿಯಾದ ಬಲರಾಮನ ದಿವ್ಯ ರೂಪವನ್ನು ನೋಡಿದ ಮೇಲೆ, ಉಳಿದವರ ಆಕೃತಿಗಳನ್ನು ತೋರೆಂದು ಚಿತ್ರಲೇಖೆಗೆ ಜೋತು ಬಿದ್ದಳು.

ಉದ್ದವ ಕೃತವರ್ಮ ಸಾತ್ಯಕಿ ದಮಘೋಷ
ಶುದ್ಧಾತ್ಮಧಾಮ ಸುದಾಮ
ಉದ್ದುರ ದೋರಕೆಯಲ್ಲಿ ವಿರಾಜಿಸುವ ಪ್ರ
ಸಿದ್ದರ ರೂಹ ತೋರಿದಳು 	೨೮

ಶ್ರೇಷ್ಠ ದ್ವಾರಕಿಯಲ್ಲಿ ವಿರಾಜಿಸುವ ಉದ್ದವ, ಕೃತವರ್ಮ, ಸಾತ್ಯಕಿ, ದಮಘೋಷ, ಶುದ್ಧಾತ್ಮ ಧಾಮ(ಸದನ)ನಾದ ಸುದಾಮರಂಥ ಪ್ರಸಿದ್ಧರ ರೂಪವನ್ನು ತೋರಿಸಿದಳು.

ತಂದು ನೀ ತೋರಿದ ರೂಹುಗಳೆಲ್ಲ ಮ
ದ್ಬಂಧುಗಳೆಂದು ತೋರುತಿಹುದು
ಅಂದೆನ್ನನು ಕನಸಲಿ ಕೂಡಿ ಪೆರಸಾರ್ದು
ಕೊಂದು ಹೋದನ ರೂಹ ಕಾಣೆ 	೨೯

ನೀನು ತೋರಿಸಿದ ಆಕೃತಿಗಳೆಲ್ಲನನ್ನ ಬಂಧುಗಳೆಂದು ತೋರುತ್ತಿದೆ.

ಅಂದು ನನ್ನನ್ನು ಕನಸಿನಲ್ಲಿ ಕೂಡಿ, ನನ್ನನ್ನು ಕೊಂದು ಹೋದವನ ರೂಪು ಕಾಣಲಿಲ್ಲ ಎಂದಳು.

ಕೋಮಲೆ ಪರಿತಾಪಗೊಳಬೇಡ ನಿನ್ನನು
ತಾಮರಸಾಸ್ತ್ರದಿಂದೆಚ್ಚಿ
ಭ್ರಾಮಕವಡಿಸಿದವನನೀಗ ನೋಡೆಂದು
ಕಾಮನ ರೂಹ ತೋರಿದಳು ೩೦

ಕೋಮಲೆ. ಸಂತಾಪಗೊಳ್ಳಬೇಡತಾ ನಿನ್ನನ್ನು ಸಾಮರಶಾಸ್ತ್ರ (ತಾಮರಸ=ಕಮಲ ಅಸ್ತ್ರ=ಬಾಣ)ದಿಂದ ಹೊಡೆದು ಭ್ರಾಮಕಾವಸ್ಥೆಗೆ ದೂಡಿದವನ್ನು ಈಗ ನೋಡೆಂದು ಮನ್ಮಥನ ರೂಹನ್ನು ತೋರಿಸಿದಳು.

ಸುಳಿಗುರುಳಬಲೆ ಭ್ರಾಮಕವೆತ್ತು ಪುನರಪಿ
ತಿಳಿದೀಶ್ವರನ ಕಣ್ಣಿಂದ
ಅಳಿದುಳಿದನ ಚಿತ್ರಪಟವ ನಿರೀಕ್ಷಿಸಿ
ಬಳಿಕೊಂದು ಮಾತನಾಡಿದಳು ೩೧

ಗುಂಗುರಕೂದಲ ಕುಮಾರಿ ಮತ್ತೆ ಭ್ರಾಮಕಾವಸ್ಥೆಗೇರಿ ಬಳಿಕ ವಾಸ್ತವ ಸ್ಥಿತಿಗೆ ಬಂದು, ಈಶ್ವರನ ಕಣ್ಣ ಉರಿಯಿಂದ ದಹನಗೊಂಡವನ ಅಳಿದುಳಿದ ಚಿತ್ರಪಟವನ್ನು ನೋಡಿ ಒಂದು ಮಾತನ್ನಾಡಿದಳು.

ಈತನ ಚಿತ್ರವ ಬೈಚಿಟ್ಟು ಮತ್ಪ್ರಾಣ
ನಾಥನ ಪಡಿಯಿಡಬಹುದು
ಆತನ ರೂಹ ತಂದಿದ್ದಡೆ ತೋರೆಂದು
ಕಾತರಿಸಿದಳಂಬುಜಾಕ್ಷಿ ೩೨

ಈತನ ಚಿತ್ರವನ್ನು ಬಚ್ಚಿಟ್ಟು ನನ್ನ ಪ್ರಾಣಕಾಂತನನ್ನು ಪ್ರತಿಯಾಗಿಡಬಹುದು. ಆತನ ರೂಹನ್ನು ತಂದಿದ್ದರೆ ತೋರೆಂದು ಕಾತರಿಸಿದಳು.

ಕದ್ದೈಸದೆ ವರಸ್ಮರನ ಬಾಯೊಳಗುರ್ಚಿ
ಬಿದ್ದಂತೆ ಪಡಿಯಚ್ಚು ವಡೆದ
ಮುದ್ದುರೂಪದ ಕಮನೀಯ ಮೂರ್ತಿಯನಿ
ರುದ್ಧನ ನೋಡೆಂದಳಬಲೆ ೩೩

ಅನುಮಾನಿಸದೆ ಮನ್ಮಥನ ಬಾಯಿಂದ ಬಿದ್ದವನಂತೆ (ತಾಯಿಯ ಯೋನಿಯಿಂದ ಕೆಳಕ್ಕೆ ಬೀಳಲಿಲ್ಲ ತಂದೆಯ ಬಾಯಿಂದ ಕೆಳಗೆ ಬಿದ್ದಂತೆ ತಂದೆಯ ಪಡಿಯಚ್ಚಾಗಿರುವನು) ಪ್ರತಿರೂಪ ಪಡೆದ ಮುದ್ದುಮುದ್ದಾದ ಸುಂದರ ಅನಿರುದ್ಧನನ್ನು ನೋಡು ಎಂದು ಚಿತ್ರಪಟವನ್ನು ತೋರಿಸಿದಳು.

ಒಮ್ಮಿಂದೊಮ್ಮೆಲೆ ಉಷೆಯ ಮೆಯ್ಯರೋಮವು
ಜುಮ್ಮೆಂದು ಮನದ ಮೂರ್ಛೆಯಲಿ
ಹಮ್ಮೈಸಿದಳು ಚಿತ್ರದ ಮೇಲಣಾಸೆಯ
ಪೆಮ್ಮೆಯನೇನ ಬಣ್ಣಿಪೆನು ೩೪

ಒಮ್ಮಿಂದೊಮ್ಮೆಯೇ ಉಷೆಯ ಮೈಪುಳಕಗೊಂಡು ಮನಮೂರ್ಛೆ ಹೋದಂತಾಗಿ ಹಂಬಲಿಸತೊಡಗಿದಳು. ಚಿತ್ರದ ಮೇಲಣ ಆಸೆಯ ಹಿರಿಮೆಯನ್ನು ಎಷ್ಟೆಂದು ವರ್ಣಿಸಲು ಸಾಧ್ಯ?

ಕಂದೆರೆದಳು ಪುನರಪಿ ನೋಡಿ ಚರಣಾರ
ವಿಂದದಿ ನೊಸಲ ಚಾಚಿದಳು
ತಂದು ಬಲ್ಮೊಲೆಗೊತ್ತಿಕೊಂಡು ಬಳಿಕ ಹಾ
ಯೆಂದು ಸಂತಸದಿ ಹಿಗ್ಗಿದಳು ೩೫

ಮುಚ್ಚಿದ ಕಣ್ಣನ್ನು ತೆರೆದಳು, ಮತ್ತೆ ನೋಡಿ ಪಾದಕಮಲದಲ್ಲಿ ಹಣೆಯನ್ನು ಚಾಚಿದಳು. ಚಿತ್ರಪಟವನ್ನು ತನ್ನ ನಿಬಿಡ ಜೋಡಿಮೊಲೆಗಳಿಗೆ ಒತ್ತಿಕೊಂಡು ಬಳಿಕ ಹಾಯೆಂದು ಸಂತೋಷದಿಂದ ಹಿಗ್ಗಿದಳು.

ಅಹುದಿಂದು ಪ್ರಾಣಕಾಂತನ ಚಿತ್ರವ ಕಂಡೆ
ಬಹುದುಃಖ ಬಿಡುಗಡೆಯಾಯ್ತು
ಇಹುದಾವಪುರ ಪೆಸರೇನಾರಮಗನೆಂದು
ಸಹಜ ವಿನಯದಿ ಕೇಳಿದಳು ೩೬

ಪ್ರಾಣಕಾಂತನ ಚಿತ್ರವನ್ನು ಇಂದು ಕಂಡು ನನ್ನ ಬಹುದುಃಖ ಬಿಡುಗಡೆಯಾಯಿತು ಈತನಿರುವ ಊರು ಯಾವುದು?ಹೆಸರೇನು? ಯಾರ ಮಗ? ಎಂದು ಸಹಜ ವಿನಯದಿಂದ ಕೇಳಿದಳು.

ದ್ವಾರಕಾಪುರಾಧೀಶ ಕೃಷ್ಣನ ಸತ್ಕು
ಮಾರಕನಾತ್ಮಸಂಭವನು
ತೋರ ಕುಚಾನ್ವಿತೆ ಕೇಳು ನಿನ್ನ ದುಃಖ ನಿ
ವಾರಕನ ನಾಮ ಅನಿರುದ್ಧ ೩೭

ದ್ವಾರಕಾನಗರದ ಶ್ರೀಕೃಷ್ಣನ ಮಗನಾದ ಮನ್ಮಥನ ಮಗನೀತ. ಸ್ಥೂಲ ಸ್ತನಗಳ ಸ್ನೇಹಿತೆ ಕೇಳು. ನಿನ್ನ ದುಃಖ ನಿವಾರಕನಾದ ಈತನ ಹೆಸರು ಅನಿರುದ್ಧ.

ತಾಯೆಂದು ಕಳುಹಲು ತಂದೆ ನೀ ಕೇಳೆನ್ನ
ಪ್ರೀಯದ ಗುರು ವಕ್ಷೋಜೆ
ಬಾಯೆನ್ನ ಬಂದುಗೆವಾಯ ಭಾಮಿನಿ ರನ್ನೆ
ಹಾಯೆಂದು ಸಖಿಯನಪ್ಪಿದಳು ೩೮

ನನ್ನ ಪ್ರೀತಿಯ ಬಿಣ್ಮೊಲೆಯ ಹೆಣ್ಣೆ, ತಾಯೆಂದು ಕಳುಹಲು ತಂದೆ(ಅನಿರುದ್ದನನ್ನು ಬಿಡದೆ ತೆಗೆದುಕೊಂಡು ಬಾ ಎಂದು ಹೇಳಿದಂತೆ ನೀನು ಮಾತಿಗೆ ತಪ್ಪದೆ ತೆಗೆದುಕೊಂಡು ಬಂದೆ ಎಂಬ ಅರ್ಥದಲ್ಲಿ ತಾಯಿ ಮಾತ್ರವೇ ಅಲ್ಲ ತಂದೆಯೂ ಆಗಿ ನಿಂದೆ ಎಂಬ ಧ್ವನಿ ಇದೆ) ಬಂದುಗೆ ಬಾಯಿಯ ಭಾಮಿನಿ ರನ್ನೆ ಬಾಯೆಂದು ಗೆಳತಿಯನ್ನು ಅಪ್ಪಿಕೊಂಡಳು.

ಜಗದೊಳು ಹೊಕ್ಕು ವಿಶ್ವವನೆಲ್ಲ ತೃಣವೆಂದು
ಬಗೆದು ನಾನಾ ಚಿತ್ರಗಳನು
ತೆಗೆದುಕೊಂಡತಿ ಬೇಗದಿ ಬಂದೆ ನಿನ್ನ ಪೆ
ಣ್ಮಗಳೆನ್ನಬಹುದೆ ಬಲ್ಲವರು ೩೯

ವಿಶ್ವವನ್ನು ತೃಣವೆಂದು ಬಗೆದು ನಾನಾ ಚಿತ್ರಗಳೊಡನೆ ವಾಯುವೇಗದಿಂದ ಹಿಂದಿರುಗಿ ಬಂದೆ, ನಿನ್ನನ್ನು ತಿಳಿದವರು ಹೆಣ್ಣುಮಗಳು ಎನ್ನುವರೆ?

ಈಸು ದುಃಖವನಾಂತು ನನಗೆ ನೀ ಮಾಡಿದ
ಲೇಸುಗಳಿಗೆ ಲೆಕ್ಕವಿಲ್ಲ
ಏಸು ಜನ್ಮದಿ ನಿನ್ನ ಋಣವ ತಿದ್ದುವೆನೆಂ
ದಾ ಸುಗುಣೆಯನಪ್ಪಿದಳು ೪೦

ಇಷ್ಟು ದುಃಖಪಟ್ಟ ನನಗೆ ನೀನು ಮಾಡಿದ ಸುಖ ಅಷ್ಟಿಷ್ಟಲ್ಲ ಎಷ್ಟು ಜನ್ಮಗಳಲ್ಲಿ ನಿನ್ನ ಋಣವನ್ನು ತೀರಿಸಬೇಕೋ ಎಂದು ಗೆಳತಿಯನ್ನು ಅಪ್ಪಿಕೊಂಡಳು.

ಅಂಗವ ತುರಿಸಲ್ಕೆ ತುರಿಸುವ ಕೈಗಳ್ಗೆ
ಹಂಗ ತಿದ್ದುವ ಶಾಸ್ತ್ರವುಂಟೆ
ಭೃಂಗ ಕುಂತಲೆ ಕೇಳು ಅರೆ ಮರಳು ವಾ
ಕ್ಯಂಗಳ ಮಾತಾಡಬಹುದೆ ೪೧

ಶರೀರದ ಯಾದ ಅಂಗವನ್ನಾದರೂ ಕೆರೆದುಕೊಳ್ಳಲು ಕೆರೆಯುವ ಕೈಗಳಿಗೆ ಋಣ ತಿದ್ದುವ (ತೀರಿಸುವ) ಶಾಸ್ತ್ರ ಉಂಟೆ? ದುಂಬಿಗುರುಳ ತರಳೆ ಕೇಳು ಇಂಥ ಮರುಳು ಮಾತಾಡಬಹುದೆ?

ಮೃಡಭಕ್ತನಾತ್ಮ ಸಂಭವೆ ಕೇಳು ಭಾಸ್ಕರ
ಕೆಡೆದ ಪಡುವಣಾಂಬುಧಿಯಲಿ
ತಡ ಮಾಡದೆ ತಯಣಕೆ ನೇಮವೇಳೆನಲು
ಮಡದಿ ಮನ್ನಿಸಿದಳಾಯಕನ ೪೨

ಶಿವಭಕ್ತನಾತ್ಮಸಂಭವೆ ಕೇಳು ಸೂರ್ಯ ಪಡುವಣ ಕಡಲಿನಲ್ಲಿ ಅಸ್ತಂಗತನಾದ. ತಡಮಾಡದೆ ಪಯಣಕ್ಕೆ ನೇಮವನ್ನು ಹೇಳು ಎಂದು ಚಿತ್ರಲೇಖೆ ಕೇಳಿದಾಗ ಉಷಾದೇವಿ ಆ ಮಾತಿಗೆ ಮಾನ್ಯತೆ ನೀಡಿದಳು.

ಮನ ಹರುಷದೊಳೆದ್ದು ತತ್‌ಕ್ಷಣ ಮಂಡೆ ಮ
ಜ್ಜನವ ಮಾಡರಸಂಚೆಗಮನೆ
ಘನ ಸಂಭ್ರಮದಿ ಸೆಜ್ಜೆಯ ಸಿಂಗರಿಸು ನಿ
ನ್ನಿನಿಯ ಬಂದಪ ನೀಲವೇಣಿ ೪೩

ರಾಜಹಂಸಗಮನೆ ತಲೆಗೆ ಸ್ನಾನ ಮಾಡು, ಸಂಭ್ರಮದಿಂದ ಶಯ್ಯಾಗೃಹವನ್ನು ಶೃಂಗರಿಸು, ನಿನ್ನಿನಿಯ ಬರುವನು ಎಂದಳು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೪

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯ ಚಂದ್ರರು ಇರುವತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೩೧. ಅನಿರುದ್ಧನ ತಂದುದು

ಕಂಗೊಳಿಸುವ ಕಡಹವನೇರಿ ಬಿದ್ದು ಕಾ
ಳಿಂಗನ ಹೆಡೆ ಮೇಲೆ ಕುಣಿದ
ರಂಗನ ಪಾದಪದ್ಮವ ಕೂರ್ತು ಕೃತಿವೇಳು
ಮಂಗಳವೆನಿಸಲೆನ್ನ ಕಿವಿಗೆ ೧

ಕಂಗೊಳಿಸುವ ಹಾಯ್ಗಡ (ಹೊಳೆಯನ್ನು ದಾಟುವ ಸ್ಥಳ)ವನ್ನೇರಿ ಕಾಳಿಂಗ ಸರ್ಪದ ಹೆಡೆಯ ಮೇಲೆ ನೆಗೆದು ಕುಣಿದು ಕುಪ್ಪಳಿಸಿದ ರಂಗನ ಪಾದಕಮಲವನ್ನು ಕುರಿತು ಕೃತಿ ಹೇಳು, ಕಿವಿಗೆ ಮಂಗಳ ಎನ್ನಿಸುವ ಹಾಗೆ.

ಕೃತಯುಗದೊಳು ವೇದ ತ್ರೇತೆಯೊಳಧ್ವರ
ಅತಿದಾನಶೀಲ ದ್ವಾಪರದಿ
ಸ್ತುತಿ ಪುಣ್ಯ ಕಲಿಯುಗದೊಳಗೆ ಶ್ರೀಹರಿನಾಮ
ಮತಿವಂತೆ ಕೇಳು ಪೇಳ್ವಪೆನು ೨

ಕೃತಯುಗದಲ್ಲಿ ವೇದ, ತ್ರೇತಾಯಗದಲ್ಲಿ ಯಜ್ಞ, ದ್ವಾಪರಯುಗದಲ್ಲಿ ದಾನಶೀಲ, ಕಲಿಯುಗದಲ್ಲಿ ಶ್ರೀಹರಿಯ ನಾಮಸಂಕೀರ್ತನೆ ಪುಣ್ಯದಾಯಕ, ಆದ್ದರಿಂದ ಶ್ರೀ ಹರಿಯ ಗುಣಗಾನವನ್ನು ವಿಸ್ತರಿಸುವೆನು ಕೇಳು.

ತೈಲ ತಪ್ತೋದಕದಲಿ ಮಿಂದರಿರ್ವರು
ಶೈಲಾತ್ಮಜೆಯ ಕಾಂತನಿಗೆ
ಗೈಲ ಪೂಜೆಯ ಮಾಡಿ ಮಹದುಪಚಾರವ
ಕೈಲಾಗಿನಿಂದೊಡರ್ಚಿದರು ೩

ಎಣ್ಣೆ ಹಚ್ಚಿಕೊಂಡು ಇಬ್ಬರೂ ಬಿಸಿನೀರ ಸ್ನಾನ ಮಾಡಿದರು. ಪಾರ್ವತಿಯ ಪತಿಗೆ ಗೈಲ(<ಕೈಲು=ಅಡಕೆ, ತೆಂಗು, ಬಾಳೆಯ ಗೊನೆ)ಪೂಜೆಯನ್ನು ಮಾಡಿ ತಮ್ಮ ಕೈಯಾರ ಉಪಚಾರವನ್ನು ಎಸಗಿದರು.

ಊಟವನು ಮಾಡಿ ಸವಿರುಚಿಯ ಕಪ್ಪುರ
ಕೊಟ ತಾಂಬೂಲವ ಸವಿದು
ನೀಟಾದ ಪೆಣ್ಣ ಸಿಂಗರಿಪ ಕುಶಲ ಕೈ
ಮಾಟದ ಹೆಂಗಳ ಕರೆಸಿದಳು ೪

ಊಟವನ್ನು ಮಾಡಿ, ಸವಿರುಚಿಯ ಕರ್ಪೂರ ಮಿಶ್ರಿತ ತಾಂಬೂಲವನ್ನು ಜಗಿದು, ಹೆಣ್ಣನ್ನು ನೀಟಾಗಿ ಶೃಂಗರಿಸುವ ಕುಶಲ ಕೈಮಾಟದ ಹೆಣ್ಣುಗಳನ್ನು ಕರೆಸಿದಳು.

ಹೊನ್ನ ಬಟ್ಟಲಲಿ ಕುಂಕುಮ ಗಂಧ ಬಾ
ವನ್ನ ಕಪ್ಪುರ ಕತ್ತುರಿಯ
ಚೆನ್ನಾಗಿ ಹದಮಾಡಿ ಲೇಪಿಸಿ ಪೆಣ್ದಲೆ
ಕನ್ನೆಗೆ ತಳಪನಿಕ್ಕಿದರು ೫

ಚಿನ್ನದ ಬಟ್ಟಲಿನಲ್ಲಿ ಕುಂಕುಮಗಂಧ, ಶ್ರೀಗಂಧ, ಕರ್ಪೂರ ಕಸ್ತೂರಿಗಳ ಮಿಶ್ರಣವನ್ನು ಚೆನ್ನಾಗಿ ಹದಗೊಳಿಸಿ, ಸ್ತ್ರೀರತ್ನ ಉಷೆಯ ಮೈಗೆ ಲೇಪಿಸಿ, ಹೊಳಪುಗೊಳಿಸಿದರು.

ಉಡಿಸಿದರಮಳ ವಸ್ತ್ರವ ಮಣಿದೊಡಿಗೆಯ
ತೊಡಿಸಿದರವಯವಂಗಳಿಗೆ
ಮುಡಿಸಿದರಲರ ಪೆರ್ದುರುಬಿಂಗೆ ಸಿಂಗರ
ವಡಿಸಿದರು ಬಾಣನಂದನೆಯ ೬

ಶುಭ್ರ ವಸ್ತ್ರಗಳನ್ನು ಉಡಿಸಿದರು, ಅವಯವಗಳಿಗೆ ರತ್ನದೊಡವೆಯನ್ನು ತೊಡಿಸಿದರು, ದೊಡ್ಡ ತುರುಬಿಗೆ ಹೂವನ್ನು ಮುಡಿಸಿದರು, ಬಾಣನಂದನೆಯನ್ನು ಸಿಂಗರಗೊಳಿಸಿದರು.

ಸಡಗರಿಸಿದರು ಬಾಣಜೆಯ ಹರ್ಮ್ಯಾದಿ ರಂಗು
ಪಡೆದ ಮಾಣಿಕ್ಯ ಮೆಯ್ವೆಳಗ
ಸೊಡರೇಳ್ಗೆಯ ಹೊನ್ನ ಕಳಸಂಗಳಾಕಾಶ
ವೆಡೆಯಲ್ಲಿ ಜಗಜಗಿಸುತಿರಲು ೭

ದೀಪದೇಳ್ಗೆಯ ಹೊನ್ನ ಕಲಶಗಳು ಆಕಾಶದೆಡೆಯಲ್ಲಿ ಜಗಜಗಿಸುತಿರಲು, ಬಾಣಜೆಯ(ಉಷೆ) ರಂಗೇರಿದ ಮೈಬೆಳಗನ್ನು ಕಂಡು ಸಡಗರಿಸಿದರು.

ಲೋಕೋನ್ನತ ಮೇರುಶಿಖರದಿ ವಿದಿತ ಕಾ
ರ್ತೀಕ ಪೌರ್ಣಮಿಯ ರಾತ್ರಿಯಲಿ
ಶ್ರೀಕಾಂತಗಮಳ ಜ್ಯೋತಿ ಪೂಜೆಗೆಯ್ದಂತೆ
ಸಾಕಾರವಾದುದು ಸೌಧ ೮

ಲೋಕೋನ್ನತವಾದ ಮೇರು ಶಿಬಿರದಲ್ಲಿ ಕಾರ್ತಿಕ ಮಾಸದ ಹುಣ್ಣಿಮೆಯ ರಾತ್ರಿಯಲ್ಲಿ ಶ್ರೀಹರಿಗೆ ನಿರ್ಮಲವಾದ ಜ್ಯೋತಿ ಪೂಜೆ ಮಾಡಿದಂತೆ ಸೌಧ ಸಾಕಾರಗೊಂಡಿತು.

ಲೇಸಾದ ಸೌಧ ಸಿಂಗರವನೀಕ್ಷಿಸಿ ಪರಿ
ತೋಷದಿ ತನ್ನ ಚಿತ್ರ ಪಟವ
ತಾ ಸಾವರಿಸಿಕೊಂಡು ಸಖಿಗಿತ್ತಳು ಜೀವಿ
ತೇಶಗೆ ತೋರಿಸಲೋಸ್ಕರ ೯

ಸೌಧದ ಶೃಂಗಾರವನ್ನು ಈಕ್ಷಿಸಿ ಸಂತೋಷಗೊಂಡು, ತನ್ನ ಜೀವಿತೇಶ್ವರನಿಗೆ ತೋರಿಸಲೋಸ್ಕರ ತನ್ನ ಚಿತ್ರಪಟವನ್ನು ಸಾವರಿಸಿಕೊಂಡು ಕೊಟ್ಟಳು.

ಇದ ನಿಟ್ಟಿಸುತಿರ್ದಡೆ ಕಾಮಶರಂಗಳು
ಹೃದಯದಿ ಮೊಗದೋರವಿನ್ನು
ಸುದತಿ ನಿನ್ನ ಚಿತ್ರಪಟವ ಕೊಂಡೊಯ್ದು ತೋ
ರದ ಮುನ್ನ ಮರುಳ್ಗೊಂಬನು ೧೦

ಇದನ್ನು ನೋಡುತ್ತಿದ್ದರೆ ಹೃದಯದಲ್ಲಿ ಕಾಮಶರಗಳು ಮೊಗದೋರುವುದಿಲ್ಲ. ಗೆಳತಿ, ನಿನ್ನ ಚಿತ್ರಪಟವನ್ನು ಕೊಂಡೊಯ್ದು ತೋರದ ಮುನ್ನ ಖಂಡಿತ ಮರುಳಗೊಳ್ಳುವನು.

ಅರ್ಧರಾತ್ರಿಯ ಹೊತ್ತಿನೊಳಗಾಗಿ ಚೆಲುವ
ಎರ್ದೆಯನ್ನನ ತರುವೆನೆಂದು
ನಿರ್ಧರವಾಗಿ ನಂಬುಗೆಯಿತ್ತು ಬೀಳುಕೊಂ
ಡೆರ್ದಳು ಕೇಳಾಯತಾಕ್ಷಿ ೧೧

ನಡುರಾತ್ರಿಯ ಹೊತ್ತಿನೊಳಗಾಗಿ ನಿನ್ನ ಚಲುವ ಮನದನ್ನನನ್ನು ಕರೆತರುವೆನೆಂದು ಬಲವಾದ ನಂಬುಗೆಯ ಮಾತಾಡಿ ಬೀಳುಕೊಂಡು ಹೊರಟಳು.

ಕರೆದಳು ಕಗ್ಗತ್ತಲೆಯ ಕೌಳಿಕವ ಕ
ಣ್ದೆರೆದಳಜಾಂಡ ಮಂಡಲಕೆ
ಮುರಿದಳು ಜನರ ಕಣ್ಮನವನಾಗಸದಲಿ
ಮೆರೆದಳು ಪೆಣ್ವಕ್ಕಿಯಂತೆ ೧೨

ಕಗ್ಗತ್ತಲೆಯ ಮಾಟವನ್ನು ನಿಬಿಡವಾಗಿ ಹರಡಿದಳು. ಬ್ರಹ್ಮಾಂಡ ಮಂಡಲಕ್ಕೆ ತನ್ನ ಕಣ್ಣುಗಳನ್ನು ತೆರೆದಳು. ಜನರ ಕಣ್ಮನಗಳನ್ನು ಮುರಿದು ತಾನು ಹೆಣ್ಣುಹಕ್ಕಿಯಂತೆ ಆಕಾಶದಲ್ಲಿ ಮೆರೆದಳು.

ದೂರೀಕೃತ ಮಾರ್ಗವನಂತರಿಕ್ಷದಿ
ತೀರಿಸಿಯಾಕ್ಷಣದಲ್ಲಿ
ದ್ವಾರಕಿ ಬಹಿರ್ಭಾಗದೊಳಿಳಿದಾಗ ಕೈ
ವಾರಿಸಿದಳು ಪಟ್ಟಣವನು ೧೩

ದೂರದ ಮಾರ್ಗವನ್ನು ಅಂತರಿಕ್ಷದಲ್ಲಿ ಮುಕ್ತಾಯಗೊಳಿಸಿ, ಆ ಕ್ಷಣದಲ್ಲಿ ದ್ವಾರಕಿಯ ಹೊರಭಾಗದಲ್ಲಿಳಿದು ಪಟ್ಟಣವನ್ನು ಹೊಗಳಿದಳು.

ಅಂಟಿಕೊಂಡಿದೆ ಸಿರಿವೆತ್ತು ಪೌರೋಪ
ಕಂಠದಿ ಮೆರೆವ ಸಾಗರವ
ದಾಂಟಲಚ್ಚರಿ ಕೃಷ್ಣನ ದ್ವಿತೀಯ ವೈ
ಕುಂಠವಿದೆಂದು ನುಡಿಸಿದಳು ೧೪

ಸಿರಿವೆತ್ತ ಪುರದ ಕೊರಳ ಬಳಿಯೇ ಅಂಟಿಕೊಂಡಂತಿರುವ ಸಾಗರವನ್ನು ದಾಟಲು ಅಚ್ಚರಿಯಾಗುವುದು ಸಹಜ. ಇದು ಕೃಷ್ಣನ ಎರಡನೆಯ ವೈಕುಂಠವೆಂದು ಸ್ತುತಿಸಿದಳು.

ಉರಿವ ಭಾಸ್ಕರ ಕೋಟಿ ತೇಜದಿ ಪೊರಸುತ್ತಿ
ಪರಿವ ಚಕ್ರವ ನುತಿಗೆಯ್ದು
ತುರಿಯದಿಂದೊಳಪೊಕ್ಕಳು ಕಾಮದೇವನ ಮಗ
ನಿರುವ ಶಯ್ಯಾಗೃಹದೆಡೆಗೆ ೧೫

ಪುರದ ಹೊರಸುತ್ತಿನಲ್ಲಿ ಉರಿಯುವ ಕೋಟಿ ಸೂರ್ಯರ ತೇಜಸ್ಸಿನಿಂದ ಸುತ್ತುವ ಚಕ್ರವನ್ನು ಸ್ತೋತ್ರ ಮಾಡಿ, ತರಾತುರಿಯಿಂದ ಒಳಕ್ಕೆ ಪ್ರವೇಶಿಸಿದಳು– ಕಾಮನ ಮಗ ಅನಿರುದ್ಧ ಮಲಗಿರುವ ಶಯ್ಯಾಗೃಹದೆಡೆಗೆ

ಅಂಗಜನಾತ್ಮಸಂಭವನ ಮಂಚದ ಸುತ್ತ
ಹೆಂಗಳ ಸಂದೋಹವಿರಲು
ಕಂಗೊಳಿಸುವ ಮೂರ್ಛೆಯ ಕವಿಸಿದಳಾಗ
ತುಂಗ ಪಯೋಧರೆ ನಗುತ ೧೬

ಅವನ ಮಂಚದ ಸುತ್ತ ಕಾವಲು ಕಾಯುವ ಹೆಣ್ಣುಗಳ ಸಮೂಹವಿರುವುದನ್ನು ಕಂಡು, ಕೂಡಲೇ ಅವರಿಗೆ ಮೂರ್ಛೆಯನ್ನು ಬರಿಸಿದಳು, ಮಾಯೆಯನ್ನು ಕವಿಸಿದಳು.

ತೊಡೆಯ ಪೊಯ್ದೆಬ್ಬಿಸಿ ಬೆಸಗೊಂಡಳಂಗನೆ
ಪೊಡೆಯಲರನ ಮೊಮ್ಮಗನನು
ಒಡೆಯ ಪೇಳ್ನಿನಗೇನು ದುಗಡವೆನಲು ಪಿಂ
ಗಡೆಯ ಸುದ್ದಿಯನುಸುರಿದನು ೧೭

ಕಮಲನಾಭನ ಮೊಮ್ಮಗನ ತೊಡೆಯನ್ನು ಬಡಿದು, ಎಬ್ಬಿಸಿ, ಒಡೆಯ ನಿನ್ನ ದುಗಡುಕ್ಕೆ ಕಾರಣವೇನು ಎಂದು ವಿಚಾರಿಸಲು ಅವನು ಹಿಂದೆ ಜರುಗಿದ ಘಟನೆಯನ್ನು ಹೇಳಿದನು.

ಒಂದಿನ ಪರಮ ಸುಂದರಿಯೆನ್ನ ಕನಸಿನೊಳು
ಸಂಧಿಸಿ ರತಿಸುಖವಡೆದಳು
ಅಂದಿನಿಂದವಳ ಕಾಣದೆ ವಿರಹವನಾಂತು
ಕಂದಿದೆ ಕಮಲಾಕ್ಷಿ ಕೇಳು ೧೮

ಒಂದು ದಿವಸ ಪರಮಸುಂದರಿಯೊಬ್ಬಳು ನನ್ನ ಕನಸಿನಲ್ಲಿ ಬಂದು ರತಿಸುಖವನ್ನು ತಾನೂ ಪಡೆದು ನನಗೂ ನೀಡಿದಳು. ಅಂದಿನಿಂದ ಅವಳನ್ನು ಕಾಣದೆ ವಿರಹದಿಂದ ಬಡವಾದೆ ಎಂದನು.

ಪಾಪಿ ದೊರೆಯೆ ಕೇಳು ನೀನೀ ವಿರಹ ಸಂ
ತಾಪದಿ ದುಃಖಿಸಲೇಕೆ
ಪೋಪೆವೇಳವಳಿದ್ದ ಬಳಿಗೆಂದು ಸಕಲ ಕ
ಲಾಪನನೊಡಂಬಡಿಸಿದಳು ೧೯

ನೀನು ಈ ವಿರಹದ ಬೇಗೆಯಲ್ಲಿ ಬೇಯುವುದೇಕೆ? ನೋಯುವುದೇಕೆ?

ಅವಳಿರುವ ಜಾಗಕ್ಕೆ ಹೋಗೋಣ ಎದ್ದೇಳು ಎಂದು ಅವನನ್ನು ಒಡಂಬಡಿಸಿದಳು, ಸಡಗರಗೊಳ್ಳುವಂತೆ ಮಾಡಿದಳು.

ಅವಳೆಲ್ಲಿ ನಾನೆಲ್ಲಿ ನೀನಾವ ಊರೆಂದು
ವಿವರವ ಬೆಸಗೊಳ್ಳಲಾಗಿ
ಕುವರಂಗೆ ವಿಸ್ತರಿಸಿದಳು ತಾನೈತಂದ
ವ್ಯವಹಾರ ಸ್ಥಿತಿಯನೆಲ್ಲವನು ೨೦

ಅವಳೆಲ್ಲಿ ?ನಾನೆಲ್ಲಿ? ನೀನಾವ ಊರೆಂದು ವಿವರವನ್ನು ಕೇಳಿದಾಗ, ಆ ಕುವರನಿಗೆ ತಾನಿಲ್ಲಿಗೆ ಬಂದ ಎಲ್ಲ ಉದ್ದೇಶ ವಿವರವನ್ನು ಬಿತ್ತರಿಸಿದಳು.

ಬಾಣಜೆ ನಿನ್ನ ಮೆಚ್ಚಿದಳಾಯಕನಿಗೆ
ಪ್ರಾಣ ಸ್ನೇಹಿತೆ ನಾ ನಿನ್ನ
ಕಾಣಲೋಸುಗ ಚಿತ್ರಪಟವ ತಂದೆನು ಸುಪ್ರ
ವೀಣ ನೋಡೆಂದು ತೋರಿದಳು ೨೧

ನಿನ್ನನ್ನು ಮೋಹಿಸಿ ರತಿಸುಖವನ್ನು ಕೊಟ್ಟು ಪಡೆದವಳು ಬಾಣನಂದನೆ, ನನ್ನ ಗೆಳತಿ. ನಿನ್ನ ನೋಡಲೋಸ್ಕರ ಅವಳ ಚಿತ್ರಪಟವನ್ನು ತಂದಿದ್ದೇನೆ ನೋಡು ಎಂದು ತೋರಿಸಿದಳು.

ಕಂಡನು ಕಮಲಾಯತಾಕ್ಷಿಯ ರೂಹನಪ್ಪಿ
ಕೊಂಡನು ಸಿರಿಯುರಸ್ಥಳದಿ
ತುಂಡವನಿಕ್ಕಿ ನುಣ್ದುಟಿಯ ಪಾರಿವದಂತೆ
ಮುಂಡಾಡಿದನರ್ತಿಯಲಿ ೨೨

ತನ್ನ ಮನದನ್ನೆಯನ್ನು ಕಂಡು ತನ್ನ ವಕ್ಷಸ್ಥಲದಲ್ಲಿಟ್ಟು ಅಪ್ಪಿಕೊಂಡನು. ಪಾರಿವಾಳದಂತೆ ತನ್ನ ತುಟಿಯ ಅವಳ ತುಟಿಗಿಕ್ಕಿ ಮುದ್ದಾಡಿದನು.

ದಿಟವಿದು ಮತ್ಪ್ರಾಣಕಾಂತೆಯ ತನು ಚಿತ್ರ
ಪಟವೆಂದು ನಿನ್ನ ನಂಬಿದೆನು
ಘಟ ಬೀಳಲವಳಿದ್ದ ಬಳಿಗೆ ಬಂದಪೆನೆಂದು
ಲಟಕಟಿಸಿದನಾ ಕುವರ ೨೩

ದಿಟವಾಗಿಯೂ ಇದು ನನ್ನ ಪ್ರಾಣಪ್ರಿಯೆಯ ಚಿತ್ರಪಟ. ಆದ್ದರಿಂದ ನಿನ್ನನ್ನು ಅನಾಮತ್ತು ನಂಬಿದೆನು. ನನ್ನ ಘಟ ಬಿದ್ದರೂ ಸಮನೆ, ಅವಳಿದ್ದಲ್ಲಿಗೆ ಬಂದೇ ತೀರುವೆನೆಂದು ಕಾಲು ಹೊರಟ ಹಸುವಿನಂತೆ ಲಟಕಟಿಸಿದನು.

ಹುಣ್ಣಿಮೆಯಾಳ್ದನ ಜಾಮಾತಸುತ ಚಿತ್ರ
ಪೆಣ್ಣ ಕಂಡಿನಿತು ಭ್ರಮಿಸಿದೆ
ತಿಣ್ಣ ಜವ್ವನವೆತ್ತ ಕೆಳದಿಯನು ನೀನು
ಕಣ್ಣಾರೆ ಕಂಡರಿನ್ನೆಂತೂ ೨೪

ಚಿತ್ರದ ಹೆಣ್ಣನ್ನು ಕಂಡು ಇಷ್ಟೊಂದು ಭ್ರಮೆಗೊಳಗಾದೆ. ಕಟ್ಟರೆಯದ ಕನ್ನೆಯನ್ನು ಕಣ್ಣಾರೆ ಕಂಡರೆ ಇನ್ನೆಷ್ಟು ಭ್ರಮಾಲೋಕದಲ್ಲಿ ತೇಲುವೆ?

ವಿಷಯಾತುರಂಗೆ ವಿವೇಕವಿಲ್ಲೆಂಬುದು
ಪುಸಿಯಲ್ಲ ಮಾಯಾವಿ ನುಡಿದ
ನಸೆವಾತಿಗೆ ನಿಶ್ಚಯಸಿದ ಪಯಣವ
ನುಷೆಯ ತಾತ್ಪರ್ಯದುಬ್ಬಿನಲಿ ೨೫

ಕಾಮಾತುರನಿಗೆ ವಿವೇಕ ಇರುವುದಿಲ್ಲ ಎಂಬುದು ಸುಳ್ಳಲ್ಲ. ಮಾಯಾವಿ ಚಿತ್ರಲೇಖೆ ನುಡಿದ ಬೆದೆನುಡಿಗೆ ಮಾರುಹೋಗಿ ಉಷೆಯ ಮೇಲಿನ ಒಲವಿನ ಉದ್ವೇಗದಲ್ಲಿ ಪಯಣವನ್ನು ನಿಶ್ಚಯಿಸಿದನು.

ಸಂತಸವಡೆದು ತತ್ಕುವರನ ಮೂರ್ತಿಯ
ನಾಂತಳು ಬೆನ್ನ ಭಾಗದಲಿ
ಮುಂತಣ ಕಾರ್ಯ ಸಿದ್ಧಿಸಿತೆಂದು ಮಾಯಾ
ಕಾಂತೆ ಖೇಚರಕೆ ಹಾರಿದಳು ೨೬

ಸಂತೋಷದಿಂದ ಆ ಕುಮಾರನನ್ನು ಬೆನ್ನಮೇಲೆ 'ಕೂಸುಮರಿ'ಯಂತೆ ಮಾಡಿಕೊಂಡು ಮುಂದಿನ ಕಾರ್ಯ ಸುಗಮವಾಯಿತೆಂದು ಆಕಾಶಕ್ಕೆ ಹಾರಿದಳು.

ಪವನವೇಗವ ಕೀಳ್ಪಡಿಸಿ ದೂವಾಳಿಪ
ಜವಗಾತಿಯ ಬೆನ್ನೊಳಿರ್ದ
ಕುವರ ಕಂಗೆಟ್ಟು ಬಿದ್ದಪೆನೆಂದು ತೆಕ್ಕೆಗೊಂ
ಡವಳ ಬಿಣ್ಮೊಲೆಯ ಬಲ್ಪಿಡಿದ ೨೭

ವಾಯುವೇಗವನ್ನು ಮೀರಿ ಓಟ ಓಡುವ ವೇಗಗಾತಿಯ ಬೆನ್ನ ಮೇಲಿದ್ದ ಕುವರ ಕೆಳಗೆ ಬಿದ್ದೇನೆಂದು ಕಂಗೆಟ್ಟು ಕಂಕುಳ ಸಂದಿ ಕೈಯಿಕ್ಕಿ ಅವಳ ಬಿಣ್ಮೊಲೆಯನ್ನು ಬಲವಾಗಿ ಹಿಡಿದುಕೊಂಡ.

ಮುಟ್ಟಿದೊಡಾಕ್ಷಣ ತನುರೋಮಗಳು ಗುಡಿ
ಗಟ್ಟಿ ನಿಂತವು ಪುಳಕದಲಿ
ಮುಟ್ಟಿಯಲಿ ಹಿಡಿದೆದೆಯು ಅದಿರದಿರಲು ಮನದ
ಗಟ್ಟಿತನದಲಿ ತೆರಳಿದಳು ೨೮

ಮೊಲೆಗಳನ್ನು ಮುಟ್ಟಿದ ತಕ್ಷಣ ಪುಳಕದಿಂದ ಮೈಗೂದಲು ನೆಟ್ಟಗೆ ನಿಂತವು. ಮುಟ್ಟಿ(<ಮುಷ್ಟಿ)ಯಲ್ಲಿ ಹಿಡಿದೆದೆಯು ಅದಿರದಿರಲು ಮನದ ಗಟ್ಟಿತನದಲ್ಲಿ ತೆರಳಿದಳು.

ನೇಸರ ಬೊಟ್ಟಿಟ್ಟು ಕೃಷ್ಣ ಜೀಮೂತವಾ
ಕಾಶದಿ ತೆರಳಿ ಬರ್ಪಂತೆ
ಪೂಸರಳಾತ್ಮಸಂಭವನ ತಾಳ್ದೈತಂದ
ಳಸುರ ವನಿತೆ ಖೇಚರದಲಿ ೨೯

ಸೂರ್ಯನ ಬೊಟ್ಟಿಟ್ಟುಕೊಂಡು ಕಾರ್ಮೋಡ ಆಕಾಶದಲ್ಲಿ ಬರುವಂತೆ ಹೂಬಾಣನ ಮಗನನ್ನು ಬೆನ್ನೊಳಾಂತು ಆಕಾಶಮಾರ್ಗದಲ್ಲಿ ಅಸುರವನಿತೆ ಬಂದಳು.

ರಕ್ಕಸ ಭೂತ ಭೇತಾಳವಡ್ಡೈಸಲು
ಸಿಕ್ಕದೆಯೆ ಶೋಣಿತಪುರಕೆ
ಗಕ್ಕನೆ ಬಂದು ತತ್ಕುವರಿಯ ಹರ್ಮ್ಯವ
ಹೊಕ್ಕಳನಿರುದ್ಧ ಸಮೇತ ೩೦

ರಾಕ್ಷಸ ಭೂತ ಭೇತಾಳಗಳು ಅಡ್ಡ ಹಾಕಿದರೂ ಸಿಕ್ಕದೆ ಗಕ್ಕನೆ ಶೋಣಿತಪುರದ ಉಷೆಯ ಮಂದಿರವನ್ನು ಹೊಕ್ಕಳು– ಅನಿರುದ್ಧನ ಸಮೇತ.

ಇದೆ ಬಂದೆನರ್ಧ ರಾತ್ರಿ ಹೊತ್ತಲಿ ಕಲಾ
ವಿದ ಕಂತು ನಂದನ ಸಹಿತ

ವಿಧುಗೆರೆತುಟಿವೆಣ್ಗಳರಸಿ ಕೇಳೆಂದು ಪೇ
ಳಿದಳೊಡತಿಯ ಕೂಡೆ ಗೆಳತಿ ೩೧

ಅರ್ಧರಾತ್ರಿಗೆ ಸರಿಯಾಗಿ ಈಗತಾನೇ ಮನ್ಮಥ ನಂದನ ಸಮೇತ ಬಂದೆನು. ರೇಖಾಚಂದ್ರ ತುಟಿಯ ಸುಂದರಿ ಕೇಳೆಂದು ತನ್ನೊಡತಿಗೆ ಹೇಳಿದಳು.

ಎಂದರಾಯಕನ ಮಾತಿಗೆ ಮೆಚ್ಚಿ ತಾನಿಟ್ಟ
ಹೊಂದೊಡವಿತ್ತು ಕುಸ್ತರಿಸಿ
ಬಂದವರುಗಳೆಲ್ಲಿ ತೋರೆಂದು ಪರಮಾ
ನಂದದಲಿ ಹಿಗ್ಗಿದಳವಳು ೩೨

ಆಕೆಯ ಮಾತಿಗೆ ಮೆಚ್ಚಿ ತಾನು ತೊಟ್ಟಿದ್ದ ಹೊಂದೊಡಿಗೆಯನ್ನು ಕೊಟ್ಟು ಉಪಚರಿಸಿ, ಬಂದವರೆಲ್ಲಿ ಇದ್ದಾರೆ ತೋರೆಂದು ಪರಮಾನಂದದಲ್ಲಿ ಚಂಚಲಾಕ್ಷಿಯಾದಳು.

ಅಕಳಂಕ ಜ್ಯೋತಿರ್ಮಯ ರತ್ನ ಹರ್ಮ್ಯದ
ಮುಖಶಾಲೆಯೊಳು ನಿಂದಿಹನು
ವಿಕಳತೆ ಬೇಡ ಬಂದೊಳಪೊಕ್ಕ ಅಭಿನವ
ಮಕರ ಕೇತನನ ನೋಡವ್ವ ೩೩

ಜ್ಯೋತಿರ್ಮಯ ರತ್ನಸೌಧದ ಮುಖಶಾಲೆ (ಮೊಗಸಾಲೆ, ಪಡಸಾಲೆ)ಯಲ್ಲಿ ನಿಂತಿದ್ದಾನೆ, ವಿಕಳ ಮನಸ್ಕಳಾಗಬೇಡ, ಒಳಗೆ ಪ್ರವೇಶಿಸಿದ ಅಭಿನವ ಮನ್ಮಥನನ್ನು ನೋಡವ್ವ.

ಅಚ್ಚರಿವಡೆದ ಬೆನ್ನಿಗ ಬಂದ ಕೊಂಡಾಡ
ಲೊಚ್ಚೇರೆ ನಾಲಗೆಗರಿದು
ಸ್ವಚ್ಛದೊಳಿದಿರ್ಗೊಳ್ಳಬೇಕೆಂದು ಪೇಳ
ಲುಚ್ಚವಿಸಿದಳಂಬುಜಾಕ್ಷಿ ೩೪

ಸೋಜಿಗೊಳಿಸುವ ಸುಂದರಾಂಗನನ್ನು ಕೊಂಡಾಡಲು ಬಚ್ಚೇರೆ (<ಬರ್+ಸೇರೆ=ಸ್ಯಾರೆ=ಅಂಗೈಅಗಲ) ನಾಲಗೆಗೆ ಅಸಾಧ್ಯ. ಸ್ವಚ್ಛತೆಯಿಂದ ಎದುರುಗೊಳ್ಳೆಂದು ಹೇಳಿದಾಗ ಉಷಾದೇವಿ ಸಡಗರ ಸಂಭ್ರಮಗೊಂಡಳು.

ತೋರ ಹೊಂದಂಬುಗೆಯಲಿ ತುಂಬಿತಂದ ಪ
ನ್ನೀರಿಂದ ಕಾಲ್ಗಳ ತೊಳೆದು
ಮಾರಕುಮಾರ ಮಂತ್ರೀಶ ಸುತೆಗೆ ರನ್ನ
ದಾರತಿಗಳನು ಬೆಳಗಿದಳು ೩೫

ದೊಡ್ಡ ಚಿನ್ನದ ಚೊಂಬಿನಲ್ಲಿ ತುಂಬಿಕೊಂಡು ತಂದ ಪನ್ನೀರಿನಲ್ಲಿ ಕಾಲ್ಗಳ ತೊಳೆದು, ಮನ್ಮಥಪುತ್ರ ಹಾಗೂ ಮಂತ್ರಿಸುತೆಗೆ ರತ್ನದಾರತಿಗಳನ್ನು ಬೆಳಗಿದಳು.

ಮಲ್ಲಿಗೆಯರಳಂತ ಬೆಳ್ಗೂಳು ಬಹುವರ್ಣ
ದಲ್ಲಿ ರಂಜಿಪ ಬಣ್ಣಗೊಳು
ಬೆಳ್ಳಿ ಪೊಂಬರಿವಾಣಗಳಿಂದ ಇಳಿದೆಗೆದು
ಚೆಲ್ಲಿಸಿದಳು ದೆಸೆದೆಸೆಗೆ ೩೬

ಮಲ್ಲಿಗೆ ಹೂವಿನಂತೆ ಬಿಡಿಬಿಡಿಯಾದ ಬಿಳಿಯನ್ನ, ಬಣ್ಣ ಬಣ್ಣದ ಅನ್ನಗಳನ್ನು ತುಂಬಿದ ಚಿನ್ನದ ಹರಿವಾಣಗಳನ್ನು ಇಳಿದೆಗೆದು (ದೃಷ್ಟಿ ಪರಿಹಾರಕ್ಕೆಂದು ನೀವಳಿಸಿ) ದಿಕ್ಕುದಿಕ್ಕಿಗೆ ಚೆಲ್ಲಿಸಿದಳು.

ಮಾಣಿಕ ಸೊಡರ್ವೆಳಗುಗಳಿಂದ ಸಾರಂಗ
ಪಾಣಿಯ ಸುತನ ಸುತನಜೊತೆ
ಶೋಣಿತಪುರದರಗುವರಿಯ ಕಣ್ಗೆ ಪೊಸತೆನೆ
ಕಾಣಿಸಿದಳು ಚಿತ್ರಲೇಖೆ ೩೭

ರತ್ನಗಳ ಜ್ಯೋತಿ ಪ್ರಕಾಶದಿಂದ ಸಾರಂಗ ಪಾಣಿಯ (ಬಹುವರ್ಣದ ಹಸ್ತವುಳ್ಳ ಕೃಷ್ಣನ) ಮೊಮ್ಮಗನಾದ(ಕೃಷ್ಣ–ಮನ್ಮಥ–ಅನಿರುದ್ಧ) ಅನಿರುದ್ಧನ ಜೊತೆ ಚಿತ್ರಲೇಖೆ, ಅರಗುವರಿಯ (ಉಷೆಯ) ಕಣ್ಣಿಗೆ ಹೊಸದಾಗಿ ಕಾಣಿಸಿದಳು.

ನೋಡಿದಳಾತ್ಮೇಶ್ವರನವಯವದಲ್ಲಿ
ಮೂಡಿರ್ದ ವರಸೌಂದರ್ಯದಿ
ಖೋಡಿ ಎಳ್ಳನಿತಿಲ್ಲದಿರಲು ಕುವರಿ ಮುಂ
ಡಾಡಿದಳು ಚುಟುಕಾಗ್ರವಿಡಿದು ೩೮

ಆತ್ಮೇಶ್ವರನ ಸಮಪ್ರಮಾಣಬದ್ಧ ಸಾವಯವ ಸಂಬಂಧದಿಂದ ಮೂಡಿದ ಸೌಂದರ್ಯದಲ್ಲಿ ಎಳ್ಳಷ್ಟೂ ದೋಷವಿಲ್ಲದ್ದನ್ನು ಕಂಡು ಉಷಾದೇವಿ ಅವನ ಗಲ್ಲವನ್ನು ಹಿಡಿದು ಮುದ್ದಾಡಿದಳು.

ತರಹರಿಸಿದಳು ಕಾಮಿನಿ ಕಂತುಲೀಲೆಗೆ
ಪರವಶವಾಂತನಾ ಕುವರ
ಉರವಣಿಸಿತು ಲಜ್ಜೆ ಕೆಳದಿಯರ ಕಂಡು ಕಾ
ತುರ ಕಟ್ಟೊಡೆದುದಿರ್ವರಿಗೆ ೩೯

ಕೆರಳಿದ ಕಾಮದ ಕಾಮಿನಿ ಚಡಪಡಿಸಿದಳು ಮನ್ಮಥಲೀಲೆಗೆ ಪರವಶವಾದನು ಅನಿರುದ್ಧ. ಇಬ್ಬರು ಗೆಳತಿಯರನ್ನು ಕಂಡು ಲಜ್ಜೆ ರಭಸಗೊಂಡಿತು. ಆತುರಕಾತುರ ಇಬ್ಬರಲ್ಲೂ ಕೊತಕೊತನೆ ಕುದಿಯತೊಡಗಿತು, ಕೋಡಿ ಬೀಳತೊಡಗಿತು.

ಎರೆಯ ಕೇಳು ನಿನ್ನ ವಿಯೋಗ ಸಂತಾಪದ
ತೊರೆಯೊಳು ಮುಳುಗಿರ್ದನೆನ್ನ
ಮರೆಯದೆ ತಡಿಗೆ ಸಾರ್ಚಿದಳನೀಕ್ಷಿಪುದೆಂದು
ನೆರೆಜಾಣೆ ಸಖಿಯ ತೋರಿದಳು ೪೦

ಎನ್ನ ಪ್ರಾಣದೊಡೆಯ ಕೇಳು, ನಿನ್ನ ವಿಯೋಗ ದುಃಖದ ತೊರೆಯಲ್ಲಿ ಮುಳುಗಿದ್ದ ನನ್ನನ್ನು ದಡಕ್ಕೆ ತಂದ ಜಾಣೆಯನ್ನು ನೋಡೆಂದು ತನ್ನ ಗೆಳತಿ ಚಿತ್ರಲೇಖೆಯನ್ನು ತೋರಿದಳು.

ಮಸ್ತಕ ಮೊದಲಾದ ದಿವ್ಯದೇಹವ ಹೊತ್ತು
ವಿಸ್ತರಿಸಿದ ಪಾದಯುಗವ
ಕುಸ್ತರಿಸುವರುಂಟೆ ಕುವರಿ ಕೇಳು ನಿನ್ನಯ
ಹಸ್ತಾಂಘ್ರಿ ಪದ್ಮವಾನ್ಯೆಸೆ ೪೧

ಆಗ ಚಿತ್ರಲೇಖೆ 'ತಲೆ ಮೊದಲಾದ ದಿವ್ಯ ದೇಹವನ್ನು ಹೊತ್ತ ಪಾದದ್ವಯವನ್ನು ಉಪಚರಿಸುವರುಂಟೆ?ನಿನ್ನ ಪಾಣಿಪಾದ ಪದ್ಮ ನಾನಲ್ಲವೆ?

ಚಂಡವಿಕ್ರಮ ವಿಹಗೇಶನೆಂದೆನಿಸುವ
ಗಂಡಭೇರುಂಡನ ತೆರದಿ
ತುಂಡಗಳೆರಡಾಗಲೊಡಲೊಂದು ನಮ್ಮಿ
ತ್ತಂಡಕೆ ಭೇದವೆಲ್ಲಿಯದು ೪೨

ಪ್ರಚಂಡ ಪರಾಕ್ರಮಿಯಾದ ಪಕ್ಷಿರಾಜನೆನಿಸುವ ಗಂಡಭೇರುಂಡನಿಗೆ ತುಂಡ(ಕೊಕ್ಕು ಅರ್ಥಾತ್ ತಲೆ)ಗಳು ಎರಡಾದರೂ ಒಡಲೊಂದೆ. ಅದೇ

ರೀತಿ ನಮ್ಮಿಬ್ಬರಿಗೂ ಭೇದವಿಲ್ಲ ಎಂದಳು ಉಷಾದೇವಿ.

ಉತ್ತಮ ನೀತಿಶಾಸ್ತ್ರಂಗಳಿಗೆ ತೊಡಗುವ
ಹೊತ್ತಲ್ಲ ಹೊಂಬಣ್ಣದೊಡಲ
ವೃತ್ತಕುಚಾನ್ವಿತೆ ನೋಡೆಂದು ಕುವರಿಯ
ಚಿತ್ತವನೊಡಂಬಡಿಸಿದಳು ೪೩

ನೀತಿಶಾಸ್ತ್ರಗಳಿಗೆ ತೊಡಗುವ ಹೊತ್ತಲ್ಲಹೊಂಬಣ್ಣದೊಡಲ (ಅರಿಶಿಣಮೈ>ಹಸಿಮೈ) ನೋಡೆಂದು ಕುವರಿಯನ್ನು ಒಡಂಬಡಿಸಿದಳು.

ಸಖಿಶಿರೋಮಣಿ ನೆಗಳ್ದಳು ತೀವ್ರದಿ ಶಿವ
ಲಿಖಿತ ಪಂಚಾಂಗ ಪ್ರಶ್ನೆಯ
ನಿಖಿಳ ಮುತ್ತಿನ ಸೇಸೆಯನಿಟ್ಟು ವರಚಂದ್ರ
ಮುಖಿಯ ಕುಳ್ಳಿರಿಸಿದಳು ಮುದದಿ ೪೪

ಗೆಳತಿ ಚಿತ್ರಲೇಖೆ ಶಿವಲಿಖಿತ ಪಂಚಾಂಗ ಪ್ರಶ್ನೆಯನ್ನು ತೀವ್ರವಾಗಿ ನಿರ್ವಹಿಸಿ, ಮುತ್ತಿನ ಸೇಸೆಯನ್ನಿಟ್ಟು ಚಂದ್ರಮುಖಿ ಉಷೆಯನ್ನು ಕೂಡಿಸಿದಳು.

ವಿದ್ಯುಕ್ತವಾಗಿ ನಾನಾ ಶಾಸ್ತ್ರಗಳ ನಿ
ಬದ್ದಿಸಿ ತನ್ನ ಸಂಕಲ್ಪ
ಸಿದ್ಧಿಸಿತೆಂದು ಗಾಂಧರ್ವ ವೈವಾಹವ
ತಿದ್ದಿದಳರಗಳಿಗೆಯಲಿ ೪೫

ವಿಧ್ಯುಕ್ತವಾಗಿ ನಾನಾ ಶಾಸ್ತ್ರಗಳನ್ನು ತುಲನೆ ಮಾಡಿ ನೋಡಿ ತನ್ನ ಸಂಕಲ್ಪ ಸಿದ್ಧಿಸಿತೆಂದು ಅರಗಳಿಗೆಯಲ್ಲಿ ಗಾಂಧರ್ವ ವಿವಾಹವನ್ನು ಮಾಡಿದಳು.

ಪಂಟಿಯ ಮಾಡಿಸಿ ಪರಮಸುಂದರಿ ಕಂಬು
ಕಂಠೆಯ ನವ್ಯ ವಸ್ತ್ರಗಳ
ಗಂಟಿಕ್ಕಿ ಕೆಳದಿಯ ಕರೆತಂದಳು ಕಾಲ
ಮಂಟಿಕೆ ಘಲಿರೆಂಬ ರವದಿ ೪೬

ಪಂಟಿ(ಊಟ)ಯನ್ನು ಮಾಡಿಸಿ, ಶಂಖದ ಕೊರಳ ಕುವರಿಯ ಹೊಸ ವಸ್ತ್ರಗಳನ್ನು ಗಂಟಿಕ್ಕಿ ಕಾಲಮಂಟಿಕೆ(ಕಾಲುಂಗುರು)ಯ ಘಲಿರ್ ಎಂಬ ಶಬ್ದದೊಡನೆ ಕರೆತಂದಳು.

ನನೆಗೋಲನಪರಾವತಾರ ಬಾಣಾಸುರ
ತನುಜೆಯ ನಿಬ್ಬಣದವರು
ವಿನಯದಿ ರತ್ನಖಚಿತ ಮಂಟಪದ ಸೆಜ್ಜೆ
ವನೆಯ ತುಂಬಿದರಳ್ತಿಯಲಿ ೪೭

ಹೂಬಾಣನ ಅಪರಾವತಾರವಾದ ಅನಿರುದ್ಧನ ಹಾಗೂ ಬಾಣಾಸುರನ ಮಗಳಾದ ಉಷಾದೇವಿಯ ನಿಬ್ಬಣದವರು ರತ್ನಖಚಿತ ಮಂಟಪದ ಶಯ್ಯಾಗೃಹವನ್ನು ತುಂಬಿದರು.

ವಜ್ಜರ ಮಂಚ ಮೃದುತಲ್ಪದಲರ್ವಾಸು
ನಿಜ್ಜರ ಕುಸುಮ ಝಲ್ಲರಿಯ
ಪಜ್ಜಳಿಸುವ ಮೌಕ್ತಿಕದ ಮೇಲ್ಗಟ್ಟಿನ
ಸಜ್ಜೆಯ ನೋಡಿ ಹಿಗ್ಗಿದನು ೪೮

ವಜ್ರ ಮಾಣಿಕ ಮಂಚ, ಮೃದುವಾದ ಹಾಸಿಗೆ, ಹೂವಿನ ಹಾಸು, ದೇವ ಕುಸುಮದ ಗೊಂಚಲು, ಪ್ರಜ್ವಲಿಸುವ ಮುತ್ತಿನ ಮೇಲ್ಕಟ್ಟು – ಇವುಗಳಿಂದ ಕೂಡಿದ ಶಯ್ಯೆಯ ಶೃಂಗಾರ ನೋಡಿ ಹಿಗ್ಗಿದನು.

ಜಾಣ ಮೆಲ್ನುಡಿಗೆ ಲಾವಕ್ಕಿ ಬಗದಾರೆ
ಜಾಣ್ವಕ್ಕಿ ಪಿಕ ಕೊಳರ್ವಕ್ಕಿ
ಏಣಸಾರಗ ಹೊಮ್ಮರೆ ಮಂಚದ ಸುತ್ತ
ಠಾಣಯವಿರಲು ನಿಟ್ಟಿಸಿದ ೪೯

ಜಾಣ ಮೃದುನುಡಿಗೆ ಲಾವಕ್ಕಿ >ಲಾವುಗೆ, ಬಗದಾರೆ(ಪಕ್ಷಿವಿಶೇಷಗಳು) ಜಾಣ್ವಕ್ಕಿ(ಗಿಳಿ) ಪಿಕ(ಕೋಗಿಲೆ) ಕೊಳರ್ವಕ್ಕಿ(ನೀರಹಕ್ಕಿ), ಏಣ(ಜಿಂಕೆ) ಸಾರಂಗ(ಜಿಂಕೆ) ಹೊಮ್ಮರೆ(ಹೊಂಬಣ್ಣದ ಜಿಂಕೆ)ಗಳು ಮಂಚದ ಸುತ್ತ ಬೀಡುಬಿಟ್ಟಿರುವುದನ್ನು ನೋಡಿದ.

ಮಿಸುನಿ ಪಂಜರದೊಳಿಗಿಹ ರಾಜಕೀರ ಮು
ದ್ದಿಸಿ ಕುವರನ ಕುಳ್ಳಿರೆನಲು
ರಸಿಕರಾಜ ವಲ್ಲಭೆಗೂಡಿ ಕೇಳ್ದು ಮಂ
ಡಿಸಿದನಾ ಮಣಿ ಮಂಚದಲಿ ೫೦

ಚಿನ್ನದ ಪಂಜರದಲ್ಲಿರುವ ಅರಗಿಳಿ, ಕುವರನನ್ನು ಕುಳ್ಳಿರು ಎನ್ನಲು, ರಸಿಕ ಅನಿರುದ್ಧ ತನ್ನ ಪ್ರಿಯತಮೆಯೊಡನೆ ಮಣಿಮಂಚದಲ್ಲಿ ಮಂಡಿಸಿದನು.

ತಂದಿರಿಸಿದರು ಕಾಲ್ದೊಳೆಯಲು ಪನ್ನೀರ
ಬಿಂದಿಗೆ ಮಣಿ ಪಾತ್ರೆಗಳನು
ಚಂದಿರಮುಖಿ ಈಂಟಲೋಸ್ಕರ ಸುಪರಿಮಳ
ವೊಂದಿದ ನೀರ ಕುಪ್ಪಿಗೆಯ ೫೧

ಕಾಲುಗಳನ್ನು ತೊಳೆಯಲು ಪನ್ನೀರ ಬಿಂದಿಗೆ ಮತ್ತು ಮಣಿ ಪಾತ್ರೆಗಳನ್ನು ತಂದಿರಿಸಿದರು. ಉಷಾದೇವಿ ಕುಡಿಯಲೋಸ್ಕರ ಪರಿಮಳಯುಕ್ತ ನೀರ ಜಾಡಿಯನ್ನು ತಂದಿರಿಸಿದರು.

ಬಿಡಿಯಲರು ಪೂಮಾಲಿಕೆ ಶೈತ್ಯ ಸೌರಭ್ಯ
ವಡೆದ ಸುಗಂಧಾನುಲೇಪ
ಪುಡಿಗಪ್ಪುರ ಜವಾದಿಗಳ ವಂಕಿಯ ತಂ
ದಡಕಿದರು ತಲೆಗಿಂಬಿನಲಿ ೫೨

ಬಿಡಿಹೂವು, ಹೂಮಾಲೆ, ತಂಪು ಕಂಪುಳ್ಳ ಸುಗಂಧದ ಅನುಲೇಪ, ಪುಡಿ ಕರ್ಪೂರ ಜವಾದಿ(ಪುನುಗು)ಗಳ ವಂಕಿ(ಭರಣಿ)ಯನ್ನು ತಲೆದೆಸೆಯಲ್ಲಿ ತಂದಡಕಿದರು.

ಫಣಿವಳ್ಳಿಯ ಪರ್ಣ ಪೂಗ ಚೂರ್ಣದಿ ಕೇ
ವಣಿಸಿರ್ದ ಕತ್ತುರಿಯ ಕಟ್ಟ
ಮಣಿಯೆನಲುರ್ದಿದ ಪೋಳ್ದಟ್ಟೆಗಳನು ಇ
ಟ್ಟಣಿಸಿದರು ತಲೆದಿಂಬಿನಲಿ ೫೩

ಫಣಿವಳ್ಳಿ (ನಾಗವಲ್ಲಿ =ವೀಳ್ಯದ ಬಳ್ಳಿ)ಯ ಎಲೆ, ಅಡಕೆ, ಸುಣ್ಣದಿಂದ ಜೋಡಿಸಿಟ್ಟ ಕಸ್ತೂರಿಯ ಕಟ್ಟನ್ನು ರತ್ನವೆಂಬಂತೆ ಉಜ್ಜಿದ ಹೋಳಿನ ತಟ್ಟೆಗಳನ್ನು ತಲೆದಿಂಬಿನ ಬಳಿ ಇಟ್ಟರು.

ರತಿಸಮಯಕೆ ಬೇಕಾದ ವಸ್ತುಗಳನು
ಅತಿ ಜತನವ ಮಾಡಿ ತಂದು
ಸತಿಪತಿಗಳ ಮಂಚದ ಸುತ್ತಲಿಂಬಿಟ್ಟು
ನುಡಿಸಿದರು ದಂಪತಿಗಳನು ೫೪

ರತಿಕ್ರೀಡಾ ಸಮಯಕ್ಕೆ ಬೇಕಾದ ವಸ್ತುಗಳನ್ನು ಬಹಳ ಮುತುವರ್ಜಿ ಮತ್ತು ಎಚ್ಚರಿಕೆಯಿಂದ ತಂದು ಸತಿಪತಿಗಳ ಮಂಚದ ಸುತ್ತ ಇಟ್ಟು ದಂಪತಿಗಳನ್ನು ಸ್ತುತಿಸಿದರು.

ಜೋಳಿ ಜೋಳಿಯಲಿ ನಾನಾ ವಿದ್ಯೆಯೇಳ್ಗೆಯ
    ಕೇಳಿಕೆಗೊಟ್ಟ ನಿಮ್ಮವನು
ನಾಳಿನ ದಿನಕೆ ಮೆಚ್ಚಿಸುವೆವೆನುತ ವಾ
    ಚಾಳಿಯರು ಬಿನ್ನವಿಸಿದರು ೫೫

ಜೋಡಿ ಜೋಡಿಯಾಗಿ ನಾನಾ ವಿದ್ಯಾಭ್ಯುದಯದ ಕೇಳಿಕೆ(ನಾಟಕ) ಆಡಿಸಲು ಕರೆಕೊಟ್ಟ ನಿಮ್ಮನ್ನು ನಾಳೆಯ ದಿನ ಮೆಚ್ಚುಸುವೆವು ಎಂದು ವಾಚಾಳಿಯರು ಬಿನ್ನವಿಸಿದರು.

ಕೆಳದಿಯರುಗಳ ಕುಸ್ತರಿಸಿ ವೀಳೆಯಗೊಟ್ಟು
    ಕಳುಹಿ ಚಿತ್ತೈಸಿದ ಬಳಿಕ
ಮೊಳೆವ ಪರಿತೋಷದಿಂದ ಅನಿರುದ್ಧ ನಿ
    ರ್ಮಳ ಮಂತ್ರಿಜೆಯ ಕೀರ್ತಿಸಿದ ೫೬

ಗೆಳತಿಯರನ್ನು ಉಪಚರಿಸಿ, ವೀಳ್ಯ ಕೊಟ್ಟು ಕಳುಹಿಸಿದ ಬಳಿಕ ಅಂಕುರಿಸಿದ ಆನಂದದಿಂದ ಅನಿರುದ್ಧ ಮಂತ್ರಿಜೆಯನ್ನು ಕೀರ್ತಿಸಿದನು.

ಅತ್ತಿಗೆಯವುದಕ್ಕನಹುದು ತಾಯಹುದಸು
    ಗುತ್ತಿಗೆಗಾತಿ ನೀನಹುದು
ಪತ್ತಿಗೆ ಪರಮಾನುಕೂಲೆ ನೀನೆಂದು ಕೈ
    ಯೆತ್ತಿ ಕೊಂಡಾಡಿದ ಕುವರ ೫೭

ಅತ್ತಿಗೆ ಎನ್ನಲೂ ಬಹುದು, ಅಕ್ಕನೆನ್ನಲೂ ಬಹುದು, ತಾಯೆನ್ನಲೂ ಬಹುದು, ಅಸು(ಪ್ರಾಣದ) ಗುತ್ತಿಗೆಗಾತಿ ಎನ್ನಬಹುದು. ಪತ್ತಿಗೆ (ಗೆಳತನಕ್ಕೆ) ಪರಮಾನುಕೂಲೆ ಎನ್ನಲೂಬಹುದು ಎಂದು ಕೈಯೆತ್ತಿ ಕೊಂಡಾಡಿದನು.

ಉಬ್ಬಾಳುವೆಂಗಳ ಜಿಹ್ವಾಗ್ರವಿ ಸುದ್ದಿ
ತುಬ್ಬದೊಲು ಮಾಡಿ ನೀ ನಮ್ಮ
ಇಬ್ಬರ ಲೇಸನೀಡೇರಿಸಬೇಕೆಂದು
ಗಬ್ಬದಲಿ ತಲೆಯ ಚಾಚಿದನು ೫೮

ಉತ್ಸಾಹದ ಆವೇಶದ ಹೆಣ್ಣುಗಳ ನಾಲಗೆಯಲ್ಲಿ ಈ ಸುದ್ದಿ ಹರಡದ ಹಾಗೆ ನೀನು ನಮ್ಮಿಬ್ಬರ ಲೇಸಿಗಾಗಿ ಶ್ರಮಿಸಬೇಕೆಂದು ಗಬ್ಬ(<ಗರ್ಭ=ಹೊಟ್ಟೆ)ದಲ್ಲಿ ತಲೆ ಚಾಚಿ ವಿನಂತಿಸಿದನು.

ಕಂಜಾಕ್ಷನ ಮೊಮ್ಮ ಕೇಳರಗಿಣಿ ವಜ್ರ
ಪಂಜರದೊಳಗಿರ್ದ ಬಳಿಕ
ಅಂಜಲಿಕೇನು ಕಾರಣ ಹೊರಬಿಗನೆಂದು
ಮಂಜರ ಕೈದುಡಕುವುದೆ ೫೯

ಕೃಷ್ಣನ ಮೊಮ್ಮಗನಾದ ಅನಿರುದ್ಧನೆ ಕೇಳು, ಅರಗಿಣಿ ವಜ್ರಪಂಜರದಲ್ಲಿ ಇದ್ದ ಬಳಿಕ ಅಂಜುವುದಕ್ಕೆ ಕಾರಣವೆಲ್ಲಿದೆ? ಪರಕೀಯನೆಂದು ಮಂಜರ(ಬೆಕ್ಕು) ಕೈಯಿಂದ ತುಡುಕಲು (ಹಿಡಿಯಲು) ಸಾಧ್ಯವೆ?

ಕೋಟಲೆಗೊಳಬೇಡ ಸುಖದಿ ಬಾಳೆಂದು ಕಿ
ರೀಟವ ಪಿಡಿದೆತ್ತಿ ಹರಸಿ
ಕೂಟಕೆ ಕುವರಿಯ ಸಾರ್ಚಿ ಪಿಂಗಿದಳು ಕ
ವಾಟಬಂಧನ ರಕ್ಷೆಗೆಯ್ದು ೬೦

ವಿನಾಕಾರಣ ಕೋಟಲೆ ಕಲ್ಪಿಸಿಕೊಳ್ಳಬೇಡ, ಸುಖದಿಂದ ರಾತ್ರಿಯನ್ನು ಕಳೆ ಎಂದು ತಲೆಯ ಮೇಲೆ ಕೈಯಿಟ್ಟು ಹರಸಿ, ರತಿಕ್ರೀಡೆಗೆ ಕುವರಿಯನ್ನು ಅವನ ಬಳಿಗೆ ಸೇರಿಸಿ, ತಾನು ಕದವನ್ನು ಮುಚ್ಚಿ ಹಿಮ್ಮೆಟ್ಟಿದಳು.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೧

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ , ಕೇಳಿದ ಜನರನ್ನು ಸೂರ್ಯ ಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

# ೩೨ ಉಷಾನಿರುದ್ದರ ಏಕಾಂತ

ಸಕಲ ಬ್ರಹ್ಮಾಂಡ ತನ್ನೊಳಗಿರ್ದುಂ ದೇ
ವಕಿ ಬಸಿರೊಳು ಪುಟ್ಟಿ ಬಂದ
ಚಕಿತ ಮಾಯಾವಿಯ ಕೂರ್ತು ಸತ್ಕೃತಿವೇಳು
ಲಿಖಿತವ ಮಾಳ್ಪೆ ಮನ್ಮನದಿ ೧

ಇಡೀ ಬ್ರಹ್ಮಾಂಡವೇ ತನ್ನೊಳಗಿದ್ದರೂ ದೇವಕಿಯ ಬಸಿರಲ್ಲಿ ಬಂದ ವಿಸ್ಮಯದ ಮಾಯಾವಿ ಕೃಷ್ಣನನ್ನು ಕುರಿತು ಸತ್ಕೃತಿ ಹೇಳು, ನನ್ನ ಮನದಲ್ಲಿ ಅದನ್ನು ಲಿಖಿತಗೊಳಿಸುತ್ತೇನೆ.

ಕೇಳಾಯಿತಾಕ್ಷಿ ಮಂತ್ರಿಜೆ ಕರೆಸಿದಳು ಕೈ
ವಾಳು ಸತ್ಪರಿಘದಿಂದೆಸೆವ
ಕಾಳ ರಕ್ಕಸವಿಂಡು ಬಂದುದು ಶೌರ್ಯ ಚ
ಡಾಳಿಸಿತು ಘಡುಘಡಿಸುತಲಿ ೨

ಕೈಯಲ್ಲಿ ಕತ್ತಿ ಹಾಗೂ ಪರಿಘ(ಆಯುಧ ವಿಶೇಷ)ವುಳ್ಳ ಕಾಳರಕ್ಕಸ ಸಮೂಹವನ್ನು ಚಿತ್ರಲೇಖೆ ಕರೆಸಿದಳು. ಬಂದ ತಕ್ಷಣ ಶೌರ್ಯ ಪ್ರತಾಪ ಘುಡುಘುಡಿಸುತ ಚಡಾಳಿಸಿತು.

ಬೆಟ್ಟಿದರ್ಬೆಟ್ಟವನುಗಿವ ಕೂರಸಿ ಬೀಸಿ
ಕುಟ್ಟಿದರು ಶೈಲ ತುಂಡಿಸುವ
ಇಟ್ಟಿ ಮುದ್ಗರ ವಂಕುಡಿ ಪಟ್ಟೆಯವಾಂತ
ಗಟ್ಟಿಮುಟ್ಟಾಳ್ಗಳೊದಗಿದರು ೩

ಬೆಟ್ಟವನ್ನು ಸೀಳುವ ಬೆಟ್ಟಿದರು(ಗಟ್ಟಿಗರು) ಕತ್ತಿ ಬೀಸಿ ಪುಡಿಗುಟ್ಟುವ ಹಾಗೂ ಶಿಲೆಯನ್ನು ತುಂಡರಿಸುವ ಈಟಿ,ಗದೆ, ವಂಕುಡಿತಿ(ಕಠಾರಿ) ಉದ್ದವಾದ ಕತ್ತಿಯನ್ನು ಹೊಂದಿರುವ ಗಟ್ಟಿಮುಟ್ಟಾದ ವೀರರು ಒದಗಿರಿದರು.

ಪಿಡಿವರು ದಿಗ್ಗಜಗಳ ಗಾವುಗುರಿಯಂತೆ
ಅಡಸಿದ ಕಡಲನೀಂಟುವರು
ಪಡಿತಳಿಸುವರು ಮೃತ್ಯುವಿನ ಹೊಟ್ಟೆಯ ಸೀಳಿ
ನಿಡುಗರುಳುಗಳ ತಿಂಬುವರು ೪

ದಿಗ್ಗಜಗಳನ್ನು ಗಾವುಗುರಿಯಂತೆ ಹಿಡಿಯುವರು, ಮೇಲೆ ಬೀಳುವ ಸಮುದ್ರವನ್ನು ಕುಡಿಯುವರು, ಮೃತ್ಯುದೇವತೆಯ ಹೊಟ್ಟೆಯನ್ನು ಕುಟ್ಟವರು. ಸೀಳಿ ನಿಡುಗರುಳುಗಳನ್ನು ತಿನ್ನುವರು

ಅಣಲಿನಲ್ಲಿ ಮಡುಗಟ್ಟಿದ ಜೋರುನೆತ್ತರು
ನೆಣ ಬಾಯೊಳು ಪೊರಮಡುವ
ಹೆಣದಿನಿ ದಡಿಗ ದೈತ್ಯರು ಹೆಣಗಳ ಕಂಡು
ನೊಣ ಹಾಯ್ಗೊಡದೆ ನುಂಗುವರು ೫

ಗಂಟಲಿನಲ್ಲಿ ಮಡುಗೊಂಡ ನೆತ್ತರು(ರಕ್ತ), ಬಾಯಿಂದ ಹೊರಸುರಿಯುವ ಕೊಬ್ಬು, ಹೆಣ ತಿನ್ನುವ ರಕ್ಕಸದಡಿಗರು  ಹೆಣಗಳ ಕಂಡು ನೊಣಗಳು ಹಾದುಬರಲು ಬಿಡದೆ ಅನಾಮತ್ತು ನುಂಗುವರು.

ಮತ್ತಾರಾದರು ತನ್ನ ಕೆಳದಿಯ ಹರ್ಮ್ಯವ
ಹತ್ತಿಳಿಯಲು  ಯತ್ನಿಸಿದರೆ
ಕತ್ತರಿಸುವುದೊಡಲ್ಗಳನೆಂದು ಕಾವಲ
ಒತ್ತುಗೈದಳು ಬಾಗಿಲಲಿ ೬

ಮತ್ತೆ ಯಾರಾದರೂ ತನ್ನ ಗೆಳತಿಯ ಸೌಧವನ್ನು ಹತ್ತಿಳಿಯಲು ಯತ್ನಿಸಿದರೆ ಅವರ ಒಡಲ(ಶರೀರ)ಗಳನ್ನು ಕತ್ತರಿಸುವುದೆಂದು ಬಾಗಿಲಲ್ಲಿ ಕಾವಲನ್ನು ಸಾಂದ್ರಗೊಳಿಸಿದಳು.

ಮರೆಯದಷ್ಟಾವಧಾನದಿ ಮಂತ್ರಿನಂದನೆ
ಪೊರಗಿರಲ್ಮಂದಿರದೊಳಗೆ
ಬೆರಗ ಬಣ್ಣಿಸುತ ಕುಮಾರಿ ಕುಮಾರಕನ
ಸೆರಗ ಬಿಡೆಂದಳರ್ತಿಯಲಿ ೭

ಚಿತ್ರಲೇಖೆ ಮರೆಯದೆ ಅಷ್ಟಾವಧಾನದಲ್ಲಿ(ಎಂಟು ಎಚ್ಚರಿಕೆ ಸ್ಮರಣೆ) ಹೊರಗಿರಲು, ಮನೆಯೊಳಗೆ ಆಶ್ಚರ್ಯದಿಂದ ಕುಮಾರಿ ಸೆರಗನ್ನು ಬಿಡು ಎಂದು ಕುಮಾರಕನನ್ನು ಪ್ರೀತಿಯಿಂದ ಒತ್ತಾಯಿಸಿದಳು.

ಒಂಟಿತನವ ತೀರ್ಕಣಿಸಿ ಮಂತ್ರಿಜೆ ತಂದು
ಗಂಟಿಕ್ಕಿದಳು ತಮ್ಮ ಸೆರಗ
ನಂಟಿನ ಮುಡಿಕೊಡಬಾರದೆಂದು ವರ ಕಂಬು
ಕಂಠೆಯನಮರ್ದಪ್ಪಿದನು ೮

ಒಂಟಿತನಕ್ಕೆ ಮಂಗಳ ಹಾಡಿ ಚಿತ್ರಲೇಖೆ ನಮ್ಮಿಬ್ಬರ ಸೆರಗನ್ನು ತಂದು ಗಂಟು ಹಾಕಿದಳು. ನಂಟಿನ ಮುಡಿ ಕೊಡಬಾರದು ಎಂದು ಶಂಖದ ಕೊರಳ ತರಳೆಯನ್ನು ಬಾಚಿ ತಬ್ಬಿಕೊಂಡನು.

ನಿಡುಗಣ್ಣರೆಮುಗಿವಂತೆ ರೋಮಾಂಚನ
ಗುಡಿಗಟ್ಟಿ ನಿರಿಗಳೆವಂತೆ
ಪಿಡಿಕೈಗಳಲಿ ಕಕ್ಕಸವೆತ್ತ ಬಲ್ಮೊಲೆ
ವಿಡಿದನಿರುದ್ಧ ಚುಂಬಿಸಿದ ೯

ವಿಶಾಲವಾದ ಕಣ್ಣು ಅರ್ಧ ಮುಚ್ಚಿದಂತೆ ಪುಳಕ ಸಾಂದ್ರಗೊಂಡು ನೆರಿಗೆ ಬಿಚ್ಚುವಂತೆ ಕೈಗಳ ಹಿಡಿಗಳಲ್ಲಿ ದೋರೆಗಾಯಿಯಂತೆ ಗಟ್ಟಿಯಾಗಿದ್ದ ದಡೂತಿ ಮೊಲೆಗಳನ್ನು ಹಿಡಿದು ಚುಂಬಿಸಿದನು.

ಪಿಂತೇಳು ಜನ್ಮದ ಬಡವಂಗೆ ಕಮನೀಯ
ಚಿಂತಾಮಣಿ ದೊರಕಿದಂತೆ
ಕುಂತಳೆಯ ಚುಬುಕಾಗ್ರವಿಡಿದು ಚೆಂದುಟಿಯೀಂಟಿ
ಸಂತಸವಡೆದನಾ ಕುವರ ೧೦

ಹಿಂದಿನ ಏಳು ಜನ್ಮಗಳಲ್ಲಿ ಬಡವನಾಗಿ ಬಾಳಿದವನಿಗೆ ಸುಂದರವಾದ ಚಿಂತಾಮಣಿ(ಬಯಸಿದುದನ್ನು ಕೊಡುವ ದೇವಲೋಕದ ರತ್ನ) ದೊರಕಿದಂತೆ ಪ್ರಿಯತಮೆಯ ಗಲ್ಲದ ತುದಿ ಹಿಡಿದು, ತುಟಿಯನ್ನೀಂಟಿ ಸಂತಸಪಟ್ಟನು.

ಚುಂಬಿಸಲಾಣ್ಮನ ಬಾಯೊಳು ಪೋಳ್ಗಳ
ತುಂಬಿದಳರೆಗಳಿಗೆಯೊಳಗೆ
ಚುಂಬಿಸಲ್ಚುಂಬಿಪ ತವಕದಿ ಕಾಮಾಂಬು
ತುಂಬಿತು ನಾಣತಾಣದಲಿ ೧೧

ಪ್ರಿಯತಮ ಚುಂಬಿಸಿದಾಗ ಅವನ ಬಾಯೊಳಕ್ಕೆ ಅರಗಳಿಗೆಯಲ್ಲಿ

ಹೋಳುಗಳನ್ನು ತುಂಬಿದಳು. ಚುಂಬನಕ್ಕೆ ಪ್ರತಿಚುಂಬನದ ಮುಯ್ ತೀರಿಸುವ ತವಕದಲ್ಲಿ ನಾಣ ತಾಣದಲ್ಲಿ(ಯೋನಿಯಲ್ಲಿ) ಕಾಮಾಂಬು ತುಂಬಿ ತುಳುಕಿತು.

ಭ್ರಮೆಗೊಂಡು ಮುಂಬರಿವಳ ಕಂಡು ರತಿಗಿದೆ
ಸಮಯವೆಂದನಿರುದ್ಧನರಿದು
ಕ್ಷಮೆಯಿಂದ ಬಿಗಿಯಪ್ಪಿ ಮುಂಡಾಡಿ ಪ್ರಮದೋ
ತ್ತಮೆಯೊಳು ಕೂಟಸ್ಥನಾದ ೧೨

ತಳಮಳ ತಬ್ಬಿಬ್ಬುಗಳ ಭ್ರಾಂತಿಗೊಳಗಾದವಳೊಡನೆ ಕಾಮಕ್ರಾಂತಿಗಿದೇ ಸುಸಮಯವೆಂದು ತಿಳಿದ ಅನಿರುದ್ಧ ಸ್ವೈರಣೆಯಿಂದ ಬಿಗಿಯಪ್ಪಿ ಮುದ್ದಾಡಿ ಪ್ರಮದೆಯೊಡನೆ ಕೂಟಸ್ಥನಾದ.

ಬದ್ಧವಾದ ಮೋಹಿನಶಕ್ತಿಯೊಳಗೆ ಅನಿ
ರುದ್ಧನೆಂದೆಂಬ ಗಾರುಡನು
ಕದ್ದೈಸದೆ ಕೆಲೆದಡಲು ದ್ವಿತೀಯೆ ಗಳದ
ಎದ್ದ ಚೀರ್ದನಿ ಮಾರ್ದನಿಸಿತು ೧೩

ಬದ್ಧ(ಗಾಢ) ಸಂಭೋಗ ಶಕ್ತಿಯಿಂದ ಅನಿರುದ್ಧನೆಂಬ ಗಾಡಿಕಾರ (ಸುಂದರಾಂಗ) ಗಾರುಡಿಗನು ಹಿಂದುಮುಂದು ನೋಡದೆ ಹುಮ್ಮಸ್ಸಿನ ಧ್ವನಿ ಸೂಸುತ್ತಾ ಹಡಲು(ಸಂಭೋಗಿಸಲು)ಜೊತೆಗಾತಿ ಕೊರಳಿನಲ್ಲಿ ನಸೆ(ಬೆದೆ)ಯ ಚೀರ್ದನಿ ನಸು(ಕೊಂಚ ಸಣ್ಣಗೆ) ಮಾರ್ದನಿಸಿತು.

ಅಸಮಸಾಯಕ ಶಾಸ್ತ್ರದಿಂದವಳಂಗ ಷೋ
ಡಶಕಲೆಯೆಡೆಯ ಚುಂಬಿಸಲು
ಬಿಸರುಹ ಗಂಧಿನಿ ನಾಣತಾಣದಿ ಕಾಮ
ರಸ ಪ್ರವಹಿಸಿತುಷ್ಣವೆರಸಿ ೧೪

ಅಸಮ ಬಾಣನಾದ ಮನ್ಮಥ ಶಾಸ್ತ್ರದ ಪ್ರಕಾರ ಅವಳ ಅಂಗಾಂಗಗಳ ಹದಿನಾರು ಕಲೆಗಳ ಸ್ಥಳಗಳಿಗೆ ಮುತ್ತಿಡಲು, ಅವಳ ಯೋನಿಯಲ್ಲಿ ಕಾಮರಸ ಕುದಿಗೊಂಡು ಕೋಡಿಬಿದ್ದಿತು.

ಒಲಿಸಿ ನಲಿಸಬೇಕೆಂಬಾತುರಕಾತುರವ
ನಿಲಿಸುವ ನಿಜಲೀಲೆಯಲಿ
ಸಲಿಸುವಳವಳು ಅರ್ತಿಯಕಾಮಕಲೆಗಳ
ಕಲಿಸುವ ಕೈ ಮಾಟದಿಂದ ೧೫

ಒಲಿಸಿ ನಲಿಸಬೇಕು ಎಂಬ ಆತುರ ಕಾತುರವನ್ನು ನಿಲ್ಲಿಸುವ ನಿಜ ಲೀಲೆಯಿಂದ ಕಲಿಸುವ ಕೈಚಳಕದಿಂದ ಪ್ರೀತಿ ಪ್ರೇಮದ ಕಾಮಕಲೆಗಳನ್ನು ಸಲ್ಲಿಸುವಳು.

ನುಂದೊಡೆಯೊಳಗೆ ನುಂದೊಡೆ ತೋಳ್ಗಳೊಳು ತೋಳು
ಹೊಂದಾವರೆ ವಳ್ಳಿಯಂತೆ
ಒಂದರೊಳೊಂದು ಹೆಣೆದುಕೊಂಡು ಚೌಸೀತಿ
ಬಂಧವ ನೆಗಳ್ದನರ್ತಿಯಲಿ ೧೬

ನುಣ್ದೊಡೆಯೊಳಗೆ ನುಣ್ದೊಡೆ, ತೋಳುಗಳಲ್ಲಿ ತೋಳು ಹೊಂಬಣ್ಣದ ಬಳ್ಳಿಯಂತೆ ಒಂದರೊಳಗೊಂದು ಹೆಣೆದುಕೊಂಡು ಚೌಸೀತಿ (<ಚೌ+ಅಸ್ಸಿ+ಇತಿ=೮೪) ಬಂಧಗಳನ್ನು ಕಾರ್ಯರೂಪಕ್ಕೆ ತಂದನು.

ರಿಂಕಿದ ಕುಚಯುಗದೊಳಗಿಟ್ಟು ನಖಚಂದ್ರ
ವಂಕಿಯ ನುಣ್ಗಲ್ಲವಿಡಿದು
ಕೊಂಕಿದ ಕುರುಳ್ತಿದ್ದಿ ಬಿಂಬಾಧರವ ಕ
ರ್ದುಂಕಿದ ಸೊಗ ಸುರಿದಂತೆ ೧೭

ಉಬ್ಬಿದ ಅಥವಾ ಊದಿಕೊಂಡ ಕುಚದ್ವಯದಲ್ಲಿ ನಖಚಂದ್ರನ ಲಾಂಛನ ಮೂಡಿಸಿ, ಬಾಗಿದ ನುಣುಪಿನ ಗಲ್ಲ ಹಿಡಿದು, ಕೊಂಕಿದ ಕೂದಲನ್ನು ತಿದ್ದಿ, ಬಿಂಬಾಧರವನ್ನು (ತೊಂಡೆಹಣ್ಣಿನಂಥ ಕೆಂಪಾದ ತುಟಿಯನ್ನು) ಕರ್ದುಂಕಿದ (ಕೊಕ್ಕಿನಿಂದ ಕುಕ್ಕಿದ ಅರ್ಥಾತ್ ಮುತ್ತಿಕ್ಕಿದ) ಸೊಗದ ಸೊನೆ ಜಿನುಗುವಂತೆ.

ಪೆರೆನೊಸಲೊಳು ಬೆಮರ್ವನಿ ಪುಳಕಿತ ನವಿರು
ಮರೆಗೊಂಡ ಉಭಯರಾಲಿಗಳು
ಮೊರೆವೆತ್ತ ಲಲ್ಲೆವಾತುಗಳಪ್ಪುಗೆಯಿಂದ
ನೆರೆ ಮೂರ್ಛೆ ತಾವೆಯ್ದಿದರು ೧೮

ಅರ್ಧಚಂದ್ರ ಹಣೆಯಲ್ಲಿ ಬೆವರ ಹನಿ, ಪುಳಕದಿಂದ ಮೇಲೆದ್ದ

ನವಿರು(ರೋಮ), ಮುಚ್ಚಿಕೊಂಡ ಇಬ್ಬರ ಕಣ್ಣುಗಳು, ಸದ್ದು ಮಾಡುವ ಲಲ್ಲೆ ಮಾತುಗಳು – ಜೊತೆಗೆ ಬೆಸುಗೆಕೊಂಡ ಅಪ್ಪುಗೆಯಿಂದ ಮೂರ್ಛೆ ಹೋದವರಂತೆ ಮೌನಕ್ಕೆ ತುತ್ತಾದರು.

ಅಧ್ಯವಸಾಯದಿ ಸಾಧಿವುದೇ ನವಚ ಗುರು
ವಿದ್ಯಾ ಕೌಟಿಲ್ಯ ಕೌಳಿಕದಿ
ಉದ್ಯೋಗಿಸಿ ರತಿತ್ರಯ ವಿಷಯದಿ ಉ
ಪಾಧ್ಯನೊ ಸುಗುಣಾನಿರುದ್ಧ ೧೯

ಅಸಹ್ಯ ಗುರು ನಿರಂತರ ಪ್ರಯತ್ನ ಮಾಡಿ ಕುಟಿಲ ವಂಚನೆ ವಿದ್ಯೆಯಿಂದ ಸಾಧಿಸುವುದೇನು? ಆದರೆ ಸುಗುಣಾನಿರುದ್ಧ ರತಿತ್ರಯ ವಿಷಯದಲ್ಲಿ ಸುಪ್ರಸಿದ್ಧ ಉಪಾಧ್ಯನೆಂಬುದು ಸರ್ವಜನಸಂವೇದ್ಯ.

ಪೀನಸ್ತನೆಯ ಚಿತ್ತವನಿರ್ಕುಳಿಗೊಂಬು
ದೇನಚ್ಚರಿ ಕಾಮಸುತಗೆ
ಮೀನ ಮಕ್ಕಳಿಗೀಸ ಕಲಿಪ ಗುರುಗಳುಂಟೆ
ನೀನು ಲಾಲಿಪುದೆನ್ನ ಹೊನ್ನೆ ೨೦

ಮನ್ಮಥನ ಮಗನಾದ ಅನಿರುದ್ಧನಿಗೆ ಬಲ್ಮೊಲೆಯ ಬಾಣಾಸುರನ ಮಗಳ ಚಿತ್ತವನ್ನು ದ್ರವಿಸುವಂತೆ ಮಾಡುವುದೇನಸಾಧ್ಯ? ಅಚ್ಚರಿ? ಮತ್ಸ್ಯ ಸಂತಾನಕ್ಕೆ ಈಜು ಕಲಿಸುವ ಗುರುಗಳು ಬೇಕೆ?

ಬೆಂಡೆದ್ದ ಬಳಲ್ಗಣ್ಣು ಹೊಯ್ವಳ್ಳೆ ನಿಡುಸುಯ್
ಗೊಂಡದಟಳಿದ ವಿವಶದಿ
ಗಂಡಹೆಂಡಿರು ಮೂರ್ಛೆಯ ತಿಳಿದೆಚ್ಚೆತ್ತು
ಕಂಡರು ತಮ್ಮ ಪೌರುಷವ ೨೧

ಬಳಲಿ ಬೆಂಡಾದ ಕಣ್ಣು, ಬಡಿದುಕೊಳ್ಳುವ ಅಳ್ಳೆ(ಪಕ್ಕೆ) ನಿಟ್ಟುಸಿರಿಂದ ಶಕ್ತಿ ಕುಂದಿದ ವಿವಶದಲ್ಲಿ ಗಂಡ ಹೆಂಡಿರು ಮೂರ್ಛೆಯಿಂದ ಎಚ್ಚೆತ್ತು ಕಂಡರು ತಮ್ಮ ಪೌರುಷ ಪ್ರತಾಪವನ್ನು

ಮಕರಾಂಕಸೂನು ಮಾನಿನಿರನ್ನೆ ಗಂಧೋ
ದಕದಿಂದ ಕೈಕಾಲ ತೊಳೆದು
ಪ್ರಕಟಿತ ದಿವ್ಯ ತಾಂಬೂಲ ಚರ್ವಣದಿಂದ
ಸುಖ ಪಟ್ಟರಂಗ ಸಂಗದಲಿ ೨೨

ಕಾಮಜ ಹಾಗೂ ಬಾಣಜೆ ಇಬ್ಬರೂ ಪರಿಮಳಯುಕ್ತ ನೀರಿನಿಂದ ಕೈಕಾಲು ತೊಳೆದು ಪರಿಮಳ ತಾಂಬೂಲ ಚರ್ವಣದಿಂದ ಸುಖಪಟ್ಟರು, ಪರಸ್ಪರ ಅಂಗಸಂಗದಿಂದ.

ನೂತನ ಸುಗುಣಶೇಖರ ಸೌಲಕ್ಷಣೋ
ಪೇತ ನಿನ್ನಯ ಪಿತನಾರು
ಆತನ ಪೆತ್ತಾತನಾರೆಂದು ಕೇಳ್ದಳು
ಶ್ವೇತಾಬ್ಜದಾಳಾಕ್ಷಿ ನಗುತ ೨೩

ಸುಗುಣ ಸಾರ, ಸುಲಕ್ಷಣ ನಿಧಿ ನಿನ್ನ ತಂದೆ ಯಾರು? ಆತನನ್ನು ಹೆತ್ತಾತನಾರು? ಎಂದು ನಗುನಗುತ್ತ ಪ್ರಶ್ನಿಸಿದಳು.

ತಾವರೆಗಣ್ಣ ಕೃಷ್ಣನ ಕುಮಾರಕ ನಿನ್ನ
ಮಾವ ಪ್ರದ್ಯುಮ್ನಾಂಕಿತನು
ಭಾವಜನಾತ್ಮಸಂಭವ ತಾನನಿರುದ್ಧ
ಸಾವಂತನೆಂದು ಪೇಳಿದನು ೨೪

ನಿನ್ನ ಮಾವನಾದ ಪ್ರದ್ಯುಮ್ನ(ಮ್ನನ್ಮಥ) ಕೃಷ್ಣನ ಮಗ. ಭಾವಜ(ಮನ್ಮಥ)ನ ಮಗನಾದ ನಾನು ಅನಿರುದ್ಧ ಎಂದು ಹೇಳಿದನು.

ಹರಿ ಸರ್ವೋತ್ತಮ ತಾತ ವೈಭವಕರ್ತೃ
ಸಿರಿದೇವಿ ಪಿತನಪೆತ್ತಾಕೆ
ತುರಿಯದಿ ಜಗವ ಸೃಷ್ಟಿಸುವ ನಾಲ್ಮೊಗನೆನ್ನ
ಹಿರಿಯಯ್ಯ ಕೇಳಾಯತಾಕ್ಷಿ ೨೫

ಸರ್ವೋತ್ತಮನಾದ ಶ್ರೀಹರಿ ನನಗೆ ತಾತ;ಶ್ರೀದೇವಿ(ಲಕ್ಷ್ಮಿ) ನನ್ನ ತಂದೆಯನ್ನು ಹೆತ್ತ ತಾಯಿ; ಶೀಘ್ರವಾಗಿ ಜಗತ್ತನ್ನು ಸೃಷ್ಟಿಸುವ ಚತುರ್ಮುಖ ಬ್ರಹ್ಮ ನನಗೆ ದೊಡ್ಡಪ್ಪ.

ಮಾಣದೆ ಹೊಗಳುವ ಶ್ರುತಿಶಾಸ್ತ್ರ ಕೋಟಿ ಪೌ
ರಾಣಗಳೆಮ್ಮಜ್ಜನಿರವ
ಕಾಣವು ಕಮಲಾಂಬಕಿ ಕೇಳು ನಿಖಿಳ ಗೀ
ರ್ವಾಣರಾತನ ಸೇವಕರು ೨೬

ಬಿಡದೆ ಏಕಪ್ರಕಾರವಾಗಿ ಸ್ತುತಿಸುವ ಶ್ರುತಿಶಾಸ್ತ್ರ ಪುರಾಣಗಳು ನಮ್ಮಜ್ಜನ (ನಮ್ಮ ತಾತನ) ಇರವನ್ನು ಕಾಣವು. ಕಮಲಾಕ್ಷಿ ಕೇಳು, ನಿಖಿಳ ದೇವತೆಗಳು ಆತನ ಸೇವಕರು.

ನಮ್ಮವರುಗಳ ವೈಭವ ದೊಡ್ಡತೆಂಬುದ
ನಮ್ಮನು ನಾವೇ ಕೀರ್ತಿಪುದೆ
ಕಮ್ಮಲರ್ಗಂಥ ಸುಗಂಧಿನಿ ಪೆಸರ್ವೇಳು
ನಿಮ್ಮಯ ಪಿತ ಪಿತಾಮಹರ ೨೭

ನಮ್ಮವರ ವೈಭವ ದೊಡ್ಡದು ಎಂದು ನಾವೇ ಹೊಗಳಿಕೊಳ್ಳುವುದು ತರವಲ್ಲ. ಆದ್ದರಿಂದ ಪರಿಮುಳಯುಕ್ತ ಪುಷ್ಪ ಸುಗಂಧಿನಿ, ನಿನ್ನ ತಂದೆ, ತಾತಂದಿರ ಹೆಸರನ್ನು ಹೇಳು ಎಂದು ಕೇಳಿದನು.

ಪಾತಾಳ ಲೋಕಾಧೀಶ ಬಲೀಂದ್ರ ಸಂ
ಜಾತ ಸಾಸಿರದೋಳ ನಿಮ್ಮ
ಮಾತುಳ ಬಾಣನಾತನ ಸುತೆ ತ್ರೈಲೋಕ್ಯ ಪ್ರ
ಖ್ಯಾತೆಯುಷಾದೇವಿ ನಾನು ೨೮

ಪಾತಾಳಲೋಕಕ್ಕೆ ಒಡೆಯನಾದ ಬಲಿ ಚಕ್ರವರ್ತಿಯ ಮಗನಾದ ಸಾವಿರತೋಳಿನ ಬಾಣಾಸುರ ನಿಮ್ಮ ಮಾವ; ಆತನ ಮಗಳು ತ್ರೈಲೋಕ್ಯ ಪ್ರಖ್ಯಾತೆಯಾದ ಉಷಾದೇವಿ ನಾನು

ಮುತ್ತಯ್ಯನರಮನೆವಾಗಿಲ ಕಾವ ದೇ
ವೊತ್ತಮ ಸಿರಿನಾರಾಯಣನು
ಹೆತ್ತಯ್ಯನರಮನೆವಾಗಿಲೊಳು ಶಿವನಿತ್ತ
ಚಿತ್ತಯಿಸೆಂದಳು ಅರಗುವರಿ ೨೯

ಮುತ್ತಯ್ಯ(ತಾತ) ಬಲಿಚಕ್ರವರ್ತಿಯ ಅರಮನೆ ಬಾಗಿಲನ್ನು ಕಾಯುವವನು ಸಾಕ್ಷಾತ್ ಶ್ರೀಹರಿಯಾದರೆ ಹೆತ್ತಯ್ಯ(ತಂದೆ) ಬಾಣಾಸುರನ ಅರಮನೆ ಬಾಗಿಲ ಕಾವಲುಗಾರ ಶಿವನೆಂಬುದನ್ನು ಚಿತ್ತಕ್ಕೆ ತಂದುಕೊಳ್ಳಿ ಎಂದಳು.

ಘೃತಸಿಂಧು ದುಗ್ಧಾಂಬೋನಿಧಿಯುಭಯ ಸಮ
ನ್ವಿತವಾಗಿ ಮನೆಗೆ ಬಂದಂತೆ
ನುತಪಾತ್ರ ಹರಿಹರರು ಬಾಗಿಲ ಕಾದಿರಲು
ಮಿತವಾವುದೆಮ್ಮೈಸಿರಿಗೆ ೩೦

ತುಪ್ಪದ ಸಮುದ್ರ ಹಾಗೂ ಹಾಲಿನ ಸಮುದ್ರಗಳೆರಡೂ ಸಮನ್ವಯಗೊಂಡು ಮನೆಗೆ ಬಂದಂತೆ ಸ್ತುತಿಪಾತ್ರರಾದ ಹರಿಹರರು ಬಾಗಿಲ ಕಾದಿರಲು ನಮ್ಮ ಐಶ್ವರ್ಯಕ್ಕೆ ಮಿತಿ ಎಲ್ಲಿ ಬಂತು?

ಅಹುದು ಸದ್ಭಕ್ತ ಬಲೀಂದ್ರ ದ್ವಾರದಿ ಹರಿ
ಇಹುದು ಐಸಿರಿ ಮಾನವರ್ಗೆ
ಬಹುದು ದೊರೆತನ ಬಾಗಿಲೊಳೀಶನಿರಲು ಲೇ
ಸಹುದೆಂದು ತಲೆದೂಗಿದನು ೩೧

ಹೌದು ಭಕ್ತ ಬಲಿಚಕ್ರವರ್ತಿಯ ದ್ವಾರದಲ್ಲಿ ಶ್ರೀಹರಿ ಇರಲು ಅದು ಐಸಿರಿ. ಹಾಗೆಯೇ ಬಾಗಿಲಲ್ಲಿ ಶಿವನಿರಲು ದೊರೆತನ ಬರುವುದು ನಿಶ್ಚಯ. ಅಂತೂ ಎರಡೂ ಕಡೆ ಎರಡು ದೈವಗಳಿಂದ ಲೇಸು ದೊರಕಿತು ಎಂದು ಅನಿರುದ್ಧ ತಲೆದೂಗಿದನು.

ಅದು ದೊಡ್ಡಿತೆಂದು ಪೇಳಲು ಜಿಹ್ವೆಗಚ್ಚರಿ
ಇದು ದೊಡ್ಡಿತಾದುದು ಶ್ರುತಿಗೆ
ವಿಧುಮುಖಿ ನಮ್ಮ ನಿಮ್ಮವರ ಸೌಭಾಗ್ಯವ
ಮದುವೆಯೊಳಗೆ ನೊಡಿಕೊಂಬ ೩೨

ಅದು ದೊಡ್ಡದು ಎಂದು ಹೇಳಲು ನಾಲಗೆಗೆ ಅಚ್ಚರಿ. ಇದು ದೊಡ್ಡದಾಯಿತು ಕರ್ಣಕ್ಕೆ. ಚಂದ್ರಮುಖಿ ನಮ್ಮ ನಿಮ್ಮವರ ಸೌಭಾಗ್ಯವನ್ನು ವೈವಾಹಿಕ ಸಂಬಂಧದಲ್ಲಿ ತೂಗಿ ನೋಡೋಣ.

ಎಂದೊಡಾ ಮಾತಿಂಗೆ ಪರಿತೋಷಗೊಂಡು ಮ
ತ್ತೊಂದ ಕೇಳ್ದಳು ನಸುನಗುತ
ಕಂದರ್ಪನಪರಾವತಾರದೀ ತನುವ
ತಂದ ಬಗೆಯೆಂತು ಮತ್ಸಖಿಯು ೩೩

ಅವನ ಉತ್ತರದಿಂದ ಸಂತೋಷಗೊಂಡ ಉಷಾದೇವಿ ನಸುನಗುತ್ತಲೇ ಬೇರೊಂದು ವಿಷಯ ಕೇಳಿದಳು–ಮನ್ಮಥನ ಅಪರಾವತಾರನಾದ ನಿನ್ನನ್ನು ನನ್ನ ಗೆಳತಿ ತಂದ ಬಗೆ ಹೇಗೆ?

ನೀರೆ ನಿನ್ನ ಸ್ವಪ್ನದಿ ಕಂಡು ವಿರಹದಲಿ
ಬೇರಿದ್ದೆನೊಂದು ಮಂದಿರದಿ
ಕಾರೆಯ ಕೊರಲ ಮಾನಿನಿ ಬಂದು ತನ್ನಯ
ಮೋರೆಯ ತೋರಿದಳೊಲಿದು ೨೪

ನೀರೆ, ನಿನ್ನನ್ನು ಸ್ವಪ್ನದಲ್ಲಿ ಕಂಡು, ವಿರಹದಲ್ಲಿ ಬೆಂದು ಬೇರೋಂದು ಮನೆಯಲ್ಲಿದ್ದೆ, ಕಾರೆ(ಕಂಠಾಭರಣ)ಯ ಕೊರಳಿನ ನಿನ್ನ ಗೆಳತಿ ಬಂದು ತನ್ನ ಮೋರೆಯನ್ನು ತೋರಿದಳು.

ಬೆಸಗೊಂಡೆನ್ನಂತಸ್ಥವನು ತಿಳಿದು ತಾ
ನುಸಿರ್ದಳು ನಿನ್ನ ಚೆಲ್ವಿಕೆಯ
ಹೊಸ ಚಿತ್ರವ ತೋರಿಸೆ ಕಂಡು ಸಂ
ತಸಗೊಂಡೆನಿವಳೇ ಅಹುದೆಂದು ೨೫

ವಿಚಾರಿಸಿ ನನ್ನ ಅಂತರಂಗದ ಅನ್ನಿಸಿಕೆಯನ್ನು ಅರಿತು ಆಕೆ ನಿನ್ನ ಸೌಂದರ್ಯವನ್ನು ಬಣ್ಣಿಸಿ, ಹೊಸ ಭಾವಚಿತ್ರವನ್ನು ತೋರಿಸಲು , ಇವಳೇ ನನ್ನ ಸ್ವಪ್ನ ಸುಂದರಿ ಎಂದು ಸಂತಸಗೊಂಡೆ.

ವ್ಯಥೆಗೊಂಡೆನಗೆ ಪೇಳ್ದಳು ಮಮಪ್ರಾಣಸ್ನೇ
ಹಿತೆ ಬಾಣನಂದನೆಯೊಡನೆ
ಜತೆಗೊಳಿಸುವೆನೆಂದು ಕರೆದಳು ಕುಂಭಾಂಡ
ಸುತೆ ಮೃದು ಮಧುರ ಮಾತಿನಲಿ ೨೬

ವ್ಯಥೆಗೊಂಡ ನನಗೆ ಹೇಳಿದಳು–ನನ್ನ ಪ್ರಾಣಗೆಳತಿ ಬಾಣಾನಂದನೆಯೊಡನೆ ಜೊತೆಗೊಳಿಸುವೆನೆಂದು ಮೃದು ಮಧುರ ಮಾತಿನಿಂದ ಕರೆದಳು.

ಬಪ್ಪೆನೆಂದಾನೊಡಂಬಡಲು ಪ್ರಾಣಹೊಣೆಗೆ
ತಪ್ಪೆನೆಂದಭಯವ ಕೊಟ್ಟಳು

ಇಪ್ಪೆಡೆಯಲಿದ್ದೆನ್ನನಪ್ಪಿಕೊಂಡು ತ
ನ್ನಿಪ್ಪೆಗಲೊಳು ಪೊತ್ತಳಬಲೆ ೩೭

ಬರುವೆನೆಂದು ನಾನು ಒಪ್ಪಿಕೊಂಡಾಗ ಪ್ರಾಣದ ಹೊಣೆಗೆ ನಾನು ತಪ್ಪುವುದಿಲ್ಲ ಎಂದು ಅಭಯವನ್ನು ಕೊಟ್ಟಳು. ಇರುವ ಸ್ಥಳದಲ್ಲಿದ್ದ ನನ್ನನ್ನು ಅನಾಮತ್ತು ಬಾಚಿ ತಬ್ಬಿಕೊಂಡು ಎತ್ತಿ ತನ್ನ ಇಪ್ಪೆಗಲ(ಎರಡು+ಪೆಗಲು) ಮೇಲೆ ಹೊತ್ತುಕೊಂಡು ತಂದಳು.

ಉನ್ನತ ಗಗನವಟ್ಟೆಯಲಿ ಮಾತೆ ಶಿಶುವ
ಬೆನ್ನೊಳು ಹೊತ್ತು ತರುವಂತೆ
ನನ್ನಯ ಬಹುಭಾರವ ಹೊತ್ತು ತಂದೀಗ
ನಿನ್ನೊಳು ಜೊತೆಗೂಡಿಸಿದಳು ೩೮

ಗಗನ ಮಾರ್ಗದಲ್ಲಿ ತಾಯಿ ತನ್ನ ಮಗುವನ್ನು ಬೆನ್ನ ಮೇಲೆ ಹೊತ್ತು ತರುವಂತೆ ನನ್ನ ಬಾಹುಭಾರವನ್ನು ಹೊತ್ತು ತಂದೀಗ ನಿನಗೊಪ್ಪಿಸಿದಳು.

ಓರಂತೆ ಯಜ್ಞಾದಿ ಸತ್ಕರ್ಮ ಕೋಟಿಯ
ಪಾರಂಗತರಂತೆ ಮಾಡಿ
ಧಾರಾಮುಖದಿ ಕೊಟ್ಟರೆ ನಮ್ಮ ಋಣೋ
ತ್ತಾರವಾಗದು ಮನದನ್ನೆ ೩೯

ಒಂದೇ ಸಮನೆ ಕ್ರಮಬದ್ಧವಾಗಿ ಕೋಟಿ ಸತ್ಕರ್ಮಗಳನ್ನು ಪಾರಂಗತರಂತೆ ಮಾಡಿ ಧಾರಾಪೂರ್ವಕ ಕೊಡುಗೆ ಕೊಟ್ಟರೆ ನಮ್ಮ ಋಣ ಉತ್ತಾರ(ಪರಿಹಾರ ವಿನಿಮಯ, ಸಂದಾಯ) ವಾಗದು ಮನದನ್ನೆ

ಆಕೆಯ ಧರ್ಮ ನಮ್ಮಿರ್ವರ ತನುಸುಖ
ಜೋಕೆಯೊಳೀಡೇರಿದರೆ
ಸಾಕು ಹೆತ್ತ ಹೆಂಗೂಸಿಗೆ ಪೆಸರಿಕ್ಕು ಚಿತ್ರ
ಲೇಖೆಯೆಂದನಿರುದ್ಧ ನುಡಿದ ೪೦

ಆಕೆಯ ಧರ್ಮನಡೆಯಿಂದ ನಮ್ಮಿಬ್ಬರ ತನುಸುಖ ಈಡೇರಿ ಹೆಣ್ಣು ಕೂಸು ಹುಟ್ಟಿದರೆ, ಚಿತ್ರಲೇಖೆ ಎಂದು ಹೆಸರಿಟ್ಟು ಋಣ ತೀರಿಸೋಣ ಎಂದು ಅನಿರುದ್ಧ ಸೂಚಿಸಿದ.

ಎಂತಾದೊಡೆನ್ನಬಹುದು ಕೇಳು ಮತ್ಪ್ರಾಣ
ಕಾಂತ ನಮ್ಮಿರ್ವರಿಚ್ಚೆಯನು
ಸಂತತ ಸಲಿಸಿದಳು ತಾಯಾಗಿ ಕೆಳದಿಯ
ಚಿಂತಾಮಣಿಯೆಂದಳವಳು ೪೧

ನಮ್ಮಿಬ್ಬರ ಇಚ್ಛೆಯನ್ನು ಸತತವಾಗಿ ತಾಯಾಗಿ ಸಲ್ಲಿಸುತ್ತಾ ಬಂದಳು. ಆ ನನ್ನ ಕೆಳದಿಯನ್ನು ಬಯಕೆಯನ್ನು ಸಲ್ಲಿಸುವ ದೇವಲೋಕದ ರತ್ನ ಎನ್ನಬಹುದು.

ನೆನದನು ಚಿತ್ರಲೇಖೆಯ ಧೈರ್ಯವನು ತಲೆ
ದೂನೆದನು ವಿಸ್ಮಿತ ತಾನಾಗಿ
ನೆನದನು ಹರ್ಷಾಶ್ರುಗಳಿಂದ ತನ್ನಯ
ಮನದಣಿವಂತೆ ಹೊಗಳಿದನು ೪೨

ಚಿತ್ರಲೇಖೆಯ ಧೈರ್ಯವನ್ನು ನೆನೆದು, ವಿಸ್ಮಯದಿಂದ ತಲೆಯನ್ನು ತೊನೆದನು(ತೂಗಿದನು) ಆನಂದಾಶ್ರುಗಳಿಂದ ನೆನೆದು ತನ್ನ ಮನಸ್ಸು ದಣಿಯುವಂತೆ ಹೊಗಳಿದನು.

ಕುಂಭಾಂಡನಾತ್ಮ ಸಂಭವೆಯ ಕೀರ್ತಿಸುವ
ಶಂಬರಾರಿ ಅನಿರುದ್ಧನ
ಚೆಂಬಾಯ್ದೆರೆಯ ಚೆಲುವ ಕಂಡು ಕುಮಾರಿಗೆ
ಮುಂಬರಿದುದು ಕಾಮಲೀಲೆ ೪೩

ಕುಂಭಾಂಡನ ಮಗಳನ್ನು ಹೊಗಳುವ ಶಂಬರಾರಿ ಅನಿರುದ್ಧನ ಕೆಂಪು ತುಟಿಯನ್ನು (ಬಾಯ್ದೆರೆ=ತುಟಿ) ಕಂಡು ಉಷೆಗೆ ಮತ್ತೆ ಕಾಮಲೀಲೆ ಅಂಕುರಿಸಿತು.

ಭ್ರಮಿಸಿದ ಭಾಮನಿಯಧರ ಚುಂಬನದೊಳು
ರಮಿಸಿದನವಳಿಚ್ಛೆಯರಿದು
ಕ್ರಮದೊಳು ರತಿಸುಖವಡೆದು ಮೂರ್ಛೆಯಲಿ ವಿ
ಶ್ರಮಿಸಿದರು ಬಾಹು ಬಂಧನದಿ ೪೪

ರತಿಕ್ರೀಡೆಯನು ಭ್ರಮಿಸಿದ ಭಾಮಿನಿಯ ಅಧರಚುಂಬನದಿಂದ, ಅವಳ ಇಚ್ಛೆಯಂತೆ ರಮಿಸಿದನು. ಕ್ರಮದಿಂದ ಸುರತಸುಖ ಪಡೆದು ಮೂರ್ಛೆಯಲಿ ವಿಶ್ರಮಿಸಿದರು ಪರಸ್ಪರ ಬಾಹುಬಂಧನದಲ್ಲಿ.

ಪೂಗೋಲನಾತ್ಮಸಂಭವ ಬಾಣಜೆಯರ ಸಂ
ಭೋಗದಿ ಕಡೆಗಣ್ಣೊಳೊಗೆದ
ರಾಗವಿದೆಂಬಂತೆ ರಂಜಿಸಿ ಪೂರ್ವ ದಿ
ಗ್ಭಾಗದಿ ಮಂಜಿಷ್ಠವಾಯ್ತು ೪೫

ಕಾಮಜ ಬಾಣಜೆಯರ ಸಂಭೋಗದಿಂದ ಕಣೆಗಣ್ಣಲ್ಲಿ ಮೂಡಿದ ಅನುರಾಗವೆಂಬಂತೆ ಪೂರ್ವದಿಕ್ಕಿನಲ್ಲಿ ಅರುಣೋದಯದ ಕೆಂಪು ಕಾಣಿಸಿಕೊಂಡಿತು.

ಕ್ರೀಡಾಪೇಕ್ಷೆಯೊಳರ್ಧರಾತ್ರಿಯೊಳಿಷ್ಟಿ
ಮಾಡಲ್ಕೆ ತನುಗಳು ತಪಿಸುವುವು
ಬೇಡೆವೆಂದವರ್ಗೆ ಬುದ್ಧಿಯ ಪೇಳ್ವವೊಲು ತಾಮ್ರ
ಚೂಡಗಳು ಬೊಬ್ಬಿಕ್ಕಿದುವು ೪೬

ಕ್ರೀಡಾಪೇಕ್ಷೆಯಿಂದ ಅರ್ಧರಾತ್ರಿಯಲ್ಲೂ ಇಷ್ಟಿ (ಪೂಜೆ, ಬಯಕೆ) ಮಾಡಲು ತನುಗಳು ತಪಿಸುತ್ತವೆ ಅವರಿಗೆ ಬೇಡವೆಂದು ಬುದ್ಧ ಹೇಳುವಂತೆ ಕೋಳಿ ಹುಂಜಗಳು ಬೊಬ್ಬೆ ಹಾಕಿದವು.

ಸಾರ್ವಭೂಮಾಧೀಶ ಕಂತು ತನಯಂಗೆ
ಪೂರ್ವ ದಿಗಂಗನೆ ತಂದು
ತೋರ್ವ ಮಾಣಿಕದ ಕನ್ನಡಿಯೆನೆ ಕಾಂತಿಯ
ಬೀರ್ವ ಭಾಸ್ಕರ ಮೂಡಿದನು ೪೭

ಸಾರ್ವಭೌಮ ಮನ್ಮಥನ ಕುಮಾರನಿಗೆ ಪೂರ್ವದಿಕ್ಕಿನ ಅಂಗನೆ ತಂದು ತೋರಿದ ರತ್ನದ ಕನ್ನಡಿಯಂತೆ ಕಾಂತಿಯುಕ್ತ ಸೂರ್ಯ ಥಳಥಳಿಸಿದನು.

ಪಾಡಿದರಿರ್ವರುಪ್ಪವಡದಾಳಾಪವ
ಮಾಡಿದರು ಪೂರ್ವಿ ರಾಗದಲಿ
ಜೋಡಿಸಿ ದಿವ್ಯ ಸಂಕೀರ್ತನ ಸುಧೆಯ ತಂ
ದೂಡಿದರು ಕರ್ಣ ಪೂರೈಸೆ ೪೮

ಇಬ್ಬರು ಎಚ್ಚರಗೊಂಡು ಮೇಲೇಳುವಂತೆ ಹಾಡಿದರು, ಪೂರ್ವಿ ರಾಗದಲ್ಲಿ ಆಲಾಪ ಮಾಡಿದರು, ದಿವ್ಯ ಸಂಕೀರ್ತನ ಅಮೃತವನ್ನು ಕಿವಿತುಂಬುವಂತೆ ತಂದು ಊಡಿದರು(ಕುಡಿಸಿದರು).

ಎದ್ದರು ಕರ್ಣಾಮೃತಗೇಳಿ ತನು ಸುಪ್ರ
ಬುದ್ಧದೊಳು ತೋಳ್ತೆಕ್ಕೆ ಸಡಿಲಿ
ರುದ್ಧರಾಚ್ಯುತ ಪಾದಪದ್ಮ ಕೀರ್ತಿಸಿದನನಿ
ರುದ್ಧನರ್ಧಾಂಗನೆ ಸಹಿತ ೪೯

ಕರ್ಣಾಮೃತ ಕೇಳಿ ತೋಳನ್ನು ಸಡಿಲಿಸಿ ಎಚ್ಚರಗೊಂಡೆದ್ದರು. ರುದ್ರ ಹಾಗೂ ಅಚ್ಯುತರನ್ನು ಅನುಕ್ರಮವಾಗಿ ಕೀರ್ತಿಸಿದರು ಬಾಣಜೆ ಹಾಗೂ ಕಾಮಜರಿಬ್ಬರೂ

ಆದುದುಪ್ಪವಡವೆಂದರಿತು ಚಿತ್ರಲೇಖೆ ವಿ
ನೋದದಲಿ ಕೆಳದಿಯರೊಡನೆ
ಮಾದಲವಣ್ಣ ಕಾಣಿಕೆಯಿತ್ತು ಕುವರನ
ಪಾದಕ್ಕೆ ಬಂದೆರಗಿದಳು ೫೦

ಪವಡಿಸಿದವರು ಉಪ್ಪವಡಗೊಂಡರು(ಮೇಲೆದ್ದರು)ಎಂಬುದನ್ನು ತಿಳಿದ ಚಿತ್ರಲೇಖೆ ಸೇವಕಿಯರೊಡನೆ ಮಾದಲ ಹಣ್ಣನ್ನು ಕಾಣಿಕೆಯಾಗಿ ಕೊಟ್ಟು ಅನಿರುದ್ಧನ ಕಾಲಿಗೆ ನಮಸ್ಕರಿಸಿದಳು.

ಸುದತಿ ಕೇಳೆನಗೆ ನೀ ತಲೆವಾಗಿ ದೋಷವ
ನೊದವಿಸಬೇಡವೆಂದೆನುತ
ಮದನಕುಮಾರ ಮಂತ್ರಿಜೆಯ ಮಸ್ತಕವ ಹ
ಸ್ತದೊಳಾಂತು ನೆಗಪಿದ ನಗುತ ೫೧

ಸುದತಿ(ಸುಂದರವಾದ ಹಲ್ಲುಗಳನ್ನುಳ್ಳುವಳೆ)ಕೇಳು, ನೀನು ನನಗೆ ತಲೆಬಾಗಿ ದೋಷವನ್ನು ನನ್ನ ಮೇಲೆ ಹೊರಿಸಬೇಡ ಎಂದು ಹೇಳಿ ಅನಿರುದ್ಧ ಮಂತ್ರಿಜೆಯ ಮಸ್ತಕವನ್ನು ಕೈಯಲ್ಲಿ ಹಿಡಿದು ಮೇಲೆತ್ತಿದನು.

ಜಗದೇಕದೇವ ಶ್ರೀಕೃಷ್ಣ ಕುಮಾರನ
ಮಗ ಮಾರಾಯ ನಿನ್ನಂಘ್ರಿ
ಯುಗಳಕೆ ಶರಣೆಂದ ಮಾತ್ರದಿ ಮಜ್ಜನ್ಮ
ದಘನಿವಾರಣೆಯೆಂದಳವಳು ೫೨

ಶ್ರೀಕೃಷ್ಣ ಸರ್ವೋತ್ತಮನ ಮಗನ ಮಗನಾದ ನಿನ್ನ ಪಾದದ್ವಯಕ್ಕೆ ಶರಣು ಮಾಡಿಕೊಂಡರೆ ನನ್ನ ಜನ್ಮದ ಪಾಪನಿವಾರಣೆ ಎಂದಳವಳು.

ಪಿರಿಯುತ್ತಿಗೆ ಕೇಳ್ನನ್ನ ನೀ ಪೆತ್ತವಳೆ
ಸರಿಯೆಂದು ಸರಸವಾಕ್ಯದಿ
ಸಿರಿಗೈಯ ತನ್ನ ಹಣೆಗೊತ್ತಿಕೊಂಡು ತಾ
ತ್ವರಿಯದಿ ಕೀರ್ತನೆಗೆಯ್ದನು ೫೩

ಹಿರಿಯ ಅತ್ತಿಗೆ, ನೀನು ನನ್ನ ಹೆತ್ತವಳೆಂದರೆ ಸರಿ ಎಂದು ಸರಸ ಮಾತನ್ನಾಡಿ ಅವಳ ಸಿರಿಹಸ್ತವನ್ನು ತನ್ನ ಹಣೆಗೊತ್ತಿಕೊಂಡು ಶ್ರದ್ಧೆಯಿಂದ ಕೀರ್ತನೆಗೈದನು.

ಚಂದಿರಮುಖಿಯರು ಬಿಸಿನೀರಿನ ಹೊನ್ನ
ಬಿಂದಿಗೆ ಮಣಿ ಪಾತ್ರೆಯನು
ತಂದಿಕ್ಕಿ ಮಜ್ಜನಗೆಯ್ಸಿದರೊಡಲೊಡ
ಲೊಂದಿರ್ದ ದಂಪತಿಗಳಿಗೆ ೫೪

ಚಂದ್ರಮುಖಿಯರು ಬಿಸಿನೀರಿನ ಚಿನ್ನದ ಬಿಂದಿಗೆ ಹಾಗೂ ರತ್ನದ ಪಾತ್ರೆಯನ್ನು ತಂದಿಕ್ಕಿ ಸ್ನಾನ ಮಾಡಿಸಿದರು– ಪರಸ್ಪರ ದೇಹಗಳನ್ನು ಬೆಸೆದುಕೊಂಡು ನಸೆ ತೀರಿಸಿಕೊಂಡ ದಂಪತಿಗಳಿಗೆ

ರಾಜಾನುಜೆಯಣುಗನ ಪುತ್ರಂಗೆ ಸ
ರೋದಳಾಯತೇಕ್ಷಣೆಗೆ
ಓಜೆಯೊಳೆಡೆ ಮಾಡಿದರು ಹರೀಶ್ವರ
ಪೂಜೆಯ ಮಣಿಮಂಟಪದಲಿ ೫೫

ರಾಜಾನುಜೆಯಣುಗನ(ಚಂದ್ರನ ಸೋದರಿ ಲಕ್ಷ್ಮಿಯ ಮಗ ಮನ್ಮಥನ) ಪುತ್ರನಿಗೆ (ಮಗನಾದ ಅನಿರುದ್ಧನಿಗೆ)ಹಾಗೂ ಕಮಲದಳಾಯತೇಕ್ಷಣೆಗೆ(ವಿಶಾಲಾಕ್ಷಿ ಉಷಾದೇವಿಗೆ) ಕಸಿವಿಸಿಯಾಗದಂತೆ ಕ್ರಮವಾಗಿ ಶ್ರೀಹರಿ ಮತ್ತು ಶಿವನಿಗೆ ಎಡೆ ಮಾಡಿದರು ಪೂಜೆಯ ರತ್ನ ಮಂಟಪದಲ್ಲಿ.

ಮಿಂಡಿಯರ ಕೈಲಾಗಿನಲಿ ಬಂದು ಪೀಠದಿ
ಮಂಡಿಸಿದ ಕಾಂತ ಕಾಂತೆಯರು
ಪುಂಡರೀಕಾಕ್ಷ ಭಾಳಾಕ್ಷ ಪೂಜೆಯೊಳೊಪ್ಪ
ಗೊಂಡಿರ್ದರಾಗಮೋಕ್ತಿಯಲಿ ೫೬

ಮಿಂಡಿಯರ(ಯುವತಿಯರ)ಕೈಚಳಕದಿಂದ ಬಂದು ಪೀಠದಲ್ಲಿ ಮಂಡಿಸಿದ ಕಾಂತಕಾಂತೆಯರು ಪುಂಡರೀಕಾಕ್ಷ(ಕಮಲಾಂಬಕ ಶ್ರೀಹರಿ) ಭಾಳಾಕ್ಷ(ಹಣೆಗಣ್ಣ ಶಿವ)ರ ಪೂಜೆಯಲ್ಲಿ ಆಗಮೋಕ್ತಿಯಲ್ಲಿ ಸಮರ್ಪಿಸಿಕೊಂಡಿದ್ದರು.

ಗಂಗೋದಕ ದಿವ್ಯಗಂಧಾಕ್ಷತೆ ಪುಷ್ಪ
ಮಂಗಳ ನಿಖಿಳಾರ್ಚನೆಗೈದು
ರಂಗಲಿಂಗಾರ್ಪಿತ ನೈವೇದ್ಯ ತಾಂಬೂ
ಲಂಗಳ ಕೈಕೊಂಡರೊಲಿದು ೫೭

ಗಂಗೋದಕ, ಗಂಧಾಕ್ಷತೆ, ಪುಷ್ಪ, ಮಂಗಳದ ನಿಖಿಳ ಅರ್ಚನೆಗೈದು, ರಂಗ(ವಿಷ್ಣು) ಲಿಂಗ(ಶಿವ)ಗಳಿಗೆ ಅರ್ಪಿತವಾದ ನೈವೇದ್ಯ ತಾಂಬೂಲಗಳನ್ನು ಕೈಗೊಂಡರು.

ಮಾಕಂದಕಂದ ಸಾಸಿರ ತೋಳಸುತೆ ಚಿತ್ರ
ಲೇಖಾ ನಾರಿಯಿಚ್ಛೆಯಲಿ
ಏಕಾಂತ ನಿಳಯದಿ ಸುಖಪಡುತಿರ್ದರ
ನೇಕ ವೈಭವ ಲೀಲೆಯಲಿ ೫೮

ಮಾಕಂದ ಕಂದ(ಲಕ್ಷ್ಮೀಯ ಮಗ ಮನ್ಮಥನ ಮಗ ಅನಿರುದ್ಧ) ಹಾಗೂ ಸಾಸಿರತೋಳನಣುಗಿ(ಬಾಣಾಸುರನ ಮಗಳು ಉಷಾದೇವಿ)ಚಿತ್ರಲೇಖೆಯ ಇಚ್ಛೆಯಂತೆ ಏಕಾಂತ ನಿಲಯದಲ್ಲಿ ಸುಖಪಡುತ್ತಿದ್ದರು ಅನೇಕ ವೈಭವಲೀಲೆಗಳಲ್ಲಿ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೫೯

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯಚಂದ್ರರು ಇರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೩೩. ಉಷಾನಿರುದ್ಧರ ವಿವಾಹ ವೃತ್ತಾಂತ

ತುರುಗಾಯಿಯಂತೆ ನಾಲ್ಮೊಗನಯ್ಯನಂತೆ
ತುರುಪಟ್ಟಿಯೊಳಗೆ ನಿಂದಿರ್ದ
ಸರುವೋತ್ತಮನ ಪಾದವ ಕೂರ್ತು ಕೃತಿವೇಳು
ಗೀರುವಾಣ ಭಾಷೆ ಕನ್ನಡದಿ ೧

ದನಗಾರ(ಪಶುಪಾಲಕ)ನಂತೆ, ಚತುರ್ಮುಖ ಬ್ರಹ್ಮನ ತಂದೆಯಂತೆ, ದನಗಳ ಹಟ್ಟಿಯಲ್ಲಿ ನಿಂತಿರುವ ಸರ್ವೋತ್ತಮನ ಪಾದವನ್ನು ಕುರಿತು ಕೃತಿ ಹೇಳು ದೇವಭಾಷೆ ಕನ್ನಡದಲ್ಲಿ(ಸಂಸ್ಕೃತವನ್ನು ಮಾತ್ರ ಗೀರ್ವಾಣ ಭಾಷೆ, ದೇವಭಾಷೆ ಎಂದು ಕರೆಯುವುದು. ಆದರೆ ಇಲ್ಲಿ ಕನಕ ಕನ್ನಡವನ್ನು ದೇವಭಾಷೆ ಎಂದು ಎತ್ತಿ ಹಿಡಿದಿರುವುದು ಅವನ ಮಾತೃಭಾಷಾ ಪ್ರೇಮವನ್ನು ಸೂಚಿಸುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬೇರಾವದ ಕವಿಗಳೂ ಹೀಗೆ ಹೇಳುವ ಎಂಟೆದೆ ಬಂಟರಾಗಿ ಕಂಡುಬರುವುದಿಲ್ಲ)

ಸ್ವಾತಿಮಳೆಯ ಪೆರ್ವನಿ ಚಿಪ್ಪಿನೊಳು ಬಿದ್ದು
ಜಾತಿ ಮುತ್ತಾದಂತೆ ಎನ್ನ
ಮಾತಿನ ಮಾಲೆ ನಿನ್ನ ಕರ್ಣದೊಳು ಬಿದ್ದು
ಖ್ಯಾತಿವೆತ್ತುದು ಕೇಳು ಕೆಳದಿ ೨

ಸ್ವಾತಿ ಮಳೆಯ ಹನಿ ಚಿಪ್ಪಿನೊಳಗೆ ಬಿದ್ದು ಶ್ರೇಷ್ಠ ಮುತ್ತಾದಂತೆ ನನ್ನ ಮಾತು ನಿನ್ನ ಕಿವಿಯಲ್ಲಿ ಬಿದ್ದು ಖ್ಯಾತಿ ಪಡೆಯಿತು ಕೇಳು ಮನದನ್ನೆ.

ಘನಶೀಲರು ಬಳಿಕ ದೇವಾರ್ಚನೆ ಸಹಭೋ
ಜನ ತಾಂಬೂಲ ಸುಗಂಧ
ಮನಗೊಂಬ ನಿಖಿಳವೈಭೋಗದಿಂದಿರ್ವರು
ದಿನಗಳೆದರಧಿಕ ಸುಖದಿಂದ ೩

ಮಹಾಗುಣವಂತರು ದೇವಾರ್ಚನೆ, ಸಹಭೋಜನ, ಸುಗಂಧ ತಾಂಬೂಲ, ಮನವನ್ನು ಸೂರೆಗೊಳ್ಳುವ ಸಕಲ ವೈಭೋಗದಿಂದ ದಿನಗಳೆದರು.

ನೀಲಕುಂತಳೆ ಕೇಳು ಬಳಿಕೊಂದು ದಿನ ಬಾಣ
ನೋಲಗ ಸಂಭ್ರಮದಿಂದಿರಲು
ಮೂಲೋಕ ವ್ಯವಹಾರಿ ನಾರದ ಮುನಿ ತ
ತ್ಕಾಲಕೆ ಗಗನದಿಂದಿಳಿದ ೪

ಕರಿಗುರುಳ ತರಳೆ ಕೇಳು, ಒಂದು ದಿನ ಬಾಣನು ಓಲಗಶಾಲೆಯಲ್ಲಿದ್ದಾಗ ತಂದಿಕ್ಕಿ ತಮಾಷೆ ನೋಡುವ ನಾರದ ಇದ್ದಕ್ಕಿದ್ದಂತೆ ಗಗನದಿಂದ ಇಳಿದ.

ಬಂದ ನಾರದ ಬಾಗಿಲ ಪರಮೇಶಂಗೆ
ವಂದನೆಗೆಯ್ದು ಕೇಳಿದನು
ಕಂದಾಯ ಪಾವತಿಗೆ ಖಳನಿತ್ತ ಜೀವಿತ
ದಂದುದೆ ನಿಮಗೆಂದ ನಗುತ ೫

ಇಳಿದವನೆ ಬಾಗಿಲಲ್ಲಿದ್ದ ಶಿವನಿಗೆ ನಮಸ್ಕರಿಸಿ ನಿಮ್ಮ ನಿತ್ಯದ ಕಂದಾಯ ಪಾವತಿಗೆ (ತೆರಿಗೆ ಸಂದಾಯಕ್ಕೆ) ಖಳನು ಕೊಡುವ ಜೀವಿತ(ಸಂಬಳ) ನಿಮಗೆ ಸಂದುದೆ ಎಂದ ನಗುತ

ನೆಟ್ಟನೆ ನಿಖಿಳ ನಿರ್ಜರ ಮನುಮುನಿಗಳೊಳು
ಪಟ್ಟಾಭಿಷೇಕ ಕೇಳು ನಿನಗೆ
ದುಟ್ಟ ರಕ್ಕಸನ ಬಾಗಿಲ ಕಾದಲ್ಲದೆ
ಹೊಟ್ಟೆಯ ಹಸಿವು ಹಿಂಗದೇನು ? ೬

ಸಕಲ ದೇವಾನುದೇವತೆಗಳಲ್ಲಿ, ಮನುಮುನಿಗಳಲ್ಲಿ ನಿನಗೆ ಪಟ್ಟಾಭಿಷೇಕ. ದುಷ್ಟ ರಾಕ್ಷಸನ ಬಾಗಿಲ ಕಾಯುವ ಕಾಯಕದಿಂದಲ್ಲದೆ ಹೊಟ್ಟೆಯ ಹಸಿವು ಹಿಂಗದೇನು?

ಈಶ ಕೇಳು ನಿನ್ನೊಲವುಳ್ಳಡೆ ಖಳನ ಕೈ
ಲಾಸಕ್ಕೆ ಕೊಂಡೇಳು ಪೋಪ
ಬೇಸರದಿವನ ಬಾಗಿಲ ಕಾಯ್ದಿರ್ಪುದು
ದೋಷವೆಂದಭವಂಗೆ ನುಡಿದ ೭

ಅವನ ಮೇಲೆ ನಿನಗೆ ಪ್ರೀತಿಯಿದ್ದರೆ ಅವನನ್ನು ಕೈಲಾಸಕ್ಕೆ ಕರೆದುಕೊಂಡು ನಡೆ ಹೋಗೋಣ, ಬೇಸರ ಮಾಡಿಕೊಳ್ಳದೆ ಅವನ ಮನೆಬಾಗಿಲ ಕಾಯುವುದು ದೋಷವೆಂದು ಶಿವನಿಗೆ ಹೇಳಿದ

ಸಪ್ಪದೊಡಿಗೆಯೊಡೆಯ ಕೇಳು ನಿನ್ನ ಭಕ್ತ
ನಿಪ್ಪೆಡೆಗಾನು ಪೋಪುದಕೆ
ಅಪ್ಪಣೆಗೊಡು ಬಾಗಿಲವರ ಕೇಳದೆ ಪೋಗ
ಬಪ್ಪುದೆ ಬಡವರು ನಾವು ೮

ಸಪ್ಪದೊಡಿಗೆಯೊಡೆಯ(ಸರ್ಪಾಭರಣ ಭೂಷಿತನಾದ ಶಿವನೆ)ಕೇಳು, ನಿನ್ನ ಭಕ್ತನಾದ ಬಾಣಾಸುರನಿರುವ ಸ್ಥಳಕ್ಕೆ ಹೋಗಲು ನನಗೆ ಅಪ್ಪಣೆ ಕೊಡು. ಬಡವರಾದ ನಾವು ದ್ವಾರಪಾಲಕರನ್ನು ಧಿಕ್ಕರಿಸಿ ಹೋಗಲು ಸಾಧ್ಯವೆ?

ನಾರದ ಮುನಿ ಮಹಾರಾಯ ಕೇಳು ಭಕ್ತರ
ದ್ವಾರಪಾಲಕನು ನಾನಹುದು
ಸಾರ ಹೃದಯನೆ ನೀನರಿಯದ ವಿಷಯವಿಲ್ಲ
ಭೂರಮಣನ ಕಾಣಬಹುದು ೯

ನಾರದ ಮುನಿ ಮಹಾರಾಯ, ಭಕ್ತರ ದ್ವಾರಪಾಲಕನು ನಾನಹುದು. ಸಾರ ಹೃದಯಿಯಾದ ನಿನಗೆ ತಿಳಿಯದ ವಿಷಯವಿಲ್ಲ. ನೀನು ರಾಜನನ್ನು ನೋಡಲು ಯಾವುದೇ ಅಡ್ಡಿಯಿಲ್ಲ.

ಎಂದೊಡೀಶ್ವರನ ವಾಕ್ಯವ ಕೇಳ್ದೊಳಪೊಕ್ಕು
ಬಂದ ನಾರದ ಮುನಿವರನ
ಸಂದರುಶನ ಮಾತ್ರದೊಳೆದ್ದು ಚರಣಾರ
ವಿಂದಕ್ಕೆ ಖಳನೆರಗಿದನು ೧೦

ಶಿವನ ಮಾತಿನಂತೆ ಒಳಹೊಕ್ಕ ನಾರದನ ದರ್ಶನವಾಗುತ್ತಲೇ ಬಾಣನೆದ್ದು ನಾರದನ ಪಾದಕ್ಕೆರಗಿದನು.

ವೀಣೆಯೊಂದು ಕೈಯಲಿ ಮತ್ತೊಂದು ಕೈಯಲಿ
ಬಾಣನ ಮಸ್ತಕವಿಡಿದೆತ್ತಿ

ಕ್ಷೀಣ ಸಂತೋಷದಿ ಹರಸಲ್ಕೆ ಕಿಂ ಕುರು
ವಾಣದಿ ಮುನಿಯನೀಕ್ಷಿಸಿದ ೧೧

ಒಂದು ಕೈಯಲ್ಲಿ ವೀಣೆ ಮತ್ತೊಂದು ಕೈಯಲ್ಲಿ ಬಾಣನ ಮಸ್ತಕವನ್ನು ಹಿಡಿದು ಮೇಲೆತ್ತಿ ಕ್ಷೀಣವಾದ ಸಂತೋಷದಿಂದ ಹರಸಿದಾಗ ಬಾಣನು ಕಿಂಕುರುವಾಣ(<ಕಿಂಕುರ್ವಾಣ= ದೈನ್ಯತೆ)ದಿಂದ ನಾರದಮುನಿಯನ್ನು ಈಕ್ಷಿಸಿದನು.

ಭೇದ್ಯವಾಗಿದೆ ನಿನ್ನಯ ಚಿತ್ತ ಲೋಕಾ
ರಾಧ್ಯ ಬಂದುದ ಪೇಳೆನುತ
ಸದ್ಯೋಪಚಾರವ ಮಾಡಿ ಪ್ರೀತಿಯೊಳರ್ಘ್ಯ
ಪಾದ್ಯವ ಕೊಟ್ಟು ಕೀರ್ತಿಸಿದ ೧೨

ನಿನ್ನ ಮನಸ್ಸು ಸದಾಕಾಲ ಭೇದಿಸುವ ಜಾಯಮಾನದ್ದು. ಲೋಕಾರಾಧ್ಯ ನೀನೀಗ ಬಂದುದನ್ನು ಹೇಳು ಎಂದು ಸದ್ಯದ ಎಲ್ಲ ಉಪಚಾರಗಳನ್ನು ಮಾಡಿ, ಪ್ರೀತಿಯಿಂದ ಅರ್ಘ್ಯಪಾದ್ಯ(ಕೈಕಾಲು ತೊಳೆಯಲು ನೀರು ಕೊಟ್ಟು) ಕೊಟ್ಟು ಕೀರ್ತಿಸಿದ.

ಉಚಿತವ ಕೈಕೊಂಡು ನಾರದ ನವರತ್ನ
ಖಚಿತ ಪೀಠದಲಿ ಮಂಡಿಸಿದ
ಕುಚಿತ ಬುದ್ಧಿಯ ತನ್ನ ಮನದೊಳು ಮಡಗದೆ
ವಚಿಸಿದ ಖಳರಾಯನೊಡನೆ ೧೩

ಉಚಿತ ಉಪಚಾರಗಳನ್ನು ಕೈಕೊಂಡು ನವರತ್ನ ಖಚಿತವಾದ ಪೀಠದಲ್ಲಿ ಕುಳಿತನು ಬಳಿಕ ಕುಚಿತ(ಉಚಿತವಲ್ಲದ) ಬುದ್ಧಿಯನ್ನು ತನ್ನ ಮನಸ್ಸಿನಲ್ಲಿ ಇಟ್ಟುಕೊಳ್ಳದೆ ಖಳರಾಯನಿಗೆ ರಟ್ಟು ಮಾಡಿದ.

ಬಾಣ ನಿನ್ನ ಭಾಗ್ಯೋನ್ನತಿ ನಿಖಿಳ ಗೀ
ರ್ವಾಣ ದೈತ್ಯರಿಗೆ ಸಿದ್ಧಿಪುದೆ
ಏಣಾಂಕಧರ ಬಂದು ಬಾಗಿಲ ಕಾದಿರ್ದು
ಕಾಣನೆ ಮಾನ ಹಾನಿಗಳ ೧೪

ಬಾಣ ನಿನ್ನ ಭಾಗ್ಯೋನ್ನತಿ ಸಕಲ ದೇವತೆಗಳು ರಾಕ್ಷಸರಿಗೆ ಸಿದ್ಧಸುವುದೆ? ಏಣಾಂಕಧರ (ಏಣಾಂಕ=ಚಂದ್ರ+ಧರ=ಧರಿಸಿದವನು)ನಾದ ಶಿವ ಬಂದು ಬಾಗಿಲು ಕಾದಿದ್ದು ಮಾನಹಾನಿಯನ್ನು ಕಾಣನೆ?

ಆತ ಕಾಣದೆ ಪೋದರೆ ಪೋಗಲೆಮ್ಮಯ
ದಾತಾರ ನೀನರಿಯದುದೆ
ಏತರ ಮಾನಹಾನಿಯೊ ಪೇಳು ಪೇಳೆಂದು
ಕಾತುರದಿಂದ ಕೇಳಿದನು ೧೫

ಆತ ಕಾಣದೆ ಹೋದರೆ ಹೋಗಲಿ ಆದರೆ ನಮ್ಮ ಉದಾರ ದಾನಿಯಾದ ನೀನು ತಿಳಿಯದುದೆ?ಎಂದು ನಾರದ ಹೇಳಿದಾಗ ಬಾಣಾಸುರ ಕೂಡಲೇ" ಯಾತರ ಮಾನಹಾನಿ?ಹೇಳು ಹೇಳು " ಎಂದು ಕಾತುರದಿಂದ ಕೇಳಿದನು.

ಪೇಳಂದರಾನು ಪೇಳ್ದಪೆ ಕೇಳ್ ನಿನಗೀ
ವೇಳೆಯೊಳು ತಲೆಗುತ್ತಲಹುದು
ಭಾಳಾಕ್ಷನ ಸದ್ಭಕ್ತ ನಂದನೆಯತ್ತ
ಸೂಳೆಯಾಗಿಪ್ಪುದು ಸರಿಯೆ ೧೬

ಹೇಳು ಎಂದರೆ ನಾನು ಹೇಳುತ್ತೇನೆ ಕೇಳು. ಈ ಸಮಯದಲ್ಲಿ ನೀನು ತಲೆಕುತ್ತ(ಬಗ್ಗಿಸ)ಬೇಕಾಗಿದೆ. ಶಿವನ ಭಕ್ತನ ಮಗಳು ಸೂಳೆಯಾಗಿರುವುದು ಸರಿಯೆ?

ನಿಮಗೆ ನಾ ಪ್ರತಿಮಾತನಾಡಲಂಜುವೆ ಜೀಯ
ನಿಮಗೀ ಶಬ್ದ ಸಮ್ಮತವೆ
ಯಮನ ದಾಡೆಯ ಕೀಳ್ವ ದಡಿಗ ದೈತ್ಯರ ಕಾಹು
ಮಮ ಕುವರಿಯ ಗೋಪುರಕಿದೆ ೧೭

ನಿಮಗೆ ನಾನು ಪ್ರತಿಯಾಗಿ ಮಾತನಾಡಲು ಅಂಜುವೆ ಜೀಯ. ನಿಮಗೆ ಈ ಶಬ್ದ ಪ್ರಯೋಗ ಸಮ್ಮತವೆ? ಯಮನ ಹಲ್ಲುಗಳನ್ನು ಕೀಳುವ ದಡಿಗ ದೈತ್ಯರ ಕಾವಲು ನನ್ನ ಕುವರಿಯ ಗೋಪುರಕಿದೆ.

ಆಟಾಳದಾರು ಪೋಪರು ಕೇಳು ಮಿಕ್ಕಿನ
ಪೋಟಾಳುಗಳಿಗೆ ಗೋಚರವೆ
ಮೀಟಾದ ಸುರ ನರೋರಗ ವ್ರಾತವೆಂಬ ನಿ
ಶಾಟಕ ತಿಕ್ಕಿ ಮುಕ್ಕುವರು ೧೮

ಸಮರ್ಥರಾರು ಅಲ್ಲಿಗೆ ಹೋಗುವರು? ಉಳಿದ ಅಸಮರ್ಥರಿಗೆ ಅವಳು

ಗೋಚರಿಸುವಳೆ? ಉತ್ತಮ ಸುರ, ನರ , ಉರಗ ಸಮೂಹ ನಿಶಾಟರನ್ನು (ರಾತ್ರಿಯಲ್ಲಿ ಚಲಿಸುವ ಪಿಶಾಚಿಗೂಬೆ ಇತ್ಯಾದಿ)ಕಾವಲುಪಡೆ ತಿಕ್ಕಿ ಮುಕ್ಕುವುದಿಲ್ಲವೆ?

ಹರಮಹಾದೇವ ನೀಬಡವನೆ ನಾ ಬಲ್ಲೆ
ನುರವಣೆಗಾರನೆಂಬುದನು
ತರಹರದಿಂದ ಪೇಳ್ದೆನು ನಿನ್ನ ಮಗಳಿಂಗೆ
ವರನಾವನೆಂದು ನಿಶ್ಚಯಿಸು ೧೯

ಹರಮಹಾದೇವ ನೀನು ಬಡವನಲ್ಲ ಹುಮ್ಮಸ್ಸುಗಾರನೆಂಬುದನ್ನು ನಾನು ಬಲ್ಲೆ. ಆದರೆ ಗಡಿಬಿಡಿ ಗಾಬರಿಯಿಂದ ಹಾಗೆ ಹೇಳಿದೆನು. ನಿನ್ನ ಮಗಳಿಗೆ ವರನು ಯಾರು ಎಂಬುದನ್ನು ನಿಶ್ಚಯಿಸಲು ತಡ ಮಾಡಬೇಡ.

ಎನಲಾ ಮಾತ ಕೇಳಿದಸುರಾಧೀಶ್ವರ
ಕನಲುತ ಕಡುಗೋಪದಿಂದ
ಅನಲಾಕ್ಷನಾಣೆ ನಾರದ ಕೇಳು ರೋಹಿತ
ಹೊನಲೇಳ ಹೊಯ್ವೆ ಹೊಕ್ಕವನ ೨೦

ಆ ಮಾತನ್ನು ಕೇಳಿದ ಬಾಣ ಕನಲಿ ಕೆಂಡವಾಗಿ, ಕೆಂಡಗಣ್ಣನ ಆಣೆ ಹೇಳುತ್ತೇನೆ. ಒಂದು ಪಕ್ಷ ಅಲ್ಲಿಗೆ ಯಾರಾದರೂ ಪ್ರವೇಶಿಸಿದ್ದರೆ ಅವನಿಗೆ ರಕ್ತಪ್ರವಾಹ ಹರಿಯುವಂತೆ ಹೊಯ್ಯುವೆನು.

ಹೊಕ್ಕವನಾರೆಂಬುದ ಕೇಳು ಪೇಳುವೆ
ರಕ್ಕಸಧ್ವಂಸಿಯ ಮೊಮ್ಮಗ
ಕಕ್ಕಸ ನಿನಗಿದು ಹವಣಲ್ಲ ಛೇದಿಸಲು
ಎಕ್ಕಸವಹುದೆಂದ ನಗುತ ೨೧

ಹೊಕ್ಕವನಾರೆಂಬುದನ್ನು ಹೇಳುತ್ತೇನೆ ಕೇಳು. ಅವನು ಬೇರೆ ಯಾರೂ ಅಲ್ಲ. ರಕ್ಕಸ ಧ್ವಂಸಿಯಾದ ಕೃಷ್ಣನ ಮೊಮ್ಮಗ. ನಿನಗಿದು ತುಂಬ ಕಠಿಣವಾಗುವುದು. ಛೇದಿಸಲು ನಿನಗಿದು ಎಕ್ಕಸ(ಕಷ್ಟ) ವಾಗುತ್ತದೆ.

ಕುಡಿಮೀಸೆ ಕುಣಿದು ನಾಸಿಕದಿ ಹೊಗೆ ಸುತ್ತಿ
ಕಿಡಿಗಳನಕ್ಷಿ ಮುಕ್ಕುಳಿಸಲು
ಜಡಿದು ಖಡ್ಗವ ಝಳಪಿಸುತ ಕೋಪದಾಳ್ದು
ನುಡಿದ ನಾರದ ಮುನಿವರಗೆ ೨೨

ಕುಡಿಮೀಸೆ ಕುಣಿದವು. ಮೂಗಿನಲ್ಲಿ ಹೊಗೆ ಸುಳಿ ಸುತ್ತಿತು. ಕಣ್ಣುಗಳು ಕಿಡಿಗಳನ್ನು ಮುಕ್ಕುಳಿಸಿದವು. ಸಿಟ್ಟಾಗಿ ಖಡ್ಗವನ್ನು ಝಳಪಿಸುತ್ತ ನಾರದ ಮುನಿಗೆ ಹೇಳಿದನು.

ಯತಿರಾಯ ನೀವಲ್ಲದಿನ್ನೋರ್ವನಾದರಾ
ಹುತಿಯನೆಯ್ದಿಸುವೆ ಖಂಡೆಯಕೆ
ಕ್ಷಿತಿಯೊಳಗೆನಗೊರ್ವ ಪ್ರತಿಭಟನುಂಟೆಂದು
ಮಿತಿ ಮಾಡ ಬಪ್ಪುದೆ ನೀವು ೨೩

ನೀವಲ್ಲದೆ ಬೇರೆ ಯಾರಾದರೂ ಈ ಮಾತನ್ನಾಡಿದ್ದರೆ ನನ್ನ ಕತ್ತಿಗೆ ಆಹುತಿಯಾಗಿಸುತ್ತಿದ್ದೆ. ಭೂಮಂಡಲದಲ್ಲಿ ನನಗೊಬ್ಬ ಶತ್ರುಸೈನಿಕ ಅಥವಾ ವೈರಿ ಇದ್ದಾನೆ ಎಂದು ಮಿತಿಗೊಳಪಡಿಸುವುದು ಸರಿಯೆ?

ಮಕ್ಕಳಾಟಿಕೆ ಬೇಡ ಖಳರಾಯ ಬಾಗಲೊ
ಳ್ಮುಕ್ಕಣ್ಣನಿಪ್ಪ ಗರ್ವವೆ
ಸೊಕ್ಕಾನೆ ಸಿಂಗದೊಡನೆ ಕದನ ಕಟ್ಟಿಕೊಂ
ಡೊಕ್ಕಲಾಗಿರ್ದು ಬಾಳುವುದೆ ೨೪

ಮಕ್ಕಳಾಟದ ವೈಖರಿ ಬೇಡ ಖಳರಾಯ, ಬಾಗಿಲ ಕಾವಲುಗಾರನಾಗಿ ಮುಕ್ಕಣ್ಣನಿದ್ದಾನೆ ಎಂಬ ಗರ್ವವೆ? ಮದಿಸಿದ ಆನೆ ಸಿಂಹದೊಡನೆ ಜಗಳ ಮಾಡಿಕೊಂಡು ಒಕ್ಕಲಾಗಿ ಬಾಳ್ವಿಕೆ ಮಾಡಲು ಸಾಧ್ಯವೆ?

ಹೊಗಳಲೇಕೆ ನಿಂದಿಸಲೇಕೆ ನಿಮಗೆ ನಾ
ಜಗಳವನಿಕ್ಕ ಬಂದವನೆ
ಮಗಳೊಕ್ಕತನ ನೋಡಿಕೊಳ್ಳೆಂದರೆ ದೃಗು
ಯುಗಳದಿ ಕಿಡಿ ಕರೆದಪರೆ ೨೫

ಹೊಗಳಿಕೆ ತೆಗಳಿಕೆಗೆ ಬಂದವನಲ್ಲ ನಾನು. ಅಷ್ಟೇ ಅಲ್ಲ ನಿಮ್ಮಲ್ಲಿ ಜಗಳ ತಂದಿಕ್ಕಲೆಂದು ಬಂದವನೂ ಅಲ್ಲ. ಮಗಳ ಸುಮಧುರ ಸಂಸಾರದತ್ತ ಗಮನ ಹರಿಸೆಂದರೆ ನಿನ್ನ ಕಣ್ಣುಗಳಲ್ಲಿ ಕಿಡಿ ಕಾರುವುದು ಸರಿಯೆ?

ಕೋಪವೆಂಬುದು ಪರಮಾತ್ಮಂಗೆ ದುರ್ಗಂಧ
ಲೇಪನ ಮಾಡಿದಂತಿಹುದು
ಶ್ರೀಪರಮೇಶನ ಸೆರೆಯಾಳ್ದ ಶರಣಂಗೆ
ತಾಪತ್ರಯವೇಕೆ ನಿನಗೆ ೨೬

ಕೋಪವೆಂಬುದು ಪರಮಾತ್ಮನಿಗೆ ದುರ್ಗಂಧ ಲೇಪನ ಮಾಡಿದಂತಾಗುವುದು. ಈಶ್ವರನನ್ನೇ ಸೆರೆಯಾಳಾಗಿಟ್ಟ ಭಕ್ತನಿಗೆ ತಾಪತ್ರಯವೇಕೆ?

ಕುಂಭಾಂಡ ಮಂತ್ರಿ ಶೇಖರ ನೋಡು ನಾರದ
ರೆಂಬುವ ಮಾತು ಕೇಳಿದೆಯ
ಹೆಂಬೇಡಿ ಕಾಮನ ಮಗನೆನ್ನ ಮಗಳಿಗೆ
ಸಂಭೋಗ ಕೃತಪುಣ್ಯನಂತೆ ೨೭

ಮಂತ್ರಿ ಕುಂಭಾಂಡ, ನಾರದರು ಹೇಳಿದ ಮಾತು ಕೇಳಿದೆಯಾ?ಹೆಂಬೇಡಿ ಕಾಮನ ಮಗನಾದ ಅನಿರುದ್ಧ ನನ್ನ ಮಗಳೊಡನೆ ಸಂಭೋಗಿಸಿದ ಕೃತಪುಣ್ಯನಂತೆ.

ಆಗಲಿ ಜೀಯ ನಾರದಮುನಿ ಮಾರಾಯ
ಹೋಗು ನುಡಿಯಾಡುವರಲ್ಲ
ಈಗಳಾನಿದ ಪರೀಕ್ಷಿಸಿ ಸಟೆದಿಟದ ಪ್ರ
ಯೋಗವ ನಿಮಗೆ ಪೇಳ್ದಪೆನು ೨೮

ಆಗಲಿ ಜೀಯ. ನಾರದಮುನಿ ಹೋಗು (<ಹೋಕು=ಜೊಳ್ಳು) ನುಡಿಯಾಡುವರಲ್ಲ. ಈಗ ನಾನಿದನ್ನು ಪರೀಕ್ಷಿಸಿ ಸಟೆದಿಟದ ವಿಷಯವನ್ನು ನಿಮಗೆ ಹೇಳುವೆನು.

ಕ್ರೂರನೆಂದೆನಬೇಡ ಕುಂಭಾಂಡ ಕನ್ಯಾ
ಚೋರನ ಹಿಡಿತರದಿರಲು
ಓರಂತೆ ನಿನ್ನ ದೇಹವ ಸೀಳ್ದು ದ್ವಾರಕೆ
ತೋರಣದಂತೆ ಕಟ್ಟಿಸುವೆ ೨೯

ಕುಂಭಾಂಡ, ನನ್ನನ್ನು ಕ್ರೂರಿ ಎನ್ನದಿರು. ಕನ್ಯಾಚೋರನನ್ನು ಹಿಡಿದು ತರದಿದ್ದರೆ ನಿನ್ನನ್ನು ಸೀಳಿ ಊರ ಬಾಗಿಲಿಗೆ ತೋರಣ ಕಟ್ಟಿಸುವೆನು.

ಬೆಸಗುಡು ದೈತ್ಯಾಧೀಶ್ವರ ನೀನು ನಿರೂ
ಪಿಸಲಾನು ಮಾತ ಮೀರೆನು
ವಿಷಯ ಪ್ರತಾಪಿಯಾದಡೆ ಕೊಂಡು ಬಂದೊ
ಪ್ಪಿಸದಿರ್ದಡಾನಿರೆನು ಜೀಯ ೩೦

ದೈತ್ಯಾಧೀಶ್ವರ ನೀವು ಅಪ್ಪಣೆ ಮಾಡಿದ ಮೇಲೆ ನಿಮ್ಮ ಮಾತನ್ನು ಮೀರುವುದಿಲ್ಲ. ಆತನನ್ನು ತಂದು ಒಪ್ಪಿಸದಿದ್ದರೆ ನಾನು ಜೀವಂತವಾಗಿರುವುದಿಲ್ಲ ಜೀಯ.

ಅಣ್ಣಗಳು ದ್ವಾರಪಾಲಕರು ಕಾಪಿನ ಕೆ
ಗಣ್ಣ ದೈತ್ಯರ ತಲೆಗಡಿದು
ಹೆಣ್ಣಾಳ್ಗಳೆನ್ನದೆ ತಂದಿಕ್ಕಿ ಹಿಡಿತಂದು
ಚಿಣ್ಣನನೆಮಗೊಪ್ಪಿಸೆಂದ ೩೧

ದ್ವಾರಪಾಲಕ ಹಿರಿಯಣ್ಣರ, ಕಾವಲಿನ ಕೆಂಗಣ್ಣ ರಕ್ಕಸರ ತಲೆಕಡಿದು, ಹೆಣ್ಣಾಳ್ಗಳೆನ್ನದೆ ತುಂಡರಿಸಿ, ಚಿಣ್ಣನನ್ನು ಹಿಡಿದು ತಂದು ನಮಗೆ ಒಪ್ಪಿಸೆಂದ.

ಸಂತು ನಿನ್ನಭಿಮತ ಕೃಷ್ಣನೊಳು ಕಾಳಗ
ಬಂತು ಬಾಣಾಖ್ಯ ಕೇಳೆನಲು
ಕಂತುಕುಮಾರನ ಹಿಡಿತರಲು ಖಳನೆದ್ದು
ನಿಂತು ಬೀಳ್ಕೊಟ್ಟ ಮಂತ್ರಿಯನು ೩೨

ನಿನ್ನ ಅಭಿಮತ ಸಂತು(<ಸಂದಿತು=ತಿಳಿಯಿತು, ತಲುಪಿತು) ಕೃಷ್ಣನೊಡನೆ ಕಾಳಗ ಬಂತು, ಬಾಣಾಖ್ಯ ಚಕ್ರವರ್ತಿ ಕೇಳು ಎನ್ನಲು, ಮನ್ಮಥನ ಮಗನನ್ನು ಹಿಡಿತರಲು ಬಾಣ ಎದ್ದು ನಿಂತು ಮಂತ್ರಿಯನ್ನು ಬೀಳ್ಕೊಟ್ಟನು.

ವೃದ್ಧಶ್ರವ ಮುಖ್ಯ ಸುರಭೂಜದ ಬೇರ್ಗೆ
ಕುದ್ದಾಳ ತಾವೆಂದು ಖಳರು
ಎದ್ದರು ಮಂತ್ರಿಯೊಡನೆ ನಡೆಗೊಂಡರನಿ
ರುದ್ಧನ ಪಿಡಿವ ಪೆರ್ಮೆಯಲಿ ೩೩

ವೃದ್ಧ ಶ್ರವರೂ ಸಹ ತಾವು ಕಲ್ಪವೃಕ್ಷದ ಬೇರಿಗೆ ಗುದ್ದಲಿ ಎಂದು ಎದ್ದು ಮಂತ್ರಿಯೊಡನೆ ನಡೆಗೊಂಡರು, ಅನಿರುದ್ಧನನ್ನು ಹಿಡಿಯುವ ಹೆಮ್ಮೆಯಿಂದ ಕಾತರದಿಂದ.

ನೋಡಲು ಬೆಟ್ಟಗಳಿಗೆ ಕೈಕಾಲ್ಗಳು
ಮೂಡಿದಂತದಟುಳ್ಳ ಭಟರು
ಸೂಡಿದ ಬಾಸಿಂಗ ಡೌಡೆ ಜೇಗಟೆ ದನಿ
ಮಾಡಿಸುತ್ತೈದಿದರು ಖಳರು ೩೪

ಬೆಟ್ಟಗಳಿಗೆ ಕೈಕಾಲು ಮೂಡಿದುವೊ ಏನೋ ಎಂಬಂಥ ಅದಟುಳ್ಳ ಭಟರು ಬಾಸಿಂಗ ಧರಿಸಿ ಡೌಡೆ, ಜೀಗಟೆ ಶಬ್ದದೊಂದಿಗೆ ನಡೆದು ಬಂದರು

ಇಂತಪ್ಪ ಬಿರುದಿನ ಹೊಳಕೆಯ ಭಟಸಮೂಹ
ಮುಂತಾರ್ಭಟಿಸುತ್ತೈತರಲು
ಅಂತಸ್ಥದೊಳೊರ್ವಳು ಬಂದುಸುರ್ದಳೇ
ಕಾಂತದಿ ಮಂತ್ರಿ ನಂದನೆಗೆ ೩೫

ಇಂಥ ಬಿರುದಿನ ತೇಜಸ್ವಿ ಭಟಸಮೂಹ ಮುಂದೆ ಮುಂದೆ ಆರ್ಭಟಿಸುತ್ತ ಬರಲು, ಒಬ್ಬಳು ಒಳಗಿನ ಗುಟ್ಟನು ಬಹಿರಂಗವಾಗಿ ರಟ್ಟುಮಾಡದೆ ಏಕಾಂತದಲ್ಲಿ ಮಂತ್ರಿಜೆಗೆ ಉಸುರಿದಳು.

ಬಂದು ನಾರದ ಮುನಿ ಖಳರಾಯನೊಡನೆ ಹೀ
ಗೆಂದ ಮಾತುಗಳೆಲ್ಲವನು
ಒಂದು ಬಿಡದ ಹಾಗೆ ಪೇಳಿದುದನು ಕೇಳಿ
ನೊಂದಳು ವರ ಚಿತ್ರಲೇಖೆ ೩೬

ನಾರದ ಮುನಿ ಬಾಣನೊಡನೆ ಈ ಬಗ್ಗೆ ಆಡಿದ ಮಾತುಗಳೆಲ್ಲವನ್ನು ಒಂದನ್ನೂ ಬಿಡದೆ ಹೇಳಿದ್ದನ್ನು ಕೇಳಿ ಚಿತ್ರಲೇಖೆ ನೊಂದುಕೊಂಡಳು.

ಬಗೆವೆತ್ತ ಬಾಗಿಲ ಕದಕೆ ವಜ್ರ ಲಾಳವಿಂ
ಡಿಗೆ ಬೀಗಮುದ್ರೆಯ ಮಾಡಿ
ಮಿಗೆ ವಿಶ್ವಾಸಿ ತಾಟಕಿ ರಾಕ್ಷಸಿಯರ
ತೆಗೆಯದೆ ಕಾಪ ನಿಕ್ಕಿದಳು ೩೭

ಬಾಗಿಲ ಕದಕ್ಕೆ ವಜ್ರ ಲಾಳವಿಂಡಿಗೆ(ಅಗುಳಿ)ಬೀಗ ಮುದ್ರೆಗಳನ್ನು ಮಾಡಿ, ವಿಶ್ವಾಸದ ತಾಟಕಿ ಮೊದಲಾದ ರಾಕ್ಷಸಿಯರ ಕಾವಲನ್ನು ಇಕ್ಕಿದಳು.

ತೋಟಿಗರ ತರಿದಿಕ್ಕಿದಿರಾಂತ ದೈತ್ಯ ವ
ಧೂಟಿಯ ಕರೆದು ತನ್ನೊಡನೆ
ಸೂಟಿಯೊಳು ಸಾಗೆ ಕೆಯ್ಯ ಖಡ್ಗವನಿತ್ತು
ದಾಟಿಸಿಕೊಂಡಳೆಲ್ಲರನು ೩೮

ಜಗಳಗಂಟರನ್ನು ತರಿದಿಕ್ಕಿ, ಎದಿರು ಬಂದ ರಕ್ಕಸ ಹೆಣ್ಣಿಗೆ ತನ್ನ ಕೈಖಡ್ಗವನ್ನು ಕೊಟ್ಟು ವೇಗವಾಗಿ ಸಾಗಬೇಕೆಂದು ಎಲ್ಲರನ್ನು ತನ್ನತ್ತ ದಾಟಿಸಿಕೊಂಡಳು.

ಬಿಲ್ಲವರು ಪರಿಗೆ ಪಟ್ಟೆಯ ಶೂಲ ಶಲ್ಲೆಹ
ಭಲ್ಲೆಯರ್ಬಲವಂತೆಯರನು
ಎಲ್ಲರ ತರುಬಿ ಹರ್ಮ್ಯವ ಹತ್ತಿ ಪೇಳ್ದಳು
ಪುಲ್ಲಶರಾತ್ಮ ಸಂಭವಗೆ ೩೯

ಬಿಲ್ಲಿನವರು, ಪರಿಗೆ(ಗುರಾಣಿ), ಪಟ್ಟೆಯ (ಉದ್ದವಾದ ಕತ್ತಿ), ಶೂಲ(ಚೂಪಾದ ತಂದಿಯುಳ್ಳ ಆಯುಧ) ಶಲ್ಲೆಹ(<ಶಲ್ಯ ಈಟಿ), ಭಲ್ಲೆಯ(ಭರ್ಜಿ)ಗಳ ಬಲಾಢ್ಯರನ್ನು ತರುಬಿಕೊಂಡು ಸೌಧವನ್ನು ಹತ್ತಿ ಹೂಬಾಣನ ಮಗನಿಗೆ ಹೇಳಿದಳು.

ಖೂಳ ನಾರದ ಬಂದು ಬಾಣನೊಳು ಚಾಡಿಯ
ಹೇಳಲುಜ್ಜಾಗಿಸಿದನಂತೆ
ಕಾಳ ರಕ್ಕಸ ನಿನ್ನ ಹಿಡಿತರಲು ಬೆಸನ ಕೊ
ಟ್ಟಾಳನಟ್ಟಿಹನು ಇಲ್ಲಿಗೆ ೪೦

ನಾರದ ಬಂದು ಬಾಣನೊಡನೆ ಚಾಡಿ ಹೇಳಿದನಂತೆ, ಖೂಳ ರಕ್ಕಸ ನಿನ್ನನ್ನು ಹಿಡಿದು ತರಲು ಅಪ್ಪಣೆ ಕೊಟ್ಟು ಆಳನಟ್ಟಿರುವನು ಇಲ್ಲಿಗೆ.

ಬಂದಿದೆ ದಡಿಗ ರಕ್ಕಸವಡೆ ಬಾಗಿಲೊಳು
ನಿಂದಿದೆ ಘುಡು ಘುಡಿಸುತ್ತ
ಚಂದಿರವದನೆಗೋಸ್ಕರ ನಿನ್ನ ನಾನಿಲ್ಲಿ
ತಂದಿಕ್ಕಿ ಕೆಡಿಸದೆನಕಟ ೪೧

ದಡಿಗ ರಕ್ಕಸಪಡೆ ಬಂದು ಘುಡುಘುಡಿಸುತ್ತ ಬಾಗಿಲಲ್ಲಿ ನಿಂತಿದೆ. ಚಂದ್ರಮುಖಿಗಾಗಿ ನಿನ್ನನ್ನು ನಾನಿಲ್ಲಿಗೆ ಕರೆತಂದು ಕೆಡಿಸಿದೆನು, ಅಯ್ಯೋ ಎಂದು ನೊಂದುಕೊಂಡಳು.

ದುಕ್ಕವೇಕೆ ಮಾತೃಕೆಯ ಗರ್ಭವ ಮತ್ತೆ
ಹೊಕ್ಕಡೆ ಬಿಡುವುದೆ ಪ್ರಾಪ್ತಿ
ಅಕ್ಕರ ಹಣೆಯೊಳಿರ್ದನಿತಾದಪುದೆಂದು
ನಕ್ಕನು ಮಂತ್ರಿಜೆಯೊಡನೆ ೪೨

ದುಃಖವೇತಕ್ಕೆ? ತಾಯಿಯ ಗರ್ಭಹೊಕ್ಕರೂ ಪ್ರಾಪ್ತಿ(ವಿಧಿ)ಬಿಡುವುದೆ? ಹಣೆಯ ಬರಹದಂತೆ ಆಗುತ್ತದೆ ಎಂದು ಮಂತ್ರಿಜೆಯೊಡನೆ ನಕ್ಕನು.

ನಳಿನೋದ್ಭವ ಕೋಟಿವತ್ಸರ ತನುವಿಡಿ
ದಳಿದೊಡದೇನು ವೃಥಾಯ
ಸುಳಿಗುರುಳಬಲೆಯ ತೋಳತೆಕ್ಕೆಯೊಳರೆ
ಗಳಿಗೆ ಬಾಳಲು ಮುಕ್ತಿಯಹುದು ೪೩

ಕಮಲೋದ್ಭವನಾದ ಬ್ರಹ್ಮ ಕೋಟಿ ವತ್ಸರ ಬದುಕಿದರೇನು ವೃಥಾಯ? ಸುಳಿಗುರುಳ ಅಬಲೆಯ ತೋಳಿನ ತೆಕ್ಕೆಯಲ್ಲಿ ಅರಗಳಿಗೆ ಜೀವಿಸಲು ಮುಕ್ತಿ ಲಭಿಸುವುದು.

ಹೊಳೆವ ಕೆಂಬಲ್ಲು ಚೆಂದುಟಿ ಕಂಬುಕಂಠ ಕಂ
ಕುಳು ಕೋಮಲ ನುಣ್ಮೊಲೆಯ
ಸ್ಥಳದಲ್ಲಿ ಮೊಗವಿಟ್ಟು ಮುಂಡಾಡಿ ಸೊಗ ಮಯ್ಯೊ
ಳ ವಟ್ಟು ಸಾವುದು ಸುಕೃತ ೪೪

ಹೊಳೆಯುವ ಕೆಂಪು ಹಲ್ಲು, ಕೆಂದುಟಿ, ಶಂಖದ ಕೊರಳು, ಕಂಕುಳು, ನುಣ್ಮೊಲೆಯ ಸ್ಥಳದಲ್ಲಿ ಮುಖವಿಟ್ಟು ಮುದ್ದಾಡಿ ಸುಖ ಮೈಯೊಳಗೆ ಅಳವಿಟ್ಟು ಸಾಯವುದು ಪುಣ್ಯವೇ ಸರಿ.

ಏಸು ಜನ್ಮದ ತಪಃ ಫಲವಿದು ಬಂದುದೊ
ಈ ಸೌಂದರಿಯ ಸಂಭೋಗ
ಲೇಸಿನೊಳು ತನುವ ತೆತ್ತೊಡೆ ಶಕ್ರ ಸೌಭಾಗ್ಯ
ಭಾಸುರವಹುದೆಂದ ನಗುತ ೪೫

ಎಷ್ಟು ಜನ್ಮದ ತಪಸ್ಸಿನ ಫಲವೊ ಏನೋ, ಈ ಸುಂದರಿಯ ಸಂಭೋಗ. ಲೇಸಿನಲ್ಲಿ ಪ್ರಾಣಬಿಟ್ಟರೆ ಇಂದ್ರ ವೈಭೋಗ ದೊರಕುವುದೆಂದನು ನಗುತ್ತ.

ಅವಕಾಲವ ಮೀರಿದರು ಜೀವವುಳ್ಳವರು
ಸಾವಕಾಲವ ಮೀರಬಹುದೆ
ಈ ವನಿತೆಯೊಂದಿಗೆ ಸುಖವಟ್ಟು ಮಡಿದಡೆ
ಜೀವನ್ಮುಕ್ತಿಯೆಂದನವನು ೪೬

ಜೀವ ಉಳ್ಳವರು ಯಾವ ಕಾಲ ಮೀರಿದರೂ ಸಾವ ಕಾಲ ಮೀರಬಹುದೆ? ಈ ವನಿತೆ ಜೊತೆ ಸುಖಪಟ್ಟು ಸತ್ತರೆ ಜೀವನ್ಮುಕ್ತಿ ಎಂದನು.

ಅರಲಂಬನಾತ್ಮಜ ನುಡಿದ ವಾಕ್ಯವ ಕೇಳಿ
ತರಳಾಕ್ಷಿ ದುಕ್ಕದಿ ತನ್ನ
ಕೊರಲನುತ್ತರಿಸೆಂದು ಪಾದಪದ್ಮಕೆ ಬಿದ್ದು
ಹೊರಳಲ್ಕೆ ನೋಡಿ ಚಿಂತಿಸಿದ ೪೭

ಹೂಬಾಣನ ಮಗ ನುಡಿದ ಮಾತನ್ನು ಕೇಳಿ ಉಷಾದೇವಿ ದುಃಖದಿಂದ ತನ್ನ ಕೊರಳನ್ನು ಉತ್ತರಿಸಿ(ಕತ್ತರಿಸಿ) ಎಂದು ಪಾದಕ್ಕೆ ಬಿದ್ದು ಹೊರಳಾಡಲು ಅನಿರುದ್ಧ ಅದನ್ನು ನೋಡಿ ಚಿಂತಿಸಿದ.

ನಿರಿಗುರುಳಬಲೆ ನಿನ್ನಯ ದಿವ್ಯ ದೇಹವ
ಬರಿನೆಲದೆಡೆಯಲ್ಲಿ ಹರಹಿ
ಬಿರುಗಲ್ಲ ಗಾಯದಿ ಮಿಡುಕುವ ನಾಗರ
ಮರಿಯಂತೆ ಹೊರಳ ಬೇಡೆಂದ ೪೮

ನಿನ್ನ ದಿವ್ಯ ದೇಹವನ್ನು ಬರಿನೆಲದ ಮೇಲೆ ಹರಹಿ ಬಿರುಗಲ್ಲ ಗಾಯಿದಿಂದ ಮಿಡುಕುವ ನಾಗರಹಾವಿನ ಮರಿಯಂತೆ ಹೊರಳಾಡಬೇಡ ಎಂದ.

ಕಂಬನಿದೊಡೆದು ಕಾಂತೆಯ ಬಟ್ಟ ಮುಖಚಂದ್ರ
ಬಿಂಬದ ಚುಬುಕಾಗ್ರವಿಡಿದು
ನಂಬಿಸಿ ಚುಂಬನಗೊಟ್ಟು ರಂಗು ಮಾಣಿಕ
ದಂಬುಲವಿತ್ತು ಮುದ್ದಿಸಿದ ೪೯

ಕಣ್ಣೀರನ್ನು ಒರೆಸಿ, ಕಾಂತೆಯ ಪೂರ್ಣಚಂದ್ರ ಮುಖದ ಗಲ್ಲದ ತುದಿಯನ್ನು ಹಿಡಿದು ಚುಂಬಿಸಿ ಮನದನ್ನೆಯನ್ನು ಸಂತವಿಸಿದನು.

ಎಂತು ಸೈರಿಪೆ ಕನಸಲಿ ಕಂಡು ವಿರಹದಿ
ಭ್ರಾಂತಿವಡೆದ ನೀರೆ ಎನ್ನ
ಅಂತಿಮ ಕಾಲದಿ ನೀ ಜೀವಿಸು ಬಾರೆಂದು
ಸಂತವಿಸಿದನು ಮಾನಿನಿಯ ೫೦

ಕನಸಿನಲ್ಲಿ ಕಂಡು ವಿರಹದಲ್ಲಿ ಭ್ರಾಂತಿಗೊಂಡ ನನ್ನ ಅಂತಿಮಕಾಲದಲ್ಲಿ ನೀನು ಜೀವಿಸು ಬಾರೆಂದು ಮನದನ್ನೆಯನ್ನು ಸಂತವಿಸಿದನು.

ಪುಂಡರೀಕಾಯತೇಕ್ಷಣೆ ದುಃಖ ಬೇಡ
ಗಂಡನ ನೋಡಿ ಚಿತ್ತೈಸು
ದಂಡನೆಲ್ಲವ ಬರಿಗೈದ ಮೇಲಳಿದರೆ
ಕಂಡ ಬುದ್ಧಿಯ ಕಾಂಬುದೆಂದ ೫೧

ಕಮಲದಳದಂತಹ ವಿಶಾಲಾಕ್ಷಿ ದುಃಖಿಸಬೇಡ, ಗಂಡನ ಮುಖ ನೋಡಿ ಸೈರಿಸಿಕೋ, ಸೈನ್ಯವನ್ನೆಲ್ಲ ಬರಿದು ಮಾಡಿದ ಮೇಲೆ ಸತ್ತರೆ ನೀನು ಕಂಡ ಬುದ್ಧಿಯ ಕಾಣುವುದು ವಿಹಿತ.

ವಿಧುಮುಖಿಯೊಡನೆ ಮಂತ್ರಿಜೆ ಬುದ್ಧಿವೇಳ್ದಳು
ಯದು ಕುಲೋತ್ತಮನಳಿವಿನಲಿ
ಬದುಕುವರು ನಾವಲ್ಲ ದುಕ್ಕ ಬೇಡೆಂದು ಕ
ಣ್ಣುದಕವ ತೊಡೆದಳಾಯಕನ ೫೨

ಚಂದ್ರಮುಖಿಗೆ ಗೆಳತಿ ಚಂದ್ರಲೇಖೆ ಬುದ್ಧಿ ಹೇಳಿದಳು. ಯದುವಂಶ ಲಲಾಮ ಅಳಿದರೆ ನಾವು ಬದುಕುವವರಲ್ಲ ದುಃಖ ಬೇಡವೆಂದು ಆಕೆಯ ಕಣ್ಣೀರನ್ನು ತೊಡೆದಳು.

ಕಟ್ಟಾಣಿ ನುಡಿಗೇಳಿ ಕಡುಮೆಚ್ಚಿ ಪರಿತೋಷ
ವಟ್ಟು ಬಲಾನ್ವಿತ ನಗುತ
ಉಟ್ಟದಟ್ಟಿಯು ಚಲ್ಲಣವು ಕಂಗೊಳಿಸಲ್ಕೆ
ನಿಟ್ಟಡಿಯಿಟ್ಟನಾ ಕುವರ ೫೩

ಕಟ್ಟಾಣಿ ಮಾತನ್ನು ಕೇಳಿ, ತುಂಬ ಮೆಚ್ಚಿ ಸಂತೋಷಗೊಂಡು, ಸಮರ್ಥಶಾಲಿ ನಗುತ್ತ ಉಟ್ಟದಟ್ಟಿ, ಚಲ್ಲಣ ಕಂಗೊಳಿಸುತ್ತಿರಲು ನಿಟ್ಟಡಿ(ನಿಡಿದಾದ ಹೆಜ್ಜೆ) ಯಿಟ್ಟನು.

ಒಮ್ಮಾರು ಕೇಶಪಾಶವ ತ್ರಿಭಾಗ ಮಾಡಿ
ಘಮ್ಮನೆ ನಿಡುಜಡೆವೆಣೆದು
ಕಮ್ಮಲರ್ಗಳ ಸೂಡಿ ಸಿರಿಮುಡಿಯಲಿ ವೀರ
ಚಿಮ್ಮುರಿಯನು ಹಾಯ್ಕಿದನು ೫೪

ಒಂದು ಮಾರುದ್ದದ ಕೇಶಪಾಶವನ್ನು ಮೂರು ಭಾಗ ಮಾಡಿ ನಿಡಿದಾದ ಜಡೆಯನ್ನು ಹೆಣೆದು, ಸುಗಂಧಯುಕ್ತ ಪುಷ್ಪಗಳನ್ನು ಮುಡಿದು, ಸಿರಿಮುಡಿಯಲ್ಲಿ ವೀರರುಮಾಲನ್ನು ಧರಿಸಿದನು.

ಯಾದವರಾಯ ಕತ್ತುರಿ ತಿಲಕವನಿಟ್ಟು
ದ್ವಾದಶ ನಾಮಾಂಕಿತದಿ
ಮಾಧವ ಕೃಷ್ಣ ಗೋವಿಂದ ಎಂದು ಹರಿಯ
ಪದವ ಬಲಗೊಂಡ ಮುದದಿ ೫೫

ಯಾದವ ಯುವರಾಜ ಕಸ್ತೂರಿಯ ಬೊಟ್ಟನಿಟ್ಟು, ದ್ವಾದಶ ನಾಮಗಳನ್ನು ಧರಿಸಿ, ಮಾಧವ ಕೃಷ್ಣ ಗೋವಿಂದ ಎಂದು ಶ್ರೀಹರಿಯನ್ನು ಪ್ರದಕ್ಷಿಣೆ ಮಾಡಿದನು.

ಪೂಸಿದ ಮೈಗೆ ಸುಗಂಧವ ಕರ್ಣಕೆ
ವಾಸಿತ ದಿವ್ಯ ಜವಾದಿ
ಭಾಸಿತ ನವರತ್ನಾಭರಣಗಳಿಂದ
ಭೂಷಿತನಾದ ಧೈರ್ಯದಲಿ ೫೬

ಮೈಗೆ ಸುಗಂಧವನ್ನು ಲೇಪಿಸಿದ, ಕರ್ಣಕೆ ಪುನುಗನ್ನು ಹಚ್ಚಿದ, ಪ್ರಕಾಶಮಾನವಾದ ನವರತ್ನದ ಆಭರಣಗಳಿಂದ ಭೂಷಿತನಾದ.

ಕೊಬ್ಬಿದ ಭುಜಯುಗಳದಿ ವೀರರಸದಿಂ
ದುಬ್ಬಿದ ನಿಡಿದೋಳ್ಗಳೆಡೆಯಲಿ
ಹಬ್ಬಿದ ತನುಕಾಂತಿ ಕಾಳಗವೆನಲು ರಣ
ಗೊಬ್ಬಲಿ ಗರುವನೊಪ್ಪಿದನು ೫೭

ಕೊಬ್ಬಿದ ಎರಡು ಭುಜಗಳಲ್ಲಿ, ವೀರ್ಯಶೌರ್ಯದಿಂದುಬ್ಬಿದ ನಿಡಿದೋಳುಗಳ ಎಡೆಯಲ್ಲಿ ಹಬ್ಬಿದ ದೇಹಕಾಂತಿಯ ಗರುವನು ರಣಗೊಬ್ಬಿನಿಂದ ಒಪ್ಪಿದನು.

ಕೇಶವನಾತ್ಮಸಂಭವ ಸೂನು ವೀರಾ
ವೇಶದಿ ಹೊಗರೇರುತಿರಲು
ಆ ಸಮಯದಿ ಚಿತ್ರಲೇಖೆ ನಿರ್ಮಿಸಿದಳು
ಭಾಸುರ ರಣಯಂತ್ರ ಮಣಿಯ ೫೮

ಕೃಷ್ಣನ ಮೊಮ್ಮಗ ವೀರಾವೇಶದಿಂದ ಕಾಂತಿ ಮೂಡುತ್ತಿರಲು, ಆ ಸಮಯದಲ್ಲಿ ಚಿತ್ರಲೇಖೆ ಪ್ರಕಾಶಮಾನವಾದ ರಣಯಂತ್ರ ಮಣಿಯನ್ನು ನಿರ್ಮಿಸಿದಳು.

ಅರಿಗಳ ಕೆಯ್ಯ ಕೂರಸಿಧಾರೆಯ ಗಾಯ
ಶರೀರದೊಳಗೆ ಸಂಧಿಸಲು
ಪರಿಹರಿಪ ಬಾಣಭಯ ನಿವೃತ್ತಿಯ ಭಾ
ಪುರಿಯಲ್ಲಿ ಕಟ್ಟಿದಳವಳು ೫೯

ಶತ್ರುಗಳ ಕೈಯಲ್ಲಿನ ಹರಿತವಾದ ಕತ್ತಿಯ ಗಾಯ ದೇಹದಲ್ಲಿ ಆದಾಗ, ಪರಿಹರಿಸುವ ಬಾಣ ಭಯನಿವೃತ್ತಿಯನ್ನು ಭಾಪುರಿ(ತೋಳಿನ ಆಭರಣ)ಯಲ್ಲಿ ಕಟ್ಟಿದಳು.

ಮನಸಿಜನಾತ್ಮಜ ಬರಿಕೈಯೊಳಿರ್ಪುದು
ಸನುಮತವಲ್ಲೆಂದು ತಿಳಿದು
ಅನುಪಮ ಮಂತ್ರಶಕ್ತಿಯನಟ್ಟಿ ತರಿಸಿದಳು
ಧನುಶಿಲೀಮುಖ ಮಹಾಯುಧವ ೬೦

ಅನಿರುದ್ಧ ಬರಿಗೈಯಲ್ಲಿರುವುದು ಸರಿಯಲ್ಲವೆಂದು ತಿಳಿದು ಅನುಪಮ ಮಂತ್ರಶಕ್ತಿಯನ್ನು ಅಟ್ಟಿ ಧನು(ಬಿಲ್ಲು)ಶಿಲೀಮುಖ(ಬಾಣ)ವನ್ನು ತರಿಸಿದಳು.

ಕೊಟ್ಟಳು ಕೋದಂಡ ಬಾಣಗಳ ಮಂತ್ರಿಸಿ
ಬೊಟ್ಟನಿಕ್ಕಿದಳು ಭಾಳದಲಿ
ನೆಟ್ಟನೆ ರಣವ ಜಯಿಸು ಎಂದು ಸೇಸೆಯ
ನಿಟ್ಟಳು ಸಿರಿಮುಡಿಯಲ್ಲಿ ೬೧

ಮಂತ್ರಿಸಿ ಬಿಲ್ಲು ಬಾಣಗಳನ್ನು ಕೊಟ್ಟಳು. ಹಣೆಯಲ್ಲಿ ಬೊಟ್ಟನ್ನು ಇಕ್ಕಿದಳು. ರಣದಲ್ಲಿ ನೆಟ್ಟನೆ ಜಯಿಸು ಎಂದು ಸಿರಿಮುಡಿಗೆ ಸೇಸೆಯನಿಟ್ಟಳು.

ಅವಳಿಷ್ಟು ಮಾಡಿ ಕುಸ್ತರಿಸಲ್ಕೆ ಕಡುಮೆಚ್ಚಿ
ಧವಳ ಸರೋಜಾಯತಾಕ್ಷಿ
ಪವಳಾಧರಾಮೃತವುಣಿಸಿ ಪರಿಮಳದುಬ್ಬು
ಗವಳವನಿತ್ತಳಾಳ್ದನಿಗೆ ೬೨

ಅವಳು ಇಷ್ಟನ್ನು ಮಾಡಿ ಉಪಚರಿಸಿದಾಗ ಉಷಾದೇವಿ ಮೆಚ್ಚಿ ಮುತ್ತಿಕ್ಕಿ, ಅವೇಶ ಜನಕ ತಾಂಬೂಲವನ್ನು ಇನಿಯನಿಗೆ ಕೊಟ್ಟಳು.

ಕಂದರ್ಪ ಸೂನು ಸಂವರಿಸಿಕೊಂಬನ್ನೆಗಂ
ಬಂದನು ಬಲವಂತ ಮಂತ್ರಿ
ಮಂದಬುದ್ದಿಯ ಬಿಟ್ಟು ಬಾಗಿಲ ತೆಗೆಸ ಹೇ
ಳೆಂದಾಯಕಗೆ ಹೇಳಿಸಿದ ೬೩

ಅನಿರುದ್ಧ ಸಿದ್ಧಗೊಳ್ಳುವಷ್ಟರಲ್ಲಿ ಕುಂಭಾಂಡ ಮಂತ್ರಿ ಬಂದು ಮಂದಬುದ್ಧಿಯನ್ನು ಬಿಟ್ಟು ಬಾಗಿಲು ತೆಗೆಸಲು ಆಕೆಗೆ ಹೇಳಿಸಿದ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೪

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯಚಂದ್ರರು ಇರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

# ೩೪. ಅನಿರುದ್ಧ ಕುಂಭಾಂಡರ ಕಾಳಗ

ಪೂತನಿ ವಿಷದ ಮೊಲೆಯನಿತ್ತ ಹಂಗಿಗೆ
ಮಾತಾಸ್ಪದವ ಪಾಲಿಸಿದ
ಭೂತಳ ವಿಭು ಕೃಷ್ಣರಾಯನ ಕೂರ್ತು ಪ್ರ
ಖ್ಯಾತ ಸತ್ಕೃತಿಯ ವಿಸ್ತರಿಸು ೧

ಪೂತನಿ ವಿಷದ ಮೊಲೆ ಉಣ್ಣಿಸಿದ ಹಂಗಿಗೆ ಮಾತೆ ಎಂಬ ಗೌರವವನ್ನು ಪಾಲಿಸಿದ ಶ್ರೀಕೃಷ್ಣನನ್ನು ಕುರಿತು ಸತ್ಕಥೆಯನ್ನು ವಿಸ್ತರಿಸು.

ಲಾಲಿಸು ಲಲತಾಂಗೋಪಾಂಗದಿಂದ ಕ
ಣ್ಣಾಲಿಗೆ ಸುಖವನೆಯ್ದಿಸುವ
ಬಾಲೆಯರ ಮಂಡೆ ಮಾಣಿಕವೆ ಸಮರ ಸ
ಲ್ಲೀಲೆಯ ಕೃತಿಯ ವಿಸ್ತರಿಪೆ ೨

ಸುಂದರ ಅಂಗೋಪಾಂಗಗಳಿಂದ ಕಣ್ಣಿಗೆ ಸುಖಸಂತೊಷವನ್ನು ನೀಡುವ ತರುಣಿಯರ ಶಿರೋರತ್ನವೆ, ನಿನಗೆ ಯುದ್ಧದ ಶೌರ್‍ಯ ಪರಾಕ್ರಮದ ಕಥಾ ಭಾಗವನ್ನು ಬಿತ್ತರಿಸುವೆನು.

ಕುಂಭಾಂಡ ಮಂತ್ರಿವರ್‍ಯನ ಬಾಗಿಲ ತೆಗೆ
ಸೆಂಬ ನಿಷ್ಠುರದ ವಾಕ್ಯಗಳ
ಮುಂಬರಿದೊರ್ವಳು ಕುವರಿಗುಸುರಲು ನುಡಿದಳು
ಬಿಂಬಾಧರೆ ಧೈರ್‍ಯದಲಿ ೩

ಕುಂಭಾಂಡ ಮಂತ್ರಿಯ ಬಾಗಿಲನ್ನು ತೆಗೆಸು ಎಂಬ ನಿಷ್ಠುರದ ಮಾತುಗಳನ್ನು ಒಬ್ಬಳು ಮುಂದಾಗಿ ಬಂದು ಉಷಾದೇವಿಗುಸುರಲು ಆಕೆ ಧೈರ್‍ಯವಾಗಿ ಹೀಗೆ ನುಡಿದಳು.

ತೆಗೆಸುವಳಲ್ಲ ಕವಾಟವ ಬದುಕಿನೊಳು
ಸೊಗಸುವಳಲ್ಲಾಳ್ದನಳಿಯೆ
ಮಿಗಿಸುವಳಲ್ಲ ದೇಹದ ಪರಿಸ್ತರಣವ
ನಗಿಸ ಹೇಳೆಂದು ಪೇಳಿದಳು ೪

ಕದವನ್ನು ತೆಗೆಸುವವಳು ನಾನಲ್ಲ, ನನ್ನಿನಿಯ ಅಳಿದರೆ ನಾನು ಬದುಕಿನಲ್ಲಿ ಸೊಗಸುಪಡಲು ದೇಹವನ್ನು ಉಳಿಸಿಕೊಳ್ಳುವವಳಲ್ಲ. ಸಮಾಧಿಯನ್ನು ಅಗೆಸಲು ಹೇಳೆಂದು ಸೇವಕಿಯರಿಗೆ ನುಡಿದಳು.

ನಾರದ ವಚನ ತಪ್ಪಲರಿಯನು ಕನ್ಯಾ
ಚೋರ ಸಿಕ್ಕಿದನೆಂದೆನುತ
ದ್ವಾರ ಕವಾಟವ ನೂಂಕಿಸಲ್ತರಿಸಿದ
ಹೇರಾನೆಗಳ ವಂಗಡವ ೫

ನಾರದನ ಮಾತು ಸುಳ್ಳಾಗುವುದಿಲ್ಲ. ಕನ್ಯಾಚೋರ ಸಿಕ್ಕಿದನೆಂದು ಬಾಗಿಲ ಕದವನ್ನು ನೂಕಿಸಲು ದೊಡ್ಡ ಆನೆಗಳ ಸಮೂಹವನ್ನು ತರಿಸಿದ.

ಮದಗಜವಿಂಡು ಬಂದುದ ಕಂಡು ಸ್ಮರಸುತ
ಹದವಿಲ್ಲ ತೆಗೆದು ಜೇವೊಡೆದು
ಸುದತಿ ಶಿರೋಮಣಿ ನೋಡುತಿರೆಂದಲ್ಲಿ
ಗೊದಗಿದನಾರ್ಭಟಿಸುತಲಿ ೬

ಮದಿಸಿದ ಆನೆಗಳು ಬಂದುದನ್ನು ಕಂಡು ಅನಿರುದ್ಧ ಹದವಿಲ್ಲ (ಪರಿಪಕ್ವ ಬಿಲ್ಲನ್ನು) ಕೈಯಲ್ಲಿ ಹಿಡಿದು ಜೇಂಕಾರ ಮಾಡಿ, ಮನದನ್ನೆ ನೋಡುತಿರು ಎಂದಲ್ಲಿಗೈತಂದನು ಅಬ್ಬರಿಸುತ್ತಾ

ಬಾಗಿಲ ತಿವಿದು ನೂಂಕುವ ದಂತಿಗೊರಳ ವಿ
ಭಾಗಿಸಿ ಕೂರ್ಗಣೆಯಿಂದ
ತಾಗಿಸಿ ಜೋದರ ತಲೆಯನಾಗಸದತ್ತ
ಸಾಗಿಸಿದನು ಕೇಳು ಕೆಳದಿ ೭

ಬಾಗಿಲ ಕದವನ್ನು ತಿವಿದು ನೂಕುವ ಆನೆಯ ಕೊರಳನ್ನು ಹರಿತವಾದ ಬಾಣದಿಂದ ಸೀಳಿ, ಮಾವುತ ಯೋಧರ ತಲೆಗಳನ್ನು ಆಗಸಕ್ಕೆ ಸಾಗಿಸಿದನು.

ಅವರೆಚ್ಚ ಕೂರ್ಗಣೆ ಬರಲೆದುರಲ್ಲಿಯೇ
ಸವರಿದ ಸರಳುಗಳಿಂದ
ತೆವರಿದ ಪಟುಭಟರಸುವನೆಲ್ಲವ ಕಟ್ಟಿ
ಕವರಿ ಕಾಲಗೆ ಸಮರ್ಪಿಸಿದ ೮

ಅವರು ಬಿಟ್ಟ ಬಾಣಗಳು ಬರಲು ಎದುರಲ್ಲಿಯೆ ತನ್ನ ಬಾಣಗಳಿಂದ ಅವುಗಳನ್ನು ಕೊಚ್ಚಿದ. ಶತ್ರು ಸೈನಿಕರ ದೇಹ ಪ್ರಾಣಗಳನ್ನೆಲ್ಲ ಒಂದೆಡೆಗೆ ತರುಬುತ್ತಾ, ಗೊರೆಗಟ್ಟಿ ಯಮನಿಗೆ ತಲುಪಿಸಿದ.

ಕಂಡನಾ ಗಜಸಮಸ್ತ ಸಹ ಕೆಡೆದಿರ್ದು
ಮುಂಡಗಳ ತಲೆ ಗಗನದಲಿ
ಚಂಡಪ್ರತಾಪಿಯ ಜಯವಧು ತಿರಿಕಲ್ಲ
ಕೊಂಡಾಡುವಂತೆ ಚಿಮ್ಮಿದನು ೯

ಸಮಸ್ತ ಗಜಗಳು ಕೆಳಗೆ ಬಿದ್ದಿರುವುದನ್ನು ಕಂಡನು. ಆದರೆ ಮುಂಡಗಳಿಂದ ಬೇರ್ಪಟ್ಟ ತಲೆಗಳು ಆಕಾಶದಲ್ಲಿದ್ದವು. ಏಕೆಂದರೆ ಪ್ರಚಂಡ ಪ್ರತಾಪದ ಅನಿರುದ್ಧನ ಜಯವಧು ತಿರಿಕಲ್ಲು(ಅಣ್ಣೆಕಲ್ಲು) ಆಟದಲ್ಲಿ ಕಲ್ಲುಗಳನ್ನು ಮೇಲಕ್ಕೆ ಚಿಮ್ಮಿದಂತೆ ಕಂಡವು.

ಶಂಬರಧ್ವಂಸಿಯ ಸುತ ಮುಝು ಪೂತು ಪೂ
ತೆಂಬ ರಕ್ಕಸರಾಳುಗಳ
ಕುಂಭಾಂಡನಾಜ್ಞೆಯೊಳು ಕವಿಯಲು ಕಡಿದನು
ಹೊಂಬಣ್ಣ ಗರಿಗೋಲ್ಗಳಿಂದ ೧೦

ಕುಂಭಾಂಡನಾಜ್ಞೆಯಂತೆ ಭಲೆಭಲೆ ಭಳಿರೇ ಎಂದು ಕವಿದು ಬಂದ ರಕ್ಕಸ ಸೈನಿಕರನ್ನು ಅನಿರುದ್ಧ ಹೊಂಬಣ್ಣದ ಗರಿಬಾಣಗಳಿಂದ ಕಡಿದನು, ಸವರಿ ಸಮಾಧಿಗೈದನು.

ಕಡಿದನು ಖಳರೆಚ್ಚ ಕೋಲ್ಗಳನು ವಕ್ಷದೊ
ಳಿಡಿದನೆಲ್ಲರಿಗೆ ಕೂರ್ಗಣೆಯ
ಉಡಿದನು ಕಲಹಕಾತುರಿಯದ ದೈತ್ಯರ
ಸಿಡಿದಲೆಗೊಟ್ಟನಾಹವದಿ ೧೧

ದುಷ್ಟರು ಬಿಟ್ಟ ಬಾಣಗಳನ್ನು ತುಂಡರಿಸಿದನು. ಎಲ್ಲರ ಎದೆಯೊಳಗೆ ಹರಿತವಾದ ಬಾಣಗಳನ್ನು ಗಿಡಿದನು. ಕಲಹ ಕಾತರದ ರಕ್ಕಸರನ್ನು ಉಡಿದನು(ತುಂಡು ಮಾಡಿದನು)ಅಷ್ಟೇ ಅಲ್ಲ, ಕದನದಲ್ಲಿ ಎಷ್ಟೋ ಸೈನಿಕರ ಸಿಡಿದಲೆಗಳು ಅಂತರಿಕ್ಷದಲ್ಲಿ ವಾಲಾಡುತ್ತಿದ್ದವು. (ಸ್ವಲ್ಪದೂರದಲ್ಲಿ ನೆಲಕ್ಕೆ ನೆಟ್ಟಿರುವ ಬೊಂಬಿನ ತುದಿಯನ್ನು ಬಗ್ಗಿಸಿ, ಬಲವಂತವಾಗಿ ನೆಲದ ಮೇಲೆ ಕುಳ್ಳಿರಿಸಿದ ಹಗೆಯ ಅಥವಾ ಅಪರಾಧಿಯ ಜುಟ್ಟನ್ನು ಅದಕ್ಕೆ ಕಟ್ಟಿ, ಆಮೇಲೆ ಮಚ್ಚಿನಿಂದ ಅಪರಾಧಿಯ ಕುತ್ತಿಗೆಯನ್ನು ಕತ್ತರಿಸುತ್ತಾರೆ. ಮುಂಡದಿಂದ ಬೇರಾದ ರುಂಡ ಗಳು (ಬೊಂಬು)ವಿನ ತುದಿಯಲ್ಲಿ ಅಂತರಾಟದಲ್ಲ ತೂಗುಯ್ಯೊಲೆಯಾಡುತ್ತಿರುತ್ತದೆ. ಅದಕ್ಕೆ 'ಸಿಡಿದಲೆ ಕೊಡು' 'ಸಿಡಿದಲೆ ಎತ್ತು' ಎಂಬ ನುಡಿಗಟ್ಟುಗಳು ಬಳಕೆಯಲ್ಲವೆ)

ಭಟನಲ್ಲದಿರ್ದಡೆ ಬಾಣನಂದನೆಗೆ ಲಂ
ಪಟನೊರ್ವನಾಜ್ಞಾಪಿಸುವನೆ
ವಟಪತ್ರ ತಲ್ಪನ ಮೊಮ್ಮನಿಂದಸುರರ
ಘಟಬಿದ್ದುವೆಂದರೂರುಗರು ೧೨

ಯೋಧನಲ್ಲದಿದ್ದರೆ ವಿಟನೊಬ್ಬನು ಬಾಣನಂದನೆಗೆ ಆಜ್ಞಾಪಿಸಲು ಸಾಧ್ಯವೆ? ಆಲದೆಲೆಯ ಮೇಲೆ ಮಲಗಿದ ಕೃಷ್ಣನ ಮೊಮ್ಮಗನಿಂದ ರಕ್ಕಸರ ಘಟ(ದೇಹ, ಪ್ರಾಣ) ಬಿದ್ದವು ಎಂದು ಊರವರು ಮಾತಾಡಿಕೊಂಡರು.

ಶಂಬರಾರಿಯ ಕುಮಾರಕ ಮಹಾವೀರನೆಂ
ದೆಂಬುದ ಕಂಡೆವಿಂದಿನಲಿ
ಮುಂಬರಿದೆಸೆವ ಕೈಚಳಕವ ತೋರೆಂದು
ಕುಂಭಾಂಡ ನಿಂದನಾಹವಕೆ ೧೩

ಶಂಬರಾರಿಯಾದ ಮನ್ಮಥನ ಮಗ ಮಹಾವೀರ ಎಂಬುದನ್ನು ಇಂದು ಕಂಡೆವು. ಈಗ ಬಾಣ ಪ್ರಯೋಗಿಸುವ ಕೈಚಳಕ ತೋರೆಂದು ಕುಂಭಾಂಡನೇ ಯುದ್ಧ ಮಾಡಲು ನಿಂತನು.

ನೋಡೆನ್ನ ಕೈಚಳಕವ ಬಾಯಿಪಂತವ
ನಾಡುವರಾವಲ್ಲವೆನುತ
ಹೂಡಿದ ಕೂರ್ಗಣೆಯಿಂದ ದೈತ್ಯನ ಮೆಯ್ಯ
ತೋಡಿದನೈದಂಬಿನಲಿ ೧೪

ನಾವು ಬರೀ ಬಾಯಿ ಪಂತದವರಲ್ಲ, ಕೈಚಳಕವನ್ನು ನೋಡು ಎಂದು ಹೂಡಿದ ಹರಿತವಾದ ಬಾಣಗಳಿಂದ ದೈತ್ಯನ ಮೈಯನ್ನು ತೋಡಿದನು; ಐದಂಬಿನ(ಪಂಚಬಾಣಗಳ) ಗಮ್ಮತ್ತನ್ನು ತೋರಿದನು.

ಪಂಚಬಾಣನ ಕುಮಾರಕನಾದ ಕಾರಣ
ಪಂಚಸಾಯಕವ ತೋರಿಸಿದೆ
ಪಂಚಗುಂಡಿಗೆಯಿಂದ ಕಾದುಕೊ ಎನುತಲಿ
ಪಂಚಸಾಯಕದೊಳಿಕ್ಕಿದನು ೧೫

ಪಂಚಬಾಣನ ಮಗನಾದುದರಿಂದ ನೀನು ಪಂಚಸಾಯಕ(ಬಾಣ)ಗಳನ್ನು ಪ್ರಯೋಗಿಸಿದೆ ಪಂಚಗುಂಡಿಗೆಯಿಂದ (ಐದು ಎದೆಗಳಿಂದ ಅರ್ಥಾತ್ ಮಹಾಧೈರ್ಯದಿಂದ) ಕಾಯ್ದುಕೋ ಎಂದು ಪಂಚಸಾಯಕದಿಂದ (ಭಯಾನಕ ಬಾರಾದಿಂದ) ಕುಂಭಾಂಡನೂ ಹೊಡೆದನು.

ದಪ್ಪಗನಾತ್ಮಜ ದೈತ್ಯನೆಚ್ಚಂಬುಗಳ
ಬಪ್ಪೆಡೆಯಲ್ಲಿ ಕತ್ತರಿಸಿ
ಇಪ್ಪಟ್ಟು ಕೂರ್ಗಣೆ ಕೆನ್ನೀರ ಮಳೆಯಿಂದ
ತೊಪ್ಪನೆ ತೊಯ್ಸಿದನು ಖಳನ ೧೬

ಮನ್ಮಥನ ಮಗ ದೈತ್ಯ ಪ್ರಯೋಗಿಸಿದ ಬಾಣಗಳನ್ನು ಬರುವ ಮಾರ್ಗದಲ್ಲಿಯೇ ಕತ್ತರಿಸಿ, ಎರಡು ಪಟ್ಟು ಹರಿತ ಬಾಣಗಳ ಪ್ರಯೋಗದ ಬಿರುಮಳೆಯಿಂದ ದೈತ್ಯನನ್ನು ತೊಪ್ಪನೆ ತೊಯ್ಸಿದನು.

ಅಹುದೆಲೋ ವೀರಾಧಿವೀರ ಎನ್ನಿದಿರಾಂತು
ಬಹುದು ಸೋಜಿಗ ಸಣ್ಣವನು
ಇಹುದು ಕಣ್ಗಿಡದೆ ನಿನ್ನಸುವಿಂಗೆ ಮೂರ್ಛೆಯ
ತಹುದೀ ಸರಳು ನೋಡೆಂದ ೧೭

ಆಗ ಕುಂಭಾಂಡ, ಎಲೋ ವೀರಾಧಿವೀರ ನೀನಿನ್ನೂ ಸಣ್ಣವನು. ನನ್ನ ಎದುರು ತಾಕುವುದು ನಿಜಕ್ಕೂ ಸೋಜಿಗ. ಕಂಗೆಡದೆ ಇರತಕ್ಕದ್ದು, ಈ ಬಾಣ ನಿನ್ನ ಪ್ರಾಣಕ್ಕೆ ಮೂರ್ಛೆಯನ್ನು ತರುವುದು ನೋಡೆಂದ.

ಹಿಳುಕ ಮಂತ್ರಿಸಿ ತಿರುವಿಗೆ ಹೂಡಿ ಬಹು ಕೈ
ಚಳಕದಿಂದೆಚ್ಚು ಬೊಬ್ಬಿರಿಯೆ
ಖಳ ಕುಲೋತ್ತಮನ ಬಾಣಾರುಣಾಂಬುವಿನಿಂದ
ಜಳಕವಾದುದು ಕುಮಾರನಿಗೆ ೧೮

ಹಿಳುಕನ್ನು(ಗರಿಯುಳ್ಳ ಬಾಣದ ಹಿಂಭಾಗ)ಮಂತ್ರಿಸಿ, ಹೆದೆಗೆ ಹೂಡಿ, ಕೈಚಳಕದಿಂದ ಪ್ರಯೋಗಿಸಿ ಅಬ್ಬರಿಸಲು, ಖಳನ ಬಾಣ ತಂದ ಕೆನ್ನೀರಿನಿಂದ ಅನಿರುದ್ಧನಿಗೆ ಪೂರ್ಣ ಜಳಕ(ಸ್ನಾನ)ವಾದಂತಾಯಿತು.

ಆರಿತು ಯಂತ್ರದಿಂದರುಣಾಂಬು ತನು ಹೊಗ
ರೇರಿತು ಮಸೆತದಿಂದಾಗ
ಮೀರಿತು ಭುಜಶಕ್ತಿ ಮಿತಿಯಿರದ ಮುಖಕಾಂತಿ
ದೋರಿತು ಕಂತು ನಂದನಗೆ ೧೯

ದೇಹವೆಂಬ ಯಂತ್ರದಿಂದ ಕೆಂಪುನೀರು ಹೊರಬರುವುದು ನಿಂತಿತು, ಶರೀರ ಮಸೆತದಿಂದ (ಉಜ್ಜುವಿಕೆಯಿಂದ, ಸಂಘರ್ಷದಿಂದ)ಹೊಳಪುಗೊಂಡಿತು, ಭುಜಶಕ್ತಿ ಮೇರೆ ಮೀರಿತು, ಮಿತಿಯಿರದ ಮುಖಕಾಂತಿ ಅನಿರುದ್ಧನಲ್ಲಿ ತೋರಿತು.

ಕುಂಭಾಂಡ ಕೇಳು ಬಾಣಜೆಯೊಡನೆ ನಂಟು
ಸಂಭವಿಸಲ್ಕೆ ನಾ ಬಂದೆ
ಉಂಬಲು ಬಂದೆಯ ಹೋಗುಹೇಗೆಂದಲ
ರಂಬನ ಸುತನೊದರಿದನು ೨೦

ಕುಂಭಾಂಡ ಕೇಳು, ಬಾಣನಂದನೆಯೊಡನೆ ನಂಟು ಕೂಡಿ ಬರಲು ನಾನು ಬಂದೆ. ಉಂಬಲು(ಊಟಮಾಡಲು)ಬಂದೆಯೊ? ಹೋಗು ಹೋಗು ಎಂದು ಅನಿರುದ್ಧ ಒದರಿದನು.

ಹೋಗದಿರ್ದಡೆ ಮಾಣು ಮತ್ಕಾರ್ಮುಕ ಸುಪ್ರ
ಯೋಗವ ನೋಡೆಂದು ಸೇದಿ
ತೂಗಲುದ್ಯೋಗಿಸಿ ಖಳನ ಪೇರುರದಲ್ಲಿ
ತಾಗಲೆಚ್ಚನು ರಭಸದಿಂದ ೨೧

ಹೋಗದಿದ್ದರೆ ಬೇಡ, ನನ್ನ ಕಾರ್ಮುಕ(ಬಿಲ್ಲು) ಪ್ರಯೋಗವನ್ನು ನೋಡು ಎಂದು ಹೆದೆಯನ್ನು ಸೇದಿ, ಸರಳು ಕುಂಭಾಂಡನ ವಿಶಾಲ ವಕ್ಷದಲ್ಲಿ ನಾಟಿಕೊಳ್ಳುವಂತೆ ಪ್ರಯೋಗಿಸಿದನು.

ನಟ್ಟಗಾಯದೊಳಾತ ದೇಹಾಭಿಮಾನವ
ಬಿಟ್ಟು ಮೂರ್ಛೆಯ ನೈದಿದನು
ದುಟ್ಟ ದೈತ್ಯರು ಬಂದೆರಗಿದರು ರಣರಂಗದಿ
ದಿಟ್ಟ ಕುಮಾರನ ಮೇಲೆ ೨೨

ನೆಟ್ಟ ಗಾಯದಿಂದ ಕುಂಭಾಂಡ ದೇಹಾಭಿಮಾನ ಬಿಟ್ಟು ಮೂರ್ಛೆಗೆ ಸಂದನು. ಆಗ ದುಷ್ಟದೈತ್ಯರು ರಣರಂಗದಲ್ಲಿ ಅನಿರುದ್ಧನ ಮೇಲೆ ಎರಗಿದರು.

ಹೇರುವ ಬಿರುಗಲ್ಲು ಬಳದಡಿ ವರಶಕ್ತಿ
ಪಾರುಂಬಳೆ ಶೂಲದಿಂದ
ಏರುಗಾಣಿಸಿ ಕೂರ್ಗಣೆಯಿಂದ ಕುವರನ
ಗಾರು ಮಾಡಿದರು ರಕ್ಕಸರು ೨೩

ಬಿರುಗಲ್ಲು, ಬಲವಾದ ದಡಿ, ಶಕ್ತ್ಯಾಯುಧ, ಪಾರುಂಬಳೆ(ಚಕ್ರಾಯುಧ), ಶೂಲಗಳಿಂದ ಏರು(ಗಾಯ)ಗಾಣಿಸಿ ಹರಿತವಾದ ಬಾಣದಿಂದ ಕುಮಾರನನ್ನು ಗಾರು(ಬೊಕ್ಕೆ, ಹಿಂಸೆ) ಗೊಳಿಸಿದರು.

ಎಳೆವಾಳೆ ಬಲ್ಪಿಗೆ ಬಂದರೆ ಸೀಗೆಯ
ಮೇಳೆಯೊಳು ಮಥನವೆ ಮಗನೆ
ಇಳೆಯೊಳಗಳಿದರಿನ್ನೆಂದಿಗೆ ನೀ ಹುಟ್ಟಿ
ಬೆಳೆವೆ ಹೋಗೆಂದು ಸಾರಿದರು ೨೪

ಎಳೆಬಾಳೆ ಬಲಿತರೆ ಸೀಗೆ ಮೆಳೆಯೊಡನೆ ಹೊಡೆದಾಟಕ್ಕಿಯುವುದು ಸಾಧ್ಯವೆ? ಭೂಮಿಯಲ್ಲಿ ಸತ್ತರೆ ಮತ್ತೆ ಇನ್ನೆಂದಿಗೆ ಹುಟ್ಟಿ ಬೆಳೆಯುವೆಯೊ ಹೋಗು ಎಂದು ಹೀಗಳೆದರು.

ಬಾಳೆ ನಾನಹುದು ನಿಮ್ಮನು ಕೊಲ್ಲದನ್ನಕ
ಬಾಳೆ ಬಾಣಾನ್ವಿತನಾಗಿ
ಬಾಳೆ ಬಾಣಾತ್ಮಸಂಭವೆಯಿಲ್ಲದಾನೊರ್ವ
ಬಾಳೆನೆಂದನಿರುದ್ಧ ನುಡಿದ ೨೫

ದಿಟ. ನಾನು ಬಾಳೆಯೇ, ಆದರೆ ನಿಮ್ಮನ್ನು ಕೊಲ್ಲದ ಹೊರತು ನಾನು ಬಾಳೆ(ಬರಿದೇ ಬದುಕಿರುವುದಿಲ್ಲ); ಬಾಣಾನ್ವಿತನಾಗಿ ಬಾಳೆ;

ಬಾಣನಂದನೆಯನ್ನುಳಿದು ಒಂಟಿಯಾಗಿ ನಾನು ಬಾಳೆ(ಬಾಳುವುದಿಲ್ಲ)ಎಂದು ಅನಿರುದ್ಧ ನುಡಿದ.

ಕಟಕಿಯ ಮಾತುಗಳೇಕೆ ಕನ್ಯಾಚೋರ
ದಿಟ ನೋಡು ನೋಡು ನಿನ್ನೆದೆ
ತಟ ಹಾಯ ಬೇಕೆಂದು ಕೂರ್ಗಣೆಯಲಾ
ರ್ಭಟದಿಂದೆಚ್ಚಿದರು ಖಳರು ೨೬

ಕನ್ಯಾಚೋರ, ವ್ಯಂಗ್ಯದ ಮಾತುಗಳು ಯಾಕೆ? ನೋಡು ನಿನ್ನೆದೆಯನ್ನು ತಟ ಹಾಯ್ದು ಬೆನ್ನಲ್ಲಿ ಹೊರಬರಬೇಕೆಂದು ಹರಿತವಾದ ಬಾಣದಿಂದ ಖಳರು ಎಚ್ಚಿದರು.

ವೀರಾಧಿವೀರ ರಕ್ಕಸರೆಚ್ಚ ಕೋಲ್ಗಳ
ಸಾರಲೀಯದೆ ಕಡಿದೊಡನೆ
ಪೂರಾಯ ಗಾಯದಿಂದನಿಬರ ತಲೆಯ ಕೆ
ಯ್ವಾರದಿ ಹಾರಲಿಕ್ಕಿದನು ೨೭

ರಕ್ಕಸರು ಪ್ರಯೋಗಿಸಿದ ಬಾಣಗಳು ತನ್ನ ಸಮೀಪ ಬರದ ಹಾಗೆ ಮಧ್ಯೆಯೇ ತುಂಡರಿಸಿ, ಕೆಯ್ವಾರ (ಕೈಚಳಕ)ದಿಂದ ಎಲ್ಲರ ತಲೆ ಹಾರುವಂತೆ ಹೊಡೆದನು.

ರುಂಡಗಳು ತುಟಿಬಿಚ್ಚಿ ಗಗನದೊಳು ಮಾತಾಡೆ
ಮುಂಡಗಳು ನೆಲದೊಳು ಕುಣಿಯೆ
ಕೊಂಡಾಡುತಿರ್ದವು ಕುಶಲದಿ ಇಕ್ಷು ಕೋ
ದಂಡಾತ್ಮಜನ ಪೌರುಷವ ೨೮

ಗಗನದಲ್ಲಿ ರುಂಡಗಳು ತುಟಿಬಿಚ್ಚಿ ಮಾತಾಡಿದರೆ, ಮುಂಡಗಳು ಧರಣಿಯಲ್ಲಿ ಕುಣಿಯತೊಡಗಿದವು. ಅಷ್ಟೇ ಅಲ್ಲ ಮನ್ಮಥನ ಮಗನ ಪೌರುಷವನ್ನು ಕುಶಲದಿಂದ ಕೊಂಡಾಡುತ್ತಿದ್ದವು.

ಹೆಣಗಳು ಕೊಂಡಾಡಿದಡೆ ಹಿಗ್ಗದ ಹೃದಯ
ಬಣಗರ ನೋಡೆನಲು ದೈತ್ಯ

ಗಣವರ ಕುಂಭಾಂಡ ಬಿರುದಿನ ಬಿಲ್ಗಂಟೆ
ಡಣಿರೆನೆ ಕೊಂಡ ಕಾರ್ಮುಕವ ೨೯

ಹೆಣಗಳು ಹೊಗಳಿದರೆ ಹಿಗ್ಗದ ಹೃದಯ ಬಣಗರ(ಹೀನರ, ಅಲ್ಪರ)ನೋಡೆಂದು ಹೀಗಳೆದಾಗ ದೈತ್ಯಗಣವರ(ರಾಕ್ಷಸಸಮೂಹ ಶ್ರೇಷ್ಠ) ಕುಂಭಾಂಡ ಬಿರುದಿನ ಬಿಲ್ಲಿನ ಗಂಟೆ ಡಣಾರ್ ಎನ್ನುವಂತೆ ಕಾಮು ಕವನ್ನು ಕೈಗೆ ತೆಗೆದುಕೊಂಡನು.

ನೊಂದು ಮಂತ್ರೀಶನಾಡುವ ಬಾಯಿಗು
ಕ್ಕಂದ ಬೀಯಗವಿಕ್ಕಿದಂತೆ
ಬಂದು ಬಲಾಢ್ಯ ಕುಮಾರ ನಟ್ಟಿದಿರಲಿ
ನಿಂದ ನಿಶಾಚರ ನಗುವಂತೆ ೩೦

ಮಂತ್ರಿಯ ಬಾಯಿಗೆ ಉಕ್ಕಂದ(ಹೆಚ್ಚಳ)ದ ಬೀಗ ಹಾಕಿದಂತೆ, ಅನಿರುದ್ಧ ಬಂದು ನಟ್ಟನಡುವೆ ನಿಂತ, ನಿಶಾಚರ ನಗುವಂತೆ.

ತರಳನೆಂದಾನು ಕೈಗಾಯ್ದು ಬಿಟ್ಟಡೆ ರಣ
ದುರುಳತ್ವ ನಿನಗೆ ಸಿದ್ಧಸಿತೆ
ಸರಳ ಕೋಲನಾಂತುಕೊ ಎಂದು ಹೊಡೆದ ಕೆಂ
ಬರಲ ಕಂಧರ ಮಾಲೆ ಹರಿಯೆ ೩೧

ಹುಡುಗನೆಂದು ನಾನು ನಿನ್ನ ತಲೆಕಾಯ್ದರೆ, ದುರುಳತನ ನಿನಗೆ ಸಿದ್ದಿಸಿತೆ?ಬಾಣವನ್ನು ಆತುಕೊ ಎಂದು ಹೊಡೆದ, ಅನಿರುದ್ಧನ ಕೊರಳಿನ ಕೆಂಪುಹರಳಿನ ಹಾರ ಕಿತ್ತು ಹೋಗುವಂತೆ.

ಗಾಯವಡೆದ ಕುಮಾರನ ಕೋಮಲತೆವೆತ್ತ
ಕಾಯದೊಳರುಣಾಂಬು ಸುರಿಯೆ
ಆಯಾತಾಕ್ಷಿಯರಿರ್ವರು ನೋಡಿದರು ತಮ್ಮ
ಬಾಯ ತಂಬುಲವನುಗಳ್ದು ೩೨

ಗಾಯುಗೊಂಡ ಅನಿರುದ್ಧನ ಕೋಮಲ ದೇಹದಲ್ಲಿ ರಕ್ತ ಸುರಿಯತೊಡಗಿದಾಗ ವಿಶಾಲಾಕ್ಷಿಯರಿಬ್ಬರೂ ಓಡಿ ಬಂದು ನೊಡಿದರು, ಬಾಯ ತಂಬುಲವನ್ನು ಉಗುಳಿ.

(ಬಾಯಿಗೆ ತಂಬುಲ ಹಾಕು ಎಂದರೆ ಸಾಯಿ ಎಂಬ ಅರ್ಥಉಂಟು. ಸತ್ತ ಹೆಣದ ಬಾಯಿಗೆ ಅಕ್ಕಿ ತುಂಬುವ ಪದ್ಧತಿ ಇದ್ದ ಹಾಗೆ, ಅಕ್ಕಿ ಇಲ್ಲಿದಿದ್ದಾಗ ಬಾಯಿ ತಂಬುಲವನ್ನೇ ಹೆಣದ ಬಾಯಿಗೆ ತುಂಬುವ ಪದ್ಧತಿಯನ್ನು ಇಲ್ಲಿ ಕನಕ ಸೂಕ್ಷ್ಮವಾಗಿ ಸೂಚಿಸಿದ್ದಾನೆ. ಅನಿರುದ್ಧ ಸತ್ತು ಹೋದ ಎಂಬ ಅವರಿಬ್ಬರ ಆತುರದ ನಿರ್ಧಾರದಿಂದ ತಮ್ಮ ಬಾಯಿ ತಂಬುಲವನ್ನು ಅವನ ಬಾಯಿಗಿಕ್ಕುತ್ತಾರೆ)

ಸತ್ತನೆ ಶಿವಶಿವ ದೇಶಿಗರಾದೆವೆಂ
ದತ್ತರಿರ್ವರು ದುಗುಡದಲಿ
ಚಿತ್ತಜನಾತ್ಮಸಂಭವ ಮೂರ್ಛೆ ತಿಳಿದೆ
ಚ್ಚೆತನೊಂದರಗಳಿಗೆಯಲಿ ೩೩

ಸತ್ತನೆ ಶಿವಶಿವ, ನಾವು ದೇಸಿಗರಾದೆವು ಎಂದು ಇಬ್ಬರೂ ದುಃಖದಿಂದ ಅತ್ತರು. ಆದರೆ ಅರಗಳಿಗೆಯಲ್ಲಿ ಅನಿರುದ್ಧ ಮೂರ್ಛೆ ತಿಳಿದು ಎಚ್ಚೆತ್ತನು.

ಆರೊಡನಾದರು ಆಡುವ ಬಾಯ್ಬಡಿಕ ಕು
ಠಾರ ನನ್ನೊಳು ಸಾಗದೆನುತ
ವೀರಾರ್ಭಟದಿಂದಬ್ಬರಿಸುತ ನಿಶಿತ ಕ
ಠೋರ ಬಾಣದೊಳಿಕ್ಕಿದನು ೩೪

ಬಾಯಿಬಡಿಕ ಕುಠಾರ(ಕೊಡಲಿ)ಯಾರೊಡನಾದರೂ ಆಡುವ ನಿನ್ನಾಟ ನನ್ನಲ್ಲಿ ಸಾಗದು ಎಂದು ಅರ್ಭಟಿಸುತ್ತಾ ಹರಿತವಾದ ಕಠೋರ ಬಾಣದಿಂದ ಹೊಡೆದನು.

ಹೂಳಿ ಮೇಲೆ ಮೇಲೆಚ್ಚ ಕೂರ್ಗಣೆಗಳಿಂದ
ಸೀಳಿದನು ದೈತ್ಯೇಶನೊಡಲ
ಕಾಳಿಜ ಹರಿದೆದೆಬದಿಯುಗಿಯಿತು ಗಿಂಡಿಯ
ಜೂಳಿಯೊಳುಗಿದಂತೆ ರಕುತ ೩೫

ಮತ್ತೆಮತ್ತೆ ಎಚ್ಚ ಹರಿತ ಬಾಣಗಳಿಂದ ಮುಚ್ಚಿ ದೈತ್ಯೇಶ್ವರನೋಡಲನ್ನು ಸೀಳಿದನು. ಕಾಳಿಜ (ಮೂತ್ರಪಿಂಡ) ಹರಿದು ಎದೆಬದಿಯಿಂದ ಜಿನುಗಿತು ರಕ್ತ –ಗಿಂಡಿಯ ಜೂಳಿ(ನಳಿಕೆ, ಬಾಯಿ)ಯಿಂದ ಸುರಿಯುವಂತೆ.

ಆದುದು ಮರಣ ಮತ್ಪಿತನಿಂಗೆ ಹರಹರ
ಹೋದ ಜೀವವನಿಂದೊಮ್ಮೆ
ಕಾದು ಬಿಡಲಿ ಕರುಣಾಕರ ಶಿವನೆನುತ ತ
ಳೋದರಿಯರು ಹೊರಳಿದರು ೩೬

ನನ್ನ ತಂದೆಗೆ ಮರಣ ಸಂಭವಿಸಿತು. ಶಿವ, ಹರಹರ ಹೋದ ಜೀವವನ್ನು ಮತ್ತೆ ಬರಿಸಿಬಿಡು ಎಂದು ತರುಣಿಯರು ಮೊರೆಯಿಟ್ಟು ಹೊರಳಾಡಿದರು.

ಮಂತ್ರೀಶಗೊಡಿ ಮನ್ಮಥಕುಮಾರ ತನ್ನ
ತೂರಿತಿದ ಖಳರನುತ್ತರಿಸಿ
ಹಂತಿಯೊಳು ಕೆಡಹಲ್ಕಿ ಕುಂಭಾಂಡನ ಕೊಂಡು
ದಂತಿಗುರಡ್ಡಯಿಸಿದರು ೩೭

ಅನಿರುದ್ಧನು ತನ್ನ ಮೇಲೆ ಬಿದ್ದ ಖಳರನ್ನು ಉತ್ತರಿಸಿ (ತುಂಡರಿಸಿ) ಪಂಕ್ತಿಯಲ್ಲಿ ಕೆಡವಿದಾಗ ಕುಂಭಾಂಡನನ್ನು ತಮ್ಮ ವಶಕ್ಕೆ ತೆಗೆದುಕೊಂಡು ದಂತಿಗರು(ಆನೆಯವರು) ಅಡ್ಡಬಂದರು.

ಇಕ್ಕೈಯ ಮುಗಿದು ಕಾಳಗ ಬೇಡ ಹೋಗೆನು
ತೊಕ್ಕಣಿಸಿದರೊಪ್ಪುಗೊಳದೆ
ಕಕ್ಕಸದಿಂ ಕಾದಿ ಹಿಮ್ಮೆಟ್ಟಿ ಗಜ ಮಡಿ
ಲ್ಪೊಕ್ಕಡೆ ಬಿಡೆನೆಂದ ನಗುತ ೩೮

ಎರಡು ಕೈಗಳನ್ನು ಮುಗಿದು ಯುದ್ಧ ಬೇಡ ಹೋಗೆಂದು ಹೇಳಿದರೂ ಕೇಳದೆ ಕರ್ಕಶದಿಂದ ಹೋರಾಡಿ, ಹಿಮ್ಮೆಟ್ಟಿ, ಗಜಮಡಿಲ(ಆನೆಯ ಯೋನಿ, ಗರ್ಭ)ನ್ನು ಹೊಕ್ಕರೂ ಬಿಡೆನೆಂದ ನಗುತ್ತ.

ಸುಂಡಲವಾಲ ಸೂನಿಗೆವೆತ್ತ ಶೃಂಗವೇ
ತಂಡಗಳುರವಣಿಸುತಿರಲು
ಖಂಡಚಂದಿರ ಬಾಣದಿಂದೆಚ್ಚು ಕಾದ ಕೋ
ದಂಡ ಶಿಕ್ಷಾದೀಕ್ಷಿತನು ೩೯

ಆನೆಯ ಬಾಲದಂಥ ಸೂನಿಗೆ(ಒಂದು ಬಗೆಯ ಆಯುಧ)ಹೊಂದಿ, ಅನೆಗಳ ತಂಡ ಉತ್ಸಾಹಭರಿತವಾಗಿರಲು, ಕೋದಂಡ ಶಿಕ್ಷಾದೀಕ್ಷಿತನಾದ ಅನಿರುದ್ಧ ಖಂಡೇಂದು (ಅರ್ಧಚಂದ್ರಾಕಾರದ)ಬಾಣದಿಂದ ಎಚ್ಚಿ ಕಡಿದನು.

ಬಿಡೆಯವಿಲ್ಲದೆ ವಜ್ರ ದಂಡದೊಡನೆ ಸೆಣಸಿದ
ರೊಡೆಯದಿರ್ದಪುದೆ ಕುಂಭಾಂಡ
ಪಡೆ ಮುರಿದೋಡಿತೆಂದು ಹೆಕ್ಕಳಿಸುತ್ತ
ನಡೆಗೊಂಡುದಾನೆಯ ಪೌಜು ೪೦

ಬಿಡೆಯ(ಸಂಕೋಚ)ವಿಲ್ಲದೆ ವಜ್ರದಂಡದೊಡನೆ ಸೆಣಸಿದರೆ ಒಡೆಯದಿರುವುದೆ ಕುಂಭಾಂಡ (ಕುಂಭ=ಗಡಿಗೆ+ಅಂಡ=ಮೊಟ್ಟೆ)? ಸೈನ್ಯ ಹಿಮ್ಮೆಟ್ಟಿ ಓಡಿತೆಂದು ಆನೆಯ ಸೈನ್ಯವೂ ಕಾಲಿಗೆ ಬುದ್ಧಿ ಹೇಳಿತು.

ಏತರದು ಮಧ್ಯಾಹ್ನ ಸೂರ್ಯನ ಮುತ್ತಿದ ಜೀ
ಮೂತ ವ್ರಾತ ಕರಗುವಂತೆ
ಆತನ ಶರಕಿರಣಗಳಿಂದ ಮದಗಜ
ವ್ರಾತ ನುಗ್ಗಾದುದಾಕ್ಷಣದಿ ೪೧

ಮಧ್ಯಾಹ್ನದ ಸೂರ್ಯನನ್ನು ಮುತ್ತಿದ ಮೋಡಸಮೂಹ ಕರಗುವಂತೆ, ಅನಿರುದ್ಧನ ಬಾಣ ಕಿರಣಗಳಿಂದ ಮದಗಜವ್ರಾತ ನುಗ್ಗುನುರಿಯಾಯಿತು.

ರಣಭೀತಿಯಾದುದೂರೊಳಗೆ ಹೊತ್ತಡಕುವ
ಹೆಣ ಲೆಕ್ಕವಿಲ್ಲ ರಣದಲ್ಲಿ
ನೆಣನೆತ್ತರೊಳು ಬಿದ್ದು ಮಿಡುಕುವ ಮತ್ತವಾ
ರಣ ತುಂಡ ಮುಂಡಗಳಿಂದ ೪೨

ಯುದ್ಧಭೀತಿ ಸಂಭವಿಸಿತು ಊರೊಳಗೆ. ರಣರಂಗದಲ್ಲಿ ಹೊತ್ತು ಅಡುಕುವ ಹೆಣಗಳಿಗೆ ಲೆಕ್ಕವಿಲ್ಲ–ನೆಣ ಹಾಗೂ ನೆತ್ತರಲ್ಲಿ ಬಿದ್ದು ಮಿಡುಕುವ ಮದಿಸಿದ ಆನೆಗಳ ರುಂಡಮುಂಡಗಳಿಂದ.

ಅಳಿದ ರಕ್ಕಸರುಗಳೊಳಗುಳಿದೊರ್ವನು
ಬಳಿಜನ ಬಳಿಗೈತಂದು
ಚಳಿವೆತ್ತು ನಡುಗುವಂದದಿ ಪೇಳ್ದ ರಣದು
ಮ್ಮಳಿಕೆಯ ಕಥೆಯ ನೆಲ್ಲವನು ೪೩

ಅಳಿದ ರಕ್ಕಸರಲ್ಲಿ ಉಳಿದೊಬ್ಬನು ಬಳಿಜ(ಬಲಿಜ=ಬಲಿಯ ಮಗನಾದ ಬಾಣಾಸುರ)ನ ಬಳಿಗೆ ಬಂದು ಚಳಿಬಂದವನು ಗಡಗಡ ನಡಗುವಂತೆ ರಣದ ಕಥೆಯೆಲ್ಲವನ್ನು ನಡುಗತ್ತ ಹೇಳಿದ.

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೪

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರು ಇರುವ ತನಕ ಲಕ್ಷ್ಮೀಕಾಂತ ತಪ್ಪದೆ ರಕ್ಷಿಸುವನು.

## ೩೫. ಬಾಣಾಸುರಾನಿರುದ್ಧರ ಕಾಳಗ

ಭೂನಾಥ ಸಭೆಯಲಿ ದ್ರುಪದನಂದನೆಯಭಿ
ಮಾನವ ಕಾದ ಶ್ರೀಹರಿಯ
ಧ್ಯಾನವ ಮಾಡಿ ಸತ್ಕೃತಿವೇಳು ಪರಮಾಭಿ
ದಾನವ ಕೇಳಿ ಹಿಗ್ಗುವೆನು ೧

ರಾಜನ ಒಡ್ಡೋಲಗದಲ್ಲಿ ದ್ರೌಪದಿಯ ಅಭಿಮಾನವನ್ನು ರಕ್ಷಿಸಿದ ಶ್ರೀಹರಿಯ ಧ್ಯಾನವನ್ನು ಮಾಡಿ ಸತ್ಕೃತಿ ಹೇಳು, ಅವನ ಶ್ರೇಷ್ಠ ಅಭಿದಾನ(ಹೆಸರು)ವನ್ನು ಕೇಳಿ ಸಂತೋಷ ಪಡುವೆನು.

ನೋಡಲು ರೂಪು ಜವ್ವನವೆತ್ತ ಹೆಂಗಳ
ಚೂಡಾಮಣಿ ನಿನ್ನ ಕಿವಿಗೆ
ಪೀಡಾ ಪರಿಹಾರವೆನಲುಸಿರುವೆ ಜಡ
ಮಾಡದೆ ಕೇಳು ಮೇಲ್ಗತೆಯ ೨

ಕಟ್ಟರೆಯದ ಕಡುಚೆಲುವೆ, ನಿನ್ನ ಕಿವಿಗೆ ಪೀಡಾ ಪರಿಹಾರವೆಂದು ಮೇಲ್ಲತೆಯನ್ನು ಉಸುರುವೆನು, ಜಡ(ಆಲಸ್ಯ)ಮಾಡದೆ ಕೇಳು

ಮೀನಾಂಕನಾತ್ಮಸಂಭವ ಬೀಳುಕೊಟ್ಟ ತವ
ಸೇನೆಯನು ಸುರನಗರಕ್ಕೆ
ಆನೆಯ ಕೆಡಹಿ ಕೆನ್ನೀರಾಡುತ್ತೈದಾನೆ
ನೀನೋಡಬೇಕಲೆ ಜೀಯ ೩

ಮನ್ಮಥನ ಮಗನಾದ ಅನಿರುದ್ಧ ನಿನ್ನ ಸೈನ್ಯವನ್ನೆಲ್ಲ ದೇವಲೋಕಕ್ಕೆ ಬೀಳುಕೊಟ್ಟನು. ಆನೆಯನ್ನು ಕೆಡವಿ ರಕ್ತದೋಕುಳಿಯಾಡುತ್ತಿದ್ದಾನೆ ನೀ ನೋಡಬೇಕು ಜೀಯ ಎಂದು ಸೈನಿಕನೊಬ್ಬ ವರದಿ ಒಪ್ಪಿಸಿದ.

ಕುಂಭಾಂಡಮಂತ್ರಿಶೇಖರ ಮುಖ್ಯ ಸುಭಟರ್ಗೆ
ಚೆಂಬಣ್ಣವನುಡಿಸಿಬಿಟ್ಟ
ಮುಂಬರಿವದಟರ್ಗೆ ಕೈವರ್ತಿಸಿ ಕೊಟ್ಟ
ರಂಭಾದಿ ಸುರನಾರಿಯರ ೪

ಕುಂಭಾಂಡ ಮುಖ್ಯ ಸುಭಟರಿಗೆ ಕೆಂಪು ಬಟ್ಟೆಯನ್ನು ಉಡಿಸಿಬಿಟ್ಟ. ಮುನ್ನುಗ್ಗಿದ ಅದಟರಿಗೆ(ಸಮರ್ಥರಿಗೆ) ತನ್ನ ಕೈಚಳಕದಿಂದ ರಂಭಾದಿ ಸುರಸ್ತ್ರೀಯರನ್ನು ಕೊಟ್ಟನು.

ಹೆಣ್ಣ ಭೋಗಿಸ ಬಂದವನಲ್ಲ ಕದನವ
ಹಣ್ಣಲೋಸುಗ ಬಂದವನು
ಚಿಣ್ಣನದಾರಿಗಂಜುವನಲ್ಲ ಸಮರ ಮು
ಕ್ಕಣ್ಣ ನೀ ಜಯಿಸಿದರೆ ಜಯಿಸು ೫

ಹೆಣ್ಣನ್ನು ಭೋಗಿಸಲು ಬಂದವನಲ್ಲ. ಯುದ್ಧವನ್ನು ಹಣ್ಣಲೋಸುಗ(ಪಣ್ಣು=ಮಾಡು)ಬಂದವನು. ಚಿಣ್ಣನಾದರೂ ಯಾರಿಗೂ ಅಂಜುವನಲ್ಲ, ಸಮರ ಮುಕ್ಕಣ್ಣನಾದ ನೀನು ಜಯಿಸಿದರೆ ಜಯಿಸು.

ಹಗೆಯ ಕೊಂಡಾಡುವ ಬಗೆ ಯಾವುದೆಂದು ನಾ
ಲಗೆಯನೀಕ್ಷಿಸಬೇಡ ನನ್ನ
ಹೊಗೆ ಸುತ್ತಿದುರಿಯಂತೆ ಪೆರ್ಚಿತವನ ಧಗ
ಧಗಿಸುವ ಪ್ರತಾಪಾಗ್ನಿ ಜೀಯ ೬

ಶತ್ರುವನ್ನು ಕೊಂಡಾಡುವ ಮನಸ್ಸು ಎಂಥದ್ದೆಂದು ನನ್ನ ನಾಲಗೆಯನ್ನು ನೋಡಬೇಡ. ಹೊಗೆ ಸುತ್ತಿದುರಿಯಂತೆ ಅವನ ಧಗಧಗಿಸುವ ಪ್ರತಾಪಾಗ್ನಿ ಹೆಚ್ಚತೊಡಗಿತು.

ಕೊಂಡಾಡಬಹುದು ಬಡವನಲ್ಲ ಬಂದವನು
ಪುಂಡರೀಕಾಕ್ಷನ ಮೊಮ್ಮ
ಕಂಡುದ ನುಡಿದಡೆ ನಿನಗಾಹುದಿಲ್ಲೆಂದು
ಚಂಡವಿಕ್ರಮವೀರ ನುಡಿದ ೭

ಕೊಂಡಾಡಬಹುದು. ಬಂದವನು ಬಡವನಲ್ಲ, ಶ್ರೀಕೃಷ್ಣನ ಮೊಮ್ಮಗ, ಕಂಡುದನ್ನು ಹೇಳಿದರೆ ನಿನಗೆ ಆಗುವುದಿಲ್ಲವೆಂದು ಚಂಡ ವಿಕ್ರಮವೀರ ನುಡಿದನು.

ಕಾಳಗ ತನಗಿಲ್ಲವೆಂದು ಚಿಂತಿಸಲಾಗಿ
ಭಾಳಾಕ್ಷ ಕೃಪೆ ಮಾಡಿದನು
ಕೋಳಾಹಳವೆತ್ತು ಕಾದದಿರ್ದಡೆ ತನ್ನ
ತೋಳೆರಡ್ಯೆನೊರದೇಕೆ ೮

ಯುದ್ಧ ತನ್ನ ಭಾಗಕ್ಕೆ ಇಲ್ಲವೆಂದು ಚಿಂತಿಸಿದ ಕಾರಣ ಆ ಭಾಗ್ಯವನ್ನು ಶಿವ ಕರುಣಿಸಿದನು . ಕಾಳಗದಲ್ಲಿ ಕೋಲಾಹಲ ಉಂಟು ಮಾಡಿ ಹೋರಾಡದಿದ್ದರೆ ನನ್ನ ಸಾವಿರ ತೋಳುಗಳೇಕೆ ಇರಬೇಕು.

ಪ್ರಕಟಿತ ಕೋಪದಿಂ ತರಿಸಿದನುಗ್ರ ಕಾ
ರ್ಮುಕ ಬಾಣ ಬತ್ತಳಿಕೆಗಳ
ಸಕಲ ಸನ್ನಾಹದಿ ಖಳಶಿರೋಮಣಿ ಕುಮಾ
ರಕನೊಳು ಸಮರಕೆಯ್ದಿದನು ೯

ಸುಪ್ರಕಟ ಸಿಟ್ಟಿನಿಂದ ಭಯಂಕರ ಕಾರ್ಮುಕ ಬಾಣ ಬತ್ತಳಿಕೆಗಳನ್ನು ತರಿಸಿದನು. ಸಕಲ ಸಿದ್ಧತೆಯಿಂದ ಖಳಶಿರೋಮಣಿ, ಕುಮಾರನ ಮೇಲೆ ಯುದ್ಧಕ್ಕೆ ಹೊರಟ.

ಬಾಣಾಸುರ ಬರ್ಪ ಸಮಯಕ್ಕೆ ನವ ಪಂಚ
ಬಾಣ ಹರ್ಮ್ಯವನಡರ್ದೊಡನೆ
ಬಾಣನಂದನೆಯ ಕುಸ್ತರಿಸಿ ಬಂದನು ಬಿಲ್ಲು
ಬಾಣ ಹಿಡಿದು ಜತ್ತಾಯತದಿ ೧೦

ಬಾಣಾಸುರ ಯುದ್ಧಸನ್ನದ್ಧನಾಗಿ ಬರುವ ಸಮಯಕ್ಕೆ ಸರಿಯಾಗಿ ಅನಿರುದ್ಧ ಸೌಧವನ್ನು ಹತ್ತಿ ಬಾಣನಂದನೆಯನ್ನು ಉಪಚರಿಸಿ ಹಿಂದಿರುಗಿದನು, ಅಧಿಕ ಎಚ್ಚರಿಕೆಯಿಂದ ಬಿಲ್ಲುಬಾಣಗಳನ್ನು ಹಿಡಿದು.

ನೀರಜದಳ ನೇತ್ರೆಯ ಮೇಲಣ ಭ್ರಾಂತಿ
ವೀರವಧೂಟಿಯೊಳು ಬೆರೆದು
ಆರ ಲೆಕ್ಕಿಸದೆ ಬಂದಿರ್ದ ಕುಮಾರ ಕಂ
ಠೀರವ ಬಾಗಿಲ ಸನಿಹಕೆ ೧೧

ಮನದನ್ನೆಯ ಮೇಲಿನ ಮೋಹ ಭ್ರಾಂತಿ, ವೀರವನಿತೆಯೊಡನೆಯೂ

ಸ್ಫುರಿಸಿ, ಯಾರನ್ನೂ ಲೆಕ್ಕಿಸದೆ ಕುಮಾರ ಕಂಠೀರವ(ಸಿಂಹ) ಬಾಗಿಲ ಸಮೀಪಕ್ಕೆ ಬಂದಿದ್ದನು.

ಚೂಣಿಯೊಳು ಬಂದು ತಾಗಿತು ಬಿರುದಿನ ಭಟ
ಶ್ರೇಣಿ ಕುಮಾರಕನ ಮೇಲೆ
ಹೂಣಿಸಿ ಕೂರ್ಗಣೆಯಿಂದೆಚ್ಚು ಬಿರುಗಾಯ
ಉಣಬಿಡಿಸಿದರು ತಿನ್ನೆನುತ ೧೨

ಬಿರುದಿನ ಶೂರಸೈನಿಕರು ಮುಂಚೂಣಿಯಲ್ಲಿ ಬಂದು ಕುಮಾರನ ಮೇಲೆ ಬಿದ್ದರು. ಹೂಣಿಸಿ(ಪ್ರತಿಜ್ಞೆ)ಮಾಡಿ ಹರಿತವಾದ ಬಾಣಗಳಿಂದ ಎಚ್ಚಿ ಬಿರುಗಾಯಗಳನ್ನು ಉಣಬಡಿಸಿದರು ತಿನ್ನು ಎನ್ನುತ್ತ

ಸೆಡೆಯದೆ ಸಿಂಹನಾದವ ಮಾಡಿ ಕೋಲ್ಗಳ
ನೆಡೆಯಲ್ಲಿ ಕಡಿದವರುಗಳ
ಪೊಡೆಯೊಳಗೊಂದಕೆಂಟೆಂಟ ನಾಟಿಸಿ ಬಂದನು
ಪಡೆಯನು ರಣಬಲಿಗೊಟ್ಟನು ೧೩

ಕುಗ್ಗದೆ ಸಿಂಹದಂತೆ ಗರ್ಜಿಸಿ ಅವರ ಬಾಣಗಳನ್ನು ಮಧ್ಯದಲ್ಲಿಯೇ (ಎಡ=ನಡುವೆ) ತುಂಡರಿಸಿ, ಪ್ರತಿಯಾಗಿ ಅವರ ಹೊಟ್ಟೆಯೊಳಕ್ಕೆ ಒಂದಕ್ಕೆಂಟೆಂಟರಂತೆ ಬಾಣ ನಾಟಿಸಿದನು, ಸೈನ್ಯವನ್ನು ರಣಬಲಿ ಕೊಟ್ಟನು.

ತರಳನ ಕೂರ್ಗಣೆಯಿಂದ ದೈತ್ಯರ ದಡಿ
ಗೊರಳೆಡೆ ಹಾಯ್ದು ಅರೆಗಡಿದ
ಕೊರಳನು ಪೂರ್ಣ ಕತ್ತರಿಸಲು ತಲೆ ಬಿದ್ದು
ಹೊರಳಾಡೆ ಭೀಕರವಾಯ್ತು ೧೪

ಚಿಣ್ಣನ ಹರಿತವಾದ ಬಾಣ ದೈತ್ಯರ ದಡಿಗೊರಳಿಗೆ ಹಾಯ್ದು, ಅರೆಗಡಿದ ಕೊರಳನ್ನು ಪೂರ್ಣವಾಗಿ ಕತ್ತರಿಸಲು, ತಲೆ ಬಿದ್ದು ಮುಂಡ ಹೊರಳಾಡಿದಾಗ ಭೀಕರವಾಗಿ ಕಾಣಿಸಿತು.

ಮೆಟ್ಟಿದ ಕಾಲ್ದೊಡಕಿನ ಕರುಳ್ಗಳ ಕಿ
ಗ್ಗಟ್ಟಿನ ಸುರಗಿಯಲಿ ಕೊಯ್ದು

ಅಟ್ಟಿರಿಯಲ್ಕೆ ಬಪ್ಪುದನು ಕಂಡ ತಲೆಗಳ
ಕುಟ್ಟಿಕ್ಕಿದನು ಕುಮಾರಕನು ೧೫

ಮೆಟ್ಟಿದಾಗ ಕಾಲಿಗೆ ತೊಡರಿಕೊಂಡ ಕರುಳುಗಳನ್ನು ಸೊಂಟದ ಕಿಗ್ಗಟ್ಟಿನಲ್ಲಿಟ್ಟಿದ್ದ ಕತ್ತಿಯಿಂದ ಕೊಯ್ದು, ತನ್ನನ್ನು ಇರಿಯಲು ಬರುತ್ತಿದ್ದ ಸೈನಿಕರ ತಲೆಗಳನ್ನು ಕುಟ್ಟಿ ಕೆಡವಿದನು ಅನಿರುದ್ಧ.

ಉಡಿದುದುರಿದ ಮಸ್ತಕವ ಕರಾಗ್ರದಿ
ಪಿಡಿದು ಮಟ್ಟವ ಕಿತ್ತಿಗೈದು
ಅಡಿಯಿಟ್ಟು ನಡೆವುದ ಕಂಡು ಕುಮಾರಕ
ಕಡಿದಿಳುಹಿದನು ಖಂಡೆಯದಿ ೧೬

ಮುರಿದು ಕೆಳಕ್ಕೆ ಉದುರಿದ ತಲೆಯನ್ನು ಕೈಯಲ್ಲಿ ಹಿಡಿದು, ಮಟ್ಟ(ಆಯುಧವಿಶೇಷ)ವನ್ನು ಕಿತ್ತಿ(ಊರೆ, ಮನೆಯ ಮುರಿದ ತೊಲೆಗೆ ಆಧಾರವಾಗಿ ಕೊಡುವ ಗುಜ್ಜು, ದಡಿ) ಮಾಡಿಕೊಂಡು ನಡೆಯುವುದನ್ನು ಕಂಡು ಅನಿರುದ್ಧ ಕತ್ತಿಯಿಂದ ಎರಡು ತುಂಡಾಗಿಸಿದ.

ರಣಮಾರ್ಗದಿ ನಿಖಿಳಾಯುಧವೇರಿನ
ಬಣಗುಗಳು ಬಂದು ತನ್ನೊಡನೆ
ಸೆಣೆಸಲು ಕೂರ್ಗೋಲಗಾರ ಸುಂಕಕೆ ತಲೆ
ವಣಗೊಂಡು ಬಿಟ್ಟನೆಲ್ಲರನು ೧೭

ಯುದ್ಧ ಮಾರ್ಗದಲ್ಲಿ ಆಯುಧಗಳ ಹೇರನ್ನು ಹೇರಿಕೊಂಡು ಬಂದ ವ್ಯಾಪಾರಿಗಳು ತನ್ನೊಡನೆ ಸೆಣಸಾಟಕ್ಕೆ ನಿಂತಾಗ ಅನಿರುದ್ಧ ಅವರು ಕೊಡಬೇಕಾದ ಸುಂಕ(ತೆರಿಗೆ)ಕ್ಕೆ ಅವರುಗಳ ತಲೆಗಳನ್ನೆ ಹಣವಾಗಿ ತೆಗೆದುಕೊಂಡು ಮುಂದಕ್ಕೆ ಹೋಗಗೊಟ್ಟನು.

ದೊದ್ದೆಗರೇಕೆ ಹೊಕ್ಕರು ಕೊಲ್ಲುಕೊಲ್ಲೆಂದು
ಹೆದ್ದೊರೆ ದೈತ್ಯರೆಯ್ದಿದರು
ಮದ್ದಾನೆಗೆ ಸಿಂಹ ಮಲೆತಂತೆ ಸುಭಟಾನಿ
ರುದ್ಧ ನಿಂದಿರ್ದ ಎದೆಸೆಟೆಸಿ ೧೮

ದೊದ್ದೆಗರು(ತೊದಲರು, ಬಿಕ್ಕಲರು) ಏಕೆ ಹೊಕ್ಕರು?ಕೊಲ್ಲು ಕೊಲ್ಲು

ಎಂದು ಮಹಾ ಪ್ರವಾಹ ರೂಪದ ದೈತ್ಯರು ನುಗ್ಗಿದರು. ಮದಿಸಿದ ಆನೆಗೆ ಸಿಂಹ ಮಲೆತು ನಿಲ್ಲುವಂತೆ ಮಹಾಶೂರನಾದ ಅನಿರುದ್ಧ ಎದೆಸೆಟೆಸಿ ನಿಂತನು.

ಕೂಗಿ ಬೊಬ್ಬಿರಿದರಬ್ಬರ ಸಿಡಿಲ್ಕೋಟಿ ಜೊ
ತ್ತಾಗಿ ಗರ್ಜಿಸುವಂತೆ ಖಳರು
ಬಾಗಿದ ಬಿಲ್ಗೋಲೆದೆಯ ಕಿವಿವರೆಗೆಳೆದೆಚ್ಚಿ
ತಾಗಿದರವರು ಅನಿರುದ್ಧನ ೧೯

ಬೊಬ್ಬೆ ಹಾಕುತ್ತಾ, ಕೋಟಿ ಸಿಡಿಲು ಗರ್ಜಿಸಿದಂತೆ ಅಬ್ಬರಿಸುತ್ತಾ, ಬಾಗಿದ ಬಿಲ್ಲಿನ ಹೆದೆಯನ್ನು ಕಿವಿವರೆಗೆ ಎಳೆದೆಚ್ಚಿದರು, ಅನಿರುದ್ಧನಿಗೆ ಗುರಿಯಿಟ್ಟು.

ನಿಖಿಲ ರಾಕ್ಷಸರಾಯರುಗಳೆಚ್ಚ ಶಿಳೀ
ಮುಖ ಬರಲು ಕಂಡು ಖಾತಿಯಲಿ
ವಿಕಸಿತ ಕೆಂಡಸಂಪಿಗೆಯ ಸುವರ್ಣದ ಸಾ
ಯಕದಿಂದ ಸಮ ತಳಿಸಿದನು ೨೦

ಎಲ್ಲ ರಾಕ್ಷಸರು ಬಿಟ್ಟ ಬಾಣಗಳನ್ನು ತನ್ನ ಸುವರ್ಣದ ಸಾಯಕದಿಂದ ಕುಟ್ಟಿ ಸಮತಟ್ಟುಗೊಳಿಸಿದನು

ಅಜವಿಂಡ ಹೊಕ್ಕ ಹೆಬ್ಬುಲಿಯಂತೆ ಸೊಕ್ಕಿದ
ಗಜವಿಂಡ ಸಿಂಹ ಹೊಕ್ಕಂತೆ
ಭುಜಗಸಮೂಹವ ಖಗರಾಜ ಹೊಕ್ಕಂತೆ
ಕುಜನರ ಕುಟ್ಟಿ ಹಾಯ್ಕಿದನು ೨೧

ಕುರಿ ಹಿಂಡನ್ನು ಹೊಕ್ಕ ಹುಲಿಯಂತೆ, ಸೊಕ್ಕಿದ ಗಜವಿಂಡನ್ನು ಹೊಕ್ಕ ಸಿಂಹದಂತೆ, ಸರ್ಪ ಸಮೂಹವನ್ನು ಹೊಕ್ಕ ಖಗರಾಜ(ಗರುಡ)ನಂತೆ ಕುಜನರನ್ನು ನಜ್ಜುಗುಜ್ಜುಗೈದನು.

ಕಂಧರಗಡಿ ಬಾಹುಗಡಿ ಹಸ್ತಗಡಿ ನೇ
ರಂದದ ನಡುತೊಡೆಗಡಿಗಳ
ವೃಂದಾರಕ ವಿರೋಧಿಗಳು ಬಿದ್ದರು ಕಾಮ
ನಂದನ ಕೂರ್ಗಣೆಗಳಿಂದ ೨೨

ಕೊರಳ ತುಂಡು, ತೋಳತುಂಡು, ಕೈಯ ತುಂಡು, ನೇರಂದದ (ನೇರ=ನೇತು ಹಾಕಿದ+ಅಂದದ=ರೀತಿಯ)ಸೊಂಟ ತೊಡೆ ತುಂಡುಗಳ ರಾಕ್ಷಸರು ಕಾಮಸುತನ ಕೂರ್ಗಣೆಗಳಿಂದ ಕೆಳಗೆ ಬಿದ್ದು ಮಣ್ಣು ಮುಕ್ಕಿದರು.

ಕರತಾವರೆ ಕರುಳ್ವಳ್ಳಿ ತೋಳ್ದೆರೆ ಪಯೋ
ಧರ ಮೀನು ಗಜವಿಂಡು ಮೊಸಳೆ
ನೆರೆದ ರೋಹಿತ ಫೇನ ಕಡಿದಲೆ ಕಮಠ ಸಂ
ಗರವಿದ್ದುದಂಬುಧಿಯಂತೆ ೨೩

ಕೈಯೆ ತಾವರೆ, ಕರುಳೇ ಬಳ್ಳಿ, ತೋಳೇ ತೆರೆ, ಸ್ತನವೇ ಮೀನು, ಆನೆಯೆ ಮೊಸಳೆ, ಕೆನೆಗಟ್ಟಿದ ರಕ್ತವೇ ನೊರೆ, ಕಡಿದಲೆ(ಕತ್ತಿ)ಯೇ ಕಮಠ(ಆಮೆ) ಆದ್ದರಿಂದ ಯುದ್ಧ ಭೂಮಿ ಉಬ್ಬರವಿಳಿತದ ಅಂಬುಧಿಯಂತಿತ್ತು.

ಖಾತಿಗೆಟ್ಟರು ಬಲಾಢ್ಯರು ಕಾಮಸುತನಡ್ಡ
ವಾತಿನ ಕೋಲ್ಗಳುಬ್ಬಟೆಗೆ
ಭೀತಿಯಿಂ ಹೆಮ್ಮೆಟ್ಟಿ ಸಾರ್ದರು ರಣರಂಗ
ನೀತಿ ಬಾಹಿರರಾದೆವೆನುತ ೨೪

ಸಮರ್ಥರು ಸತ್ವಗೆಟ್ಟರು, ದಾರಿತಪ್ಪಿಸುವ ಮಾತಿನೊಡನೆ ಎರಗುವ ಬಾಣಗಳ ಆರ್ಭಟಕ್ಕೆ ಯುದ್ಧನೀತಿಯನ್ನು ಒತ್ತಟ್ಟಿಗಿಟ್ಟು ಭಯದಿಂದ ಹಿಮ್ಮೆಟ್ಟಿದರು.

ತಲ್ಲಣಿಸುವ ಸೇನಗಭಯವನಿರದೀಯು
ತೆಲ್ಲರ ಪಿಂತಿಟ್ಟುಕೊಂಡು
ಪುಲ್ಲಶರಾತ್ಮಜನೀಬಾರೆನುತಾಹವ
ಮಲ್ಲ ಬಾಣಾಸುರ ನುಡಿದ ೨೫

ಭಯಭೀತಸೇನೆಗೆ ಅಭಯವನ್ನು ನೀಡಿ ಅವರನ್ನೆಲ್ಲ ತನ್ನ ಹಿಂಬದಿಯಲ್ಲಿಟ್ಟುಕೊಂಡು ಹೂಬಾಣನ ಚಿಣ್ಣ ನೀನು ಬಾ ಎಂದು ಯುದ್ಧವೀರ ಬಾಣಾಸುರ ನುಡಿದ.

ತೊಡೆಗಿಕ್ಕಿ ಸಿಂಜಿನಿಗೊಳಿಸಿ ಕಾರ್ಮುಕವ ಜೇ
ವೊಡೆಯಲಾ ನಿಷ್ಠುರ ಧ್ವನಿಗೆ

ಹೊಡೆಗೆಡೆದವು ಸಪ್ತ ಶರಧಿಗಳು ಎಡೆ ಜರಿ
ದೊಡಗೂಡಿದವು ಕುಲಶೈಲ ೨೬

ಸಿಂಜಿನಿ(ಬಿಲ್ಲಿನ ಹೆದೆ)ಯ್ನನು ಸರಿಪಡಿಸಿ, ಜೇವೊಡೆಯಲು ಆ ಝೇಂಕಾರ ಧ್ವನಿಗೆ ಏಳು ಸಮುದ್ರಗಳು ಎದ್ದು ಬಿದ್ದವು, ಕುಲಪರ್ವತಗಳು ಸ್ಥಳ ಪಲ್ಲಟಗೊಂಡು ಒಂದುಗೂಡಿದವು.

ಅದ್ದಳವೆದ್ದುದಂಬುಧಿ ಗಗನದಿಂದಾಗ
ಬಿದ್ದುವು ನಕ್ಷತ್ರ ನಿಚಯ
ಎದ್ದುವು ಧೂಮಕೇತುಗಳು ಬಾಣಾಸುರ
ಗದ್ದರಿಸಲು ಕುಮಾರಕನ ೨೭

ಬಾಣಾಸುರ ಅನಿರುದ್ಧನನ್ನು ಗದ್ದರಿಸಿದ ಬಿರುಸಿಗೆ ಸಮುದ್ರಗಳು ಬೊಬ್ಬೆ ಹಾಕಿದವು, ಆಕಾಶದಿಂದ ಚುಕ್ಕೆಗಳ ರಾಶಿರಾಶಿ ಕೆಳಗುದುರಿದವು, ಧೂಮಕೇತುಗಳು ಕಾಣಿಸಿಕೊಂಡವು.

ವಿನಯದಿ ಮಾತಾಡು ಖಳರಾಯ ನಿನ್ನಯ
ತನಯಳಿಗೋಸುಗ ಬಂದ
ಮನೆಯಳಿಯನ ಕೂಡೆ ಮಚ್ಚರವೇಕೆಂದು
ನನೆಗೋಲನಾತ್ಮಜ ನುಡಿದ ೨೮

ರಾಕ್ಷಸರಾಜ, ವಿನಯದಿಂದ ಮಾತಾಡು, ನಿನ್ನ ಮಗಳ ಹಿತಕೋಸ್ಕರ ಬಂದ ಮನೆಯ ಅಳಿಯನ ಜೊತೆ ಮಾತ್ಸರ್ಯವೇಕೆ? ಎಂದು ಮನ್ಮಥನ ಮಗ ನುಡಿದನು.

ಅಳಿಯ ನೀನೆಂತಾದೆ ಮಗಳನಾರಿತ್ತರು
ಶಿಳೀಮುಖದಿಂದ ಗೆಲ್ಲೆನಲು
ಹಿಳುಕಿಂಗೆ ಹಿರಿಯರ ಹಸ್ತಮುಂಚಿದ ಮೇಲೆ
ಬಿಳಿಕೆನ್ನ ಕೈಯ ನೋಡೆಂದ ೨೯

ಆಗ ಬಾಣಾಸುರ 'ನೀನು ಹೇಗೆ ಅಳಿಯನಾದೆ? ಮಗಳನ್ನು ಯಾರು ಕೊಟ್ಟರು?ಬಾಣದಿಂದ ಗೆಲ್ಲೆಂದು ಹೇಳಿದಾಗ ಅನಿರುದ್ಧ, ಹಿರಿಯರ ಹಸ್ತ ಬಾಣದ ಹಿಂಭಾಗಕ್ಕೆ ಹೋದರೆ ಆಗ ನನ್ನ ಕೈವಾಡವನ್ನು ನೋಡೆಂದನು.

ಎಂದಡೆ ಕಾದುಕೊಳ್ಳೆನುತ ಕರ್ಣಾಯತ
ದಿಂದ ಕೂರ್ಗಣೆಯೊಳಿಕ್ಕಿದನು
ಬಂದವು ಶರ ಕುಮಾರ ದಿವ್ಯ ದೇಹ ಸು
ಗಂಧಕೆ ಭ್ರಮರಾಳಿಯಂತೆ ೩೦

ಹಾಗೆಂದ ತಕ್ಷಣ ಬಾಣಾಸುರ ಕಾದುಕೊಳ್ಳು ಎಂದು ಕೂರ್ಗಣೆಯಿಂದ ಹೊಡೆದನು. ಕುಮಾರನ ಶರೀರ ಸುಗಂಧಕ್ಕೆ ದುಂಬಿವಿಂಡು ಮುಸುರಿದಂತೆ ಬಾಣಗಳು ಮುತ್ತಿದವು.

ಹೊದ್ದಲೀಯದೆ ಬಾಣಂಗಳ ತರಿದನಿ
ರುದ್ಧ ಮಾತುಲನ ಕೊಂಡಾಡಿ
ಉದ್ದಂಡ ಬಾಣದಿಂದೆಚ್ಚನು ಸುಭಟ ಪ್ರ
ಸಿದ್ಧ ಬಾಣಾಸುರನೆದೆಯ ೩೧

ತನ್ನನ್ನು ತಾಕದಂತೆ ಬಾಣಗಳನ್ನು ಧ್ವಂಸ ಮಾಡಿ ಮಾವನನ್ನು ಕೊಂಡಾಡಿ ಪ್ರಚಂಡ ಬಾಣದಿಂದ ಬಾಣಾಸುರನ ಎದೆಗೆ ಎಚ್ಚನು.

ಪೇರುರದೊಳಗುಚಿರ ಹಾಯ್ವೆನೆಂದೆಂಬ ಕ
ಠೋರ ಕೂರ್ಗಣೆಯ ಕತ್ತರಿಸಿ
ವೀರರ ದೇವ ನೋಡೆನುತೆಚ್ಚ ಮಾರ ಕು
ಮಾರನ ಮೇಲೆ ಬೊಬ್ಬಿರಿದು ೩೨

ವಿಶಾಲವಕ್ಷವನ್ನು ಹೊಕ್ಕು ಬೆನ್ನ ಮೂಲಕ ಹೊರಬರುವಂತೆ ಪ್ರಯೋಗಿಸಿದ ಕಠೋರ ಕೂರ್ಗಣೆಯನ್ನು ಕತ್ತರಿಸಿ, ಬದಲಾಗಿ ಅನಿರುದ್ಧನ ಮೇಲೆ ತಾನು ಅಬ್ಬರಿಸಿ ಬಾಣ ಪ್ರಯೋಗಿಸಿದ

ನೂತನ ಕಂದರ್ಪನೊಡಲು ನಿಶಾಚರ
ನಾಥನ ಕೂರ್ಗಣೆಯಿಂದ
ತೂತೋ ತೂತಾಗದಂತೆ ಸವರಿದ ಶರ
ವ್ರಾತವನು ಕೈಚಳಕದಲಿ ೩೩

ನವ ಮನ್ಮಥನ(ಅನಿರುದ್ಧನ)ಶರೀರ ರಕ್ಕಸನ ಕೂರ್ಗಣೆಯಿಂದ ತೂತೋತೂತಾಯಿತು ಎಂಬಷ್ಟರಲ್ಲಿ ಆಗದಂತೆ ಅನಿರುದ್ಧ ತನ್ನ ಕೈಚಳಕದಿಂದ ಬಾಣಸಮೂಹವನ್ನು ಸಂಪೂರ್ಣ ಸವರಿದನು.

ನೀರನದೇನು ಸಮರ್ಥನೊ ತನ್ನೈ
ನೂರಂಬನೊಂದು ಬಾಣದಲಿ
ಹಾರಲಿಕ್ಕಿದನು ಪೇರುರದಲ್ಲಿ ಮರುಮೊನೆ
ದೋರದಂತೆಚ್ಚಿದನಹುದು ೩೪

ಸುಂದರ ಯುವಕ ಅದೇನು ಸಮರ್ಥನೊ?ತನ್ನ ಐದು ನೂರು ಬಾಣಗಳನ್ನು ಒಂದೇ ಒಂದು ಬಾಣದಿಂದ ಛಿದ್ರಿಸಿದನು. ನನ್ನ ವಿಶಾಲವಕ್ಷದಲ್ಲಿ ಮರುಮೊನೆ ತೋರದಂತೆ ಪ್ರಯೋಗಿಸಿದನು.

ವಿಸ್ತರಿಸುವೊಡೆ ಸಾಸಿರತೋಳು ನನಗುಂಟು
ದುಸ್ತರ ದ್ವಿತಯ ತೋಳಿನಲಿ
ವಿಸ್ತರಿಸುವುದಚ್ಚರಿಯೆಂದು ಸಮರ ಪ್ರ
ಹಸ್ತ ಮಲ್ಲನ ಕೀರ್ತಿಸಿದ ೩೫

ಹೇಳುವುದಾದರೆ ನನಗೆ ಸಾವಿರ ತೋಳುಗಳುಂಟು. ಅವನಿಗಿರುವ ಎರಡು ಕೈಗಳ ಬರವಿದ್ದರೂ(ಕ್ಷಾಮವಿದ್ದರೂ) ಸಮರ್ಥವಾಗಿ ನಿರ್ವಹಿಸಿದ್ದು ನಿಜಕ್ಕೂ ಅಚ್ಚರಿ. ಯುದ್ಧದಲ್ಲಿ ಪ್ರಬಲವಾದ ಹಸ್ತಗಳನ್ನುಳ್ಳ ವೀರ ಎಂದು ಹೊಗಳಿದ.

ಬಾಲ ನೀ ನೋಡು ನೋಡೆಲಹೊ ರಣರಂಗ
ಶೀಲ ನೀನೋಡು ನೋಡೆಲವೊ
ಕಾಲಭೈರವನ ಕೈಚಳಕವನೆಂದಲ
ರ್ಗೋಲನ ಮಗನಿಗಿಕ್ಕಿದನು ೩೬

ಎಲಹೋ ಚಿಣ್ಣ, ನೊಡು ನೋಡು. ಯುದ್ಧರಂಗ ಗುಣ ಸಂಪನ್ನ, ಕಾಲಭೈರವನ ಕೈಚಳಕವನ್ನು ನೋಡು ನೋಡು ಎಂದು ಹೂಬಾಣನ ಮಗನಿಗೆ ಬಾಣ ಪ್ರಯೋಗಿಸಿದನು.

ರಕ್ಕಸನಂಬುಗಳ ಕಡಿವಷ್ಟು ಕಡಿದನು
ಮಿಕ್ಕ ಕೆಂಗರಿಗೋಲ್ಗಳೊಡಲ
ಹೊಕ್ಕ ಮಾತ್ರದಿ ಹೋರಟೆಯಲಿ ರಕುತವ
ಮುಕ್ಕುಳಿಸಿದವು ಕೇಳು ಕೆಳದಿ ೩೭

ರಾಕ್ಷಸನ ಬಾಣಗಳನ್ನು ಕಡಿಯುವಷ್ಟು ಕಡಿದನು. ಉಳಿದ ಕೆಂಪುಗರಿಯ ಬಾಣಗಳು ಶರೀರವನ್ನು ಹೊಕ್ಕ ಮಾತ್ರದಲ್ಲಿ, ಸಂಘರ್ಷದಲ್ಲಿ ರಕ್ತವನ್ನು ಮುಕ್ಕುಳಿಸಿದವು.

ಪರುಕನಲ್ಲದಟ ಸಾಸಿರಬಾಹು ಪಿತನು
ಕಿರಿ ಕಾಂತನೊಡನೆ ಕಾದುವನು
ಇರಿದುಕೊಂಡರೆ ಹೊಟ್ಟೆ ತಿವಿದುಕೊಂಡರೆ ಕಣ್ಣು
ಮರುಕ ಮನ್ಮನವ ಭಂಗಿಸಿತು ೩೮

ಪರುಕ(ಅಶಕ್ತ)ನಲ್ಲ, ಅದಟ(ಶಕ್ತ). ಜೊತೆಗೆ ಸಾಸಿರ ತೋಳನು. ಇಂಥ ನನ್ನ ಅಪ್ಪ ನನ್ನ ಕಿರಿವಯಸ್ಸಿನ ಗಂಡನೊಡನೆ ಯುದ್ಧ ಮಾಡುತ್ತಿರುವನು. ಇರಿದುಕೊಂಡರೆ ಹೊಟ್ಟೆ , ತಿವಿದುಕೊಂಡರೆ ಕಣ್ಣು ಎಂದು ನನ್ನ ಮನಸ್ಸು ಮರುಗಿತು.

ಆಯತಾಕ್ಷಿಯರಿರ್ವರು ದುಃಖವಡಲಿತ್ತ
ಕಾಯಜ ವರ ಕುಮಾರಕನು
ಗಾಯದಿ ಮನಮೂರ್ಛೆ ತಿಳಿದೆದ್ದು ರಕ್ಕಸ
ರಾಯನನೆಚ್ಚು ಬೊಬ್ಬಿರಿದ ೩೯

ವಿಶಾಲಾಕ್ಷಿಯರಿಬ್ಬರು ಹೀಗೆ ಪರಸ್ಪರ ದುಃಖಪಡುತ್ತಿರಲು, ಅತ್ತ ಕಾಮಜ ಮೂರ್ಛೆ ತಿಳಿದೆದ್ದು ರಕ್ಕಸರಾಜನಿಗೆ ಎಚ್ಚೆ ಬೊಬ್ಬಿರಿದ.

ವಜ್ಜರ ದುಂಬಿಗಳು ಹೆಬ್ಬಿದರನು ಕೊರೆಯ
ಲುಜ್ಜುಗವೆತ್ತ ರೀತಿಯಲಿ
ನಿಜ್ಜರ ವೈರಿಯ ನಿಡಿದೋಳ ಶಿಳೀಮುಖ
ಎಜ್ಜವ ಮಾಡಿ ತೋಡಿದುದು ೪೦

ವಜ್ರದ ದುಂಬಿಗಳು ಹೆಬ್ಬಿದರನ್ನು ಕೊರೆಯಲು ಉದ್ಯುಕ್ತವಾದ ರೀತಿಯಲ್ಲಿ ಸುರವೈರಿಯ ನಿಡುದೋಳನ್ನು ಅನಿರುದ್ಧನ ಬಾಣ ಎಜ್ಜ(ರಂಧ್ರ)ಮಾಡಿ ತೋಡತೊಡಗಿತು.

ಮುತ್ತುಗ ನಿಡುಗೊನೆ ನಿಕರ ಹೂವಾದಂತೆ
ನೆತ್ತರ ಬಣ್ಣ ತೋರಿದವು
ಚಿತ್ತಜನಾತ್ಮ ಸಂಭವನ ಕೀರ್ತಿಸಿದ ಖ
ಳೋತ್ತಮ ಕಡುಮೆಚ್ಚಿ ನಗುತ ೪೧

ಮುತ್ತುಗದ ನಿಡುಗೊನೆ ಸಮೂಹ ಹೂವಾದಂತೆ ರಕ್ತದ ಬಣ್ಣ ತೋರಿದವು. ಖಳೋತ್ತಮ ಅನಿರುದ್ಧನನ್ನು ಹೆಚ್ಚು ಮೆಚ್ಚಿ ನಗುತ್ತ ಹೊಗಳಿದ.

ಹುಡುಗರು ಮುರಿದಿಕ್ಕಿ ತಿಂಬರು ನಿಮ್ಮಪ್ಪ
ಹಿಡಿವ ಕಬ್ಬಿನ ಬಿಲ್ಲನೊಡನೆ
ತೊಡಿಗೆಯಿಂದೊಪ್ಪುವ ಸೂಳೆಯ ತುರುಬಿಂಗೆ
ಮುಡಿವ ಪೊಗೋಲ್ಗಯ್ಯ ಭಟರು ೪೨

ನಿಮ್ಮಪ್ಪ ಹಿಡಿಯುವ ಕಬ್ಬಿನ ಬಿಲ್ಲನ್ನು ಒಡನೆ ಹುಡುಗರು ಲಟಕ್ಕನೆ ಮುರಿದು ತಿನ್ನುವರು. ಭಟರು ಹಿಡಿಯುವ ಬಾಣ, ತೊಡಿಗೆಯಿಂದ ಒಪ್ಪುವ ಸೂಳೆಯ ತುರುಬಿಗೆ ಮುಡಿದುಕೊಳ್ಳುವ ಹೂವು

ಸೂಳೆಯ ಕಣ್ಗೋಲಿಗೆ ಭೀತಿಸದ ಕ
ಟ್ಟಾಳುಗಳು ಬೀಯಗತನದಲಿ
ಆಳವಾಡದಿರಿ ಮತ್ಪಿತನಲರ್ಗೋಲಿಂದ
ಭಾಳಾಕ್ಷ ತಪಗೆಟ್ಟನರಿಯ ೪೩

ಸೂಳೆಯ ಕಣ್ಣ ಬಾಣಕ್ಕೆ ಭಯ ಪಡದ ಶೂರರು, ಬೀಯಗತನದಲ್ಲಿ ಆಳವಾಡದಿರಿ(ವಂಚನೆ, ಮಾಡದಿರಿ, ಮರುಳಗೊಳಿಸದಿರಿ)ನನ್ನ ತಂದೆಯ ಹೂಬಾಣದಿಂದ ಹಣೆಗಣ್ಣ ತಪಗೆಟ್ಟ ಎಂಬುದನ್ನು ಮರೆಯದಿರಿ.

ಕಿಡಿಗಣ್ಣನಿತ್ತ ಮಂತ್ರಾಸ್ತ್ರವ ಕೂರ್ತು ಕೈ
ದುಡಿಕಿ ಮೂಡಿಗೆಯಿಂದುಗಿದು
ಮಿಡಿದನು ಕಲ್ಪಾವಸಾನದ ಶತಕೋಟಿ
ಸಿಡಿಲಿನ ಬೊಬ್ಬೆಯಬ್ಬರದಿ ೪೪

ಕೆಂಡಗಣ್ಣನು ಕೊಟ್ಟ ಮಂತ್ರಾಸ್ತ್ರವನ್ನು ಮೆಚ್ಚಿ ಕೈತೂರಿಸಿ ಬತ್ತಳಿಕೆಯಿಂದ ತೆಗೆದು ಬಿಲ್ಲಿನ ಹೆದೆಯನ್ನು ಮಿಡಿದಾಗ ಪ್ರಳಯಕಾಲದ ಶತಕೋಟಿ ಸಿಡಿಲಿನ ಅಬ್ಬರ ಕೇಳಿ ಬಂತು.

ಓಗರದೆಸರಂತೆ ಕುದಿಗೊಂಡವು ಸಪ್ತ
ಸಾಗರ ಮೇರು ತಲ್ಲಣಿಸಲು
ಗೋಗರೆದವು ದಿಗ್ಗಜ ಕೂರ್ಮನ ಬೆನ್ನ
ನಾಗರ ಹೆಡೆಗಳುಡುಗಿದುವು ೪೫

ಏಳು ಕಡಲುಗಳು ಅನ್ನದ ಎಸರಂತೆ(ನೀರಂತೆ) ಕುದಿಗೊಂಡವು, ಮೇರುಪರ್ವತ ತಲ್ಲಣಿಸಿದವು, ದಿಗ್ಗಜಗಳು ಗೋಗರೆದವು, ಆಮೆಯ ಬೆನ್ನಮೇಲಿನ ನಾಗರಹಾವಿನ ಹೆಡೆಗಳು ಉಡುಗಿದವು.

ಚೇತನಗುಂದಿ ನಿರ್ಜರರು ಕಣ್ಗೆಟ್ಟರು
ತ್ಪಾತ ಮಾರ್ಗಣದಿಂದ ದೈತ್ಯ
ಪೀತಾಂಬರನ ಮೊಮ್ಮನನೆಚ್ಚು ಕೆಡಹಿದ
ಭೂತಲ ತಿರ್ರನೆ ತಿರುಗಿತು ೪೬

ದೈತ್ಯ ಉತ್ಪಾತ(ಭೂಕಂಪ ಮಾದರಿಯ) ಬಾಣದಿಂದ ಪೀತಾಂಬರನ(ಕೃಷ್ಣನ) ಮೊಮ್ಮಗನನ್ನು ಎಚ್ಚಿ ಕೆಡವಿದಾಗ ದೇವತೆಗಳು ಚೇತನಗುಂದಿ ಕಂಗೆಟ್ಟರು. ಭೂಮಂಡಲ ತಿರ್ರನೆ ತಿರುಗಿತು.

ಜತನ ತಪ್ಪದೆ ಕಾರ್ಮುಕ ಬಾಣ ಕರ್ಣಾ
ಯತವೆತ್ತು ದೃಢದಿ ತಾಕಲು
ಮಥನಕ್ಕೆ ಮಂಡಿಯ ಹೂಡಿದಂದದಿ ಮೂ
ರ್ಛಿತನಾದ ಕಾಮ ಕುಮಾರ ೪೭

ಎಚ್ಚರಿಕೆ ತಪ್ಪದೆ ಬಿಲ್ಲಿನ ಬಾಣ ದೃಢವಾಗಿ ತಾಕಲು, ಸಂಘರ್ಷಕ್ಕೆ ಮಂಡಿಯೂರಿದ ರೀತಿಯಲ್ಲಿ ಮನ್ಮಥಕುಮಾರ ಮೂರ್ಛಿತನಾದ.

ನುಡಿದವು ದೇವದುಂದುಭಿ ದೈತ್ಯನ ಸಿರಿ
ಮುಡಿಯಲಿ ಹೂಮಳೆಗರೆದವು
ಕುಡಿವರಿದದಟಾಂತು ಸಾಸಿರ ತೋಳಿಂದ
ಹಿಡಿದನು ಮರಿ ರಣಭೈರವನ ೪೮

ಓಡಿ ಹೋಗಿ ಸಾಸಿರ ತೋಳುಗಳಿಂದ ಮರಿ ರಣಭೈರವನನ್ನು ಹಿಡಿದಾಗ ದೇವದುಂದುಭಿಗಳು ಧ್ವನಿಗೈದವು, ರಕ್ಕಸನ ಸಿರಿಮುಡಿಯ ಮೇಲೆ ಹೂಮಳೆಗರೆದವು.

ದಂಡೆಯ ಮುಡಿದಂತೆ ಬೆಳೆದಿರ್ದ ಕರ್ಮೀಸೆ
ಖಂಡೇಂದು ಭಾಳ ಕತ್ತುರಿಯ
ಬೆಂಡೆದ್ದ ದೃಗುಯುಗಳದ ಮೂರ್ಛೆಯ ಸುಪ್ರ
ಚಂಡನ ಮೊಗವ ನೋಡಿದನು ೪೯

ಮಾಲೆಯನ್ನು ಧರಿಸಿದಂತೆ ಬೆಳದ ಕರಿಮೀಸೆಯ, ಅರ್ಧಚಂದ್ರಾಕಾರದ ಹಣೆಯ ಕಸ್ತೂರಿಯ, ಬೆಂಡಾದ ಕಣ್ಣುಗಳ ಮೂರ್ಛಿತ ಸುಪ್ರಚಂಡನ ಮುಖವನ್ನು ನೋಡಿದನು.

ಕೊಂದಡೆ ಮಗಳಿಂಗೆ ವೈಧವ್ಯವಹುದೆಂದು
ಕಂದರ್ಪನಾತ್ಮಸಂಭವನ
ಸುಂದರಮಯ ದಿವ್ಯದೇಹ ಕೂರ್ಗೋಲಿಂದ
ನೊಂದಿರಲು ಮೆಯ್ದಡವಿದನು ೫೦

ಕೊಂದರೆ ಮಗಳು ವಿಧವೆಯಾಗುವಳೆಂದು ಮನ್ಮಥ ಕುಮಾರನ ದಿವ್ಯದೇಹ ಬಾಣದಿಂದ ನೋವುಗೊಂಡಿರಲು ಬಾಣಾಸುರ ಮೈದಡವಿದನು.

ಉಪ್ಪರಿಗೆಯೊಳಿರ್ದು ಕುವರಿ ನೋಡಿದಳು ತ
ಮ್ಮಪ್ಪನ ಕೈಯೊಳಗೆ ತನ್ನ
ದಪ್ಪಕನಣುಗನು ಸಿಕ್ಕಿದನು ಹಾಯೆಂದು
ತೊಪ್ಪನೆ ಬಿದ್ದಳುರ್ವಿಯಲಿ ೫೧

ಉಪ್ಪರಿಗೆಯಲ್ಲಿದ್ದ ಉಷಾದೇವಿ ತನ್ನ ತಂದೆಯ ಕೈಯಲ್ಲಿ ಮನ್ಮಥ ಸುತನಿರುವುದನ್ನು ಕಂಡು ಹಾಯೆಂದು ದೊಪ್ಪನೆ ನೆಲಕ್ಕೆ ಬಿದ್ದಳು.

ಬಾಲೆಯರುಗಳು ಬೊಬ್ಬಿಡಲು ಗೋಪುರದಗ್ರ
ಶಾಲೆಯ ರೋದನಗಳ ಕೇಳ
ಲೀಲೆಗಾರನ ಕೊಲ್ವುದಿಲ್ಲೆಂದು ದುಃಖ
ಶೀಲೆಗೆ ಮಾತನಟ್ಟಿದನು ೫೨

ಗೋಪುರದ ಅಗ್ರ ಮೊಗಸಾಲೆಯಲ್ಲಿ ಬಾಲೆಯರ ರೋದನದ ಬೊಬ್ಬೆ ಕೇಳಿ, ಬಾಣಾಸುರ ಲೀಲೆಗಾರನಾದ ಅನಿರುದ್ಧನನ್ನು ಕೊಲ್ಲುವುದಿಲ್ಲವೆಂದು ದುಃಖಶೀಲೆಯಾದ ತನ್ನ ಮಗಳಿಗೆ ಸುದ್ದಿ ಮುಟ್ಟಿಸಿದನು.

ಇವನ ಪ್ರಾಣಕೆ ನಾನು ತಪ್ಪಿದೆನಾದರೆ
ಶಿವನ ಪಾದದಾಣೆಯೆನುತ
ಧವಳ ಸರೋಜಾಕ್ಷಿಗೆ ನಂಬುಗೆಗೊಟ್ಟು
ಕುವರನನೊಡಗೊಂಡು ಬಂದ ೫೩

ಇವನ ಪ್ರಾಣಕ್ಕೆ ಚ್ಯುತಿ ಬರದ ಹಾಗೆ ಶಿವನಾಣೆಗೂ ನೋಡಿಕೊಳ್ಳುವೆನೆಂದು ಮಗಳಿಗೆ ನಂಬುಗೆಗೊಟ್ಟು ಕುವರನನ್ನು ಒಡಗೊಂಡು ಹೋದ.

ಸದನಾಂತರ ಸಿಂಹಪೀಠದಿ ಕುಳಿತ ನಾ
ರದನಿರಲು ತಂದು ತೋರಿಸಿದ
ಮದನ ಕುಮಾರನಿಗೇನ ಮಾಡುವುದೆಂಬ
ಹದನ ಕೇಳಿದ ಮುನಿವರನ ೫೪

ಬೇರೆ ಮಂದಿರದ ಸಿಂಹಾಸನದಲ್ಲಿ ಕುಳಿತಿದ್ದ ನಾರದಮುನಿಗೆ ಅನಿರುದ್ಧನನ್ನು ತಂದು ತೋರಿಸಿ, ಏನು ಮಾಡಬೇಕು ಎಂಬ ಮಾರ್ಗಸೂಚಿಯನ್ನು ಕೇಳಿದ.

ಪೇಳಲಾನೊರ್ವ ಸಮರ್ಥನೆ ಬಾಗಿಲೊಳು
ಭಾಳಾಂಬಕನಿರಲಾಗಿ
ಕೇಳಬೇಕಾತ ನಿರೂಪಿಸಿದಂತೆ ಗ
ಯ್ಯಾಳನ ಶಿಕ್ಷಿಪುದೆಂದನು ೫೫

ಉತ್ತರಿಸಲು ನಾನೊಬ್ಬ ಸಮರ್ಥನೆ? ಬಾಗಲಿಲ್ಲಿ ಹಣೆಗಣ್ಣನಿದ್ದಾನೆ, ಅವನ ಅಭಿಪ್ರಾಯದಂತೆ ಈ ಗಯ್ಯಾಳನಿಗೆ ಶಿಕ್ಷೆ ವಿಧಿಸು ಎಂದನು.

ಹಾಗೆ ಆಗಲೆನುತ ದೈತ್ಯ ಕರೆಕಳಿಸೆ
ನಾಗ ಕಂಕಣನೈತಂದ
ಪೂಗೋಲನಾತ್ಮಸಂಭವಗೇನ ಮಾಳ್ಪುದೆಂ
ದಾಗ ಕೇಳಿದ ಪುರಹರನ ೫೬

ಆದೇ ರೀತಿ ಬಾಣ ಶಿವನಿಗೆ ಕರೆ ಕಳಿಸಿದಾಗ ಶಿವನು ಬಂದ. ಆಗ ಮನ್ಮಥಕುಮಾರನಿಗೆ ಏನು ಮಾಡಬೇಕು ಎಂದು ಶಿವನನ್ನು ಕೇಳಿದನು.

ಆಳೋಚನೆಗೊಳಲೇತಕೆ ಒರ್ಚಾಸಿರ
ತೋಳ ಬಲ್ಪೊಳಗೆನ್ನ ಭಜಿಸಿ
ಕಾಳೆಗ ಬೇಕೆನಲು ಬಂದುದು ಸಮರ ಸ
ಮ್ಮೇಳವೆಂದನು ನಸುನಗುತ ೫೭

ಯೋಚನೆ ಮಾಡುವುದೇತಕ್ಕೆ?ಒಂದು ಸಾವಿರ ತೋಳುಗಳ ಬಲ್ಬಿನಿಂದ ನನ್ನನ್ನು ಭಜಿಸಿ, ಯುದ್ಧ ಬೇಕೆನಲು ಅಂಥ ಸಮರ ಸಂದರ್ಭ ಬಂದೊದಗಿದೆ ಎಂದು ನಕ್ಕನು.

ಇದಿರಿಲ್ಲಎನಗೊರ್ವನೆನಲಾಗಿ ಕರುಣಾ
ನಿಧಿ ಇವನ ತಂದು ತೋರಿಸಿದೆ
ಉದಿಸಿದ ತೋಳ ಬಲ್ಪಲಿ ಕಾದಿ ನಿಮ್ಮನು
ಹದಿನಾರು ಮಚ್ಚ ಮೆಚ್ಚಿಸುವೆ ೫೮

ಯುದ್ಧ ಮಾಡಲು ನನಗೊಬ್ಬ ಶತ್ರುವೇ ಇಲ್ಲವಲ್ಲ ಎಂದು ಕೊರಗುವಾಗ ಕರುಣಾನಿಧಿ ನೀನು ಇವನನ್ನು ತಂದು ತೋರಿಸಿದೆ. ಬಾಹುಬಲದಲ್ಲಿ ಯುದ್ಧದಲ್ಲಿ ಕಾದಾಡಿ ನಿಮ್ಮನ್ನು ರೂಪಾಯಿಗೆ ಹದಿನಾರು ಆಣೆ ಅನಾಮತ್ತಾಗಿ ಮೆಚ್ಚಿಸುವೆನು(ಅಥವಾ ನೂರಕ್ಕೆ ನೂರುಪಾಲು ಮೆಚ್ಚಿಸುವೆನು ಎಂಬ ಭಾವದಂತೆ)

ಅಂಡಲೆದೆನ್ನ ಕೇಳುವುದೇನು ನೀ ಕೈ
ಗೊಂಡ ಕಾರ್ಯವೆನಗೊಪ್ಪಿಗೆ
ಚಂಡವಿಕ್ರಮ ನೀನೊಲಿದಂತೆ ಮಾಡೆಂದು
ಖಂಡೇಂದು ಶೇಖರ ನುಡಿದ ೫೯

ಕ್ಲೇಶಗೊಂಡು ನನ್ನ ಕೇಳುವುದೇನು ಬಂತು? ನೀನು ಕೈಗೊಂಡ ಕಾರ್ಯ ನನಗೆ ಒಪ್ಪಿಗೆ. ನಿನಗೆ ಮೆಚ್ಚಿಗೆಯಾದಂತೆ ಮಾಡು ಎಂದು ಚಂದ್ರಶೇಖರ ನುಡಿದ.

ಈತನ ಹಿಡಿದು ಬಂಧಿಸಲಾಗಿ ಯದುಕುಲ
ನಾಥ ನಾರಾಯಣ ಬಹನು
ಆತನೊಳು ಕಾದಿ ಜೈಸುವೆನೆಂದು ಖಳರಾಯ
ಭೂತೇಶನೊಡನೆ ಪೇಳಿದನು ೬೦

ಈತನನ್ನು ಬಂಧನದಲ್ಲಿಟ್ಟ ಸುದ್ದಿ ಕೇಳಿ ಯದುವಂಶ ಸಂಜಾತ ಶ್ರೀಕೃಷ್ಣ(ಅಥವಾ ವಿಷ್ಣು) ಬರುವನು. ಅವನೊಡನೆ ಹೋರಾಡಿ ಜಯಿಸುವೆನೆಂದು ದೈತ್ಯ ಭೂತೇಶ(ಶಿವ) ನೊಡನೆ ಹೇಳಿದನು.

ಭಕ್ತಿಯಳೆನ್ನನಾರಾಧಿಸಿ ನಾಲ್ವಗೆಯ
ಮುಕ್ತಿಯನು ಪಡೆದವನಲ್ಲ
ಶಕ್ತಿಯೊಳು ಕಾಳಗ ಬೇಕೆಂಬ ಸಮರಾನು
ರಕ್ತಿಯ ನೀ ಬಲ್ಲೆ ಮಗನೆ ೬೧

ಭಕ್ತಿಯಿಂದ ನನ್ನನ್ನು ಪೂಜಿಸಿ ನಾಲ್ಕು ರೀತಿಯ ಮೋಕ್ಷವನ್ನು ಪಡೆದವನಲ್ಲ ಶಕ್ತಿ ಪ್ರದರ್ಶನಕ್ಕಾಗಿ ಕಾಳಗ ಬೇಕೆಂಬ ಸಮರಾನುರಕ್ತಿಯ ನೀನು ಬಲ್ಲೆ ಮಗನೆ ಎಂದನು.

ತ್ರಾಣಿ ನೀನಹುದು ರಕ್ಕಸರಾಯ ಚಕ್ರ
ಪಾಣಿ ಸಾಧಾರಣನಲ್ಲ
ಕ್ಷೋಣಿಯೊಳಾತನ ಗೆಲ್ಲುವವರಿಲ್ಲೆಂದು
ಕಾಣಿಸಿ ಮಾತನಾಡಿದನು ೬೨

ನೀನು ತ್ರಾಣಿ(ಶಕ್ತ)ಇರಬಹುದು. ಆದರೆ ಚಕ್ರಪಾಣಿ ಸಾಮಾನ್ಯನಲ್ಲ. ಭೂಮಂಡಲದಲ್ಲಿ ಅವನನ್ನು ಗೆಲ್ಲವವರಿಲ್ಲವೆಂದು ತೂಕಮಾಡಿ ನುಡಿದನು.

ಶಂಕರ ಸರ್ವೋತ್ತಮ ಘೋರ ದುರಿತ ಭ
ಯಂಕರ ನಿಮ್ಮ ಸಮ್ಮುಖದಿ
ಪಂಕರುಹಾಕ್ಷನ ಗೆಲ್ಲದಿದ್ದಡೆ ನಿಮ್ಮ
ಕಿಂಕಿರನಲ್ಲೆಂದು ನುಡಿದ ೬೩

ಸರ್ವೋತ್ತಮ ಶಿವನೆ, ನಿಮ್ಮ ಸಮ್ಮುಖದಲ್ಲಿ ಕಮಲಾಕ್ಷನನ್ನು ಗೆಲ್ಲದಿದ್ದರೆ ನಾನು ನಿಮ್ಮ ಸೇವಕನಲ್ಲವೆ ಅಲ್ಲ.

ಸ್ವಾಮಿ ಸರ್ವಜ್ಞ ಶಿರೋಮಣಿ ಸಮರಕ್ಕೆ
ನೇಮಿಸಿ ನುಡಿಗೆ ತಪ್ಪುವರೆ
ಗೋಮಿನೀವರನೊಳು ಕಡಿದಾಡಿ ಕೈಲಾಸ
ಭೂಮಿಗೆ ತಾ ಬಪ್ಪೆನೆಂದ ೬೪

ಸ್ವಾಮಿ ಸರ್ವಜ್ಞ ಶಿಖಾಮಣಿ, ನನ್ನನ್ನು ಸಮರಕ್ಕೆ ನೇಮಿಸಿ, ಮಾತಿಗೆ ತಪ್ಪುವರೆ? ಲಕ್ಷ್ಮಿಕಾಂತನೊಡನೆ ಕಾದಾಡಿ ಕೈಲಾಸಕ್ಕೆ ನಾನು ಬರುತ್ತೇನೆ ಎಂದನು.

ಬೇಡಬೇಕೆಂದು ವಿಸ್ತರಿಸಿದೊಡಸುರ
ಚೂಡಾಮಣಿ ಕೇಳ್ವವನಲ್ಲ
ಮಾಡಬೇಕಾದುದೆಲ್ಲವ ಮಾಳ್ಪುದೆಂದೀಶ
ಗಾಡಿಕಾರನ ನೋಡಿದನು ೬೫

ಬೇಡ ಬೇಕು ಎಂಬ ವಾದಕ್ಕಿಳಿದರೆ ಅಸುರ ಕೇಳುವ ಜಾಯಮಾನದವನಲ್ಲ. ಮಾಡಬೇಕಾದುದನೆಲ್ಲವನ್ನು ಮಾಡು ಎಂದು ಹೇಳಿ, ಶಿವ ಸುಂದರಾಂಗ ಅನಿರುದ್ಧನನ್ನು ನೋಡಿದನು.

ಅಂಗಜನಾತ್ಮ ಸಂಭವನ ಮೋರೆಯ ನೋಡಿ
ಕಂಗೆಡಬೇಡೆಂದು ದೈತ್ಯ
ಮಂಗಳ ವಸ್ತ್ರಾಭರಣ ಮಾಲ್ಯಾನುಲೇ
ಪಂಗಳ ಕೊಟ್ಟು ಮನ್ನಿಸಿದ ೬೬

ಮನ್ಮಥ ಸುತನ ಮೋರೆ ನೊಡಿ ಕಂಗೆಡಬೇಡವೆಂದು ರಕ್ಕಸ ಅವನಿಗೆ ಮಂಗಳ ವಸ್ತ್ರಾಭರಣ ಮಾಲ್ಯಾನುಲೇಪನಗಳನ್ನು ಕೊಟ್ಟು ಮಾನ್ಯತೆ ನೀಡಿದ.

ಸೆಡೆಯದೆ ಸಮರ ಸ್ಥಳದಲಿ ದೈತ್ಯರ
ಪಡೆಯನೆಲ್ಲವ ಗೆಲ್ದುದಕೆ
ಬಿಡೆಯವಿಲ್ಲದೆ ಮೆಚ್ಚಿ ವಜ್ರಸಂಕೋಲೆಯೆಂಬ
ಕಡಗವನು ಕಾಲ್ಗಿಡಿಸಿದನು ೬೭

ತಗ್ಗದೆ ಕುಗ್ಗದೆ ರಣರಂಗದಲ್ಲಿ ರಕ್ಕಸರ ಪಡೆಯನೆಲ್ಲವನ್ನು ಗೆದ್ದಿದ್ದಕ್ಕೆ ಸಂಕೋಚ ಇಲ್ಲದೆ ಮೆಚ್ಚಿ ವಜ್ರದ ಸಂಕೋಲೆ ಎಂಬ ಕಡಗವನ್ನು ಕಾಲಿಗೆ ತೊಡಿಸಿದನು.

ಕಂಡನು ನಾರದ ಮುನಿ ಪುಂಡ್ರೇಕ್ಷು ಕೋ
ದಂಡನಾತ್ಮಜನ ಪ್ರಾಪ್ತಿಯನು
ಮಿಂಡಗಾರಿಕೆಯಲ್ಲಿ ಗಳಿಸಿದ ಸೌಖ್ಯವ
ನುಂಡಲ್ಲದೆ ತೀರದೆಂದನು ೬೮

ನಾರದ ಮುನಿ ಮನ್ಮಥಸುತನಿಗೆ ಬಂದೋದಗಿದ ಪ್ರಾಪ್ತಿ(ವಿಧಿ)ಯನ್ನು ಕಂಡು ಮಿಂಡಗಾರಿಕೆಯಲ್ಲಿ ಪಡೆದ ಸೌಖ್ಯವನ್ನು ಹೀಗೆ ಉಂಡಲ್ಲದೆ ತೀರದು ಎಂದನು.

ಈಶ ಪಾದಾಂಬುಜ ಮಕರಂದಭೃಂಗ ಬಾ
ಣಾಸುರ ನಿನ್ನ ಪ್ರತಾಪವದು
ಲೇಸಾದುದೆಂದು ನಾರದ ಮುನಿ ಪರಮ ಸಂ
ತೋಷದಲಿ ಕೊಂಡಾಡಿದನು ೬೯

ಶಿವನ ಪಾದಕಮಲದ ಮಕರಂದಾಸಕ್ತ ಭೃಂಗ ಬಾಣಾಸುರನೇ ನಿನ್ನ ಪ್ರತಾಪ ಲೇಸಾದದ್ದು ಎಂದು ನಾರದ ಮುನಿ ಹರ್ಷದಿಂದ ಕೊಂಡಾಡಿದನು.

ವೃದ್ಧಶ್ರವ ಮುಖ್ಯ ನಿಖಿಳ ನಿರ್ಜರರೊಳು
ಬದ್ಧ ನಿರ್ದಾಕ್ಷಿಣ್ಯರಾವು
ಇದ್ದುದ ನುಡಿದರೆ ಕೋಪಿಸಬೇಡೆಂದು
ಮುದ್ದಾಡಿ ಖಳನ ಬೀಳ್ಕೊಂಡ ೭೦

ವೃದ್ಧಶ್ರವ ಮುಖ್ಯ ಸುರರಲ್ಲಿ ನಾವು ಬದ್ಧ ನಿರ್ದಾಕ್ಷಿಣ್ಯರು. ಇದ್ದುದನ್ನು ಹೇಳಿದರೆ ಸಿಟ್ಟಾಗಬೇಡವೆಂದು ಮುದ್ದಾಡಿ ಬಾಣನನ್ನು ಬೀಳ್ಕೊಂಡ.

ಬಾಗಿದ ಜಾಣಾನಿರುದ್ಧನ ನೆಗಹಿದ
ಯೋಗೀಶ ಹರಕೆಯನಿತ್ತು
ವಾಗಿನೊಳಚ್ಯುತ ಹರಿಯೆಂದು ಖಗವೇರಿ
ಸಾಗಿದ ದ್ವಾರಕಾಪುರಿಗೆ ೭೧

ಬಾಗಿ ನಮಸ್ಕರಿಸಿದ ಜಾಣ ಅನಿರುದ್ಧನನ್ನು ಹಿಡಿದೆತ್ತಿ ಆಶೀರ್ವದಿಸಿ ಬಾಯಲ್ಲಿ ಅಚ್ಯುತ ಹರಿಯೆಂದು ಉಚ್ಚರಿಸುತ್ತಾ ಹಂಸವನ್ನೇರಿ ದ್ವಾರಕಾನಗರಕ್ಕೆ ಹೊರಟನು.

ವರಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೭೨

ವರಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು, ಓದಿ, ಕೇಳಿದ ಜನರನ್ನು ಸೂರ್ಯ ಚಂದ್ರರು ಇರುವ ತನಕ ಲಕ್ಷ್ಮೀಕಾಂತ ತಪ್ಪದೆ ರಕ್ಷಿಸುವನು.

## ೩೬. ಗರುಡನ ಸಂಧಿ

ಪಾಕಶಾಸನ ಮಳೆಗರೆಯಲು ಗಿರಿಯೆತ್ತಿ
ಗೋಕುವನು ನೆರೆ ಕಾಯ್ದ
ಕೋಕನದಾಕ್ಷನ ಬಲಗೊಂಡು ಕೃತಿವೇಳು
ಸಾಕೆನಿಸದು ಎನ್ನ ಕಿವಿಗೆ ೧

ಪಾಕಶಾಸನ(ಇಂದ್ರ) ಮಳೆಗರೆದಾಗ ಗಿರಿಯನ್ನೆತ್ತಿ ಗೋಕುಲವನ್ನು ರಕ್ಷಿಸಿದಂಥ ಕಮಲಾಕ್ಷನನ್ನು ಪ್ರದಕ್ಷಿಣೆ ಬಂದು ಕೃತಿಹೇಳು, ನನ್ನ ಕಿವಿಗೆ ಸಾಕು ಎನ್ನಿಸುವುದಿಲ್ಲ.

ಏ ಜಾಣವೆಣ್ಣುಗಳರಸಿ ನೀ ಕೇಳು ಸ
ರೋಜಾಂಬಕನ ಸತ್ಕೃತಿಯ
ರಾಜಾಮೃತವೆನೆ ರುಚಿಮಾಡಿ ತವ ಕರ್ಣ
ಭಾಜನದೊಳಗೆ ತುಂಬುವೆನು ೨

ಕಡುಜಾಣೆ ಕೇಳು, ಕಮಲಾಕ್ಷನ ಸತ್ಕಥೆಯನ್ನು ರಾಜಾಮೃತ (ಬೆಳುದಿಂಗಳು)ವನ್ನಾಗಿ ಮಾಡಿ ನಿನ್ನ ಕಿವಿ ಭಾಜನ(ಪಾತ್ರೆ)ವನ್ನು ತುಂಬುವೆನು.

ಅಂತರಿಕ್ಷದಲಿ ನಾರದಮುನಿವರ ನಿ
ಶ್ಚಿಂತ ಹಂಸಾರೂಢನಾಗಿ
ಸಂತಸದಿ ಬಂದು ದ್ವಾರಕಾಪುರದಿ ಶ್ರೀ
ಕಾಂತನ ಕಂಡ ಕೇಳು ಕೆಳದಿ ೩

ನಾರದ ಮುನಿ ಹಂಸಾರೂಢನಾಗಿ ಅಂತರಿಕ್ಷದಲ್ಲಿ ಹರ್ಷಚಿತ್ತನಾಗಿ ಸಾಗಿ ಬಂದು ದ್ವಾರಕೆಯಲ್ಲಿ ಶ್ರೀಕಾಂತನನ್ನು ಕಂಡನು.

ವರ ರತ್ನಮಂಟಪ ಮಧ್ಯದ ಸಿಂಹ ವಿ
ಷ್ಟರದಲಿ ಶ್ರೀಕೃಷ್ಣರಾಯ

ಪರಮೈಶ್ವರ್ಯದಿಂದೊಪ್ಪಿದ ಸೋಳ ಸಾ
ಸಿರವೆಂಗಳೊಡ್ಡೋಲಗದಿ ೪
ರತ್ನಮಂಟಪದ ಮಧ್ಯದ ಸಿಂಹಾಸನದಲ್ಲಿ ಹದಿನಾರು ಸಾವಿರ ಹೆಣ್ಣುಗಳ ಒಡ್ಡೋಲಗದಲ್ಲಿ. ಶ್ರೀಕೃಷ್ಣರಾಯ ಆಸೀನನಾಗಿದ್ದ.

ಪಟ್ಟದ ರಾಣಿ ರುಕ್ಮಿಣಿದೇವಿ ಬಲದಲಿ
ಕಟ್ಟಾಯತದಿ ನಿಂದಿರಲು
ಉಟ್ಟಾಡಿ ಸತ್ರಾಜಿತು ಕನ್ಯೆ ಸೊಬಗಳ
ವಟ್ಟಿರ್ದಳೆಡದ ಭಾಗದಲಿ ೫
ಪಟ್ಟದ ರಾಣಿ ರುಕ್ಮಿಣಿ ಉಚಿತಕ್ರಮದಲ್ಲಿ ಬಲಭಾಗದಲ್ಲಿ ನಿಂದಿರಲು, ವಸ್ತ್ರಾಭರಣಗಳಲ್ಲಿ ಆಸಕ್ತಳಾದ ಸತ್ಯೆಭಾಮೆ ಅಲಂಕೃತಗೊಂಡು ಎಡಭಾಗದಲ್ಲಿ ನಿಂತಿದ್ದಳು.

ಯಾದವ ಕುಲಶಿರೋಮಣಿ ಹೆಂಗಳೊಡನೆ ವಿ
ನೋದದಿ ಕುಳಿತಿರಲು ಕಂಡು
ಬೋಧಾರುಹ ನಾರದ ಕೃಷ್ಣದೇವರಾಯನ
ಪಾದ ಪಂಕಜಕೆರಗಿದನು ೬
ಯದುವಂಶ ಶಿರೋಮಣಿ ಸ್ತ್ರೀಲೋಲನಾಗಿ ವಿನೋದದಿಂದ ಕುಳಿತಿರಲು ದಿವ್ಯಜ್ಞಾನಿಯಾದ ನಾರದ ಕೃಷ್ಣದೇವರಾಯನ ಪಾದಕಮಲಕ್ಕೆ ಎರಗಿದನು.

ಮಣಿಭೂಷಣ ಹಸ್ತದಿಂದ ವೈಷ್ಣವ ಶಿರೋ
ಮಣಿ ನಾರದನನೆತ್ತಿದನು
ಮಣಿಪಾತ್ರೆಯೊಳರ್ಘ್ಯ ಪಾದ್ಯವನಿತ್ತು ಸ
ನ್ಮಣಿ ಪೀಠವನೇರಿಸಿದನು ೭
ರತ್ನದೊಡಿಗೆಯ ಹಸ್ತದಿಂದ ವೈಷ್ಣವ ಶಿರೋಮಣಿ ನಾರದನನ್ನು ಮೇಲೆತ್ತಿದನು. ರತ್ನಪಾತ್ರೆಯಲ್ಲಿ ಅರ್ಘ್ಯ ಪಾದ್ಯವನ್ನು ಅರ್ಪಿಸಿ, ಕೊನೆಗೆ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿದನು.

ವಿಪರೀತ ಚಾರಿತ್ರ ಶ್ರೀಕೃಷ್ಣ ಮಾಡಿ
ದುಪಚಾರವಡೆದು ಮುನೀಂದ್ರ
ಜಪಸಮಾಧಿಗೆ ನಿಲುಕದ ವಿಶ್ವರೂಪನ
ಲಪನವ ನೋಡಿ ಕೀರ್ತಿಸಿದ ೮

ವಿಶೇಷ ಗುಣಶೀಲನಾದ ಶ್ರೀಕೃಷ್ಣ ಮಾಡಿದ ಉಪಚಾರವನ್ನು ಸ್ವೀಕರಿಸಿ ನಾರದ ಮುನಿ ಜಪತಪಕ್ಕೆ ದಕ್ಕದ ವಿಶ್ವರೂಪನ ಮುಖವನ್ನು ನೋಡಿ ಕೀರ್ತಿಸಿದನು.

ಕೇಶವ ಸರುವ ಜಗನ್ನಾಥ ಕೇಳು ನಿನ್ನಯ
ದಾಸರ ದಾಸ ನಾನೈಸೆ
ಲೇಸಾದುದಿನಿತು ಮನ್ನಣೆಯ ಮಾಳ್ಪ ಸದ್ವಿ
ಲಾಸವಿದೇನೆಂದ ನಗುತ ೯

ಕೇಶವ ಕೇಳು, ನಿನ್ನ ದಾಸರ ದಾಸ ನಾನು. ಹಾಗಿರಬೇಕಾದರೆ ನೀನು ನನಗಿಷ್ಟು ಲೇಸಾದ ಮನ್ನಣೆ ಮಾಡಿದ ವಿಲಾಸದ ಉದ್ದೇಶವೇನು ಎಂದು ನಗುತ್ತ ಕೇಳಿದನು.

ಮುರಹರ ಮೂವತ್ತು ಮುಕ್ಕೋಟಿ ದೇವೇ
ಶ್ವರ ಯೋಗಿ ಹೃದ್ಧ್ಯಾನಗಮ್ಯ
ಪರಮಪುರುಷ ಪುರೋಷತ್ತಮ ಇಂತೆನಗುಪ
ಚರಿಸುವುದರಿಂಗಿತವೇನು ೧೦

ಪರಮಪುರುಷ, ಪುರುಷೋತ್ತಮ, ಮೂವತ್ತು ಮೂರು ಕೋಟಿ ಯೋಗಿಜನರ ಧ್ಯಾನಗಮ್ಯ, ಹೀಗೆ ನನಗೆ ಉಪಚರಿಸುವುದರ ಇಂಗಿತವೇನು?

ಅಜಭವೇಂದ್ರಾದಿಗಳು ನಿಮ್ಮ ಪಾದ ಪಂ
ಕಜದ ಕೀರ್ತನೆಯ ಮಾಡುವರು
ಭುಜ ಚತುಷ್ಟಯ ನೀ ನನಗಿಷ್ಟು ಮಾಳ್ಪುದು
ನಿಜವೆನಬಹುದೆ ಬಲ್ಲವರು ೧೧

ಬ್ರಹ್ಮಮಹೇಶ್ವರ ಇಂದ್ರಾದಿಗಳು ನಿಮ್ಮ ಪಾದಕಮಲದ ಕೀರ್ತನೆಯನ್ನು ಮಾಡುವರು. ಚತುರ್ಭುಜ ಸರ್ವಜ್ಞ ನೀನು ನನಗಿಷ್ಟು ಮಾಡುವುದನ್ನು ಬಲ್ಲವರು ನಂಬುವರೆ?

ನೆಟ್ಟನೆ ಪೃಥಿವೀ ಪತಿಗಳು ತನಯರ್ಗೆ
ಪಟ್ಟವ ಕಟ್ಟಿ ಕಾಣಿಕೆಯ
ಇಟ್ಟೆರಗಿದರೇನು ಹೀನವೆ ಪರಿತೋಷ
ದಟ್ಟೈಸುವುದು ಕಣ್ಮನಕೆ ೧೨

ಚಕ್ರವರ್ತಿಗಳು ತಮ್ಮ ಮಕ್ಕಳಿಗೆ ಪಟ್ಟವನ್ನು ಕಟ್ಟಿ ಕಾಣಿಕೆಯನ್ನಿಟ್ಟು ಎರಗಿದರೆ ತಪ್ಪೆ? ಕಣ್ಮನಗಳಿಗೆ ಹರ್ಷ ತುಂಬಿ ತುಳುಕುವುದು.

ಶುದ್ಧಾತ್ಮ ಸುರೇಶ್ವರ ಕೇಳು ಭೃಗು ನಿಮ್ಮ
ನೊದ್ದಡೆ ಶ್ರೀಪಾದವಿಡಿದು
ಮುದ್ದಾಡಿ ಪರಮಶಾಂತಿಯ ತೋರಿ ಲೋಕಕ್ಕೆ
ಹೆದ್ದೈವವಾದೆ ಎನ್ನೊಡೆಯ ೧೩

ಸುರೇಶ್ವರ ಕೇಳು, ಭೃಗುಮುನಿ ನಿಮ್ಮನ್ನು ಒದ್ದಾಗ ಅವರ ಶ್ರೀಪಾದವನ್ನು ಹಿಡಿದು ಮುದ್ದಾಡಿ, ಪರಮಶಾಂತಿಯನ್ನು ತೋರಿ ಲೋಕಕ್ಕೆ ಹಿರಿಯ ದೈವವಾದೆ ಎನ್ನೊಡೆಯ

ಬಲ್ಲಿದ ವಾಚಾಳಿ ನಾರದಮುನಿ ನಿನ್ನ
ಬೊಲ್ಲೆಯ ಮಾತದಂತಿರಲಿ
ಎಲ್ಲಿಂದ ಬಂದೆ ಸುದ್ದಿಯ ಪೇಳ್ವುದೆನಲಾಗಿ
ಸೊಲ್ಲಿಸಿದನು ಕೃಷ್ಣನೊಡನೆ ೧೪

ಮಹಾವಾಚಾಳಿ ನಾರದ ಮುನಿ ನಿನ್ನ ಹೊಗಳಿಕೆಯ ಮಾತು ಹಾಗಿರಲಿ. ಎಲ್ಲಿಂದ ಬಂದೆ? ಏನು ಸುದ್ದಿ? ಎಂದು ವಿಚಾರಿಸಲಾಗಿ ನಾರದ ಕೃಷ್ಣನೊಡನೆ ಹೇಳತೊಡಗಿದನು.

ಹರ ದರುಶನ ತಾತ್ಪರಿಯದಿಂದ ಶೋಣಿತ
ಪುರದೆಡೆಗಾನೈದಾಗ
ಮುರಮರ್ದನ ನಿಮ್ಮ ಮೊಮ್ಮನ ಸುದ್ದಿ ವಿ
ಸ್ತರವಾದುದೇನ ಹೇಳುವೆನು ೧೫

ಹರ ದರ್ಶನಾರ್ಥವಾಗಿ ಶೋಣಿತಪುರಕ್ಕೆ ನಾನು ಹೋದಾಗ ನಿಮ್ಮ ಮೊಮ್ಮಗನ ಸುದ್ದಿ ಹಚ್ಚಿದ್ದನ್ನು ಕೇಳಿದೆನು.

ಸ್ಮರತನಯನ ಪೌರುಷವತ್ಯಧಿಕ ಸಾ
ಸಿರತೋಳ ದೈತ್ಯನಾತ್ಮಜೆಯ
ಸುರತಲಂಪಟನಾಗಿ ತಿರುಗದೆ ಸ್ವಸ್ಥ ಸುಖ
ನಿರತನಾಗಿರ್ದನಾ ಪುರದಿ ೧೬

ಮನ್ಮಥ ಸುತನ ಪೌರುಷ ಹೇಳತೀರದು. ಸಾಸಿರ ತೋಳ ಬಾಣಾಸುರನ ಮಗಳಜೊತೆ ಸುರತಕ್ರೀಡೆಯೆಲ್ಲಿ ನಿರತನಾಗಿ ಹಿಂದಿರುಗದೆ ಆ ಪುರದಲ್ಲೇ ಇರುವನು.

ಗಬ್ಬತನದೊಳಾತ ಹೊಕ್ಕಿರ್ದುದ ಕಂಡು
ತುಬ್ಬಿಸಿ ಕೊಟ್ಟವರ್ನಾವು
ಕೊಬ್ಬಿದ ದಡಿಗದೈತ್ಯರು ಬಂದು ತುಡುಕಲು
ಜಬ್ಬಿದನವರೊಡಲುಗಳನು ೧೭

ಅಹಂಕಾರದಿಂದ ಆತ ಹೊಕ್ಕು ಮುಕ್ಕುವುದನ್ನು ಬಾಣನಿಗೆ ತಿಳಿಸಿಕೊಟ್ಟವರು ನಾವು. ಕೊಬ್ಬಿದ ದಡಿಗ ದೈತ್ಯರು ಬಂದು ಮುತ್ತಿದಾಗ ಅವರೊಡಲುಗಳನ್ನು ಜಬ್ಬಿದನು.

ಲೆಕ್ಕವಿಲ್ಲದೆ ಕೊಂದ ಅದಟುಳ್ಳ ದೈತ್ಯರ
ವಿಕ್ಕರಮ ವೀರೋತ್ತಮನ
ರಕ್ಕಸರಾಯ ಬಾಣಾಸುರ ಹಿಡಿದನು
ಮುಕ್ಕಣ್ಣ ಕೊಟ್ಟ ಶಕ್ತಿಯಲಿ ೧೮

ಲೆಕ್ಕವಿಲ್ಲದಷ್ಟು ರಕ್ಕಸರನ್ನು ಕೊಂದ ವಿಕ್ರಮ ವೀರೋತ್ತಮನನ್ನು ಬಾಣಾಸುರ ಮುಕ್ಕಣ್ಣ ದಯಪಾಲಿಸಿದ್ದ ಶಕ್ತಿಯಿಂದ ಹಿಡಿದನು.

ಹಿಡಿಯಾಳಾಗಿ ಸಿಕ್ಕಿದ ಚಿಕ್ಕ ಹೈದನ
ಕಡಿದಡೆ ಕಲಹವಿಲ್ಲೆನುತ
ಬಿಡಿಸಿಕೊಂಬುವರ ನೋಡುವೆನೆಂದು ನಿಗಳ
ಜಡಿಸಿದ ಪಾದಯುಗಳಕ್ಕೆ ೧೯

ಸೆರೆಸಿಕ್ಕಿದ ಚಿಕ್ಕ ಹೈದನನ್ನು ಕಡಿದರೆ ಕಲಹವಿಲ್ಲೆಂದು ಬಗೆದು ಬಿಡಿಸಿಕೊಳ್ಳುವವರು ಬರಲಿ ಎಂದು ಪಾದದ್ವಯಕ್ಕೆ ಸಂಕೋಲೆ ತೊಡಿಸಿದನು.

ನಾರದ ಕಲಹ ತಾತ್ಪರ್ಯದಿಂದ ತರಳ ಕು
ಮಾರನ ಕೊಂದೆ ನೀನೆನುತ
ಮಾರಮಾತೃಕೆ ರುಕ್ಮಿಣಿ ಸತ್ಯಭಾಮೆ ಕ
ಣ್ಣೀರಿಂದ ನೆನೆಸಿದರೊಡಲ ೨೦

ಕಲಹ ಕುತೂಹಲ ನಾರದ ನೀನು, ಅನಿರುದ್ಧನನ್ನು ವಿನಾಕಾರಣ ಕೊಂದೆ ಎಂದು ರುಕ್ಮಿಣಿ ಸತ್ಯಭಾಮೆಯರು ಕಣ್ಣೀರುಗರೆದರು.

ಮಗ ಹೋದ ಮರುದಿನ ಬೆಳಗಾಗಿ ಹೇಳಿದೊ
ಡಘಹರ ಕಿವಿಗೊಟ್ಟುದಿಲ್ಲ
ಜಗದೀಶನಾತ್ಮಸಂಭವನ ಕುಮಾರ ದೇ
ಸಿಗನಾದನೆಂದಳಲಿದರು ೨೧

ಮಗ ಇಲ್ಲವಾದ ಮರುದಿನ ಬೆಳಗ್ಗೆ ವಾಸ್ತವ ಸತ್ಯವನ್ನು ತಿಳಿಸಿದಾಗ ಪಾಪವಿನಾಶಕನಾದ ಕೃಷ್ಣ ಅದಕ್ಕೆ ಕಿವಿಯನ್ನೇ ಕೊಡಲಿಲ್ಲ. ಜಗದೀಶನ ಮಗನ ಮಗ ದೇಸಿಗನಾದ ಎಂದು ಅತ್ತರು.

ಕಂದಯ್ಯ ಕಾದುವ ಹರೆಯವೆ ಖಳರೊಳು
ಬಂಧನಕೊಳಗಾಗಬಹುದೆ
ಬೆಂದ ಪಾಪಿಷ್ಠನ ಬಸಿರೊಳು ನೀನೇಕೆ
ಬಂದಪೆಯೆಂದಳಲಿದರು ೨೨

ಹಸುಗಂದ ರಣರಂಗದಲ್ಲಿ ಯುದ್ಧಮಾಡುವ ಯೋಧೋಚಿತ ಪ್ರಾಯದವನೆ?ಅವನು ರಕ್ಕಸನಿಂದ ಬಂಧನಕ್ಕೊಳಗಾಗಬಹುದೆ? ಬೆಂದು ಬೂದಿಯಾದವನ ಮಗನಾಗಿ ನೀನೇಕೆ ಜನ್ಮ ತಾಳಿದೆ ಎಂದು ಅತ್ತರು.

ಜಡದೇಹಿಗಳಂತೆ ಮಾತಾಡುವ ಹೆಡ್ಡು
ಬಿಡದಿಹುದು ನಿಮಗೆಂದೆನುತ
ಅಡಹಾಯಿದುಗುವಶ್ರು ಧಾರಾವರ್ತವ
ತೊಡೆದನು ಪೀತಾಂಬರದಲಿ ೨೩

ಅಜ್ಞಾನಿಗಳಂತೆ ಮಾತಾಡುವ ಹೆಡ್ಡತನ ನಿಮ್ಮನ್ನು ಇನ್ನೂ ಬಿಟ್ಟಿಲ್ಲ. ಅಡ್ಡ ಹಾಯ್ದು ಜಿನುಗುವ ಕಣ್ಣೀರ ಧಾರೆಯನ್ನು ತನ್ನ ಪೀತಾಂಬರದಿಂದ ಒರೆಸಿದನು.

ಅಸುರನ ತೋಳ್ಗಳ ತರಿದಿಕ್ಕಿ ಸೆರೆಸಿಕ್ಕಿದ
ಹಸು ಹುಡುಗನ ತಂದು ಕೊಡುವೆ
ವಸುದೇವನಾಣೆ ತಪ್ಪಿದರೆಂದು ಶಪಥವ
ಕುಸುಮಗಂಧಿನಿಯರ್ಗೆ ನುಡಿದ ೨೪

ರಕ್ಕಸನ ತೋಳುಗಳನ್ನು ತುಂಡರಿಸಿ ಸೆರೆ ಸಿಕ್ಕಿರುವ ಹಸುಹುಡುಗನನ್ನು ಬಿಡಿಸಿಕೊಂಡು ಬಂದು ನಿಮಗೊಪ್ಪಿಸುತ್ತೇನೆ. ನನ್ನ ತಂದೆ ವಸುದೇವನ ಮೇಲೆ ಆಣೆ ಇಟ್ಟು ಹೇಳುತ್ತೇನೆ ನಾನು ಮಾತಿಗೆ ತಪ್ಪುವುದಿಲ್ಲ ಎಂದು ಪತ್ನಿಯರಿಗೆ ಹೇಳಿದ.

ಸುದತಿಯರುಗಳ ದುಃಖವ ಪರಿಹರಿಸಿ ನಾ
ರದ ಮುನಿವರನ ಕೆಯ್ವಿಡಿದು
ಕದನ ಕಾತುರದಿ ಪೊರಮಟ್ಟು ಬಂದು ಸಾ
ರಿದ ರಮ್ಯ ರತ್ನಚಾವಡಿಯ ೨೫

ಸುದತಿಯರ ದುಃಖವನ್ನು ಶಮನಗೊಳಿಸಿ, ನಾರದನ ಕೈಯನ್ನು ಹಿಡಿದು ಕದನ ಕುತೂಹಲಿತನಾಗಿ ಹೊರಹೊರಟು ಬಂದು ಸುಂದರ ಚಾವಡಿ ಸೇರಿದ.

ತೋರಿಯ ಮಣಿಪೀಠದಲಿ ಮಂಡಿಸಿ ರಾಯ
ಭಾರಿಗಳ ಕೈಯಿಂದ ಕರೆಸಿ
ವಾರಿಜದಳನೇತ್ರ ಬಲಗೂಡಿ ಪ್ರಸ್ಥಾನ
ಭೇರಿಯ ದನಿ ಭೋರ್ಗರೆಸಿದ ೨೬

ದೊಡ್ಡ ರತ್ನಪೀಠದಲ್ಲಿ ಮಂಡಿಸಿ, ರಾಯಭಾರಿಗಳ ಮೂಲಕ ಸೈನ್ಯವನ್ನು ಕರೆಸಿ ಪ್ರಸ್ಥಾನ ಭೇರಿ(ದಂಡಯಾತ್ರೆಯ ವಾದ್ಯ) ಯ ಧ್ವನಿಯನ್ನು ಭೋರ್ಗರೆಸಿದನು.

ಹೊಡೆದ ಪ್ರಸ್ಥಾನ ಭೇರಿಯ ನಾದ ಬ್ರಹ್ಮಾಂಡ
ಒಡೆದುದೆಂಬಂತೆ ಗರ್ಜಿಸಲು
ನಡನಡುಗಿದವು ಪರ್ವತ ತಳಮಳವೆದ್ದು
ಕಡಲೇಳು ಮೇರೆದಪ್ಪಿದುವು ೨೭

ಪ್ರಸ್ಥಾನ ಭೇರಿಯ ಹೊಡೆತಕ್ಕೆ ಬ್ರಹ್ಮಾಂಡ ಒಡೆದು ಹೋಯಿತೆಂಬಂತೆ

ಸದ್ದು ಮಾಡಲು, ಪರ್ವತಗಳು ಗಡಗಡ ನಡುಗಿದವು, ಸಪ್ತಸಾಗರಗಳು ಬಿದ್ದೆದ್ದು ಹದ್ದುಮೀರಿದವು.

ತರಿಸಿದ ಬಾಣ ತೂಣೀರ ಕಾರ್ಮುಕವ
ನೇರಿಸಿದ ಕಂಚುಕದಳೆದ
ಧರಿಸಿದ ಶಂಖ ಚಕ್ರವನಾ ಕ್ಷಣದಲಿ
ಸ್ಮರಿಸಿದ ವಿಹೇಶ್ವರನ ೨೮

ತರಿಸಿದ ಬಾಣ ಬತ್ತಳಿಕೆ ಬಿಲ್ಲುಗಳನ್ನು ಏರಿಸಿದ, ಕಂಚುಕ(ಲೋಹ ಕವಚ, ನಿಲುವಂಗಿ) ವನ್ನು ಧರಿಸಿದ, ಶಂಖ ಚಕ್ರವನ್ನು ಹಿಡಿದ, ಆ ಕ್ಷಣದಲ್ಲಿ ಗರುಡನನ್ನು ಸ್ಮರಿಸಿದ.

ಸಿಂಧು ಸಪ್ತಕ ಪಕ್ಷಪಾತೋತ್ಪಾತಗ
ಳಿಂದೊಡಗೂಡಿದಂತೆ ತುಳುಕೆ
ಬಂದನು ಖಗರಾಜ ಕೃಷ್ಣನಂಘ್ರಿಗೆ ಬಿದ್ದು
ನಿಂದನು ಮುಗಿದ ಹಸ್ತದಲಿ ೨೯

ಗರುಡನ ವೇಗವಾದ ಪಕ್ಷಪಾತಕ್ಕೆ(ರೆಕ್ಕೆಗಳು ಮೇಲೇಳುವ ಕೆಳಕ್ಕೆ ಬೀಳುವ ರಭಸಕ್ಕೆ) ಸಪ್ತಸಾಗರಗಳು ಉತ್ಪಾತಕ್ಕೊಳಗಾದಂತೆ ತುಳುಕಾಡಲು, ಖಗರಾಜ ಬಂದು ಕೃಷ್ಣನ ಪಾದಗಳಿಗೆ ಬಿದ್ದು ಕೈಮುಗಿದು ನಿಂತನು.

ಬಾಣ ಕಾರ್ಮುಕ ಶಂಖ ಚಕ್ರ ಜೋಡಣೆಯ ಪ್ರ
ಯಾಣವಾವೆಡೆಗೆ ನಿಮ್ಮಂಘ್ರಿ
ಮಾಣದೆ ತನಗೆ ವಿಸ್ತರಿಸೆಂದು ಸುರಜಿತು
ತ್ರಾಣ ಬಿನ್ನಹವ ಮಾಡಿದನು ೩೦

ಬಿಲ್ಲು ಬಾಣ ಶಂಖ ಚಕ್ರಗಳನ್ನು ಧರಿಸಿ ಯಾವ ಕಡೆಗೆ ಪಾದ ಬೆಳೆಸಿದಿರಿ? ದಯಮಾಡಿ ನನಗೆ ಉದ್ದೇಶ ವಿವರಿಸಬೇಕೆಂದು ಗರುಡ ವಿನಂತಿಸಿದ.

ಖಗರಾಜ ಕೇಳು ಕಾಮನ ಸೂನು ಬಾಣನ
ಮಗಳ ಬಳಿ ಹೊಗಲವರು ಕಂಡು
ವಿಗಡನ ಹಿಡಿದು ಸಂಕಲೆಯಿಕ್ಕಿದರಾವು
ಜಗಳಕೆ ಹೋಗಬೇಕೆಂದ ೩೧

ಮನ್ಮಥನ ಮಗ ಬಾಣನ ಮಗಳ ಬಳಿಗೆ ಹೋಗಲು ಅದನ್ನು ಕಂಡ ರಕ್ಕಸರು ಅವನನ್ನು ಹಿಡಿದು ಸಂಕೋಲೆ ತೊಡಿಸಿದ್ದಾರೆ, ಆದ್ದರಿಂದ ಅವರ ವಿರುದ್ಧ ಯುದ್ಧಕ್ಕೆ ಹೋಗಬೇಕೆಂದನು.

ಉರಗಾರಾತಿ ನೀ ಬಲವಂತ ಬಾಣಾ
ಸುರನ ದುರ್ಗವ ಕಿತ್ತು ತರಲು
ಹರ ತನ್ನ ಗಣಮುಖ್ಯ ತ್ರಿದಶರು ಸಹಿತವ
ನರಯನೆ ಕಾದು ಕೋಡಿಹನು ೩೨

ಸರ್ಪವೈರಿಯಾದ ನೀನು ಬಲಾಢ್ಯ ಬಾಣಾಸುರನ ಕೋಟೆಯನ್ನು ಕಿತ್ತು ತರುವವರೆಗೂ ಶಿವ ತನ್ನ ಗಣಸಮೇತ ಅವನ ಅರಮನೆಯನ್ನು ಕಾದುಕೊಂಡಿರುವನು.

ಜಡದೇಹಿ ದೈತ್ಯನ ಸಮರವದೆಷ್ಟರ
ಸಡಗರ ನೀವು ಪೋಪುದಕೆ
ಅಡಹಾಯಿದವನ ದುರ್ಗವ ಕಿತ್ತು ತರ
ದೊಡಾನು ಗರುಡನಲ್ಲವೆಂದ ೩೩

ಜಡರಕ್ಕಸನ ಕದನ ಎಷ್ಟರ ಮಟ್ಟಿನದು, ನೀವು ಭಾಗವಹಿಸುವುದಕ್ಕೆ?ನಾನು ಅವನ ದುರ್ಗವನ್ನು ಕಿತ್ತು ತರದಿದ್ದರೆ ಗರುಡನೇ ಅಲ್ಲವೆಂದು ಶಪಥ ಮಾಡಿದ.

ಅಂಬುಜವ ಭವೇಂದ್ರಾದಿ ದೇವತೆಗಳ
ನಂಬುಗೆವಡೆದ ರಕ್ಕಸರು
ಕಂಬು ಚಕ್ರಾಂಕಿತ ನಿಮ್ಮೊಳು ಮಥನಿಸಿ
ಮುಂಬರಿವರು ಯಮಪುರಿಗೆ ೩೪

ಬ್ರಹ್ಮ , ಇಂದ್ರ ಮಹೇಶ್ವರಾದಿ ದೇವತೆಗಳ ಬೆಂಬಲವಿರುವ ರಕ್ಕಸರು ಶಂಖ ಚಕ್ರಧಾರಿಯಾದ ನಿನ್ನೊಡನೆ ಸಂಘರ್ಷಕ್ಕಿಳಿದು ಯಮಪುರಿಯ ದಾರಿಯನ್ನು ಹಿಡಿಯುವರು.

ಅಂಡಜವರ್ಗವಲ್ಲಭ ಗೆಲ್ಲ ಸೋಲುಗಳ
ಕಂಡವರಾರು ಕಾಣಿಕೆಯ

ದಂಡಯಾತ್ರೆಗೆ ನಮ್ಮನೆಲ್ಲ ಬೆನ್ನೊಳಾಂತು
ಕೊಂಡೊಯ್ಯಬೇಕೆಂದ ನಗುತ ೩೫

ಹಕ್ಕಿಗಳ ರಾಜನೇ, ಗೆಲುವು ಸೋಲುಗಳ ಕಾಣ್ಕೆ (ಸತ್ಯದರ್ಶನ) ಯನ್ನು ಕಂಡವರಾರು? ನಮ್ಮನ್ನೆಲ್ಲ ನಿನ್ನ ಬೆನ್ನ ಮೇಲೆ ಹೊತ್ತು ದಂಡಯಾತ್ರೆಗೆ ಕೊಂಡು ಹೋಗೆಂದನು.

ನಿಜವಾಗಿ ತೆರಳಲೇ ಬೇಕಾದಡೆ ಜೀಯ
ಬಿಜಯಮಾಡಿ ಬೆನ್ನೊಳಾನುವೆ
ಗಜರಥ ಹಯ ಪಾದಚರ ಮುಖ್ಯ ಮಾಬಲ
ವ್ರಜವನೊಗ್ಗರಿಯೊಳಾನುವೆನು ೩೬

ನೀವು ನಿಜವಾಗಿ ಪಯಣ ಬೆಳಸುವಿರಾದರೆ, ಸ್ವಾಮಿ ಪಾದ ಬೆಳೆಸಿರಿ, ನನ್ನ ಬೆನ್ನಲ್ಲಿ ನಿಮ್ಮನ್ನು ಹೊರುವೆನು. ಅನೆ, ಕುದುರೆ, ರಥ, ಕಾಲಾಳುಗಳನ್ನೆಲ್ಲ ಒಂದು ರೆಕ್ಕೆಯಲ್ಲಿ ಆನುವೆನು.

ಮುತ್ತಿನ ಗದ್ದುಗೆಯನು ಗರುಡನ ಹೆಗಲಿ
ಗೆತ್ತಿಸಿ ಬಿಗಿದು ಹಲ್ಲಣಿಸೆ
ಒತ್ತಿನ ಸೌಖ್ಯವನಾಂತು ಸಂತಸದಿಂದ
ಹತ್ತಿದ ಶ್ರೀಕೃಷ್ಣರಾಯ ೩೭

ಮುತ್ತಿನ ಗದ್ದುಗೆಯನ್ನು ಗರುಡನ ಹೆಗಲಿಗೆತ್ತಿಸಿ, ಜೀನನ್ನು ಬಿಗಿಸಿ, ಶ್ರೀಕೃಷ್ಣ ಸಂತಸದಿಂದ ಗರುಡಾರೂಢನಾದನು.

ಸೂಟಿಯಿಂದಡರ್ದರು ಬಲರಾಮ ಸಾತ್ಯಕಿ
ಪಾಠೀನ ಕೇತೊದ್ಭವನ
ಲೂಟಿಗೈಗದವರ ಲೂಟಿ ಗೈಯಲು ಚಪ್ಪನ್ನ
ಕೋಟಿ ಯಾದವರು ಹತ್ತಿದರು ೩೮

ಬಲರಾಮ ಸಾತ್ಯಕಿಯರು ಬೇಗ ಹತ್ತಿದರು. ಮತ್ಸ್ಯಧ್ವಜನ ಆತ್ಮಜನನ್ನು ಲೂಟಿಗೈದವರನ್ನು ಪ್ರತಿಯಾಗಿ ಲೂಟಿ ಮಾಡಲು ಐವತ್ತಾರು ಕೋಟಿ ಯಾದವರು ಹತ್ತಿದರು.

ಹೊಂಗಳಸದ ಸತ್ತಿಗೆ ಡಾಳಿಸುವ ಚಾಮ
ರಂಗಳ ಸಂಚಿ ಸಗ್ಗಳೆಯ
ಮಂಗಳ ಕುಂಚ ಕಾಳಾಂಜಿ ಬೀಸಣಿಗೆಯ
ಪೆಂಗಳೇರಿದರಿಕ್ಕೆಲದಿ ೩೯

ಚಿನ್ನದ ಕಳಸದ ಛತ್ರಿ, ಕಂಗೊಳಿಸುವ ಚಾಮರಗಳ, ತಾಂಬೂಲ ಚೀಲದ, ಸಗ್ಗಳೆಯ(ನೀರು ತುಂಬುವ ಚರ್ಮದ ಚೀಲದ) , ಕುಂಚದ (ನವಿಲುಗರಿಯ ಚವರಿ) ಕಾಳಾಂಜಿಯ(ಪೀಕದಾನಿಯ), ಬೀಸಣಿಗೆಯ ಹೆಣ್ಣುಗಳು ಎರಡೂ ಕಡೆಯ ರೆಕ್ಕೆಗಳನ್ನೇರಿದರು.

ಅಗಣಿತ ವರ್ಣ ಟೆಕ್ಕೆಯದಲಿ ಬರೆದಿರ್ದ
ಖಗರಾಜ ಶಂಖ ಚಕ್ರಗಳು
ಸೊಗಯಿಪ ಗಜಸಿಂಹಫಣಿ ಮೀನಪಟಗಳ
ಗಗನವ ತುಡುಕಲೆತ್ತಿದರು ೪೦

ಅಸಂಖ್ಯ ಬಣ್ಣದ ಬಾವುಟಗಳಲ್ಲಿ ಬರೆದಿದ್ದ ಗರುಡ, ಶಂಖ, ಚಕ್ರಗಳ, ಸೊಗಸಾಗಿ ಕಾಣುವ ಆನೆ, ಸಿಂಹ, ಸರ್ಪ, ಮತ್ಸ್ಯ ಪಟಗಳನ್ನು ಮುಗಿಲು ಮುಟ್ಟುವಂತೆ ಮೇಲೆತ್ತಿದರು.

ಮಂಡಿಸಿದರು ಮಂತ್ರಿಗಳು ಸೇನಭಾಗರು
ಪಂಡಿತ ಪಂಚಾಂಗಿಗಳು
ದಂಡಿಗೆ ಪಲ್ಲಕ್ಕಿ ಬೊಕ್ಕಸ ಭಂಡಾರ
ಖಂಡಿತವಾಗಿ ತುಂಬಿದರು ೪೧

ಮಂತ್ರಿಗಳು, ಸೇನಭಾಗರು, ಪಂಡಿತರು, ಪಂಚಾಂಗಿಗಳು ಮಂಡಿಸಿದರು. ದಂಡಿಗೆ(ಪಲ್ಲಕ್ಕಿ)ಬೊಕ್ಕಸ ಭಂಡಾರಗಳನ್ನು ತುಂಬಿದರು.

ರಾಜರು ರಾವುತ ಮಾವುತ ಕಾಲಾಳು ಬಿ
ಲ್ಲೋಜರು ಪೆಟಲಂಬಿನವರು
ತೇಜೋಮಯ ಬಾಣಗಾರರೇರಿದರು ಖಗ
ರಾಜನೆರಂಕೆಯಿಕ್ಕೆಲದಿ ೪೨

ರಾಜರು, ರಾವುತರು(ಕುದುರೆ ಸವಾರರು)ಮಾವುತರು(ಆನೆ ಸವಾರರು)

ಕಾಲಾಳುಗಳು, ಬಿಲ್ಲು ವಿದ್ಯಾಪಾರಂಗತರು, ಪೆಟಲಂಬಿನುರು(ಬಂದೂಕಿನವರು), ಬಾಣಗಾರರು, ಗರುಡನ ರೆಕ್ಕೆಯ ಎರಡೂ ಕಡೆ ಏರಿದರು.

ಕೊಟ್ಟಿಗೆ ಕಾಮಾಟಿ ಕ್ರಮುಕ ಬೆಳ್ಳೆಲೆಗರು
ಜಟ್ಟಿಗಳು ಗೀತಪಾಠಕರು
ಸೆಟ್ಟಿಗಳು ಬಲು ಚಿನ್ನವರದರುಗ್ಗಡಿಪ
ಕಟ್ಟಿಗೆಕಾರರೇರಿದರು ೪೩

ಕೊಟ್ಟಿಗೆ(ಹೊರೆ ಹೊರುವ ಎತ್ತು)ಯ ಕೆಲಸಗಾರರು, ಅಡಕೆ ಎಲೆಯವರು, ಜಟ್ಟಿಗಳು,ಗೀತಪಾಠಕರು, ಸೆಟ್ಟಿಗಳು, ಚಿನ್ನದ ವ್ಯಾಪಾರಿಗಳು,ಘೋಷಿಸುವ ಕಟ್ಟಿಗೆಕಾರರು ಗರುಡನನ್ನು ಏರಿದರು.

ಹೊಳೆಯುವ ಕಡುಗದ ಹೊಗರಿನ ಧಾರೆಯ
ತಳತಳಿಸುವ ಪರಿಘಗಳ
ಅಳವುಳ್ಳ ಪಟುಭಟರೇರಿದರು ಬಿಲ್ಗೋಲ
ದಳವಾಡಕೆ ಲೆಕ್ಕವಿಲ್ಲ ೪೪

ಥಳಥಳಿಸುವ ಕತ್ತಿಯ ಬಾಯಿಯ, ಫಳಪಲಗುಟ್ಟುವ ಪರಿಘಗಳ (ಆಯುಧವಿಶೇಷ) ಸಮರ್ಥ ಸೈನಿಕರು ಮೇಲೇರಿದರು, ಬಿಲ್ಲು ಬಾಣಗಳ ಸೈನ್ಯ ಸಮೂಹಕ್ಕೆ ಲೆಕ್ಕವಿಲ್ಲ.

ಚೋದ್ಯವಾಗಿದೆ ಕಣ್ಮನಸಿಂಗೆ ವಿಹಗಾ
ರಾಧ್ಯನೆರಂಕೆಯಿಕ್ಕೆಲದಿ
ಆದ್ಯಂತರಹಿತಾತಿ ಬಲವೇರಿತು ಬಹು
ವಾದ್ಯ ಕೋಟ್ಯಾನುಕೋಟಿಗಳು ೪೫

ಗರುಡನ ರೆಕ್ಕೆಯ ಎರಡೂ ಪಕ್ಕದಲ್ಲಿ ಕೋಟಿಕೋಟಿ ವಾದ್ಯದೊಡನೆ ಆದಿ ಅಂತ್ಯವಿಲ್ಲದೆ ಅಮಿತ ಸೈನ್ಯವೇರಿದುದು ಕಣ್ಣು ಮನಸ್ಸಿಗೆ ಚೋದ್ಯವನ್ನುಂಟು ಮಾಡಿತು.

ಆರೋಹಣವ್ಯಾಪ್ತಿ ಮುಗಿದುದು ಕರೆದನ
ಕ್ರೂರಾದ್ಯಖಿಳ ಯಾದವರ

ದ್ವಾರಾವತಿಗೆ ರಕ್ಷಣೆಯಿಟ್ಟು ಗರುಡಂಗೆ
ನಾರಾಯಣ ಸನ್ನೆಗೆಯ್ದ ೪೬

ಆರೋಹಣ ಕಾರ್ಯ ಮುಗಿದ ಮೇಲೆ, ಅಕ್ರೂರ ಮೊದಲಾದ ಯಾದವರನ್ನು ಕರೆದು ದ್ವಾರಾವತಿಗೆ ರಕ್ಷಣೆ ನೀಡಬೇಕೆಂದು ಹೇಳಿ, ನಾರಾಯಣ ಗರುಡನಿಗೆ ಸನ್ನೆ ಮಾಡಿದನು.

ಜಿಗಿದು ಹಾರಿದ ವಿಹಗೇಶನುಬ್ಬಟೆಗೆ ವಾ
ಸುಗಿ ಕೊರಳುಣಿಕಿತು ರೋಹಿತವ
ಉಗಿದುವು ದಿಗ್ದಂತಿಗಳು ಕೂರ್ಮನ ದೇಹ
ಹುಗಿದುದು ಕಿಗ್ಗಸರೊಳಗೆ ೪೭

ಗರುಡ ಜಿಗಿದು ಹಾರಿದ ರಭಸಕ್ಕೆ ಭೂಮಿಯನ್ನು ಹೊತ್ತಿದ್ದ ಆದಿಶೇಷನ ಕೊರಳು ಉಳುಕಿತು, ದಿಗ್ಗಜಗಳು ರಕ್ತವನ್ನು ಸುರಿಸಿದವು, ಆಮೆಯ ದೇಹ ಕೆಸರಲ್ಲಿ ಹೂತುಕೊಂಡಿತು.

ಗರಿಯ ಗಾಳಿಯ ನಿಷ್ಠುರದಿಂದ ಗಿರಿಗಳು
ಮುರಿದುರಳಿದವು ಭೂಮಿಯಲಿ
ಉರುಗಿತು ಬ್ರಹ್ಮಾಂಡ ದಿಕ್ತಟ ಹಮ್ಮುಗೆ
ಹರಿದುದು ಹಲವು ತಾವಿನಲಿ ೪೮

ಗರುಡ ರೆಕ್ಕೆಯ ಗಾಳಿಯ ರಭಸಕ್ಕೆ ಗಿರಿಗಳು ಭೂಮಿಯಲ್ಲಿ ಮುರಿದುರುಳಿದವು. ಬ್ರಹ್ಮಾಂಡ ಓರೆಯಾಗಿ ಉರುಗಿತು, ದಿಗಂತದ ಹಗ್ಗ ಹರಿಯಿತು ಹಲವಾರು ಕಡೆ.

ಹಾರಿದವು ಹುಲುವೆಟ್ಟಗಳೆಣ್ದೆಸೆಯ ಮುಂ
ದೂರಿದುವೊಂದೊಂದರ ಬಳಿಯೆ
ಹೇರೊಟ್ಟಿಲಂತೆ ಮರ್ತ್ಯರ ಕಣ್ಗೆ ಪಿರಿದಾಗಿ
ತೋರಿದುವಬುಜಾಯತಾಕ್ಷಿ ೪೯

ಎಂಟು ದಿಕ್ಕಿನ ಸಣ್ಣಪುಟ್ಟ ಬೆಟ್ಟಗಳು ಹಾರಿದವು. ಮುಂದೆ ಒಂದರ ಬಳಿಯೆ ಮತ್ತೊಂದು ಮಗದೊಂದು ಊರಿದವು(ನಾಟಿಕೊಂಡವು) ದೊಡ್ಡ ರಾಶಿಯಂತೆ ಮನುಷ್ಯರ ಕಣ್ಣಿಗೆ ತೋರಿದವು.

ಹೇರೊಡಲಿನ ಗರುಡನ ಪಕ್ಷಪ್ರಳಯ ಸ
ಮೀರಣನುಬ್ಬಟೆಯಿಂದ
ವಾರಾಶಿ ಜಿಗಿದವು ನೆಗಳಾನೆಗಳು ಕೂಡಿ
ನೀರ ಚಿಮ್ಮಿದವೆಂಬ ತೆರದಿ ೫೦

ದೊಡ್ಡ ಶರೀರದ ಗರುಡನ ಪಕ್ಷಪಾತ (ರೆಕ್ಕೆ ಬಡಿತ) ಪ್ರಳಯ ಗಾಳಿಯ ವೇಗದಿಂದ ಸಮುದ್ರಗಳು ಮೇಲಕ್ಕೆ ಹಾರಿ ಕೆಳಕ್ಕೆ ಬೀಳತೊಡಗಿದವು, ಮೊಸಳೆ ಆನೆಗಳು ಜೊತೆಗೂಡಿ ನೀರನ್ನು ಚಿಮ್ಮುತ್ತಿವೆ ಎಂಬ ರೀತಿಯಲ್ಲಿ.

ನಗರಾಜ ನಾಮವ ಬೈಚಿಟ್ಟು ಕನಕಾದ್ರಿ
ಖಗರಾಜನಾದುದುದೆಂಬಂತೆ
ಗಗನದಿ ಗರುಡನೈತಂದುದು ಪೆರ್ಮುಗಿ
ಲಗಲದಿ ಗರಿಯ ನಾಟಿಸುತ ೫೧

ಪರ್ವತಗಳ ರಾಜ ಎಂಬ ಹೆಸರನ್ನು ಬಚ್ಚಿಟ್ಟ ಕನಕಪರ್ವತ ಖಗರಾಜ(ಗರುಡ) ನಾದುದು ಎಂಬಂತೆ ಗಗನದಲ್ಲಿ ಗರುಡ ದೊಡ್ಡ ಮುಗಿಲಗಲ ತನ್ನ ಗರಿಯನ್ನು ಅಲುಗಾಡಿಸುತ್ತ (ಆಟಿಸುತ) ಐತಂದಿತು.

ಇದು ಮೇರುಶಿಖರ ವೈಕುಂಠ ಕೈಲಾಸ ಮ
ತ್ತಿದು ಸುರಲೋಕವೆಣ್ದೆಸೆಯ
ವಿಧುರಾಜ ಭವನಗಳ ಬಲರಾಮ ನೋಡೆಂದು
ಮಧುರಿಪು ನೋಡುತ್ತೈತಂದ ೫೨

ಇದು ಮೇರು ಪರ್ವತ, ಇದು ವೈಕುಂಠ, ಇದು ಕೈಲಾಸ, ಎಂಟು ದೆಸೆಯ ದೇವಲೋಕ ಇದು, ಚಂದ್ರನ ರಾಜಭವನಗಳನ್ನು ನೋಡೆಂದು ಬಲರಾಮನಿಗೆ ತೋರಿಸುತ್ತ ಕೃಷ್ಣನೈತಂದನು.

ಕೋವಿದೆ ಕೇಳು ಕಂಠದಿ ಕೃಷ್ಣ ಗರಿಗಳೊಳು
ತೀವಿದ ಯದುಬಲ ಸಮೇತ
ಹಾವಿನ ಹಗೆ ವೇಗದಿ ಬಂದ ಹನ್ನೊಂದು
ಸಾವಿರ ಯೋಜನಾಂತರವ ೫೩

ಕಂಠದಲ್ಲಿ ಕೃಷ್ಣ, ರೆಕ್ಕೆಗಳಲ್ಲಿ ತುಂಬಿತುಳುಕುವ ಯದು ಸೈನ್ಯ ಸಮೇತ ಹನ್ನೊಂದು ಸಾವಿರ ಯೋಜನಾಂತರವಿರುವಲ್ಲಿಗೆ ಸರ್ಪವೈರಿ ವೇಗದಲ್ಲಿ ಬಂದ.

ನೋಡಲು ಕಣ್ಗೆಸೆದುದು ವರ ಶೋಣಿತಪುರ
ಬೀಡಿನ ಸೌಧಾಗ್ರದೆಡೆಯಲಿ
ಹೂಡಿದ ಹೊಂಗಳಸಗಳ ದೀಪ್ತಿಗಳೊಳು
ಮುಡಿತು ಮನಕೆ ಸಂತೋಷ ೫೪

ನೋಡಲು ಕಂಗೊಳಿಸುವ ಶೋಣಿತಪುರದ ಬೀಡಿನಲ್ಲಿರುವ ಸೌಧದ ಅಗ್ರದಲ್ಲಿನ ಹೊಂಗಳಸಗಳ ದೀಪ್ತಿಗಳಲ್ಲಿ ಮನಕೆ ಸಂತೋಷ ಮೂಡಿತು.

ದಪ್ಪಕನಾತ್ಮಸಂಭವಗೆ ಬಂಧನಗೆ
ಯ್ದಿಪ್ಪ ದೈತ್ಯನ ದುರ್ಗವಿದು
ತಪ್ಪದೆ ತಾವಿಗೆ ತಳರೆಂದು ಶ್ರೀಕೃಷ್ಣ
ಸಪ್ಪಾರಾತಿಗೆ ಪೇಳ್ದನು ೫೫

ಮನ್ಮಥನ ಮಗನನ್ನು ಸೆರೆಯಲ್ಲಿಟ್ಟಿರುವ ರಕ್ಕಸನ ದುರ್ಗವಿದು. ತಪ್ಪದ ಹಾಗೆ ಸರಿಯಾದ ಸ್ಥಳಕ್ಕೆ ಹೊರಡೆಂದು ಶ್ರೀಕೃಷ್ಣ ಹಾವಿನ ಹಗೆಗೆ ಹೇಳಿದನು.

ಸತ್ಯಲೋಕೋನ್ನತಿ ವಿಹಗೇಶರೂಪಾಂತು
ಮೃತ್ಯು ಲೋಕಕೆ ಬರ್ಪ ತೆರದಿ
ಅತ್ಯಂತ ತೀವ್ರದಿಂದಳಿದೆರೆಕೆಯ ಗಾಳಿ
ಪಥ್ಯವಾಗಲಿಲ್ಲ ಪುರಕೆ ೫೬

ಸತ್ಯಲೋಕದ ಉನ್ನತ ಖಗರಾಜನ ರೂಪತಾಳಿ ಮೃತ್ಯು ಲೋಕಕ್ಕೆ ಬರುವ ರೀತಿಯಲ್ಲಿ ಅತ್ಯಂತ ತೀವ್ರತೆಯಿಂದಿಳಿದ ರೆಕ್ಕೆಯ ಗಾಳಿ ಪುರಕ್ಕೆ ಪಥ್ಯವಾಗಲಿಲ್ಲ.

ಮುರಿದುದು ಬಾಣನ ಮೋರಟೆಕ್ಕೆಯ ಮತ್ತೆ
ಮುರಿದುವು ಹಲವು ಹರ್ಮ್ಯಗಳು
ಮುರಿದುದು ಖಳನಹಂಕಾರ ಕಲ್ಪವೃಕ್ಷಗಳು
ಮುರಿದವು ಶಿವನಿರ್ದ ವನದಿ ೫೭

ಬಾಣಾಸುರನ ಮಯೂರ(ನವಿಲು) ಬಾವುಟ ಮುರಿಯಿತು, ಹಲವಾರು ಸೌಧಗಳು ಮುರಿದು ಬಿದ್ದವು, ರಕ್ಕಸನ ಅಹಂಕಾರ ಮುರಿಯಿತು, ಶಿವನಿದ್ದ ವನದಲ್ಲಿ ಕಲ್ಪವೃಕ್ಷಗಳು ಮುರಿದವು.

ಒಡಮುರಿದೊಳವೊಕ್ಕು ಬಿರುಗಾಳಿ ಬೀಸಲು
ಮೃಡನಾಸ್ಥಾನದಿಂದಸುರರು
ಹೊಡೆಗೆಡೆದರು ಗದ್ದುಗೆಯಿಂದ ನವರತ್ನ
ವಡೆದ ಕಿರೀಟಗಳು ಮುರಿದು ೫೮

ಒಳಹೊಕ್ಕು ಬೀಸಿದ ಬಿರುಗಾಳಿಗೆ ಶಿವನ ಆಸ್ಥಾನದಿಂದ ರಕ್ಕಸರು, ನವರತ್ನ ಕಿರೀಟಗಳು ಮುರಿದು ಹೊಟ್ಟೆ ಮಕಾಡೆ(ಮುಖ+ಅಡಿ)ಯಾಗಿ ಬಿದ್ದರು ಗದ್ದುಗೆಯಿಂದ .

ಶತಮಖ ಮುಖ್ಯ ನಿರ್ಜರರೆದ್ದು ನಿಂದರು
ಜತನ ತಪ್ಪದೆ ಕೆಯ್ಯ ಮುಗಿದು
ಹುತವಹ ನೇತ್ರ ನಿರೂಪಿಸು ಪ್ರಳಯ ಮಾ
ರುತವೆಲ್ಲಿಯದೆಂದು ನಮಗೆ ೫೯

ಇಂದ್ರ ಮೊದಲಾದ ದೇವತೆಗಳು ಎದ್ದುನಿಂತು ಎಚ್ಚರಿಕೆ ತಪ್ಪದೆ ಕೈಗಳನ್ನು ಮುಗಿದು, ಕೆಂಡಗಣ್ಣ ಶಿವನೇ ಪ್ರಳಯ ಮಾರುತ ಎಲ್ಲಿಯದೆಂದು ನಮಗೆ ನಿರೂಪಿಸು ಎಂದು ಕೇಳಿದರು.

ಕಾಳಿಂಗ ಮರ್ದನ ಖಳರಾಯನ ಮೇಲೆ
ದಾಳಿಗೆ ಬಂದ ನಿಷ್ಠುರದಿ
ಕೇಳಿ ಮಾಡುವುದೇನು ಗರುಡನ ಗರಿಯ ಪೆ
ರ್ಗಾಳಿಯೆಂದೀಶ್ವರ ನುಡಿದ ೬೦

ಕಾಳಿಂಗಮರ್ದನ ಕೃಷ್ಣ ಬಾಣಾಸುರನ ಮೇಲೆ ದಾಳಿಗೆ ಬಂದ. ಅದರ ಹಿನ್ನಲೆಯನ್ನು ಕೇಳಿ ಮಾಡುವುದೇನು, ಅದು ಗರುಡನ ಗರಿಯ(ರೆಕ್ಕೆಯ) ಬಿರುಗಾಳಿ ಎಂದು ಈಶ್ವರ ಹೇಳಿದನು.

ಕೆಲರು ಸಂತೋಷವ ತಾಳ್ದರು ಮನದಿ ವ್ಯಾ
ಕುಲವಾದರುಭಯ ಪಕ್ಷದಲಿ
ಬಲವಾಂತು ಗರ್ವಿತ ಗರುಡ ಕೃಷ್ಣನ ಚಿತ್ರ
ದೊಲವರಿದಿಳಿದನುರ್ವಿಯಲಿ ೬೧

ಕೆಲವರು ಸಂತೋಷಪಟ್ಟರು, ಕೆಲವರು ಮನಸ್ಸಿನಲ್ಲಿ ವ್ಯಾಕುಲಗೊಂಡರು,

ಉಭಯ ಪಕ್ಷಗಳಲ್ಲೂ ಸೈನ್ಯ ಹೊತ್ತು ತಂದ ಗರ್ವಿತ ಗರುಡ ಕೃಷ್ಣನ ಮನಸ್ಸನ್ನು ತಿಳಿದು ಭೂಮಿಗಿಳಿದನು.

ಉರುಗಿದುದು ಬ್ರಹ್ಮಾಂಡ ಖಗರಾಜ ಕಿ
ಛ್ಗರಿಯನೊಯ್ಯನೆ ಪಸರಿಸಲು
ತುರುಗಿದ ಬಲದಿ ಕೃಷ್ಣನಿಳಿದ ಶೇಷನ ಕೊರಲು
ಮುರಿವಂತೆ ನದಿಯ ತೀರದಲಿ ೬೨

ಪಕ್ಷಿರಾಜ ತನ್ನ ಪಕ್ಷ(ರೆಕ್ಕೆ)ವನ್ನು ಪಸರಿಸಲು ಬ್ರಹ್ಮಾಂಡವೇ ಉರುಗಿತು. ಶೇಷನ ಕೊರಲು ಮುರಿವಂತೆ ನದಿಯ ತೀರದಲ್ಲಿ ತುಂಬಿದ ಸೈನ್ಯ ಸಮೇತ ಕೃಷ್ಣನಿಳಿದನು.

ಜಲರುಹದಳನೇತ್ರೆ ಶ್ರೀಕೃಷ್ಣನೊಂದಿಗೆ
ಮಲೆವರ ಗಂಡರೆಂದೆನಿಪ
ಬಲರಾಮ ರಾಮ ಸುದಾಮ ಕುಮಾರ ಕ
ಕೆಲದೊಳೊಪ್ಪಿದರೊಡನೆ ಇಳಿದು ೬೩

ಶ್ರೀಕೃಷ್ಣನೊಂದಿಗೆ 'ಮಲೆತು ನಿಂತವರ ಗಂಡರು' ಎಂಬ ಬಿರುದಾಂತ ಬಲರಾಮ ಮನ್ಮಥ ಸುಧಾಮ ಕುಮಾರರು ಇಳಿದು ಪಕ್ಕದಲ್ಲಿ ನಿಂತು ಶೋಭಿಸಿದರು.

ಸಾಮಜವರದ ಸಂತಸವೆತ್ತು ನೋಡಿದ
ಗೋಮತಿಯೆಂಬ ಪೆರ್ದೊರೆಯ
ರಾಮಣಿಯಕ ಶೀತಜಲವೀಂಟಿ ಹೊಗಳಿದ
ನಾ ಮಹಾ ಸ್ವಾದೂದಕವ ೬೪

ಮೊಸಳೆಬಾಯಿಂದ ಆನೆಯನ್ನು ಪಾರುಮಾಡಿದ 'ಕರಿವರದ'ಕೃಷ್ಣ ಗೋಮತಿಯೆಂಬ ದೊಡ್ಡ ನದಿಯನ್ನು ಸಂತಸದಿಂದ ನೊಡಿದ. ಅದರ ರುಚಿಕರವಾದ ಶೀತಲ ಜಲವನ್ನು ಈಂಟಿ ಹೊಗಳಿದ.

ಮಾಧವನಗ್ರಜಾನುಜ ಬಂಧು ಸಂದೋಹ
ಭೇದವಿಲ್ಲದೆ ಪುತ್ರನಿಚಯ

ಯಾದವರಖಿಳ ಮಹಾಬಲ ಜಲವೀಂಟಿ
ಪಾದಪನೆಳಲಿಗೆ ಸಾರಿದರು ೬೫

ಕೃಷ್ಣನ ಅಣ್ಣ ನಂಟರಿಷ್ಟರ ಪುತ್ರಸಮೂಹ ಭೇದವಿಲ್ಲದೆ ಹಾಗೂ ಯಾದವರ ಅಖಂಡ ಮಾಬಲ(ಮಹಾಬಲ=ಮಹಾಸೈನ್ಯ) ಜಲವೀಂಟಿ ಮರದ ನೆರಳಿಗೆ ಬಂದರು

ಬಿಡೆಯವಿಲ್ಲದೆ ಖಗರಾಜನ ಮನ್ನಿಸಿ
ಒಡನೆ ಬಂದವನೀಶ್ವರನ
ಕಡೆಗಣ್ಣ ಸನ್ನೆಯಿಂದಲೆ ಸುತ್ತ ಪಾಳೆಯ
ಬಿಡ ಹೇಳಿ ಕೃಷ್ಣ ನೇಮಿಸಿದ ೬೬

ಕೂಡಲೇ ಬಂದವನು ನಿರ್ಬಿಡೆಯಿಂದ ಗರುಡನಿಗೆ ಮಾನ್ಯತೆ ನೀಡಿ, ಕಣ್ಣ ಸನ್ನೆಯಿಂದಲೇ ಈಶ್ವರನ ಸುತ್ತ ಶಿಬಿರ ರಚನೆಗೆ ನೇಮಿಸಿದ.

ವಟಪತ್ರತಲ್ಪ ನಿರೂಪಿಸೆ ಬಹುವರ್ಣ
ಪಟಲಾಂಛನ ಭೂಭುಜರು
ನಟನೆಯಿಂದಲ್ಲಲ್ಲಿ ಬಿಟ್ಟುದು ಯಾದವ
ಕಟಕಕ್ಕೆ ತಾವಿಲ್ಲದಂತೆ ೬೭

ಆಲದೆಲೆಯೇ ಹಾಸುಗೆಯಾದ ಕೃಷ್ಣನ ಅಪ್ಪಣೆಯನ್ನು ಕೇಳಿ ನಾನಾ ವರ್ಣದ ಬಾವುಟ, ಲಾಂಛನದ ರಾಜರು ಯಾದವ ಸೈನ್ಯಕ್ಕೆ ಸ್ಥಳವಿಲ್ಲದಂತೆ ಅಲ್ಲಲ್ಲಿ ಬೀಡು ಬಿಟ್ಟಿರು.

ದೇಶಾಧಿಪರ ಬೆಳ್ಗೊಡೆಗಳು ನಕ್ಷತ್ರ
ರಾಶಿಯಂತೆಸೆಯೆ ಮಧ್ಯದಲಿ
ಕೇಶವರಾಯನ ದೂಸ ರೋಹಿಣಿಯ ಪ್ರಾ
ಣೇಶನೆಂಬಂತೆ ರಂಜಿಸಿತು ೬೮

ನಾನಾ ರಾಜರ ಬೆಳ್ಗೊಡೆಗಳು ನಕ್ಷತ್ರ ಸಮೂಹದಂತೆ ರಾರಾಜಿಸುತ್ತಿರಲು, ನಟ್ಟನಡುವಿನ ಕೃಷ್ಣನ ದೂಸ(ಗುಡಾರ)ರೋಹಿಣಿಯ ಪ್ರಾಣೇಶ (ಚಂದ್ರ)ನೆಂಬಂತೆ ಕಂಗೊಳಿಸಿತು.

ದೊರೆವೆತ್ತ ಮಗಳ ಗಂಡಗೆ ಕ್ಷೀರವಾರಿಧಿ
ನೆರವಾಗಿ ಬಂದ ರೀತಿಯಲಿ
ಹೊರೆಯಿಲ್ಲದಮಳ ದೂಸದ ಸುತ್ತುವಳಸಿನ
ತೆರೆಸೀರೆ ಕಣ್ಣೆ ರಂಜಿಸಿತು ೬೯

ಅರಗುವರಿಯ ಗಂಡನಿಗೆ ಹಾಲ ಸಮುದ್ರ ನೆರವಿಗೆ ಬಂದುದೆಂಬಂತೆ ಗುಡಾರದ ಸುತ್ತಮುತ್ತಲ ತೆರೆಸೀರೆ ಕಣ್ಣಿಗೆ ರಂಜಿಸಿತು.

ಓರಂತೆ ಬಲರಾಮ ಸಾತ್ಯಕಿ ಕೃತವರ್ಮ
ಮಾರ ಕುಮಾರ ದೂಸಗಳು
ನಾರಾಯಣನ ಬಿಡಾರದ ಮುಂದೆ ಹ
ಜಾರ ಹೊಂಗಳಸವೆತ್ತಿದುವು ೭೦

ಕ್ರಮವಾಗಿ ಬಲರಾಮ, ಸಾತ್ಯಕಿ, ಕೃತವರ್ಮ, ಮನ್ಮಥನ ಗುಡಾರಗಳು, ಕೃಷ್ಣನ ಬಿಡಾರದ ಮುಂದೆ ಸಾಸಿರ ಹೊಂಗಳಸಗಳನ್ನು ಹೊಂದಿ ಕಂಗೊಳಿಸಿದವು.

ಮಂಗಳವಹ ದಿವಾಣದ ಮುಂದೆ ನಾಲ್ದೆಸೆ
ಯಿಂಗಡ ಬೀದಿ ಬೀದಿಯಲಿ
ಕಂಗೊಳಿಸುವ ಸೋಪಸ್ಕರ ವ್ಯವಹಾರ
ದಂಗಡಿ ಮೆರೆದುವಿಕ್ಕೆಲದಿ ೭೧

ಓಲಗಶಾಲೆಯ ಮುಂದೆ ನಾಲ್ಕು ದಿಕ್ಕಿನಲ್ಲಿಯೂ ಪ್ರತ್ಯೇಕವಾದ ಬೀದಿ ಬೀದಿಗಳಲ್ಲಿ ಸಾಮಾನು ಸರಂಜಾಮುಗಳ ವ್ಯವಹಾರದಂಗಡಿಗಳು ಕಂಗೊಳಿಸಿದವು.

ದಟ್ಟೈಸಿತು ಬನಬನದಲ್ಲಿ ಕುಳಿ ಕುಳಿರ್
ವೆಟ್ಟು ಗೋಮತಿಯ ತೀರದಲಿ
ಕಟ್ಟಳೆ ಕಡೆಮೊದಲಿಲ್ಲ ಕೃಷ್ಣನ ದಂಡು
ಬಿಟ್ಟುದಂ ಕೇಳಾಯತಾಕ್ಷಿ ೭೨

ಗೋಮತಿ ನದಿ ತೀರದಲ್ಲಿ ಹಿಮದ ಬೆಟ್ಟಗಳು ದಟ್ಟವಾಗಿದ್ದವು. ಕೃಷ್ಣನ ದಂಡು ಯಾವುದೇ ಕಟ್ಟುಕಟ್ಟಳೆಯಿಲ್ಲದೆ ಬೀಡುಬಿಟ್ಟಿತು.

ವರಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೭೩

ವರಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯಚಂದ್ರರು ಇರುವತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

# ೩೭ ಕುಂಭಾಂಡನ ಬುದ್ಧಿ

ವಾಸರದ್ವಾದಶದಂದು ಮುನಿ ಶಪಿಸಲಂಬ
ರೀಷನ ಬಿಡದೆ ರಕ್ಷಿಸಿದ
ಶ್ರೀಶನ ಪಾದಪದ್ಮವ ಕೂರ್ತು ಕೃತಿವೇಳು
ನಾ ಸಂತೋಷದಿ ಲಾಲಿಸುವೆ ೧

ದ್ವಾದಶ ವಾಸರ(ಹನ್ನೆರಡನೆಯ ದಿವಸ) ದಂದು ಮಾಡುವ ಪಾರಣೆಯಲ್ಲಿ(ಉಪವಾಸದ ಬಳಿಕ ಮಾಡುವ ಊಟ) ಅಂಬರೀಷನು ದೂರ್ವಾಸ ಮುನಿ ಬಾರದ್ದರಿಂದ ತೀರ್ಥ ಸೇವನೆ ಮಾಡಿಬಿಟ್ಟ. ತಡವಾಗಿ ಬಂದ ದೂರ್ವಾಸ ಅಂಬರೀಷನಿಗೆ ಶಪಿಸಿ ಕೃತ್ಯೆ(ದುರ್ದೇವತೆ)ಯನ್ನು ಸೃಷ್ಟಿಸಿ ಅವನ ಬೆನ್ನು ಹತ್ತುವಂತೆ ಮಾಡಿದ. ಆಗ ವಿಷ್ಣು ತನ್ನ ಚಕ್ರದಿಂದ ಆ ಕೃತ್ಯೆಯನ್ನು ಸಂಹರಿಸಿ ಅಂಬರೀಶನನ್ನು ರಕ್ಷಿಸಿದ. ಅಂಥ ಲಕ್ಷ್ಮೀಕಾಂತನ ಪಾದಪದ್ಮವನ್ನು ಕುರಿತು ಕಥೆ ಹೇಳು, ನಾನು ಸಂತಸದಿಂದ ಆಲಿಸುವೆನು ಎಂದು ಸುಜ್ಞಾನವಧೂಟಿ ಕನಕನನ್ನು ಕೇಳಿದಳು.

ಹೇಳುವೆ ಹೇಮಾಂಬುರಹ ಮೊಗ್ಗೆ ಮೊಲೆಯಳೆ
ಕೇಳಿದು ಶ್ರೀಕೃಷ್ಣ ಚರಿತೆ
ಏಳೇಳು ಜನ್ಮದ ಭವನಾಗಪಾಶವ
ಕೀಳುವ ಪರಮ ಗಾರುಡವನು ೨

ಹೊಂದಾವರೆ ಮೊಗ್ಗೆ ಮೊಲೆಯಳೆ ಕೇಳು, ಇದು ಶ್ರೀಕೃಷ್ಣ ಚರಿತೆ, ಏಳೇಳು ಜನ್ಮದ ಹುಟ್ಟುಸಾವಿನ ನಾಗಪಾಶವನ್ನು ತುಂಡಿಸುವ ಗರುಡಮಂತ್ರವಿದು.

ಚೊಕ್ಕಟವಾಗಿ ರಂಜಿಸುವ ಬೀಡಾರವ
ಹೊಕ್ಕು ಸಂವರಿಸಿಕೊಂಡು
ಚಕ್ಕನೆ ಪೊರಮಟ್ಟು ಶ್ರೀ ಕೃಷ್ಣ ಸಲೆ ಪೌಜ
ನಿಕ್ಕಲು ಪೇಳ್ದ ಭೂಭುಜರಿಗೆ ೩

ಚೊಕ್ಕಟವಾದ ಬಿಡಾರವನ್ನು ಹೊಕ್ಕು, ಸುಧಾರಿಸಿಕೊಂಡು, ಚಕ್ಕನೆ ಹೊರಹೊರಟು, ಶ್ರೀಕೃಷ್ಣ ಭೂಪಾಲರಿಗೆ ಪೌಜನ್ನು ಸನ್ನದ್ಧಗೊಳಿಸಲು ಹೇಳಿದ.

ಮಾಧವ ನುಡಿದ ವಾಕ್ಯವ ಕೇಳ್ದು ಜೀಯ ಹ
ಸಾದವೆಂದವನೀಶ್ವರರು
ಆದರದಿಂದಿದು ಸೆಲವೆಂದು ಬೀಳ್ಕೊಂಡು
ಹೋದರವರು ಮುಂಚೂಣಿಯಲಿ ೪

ಮಾಧವನ ಮಾತನ್ನು ಕೇಳಿದ ಅವನೀಶ್ವರರು ತಮಗಿದು ಸೆಲವು(ಅಪ್ಪಣೆ) ಎಂದು ಬೀಳ್ಕೊಂಡು ಮುಂಚೂಣಿಯಲ್ಲಿ ಹೋದರು.

ನೀಲಾಂಬರನೊಳು ನಿಖಿಲಯಾದವರಿಂತು
ಕಾಲ ಮೃತ್ಯುವಿನದಟಿನಲಿ
ಚೇಲ ಸಮೇತ ಭೈರವನಂತೆ ಪೃಥ್ವೀ
ಪಾಲರು ನಡೆದರೊಗ್ಗಿನಲಿ ೫

ನೀಲಾಂಬರ ಕೃಷ್ಣನೊಡನೆ ನಿಖಿಲ ಯಾದವರು ಯಮ ಧೈರ್ಯದಿಂದ ಪ್ರಮಥಸಮೇತ ಭೈರವನಂತೆ ಪೃಥ್ವೀಪಾಲರು ಒಟ್ಟಾಗಿ ಸಾಗಿದರು.

ರಥ ವಾಜಿ ವಾರಣ ಕಾಲಾಳನಿನಿತೆಂದು
ಮಿತಿ ಮಾಡಬಲ್ಲವರಾರು
ಸಿತವರ್ಣಶೇಷನ ಕೊರಲೊಡೆ ಮುರಿದುದ
ಚ್ಯುತ ಸೈನ್ಯ ಪಾದ ಘಟ್ಟಣೆಗೆ ೬

ರಥ, ಕುದುರೆ, ಆನೆ, ಕಾಲಾಳುಗಳನ್ನು ಇಷ್ಟೇ ಎಂದು ಮಿತಿಮಾಡಬಲ್ಲವರಾರು? ಅಚ್ಯುತನ ಸೈನ್ಯದ ಪಾದ ಘಟ್ಟಣೆಗೆ ಶೇಷನ ಕೊರಲು ಮುರಿದಂತಾಯಿತು.

ದೊರೆದೊರೆಗಳು ಪೌಜಿಕ್ಕಿದರು ಮುಗಿಲ ಹೆ
ದ್ದೆರೆಯಂತೆ ಪಿಡಿದ ಟೆಕ್ಕೆಯದಿ
ಧರೆ ಬೆಸಲಾದಂತೆ ಮಂದಿ ಕುದುರೆಯ ನೋ
ಳ್ಪರ ಕಣ್ಣಿಗಗಾಧವಸಾಧ್ಯ ೭

ಅಸಂಖ್ಯ ದೊರೆಗಳು ಮುಗಿಲ ಹೆದ್ದೆರೆಯಂತೆ ಬಾವುಟ ಹಿಡಿದ ಸೈನ್ಯವನ್ನು ಸನ್ನದ್ಧಗೊಳಿಸಿದರು. ಭೂಮಿಯೇ ಬೆಸಲಾದಂತೆ(ಹೆರಿಗೆಯಾದಂತೆ) ಪದಿಪಿದಿಗುಟ್ಟುವ ಸೈನಿಕರನ್ನು ಕುದುರೆಗಳನ್ನು ನೋಡುವವರ ಕಣ್ಣಿಗೆ ಅಗಾಧ ಅಸಾಧ್ಯಎನ್ನಿಪಡಿರದು.

ಗಜರಥ ಹಯ ಪಾಯದಳದೊಳು ಗರುಡ
ಧ್ವಜ ವರೂಥವನೇರಿ ತನ್ನ
ಭುಜಬಲವೆರಸಿ ಬರ್ಪುದ ಕಂಡು ದೇವ
ವ್ರಜ ಕಿನ್ನರರು ಹಿಗ್ಗಿದರು ೮

ರಥ ಆನೆ ಕುದುರೆ ಕಾಲಾಳುಗಳ ಮಧ್ಯೆ ಗರುಡ ಧ್ವಜದ ರಥವನ್ನೇರಿ ಕೃಷ್ಣ ಬರುವುದನ್ನು ಕಂಡು ಸುರರು ಕಿನ್ನರರು ಹಿಗ್ಗಿದರು.

ಪಟಹ ಡಿಂಡಿಮ ಡೋಲು ಮುರಿತಾಪ ಭೇರಿ ತಂ
ಬಟ ಡಮಾಮಿಗಳಾದಿಯಾಗಿ
ಲಟಕಟಿಸುವ ನಾನಾ ವಾದ್ಯ ಸಕಲ ದಿ
ಕ್ತಟ ಬಿರಿವಂತೆ ಗರ್ಜಿಸಿದವು ೯

ನಗಾರಿ, ಡಿಂಡಿಮ, ಡೋಲು, ಭೇರಿ, ತಂಬಟೆ, ಡಮಾಮಿ (ರಣವಾದ್ಯ)ಗಳಾದಿಯಾಗಿ ಲಟಕಟಿಸುವ ನಾನಾ ವಾದ್ಯಗಳು ಎಲ್ಲ ದಿಗಂತಗಳು ಬಿರಿಯುವಂತೆ ಗರ್ಜಿಸಿದುವು.

ಮಾಧವನೊಡನೆ ಮಚ್ಚರ ಬೇಡ ದೈತ್ಯವಿ
ಚ್ಛೇದನೊಳು ಸಮರ ಸಿದ್ಧಿಪುದೆ
ಕಾದಲ್ಕೆ ಬಹುದೆಂದು ಬಿರುದಿನ ಕಹಳೆಗ
ಳೂದಲ್ಕೆ ಉಬ್ಬಿದರು ಸುರರು ೧೦

ಮಾಧವನೊಡನೆ ಮಾತ್ಸರ್ಯ ಬೇಡ, ದೈತ್ಯ ಸಂಹಾರಿಯೊಡನೆ ಸಮರ ಸಿದ್ಧಿಸುವುದೆ? ಹೋರಾಟಕ್ಕೆ ಬನ್ನಿರೆಂದು ಬಿರುದಿನ ಕಹಳೆಗಳು ಧ್ವನಿಗೈದಾಗ ಸುರರು ಉಬ್ಬಿದರು.

ಎಡಬಲದಲಿ ಹಿಂದೆಮುಂದೆ ಪೃಥ್ವೀಶ್ವರ
ಗಡಣ ಮೋಹರಿಸಿ ನಿಂದಿರಲು
ಸಡಗರದಿಂ ನೋಡಿ ಶ್ರೀಕೃಷ್ಣ ನಾರದ
ನೊಡನೆ ಹೇಳಿದ ನಸುನಗುತ ೧೧

ಎಡಕ್ಕೆ ಬಲಕ್ಕೆ , ಹಿಂದಕ್ಕೆ ಮುಂದಕ್ಕೆ ರಾಜರ ಸಮೂಹ ಘೇರಾಯಿಸಿ ನಿಂದಿರುವುದನ್ನು ನೋಡಿದ ಕೃಷ್ಣ ನಾರದನೊಡನೆ ನಸುನಗುತ ಹೇಳಿದ.

ಅತಿವೇಗದಿಂ ಪೋಗಿ ನಾರದ ಪೇಳು ಪಾ
ರ್ವತಿಯ ಪ್ರಾಣೇಶ್ವರನೊಡನೆ
ರತಿಕುಮಾರಂಗೆ ಬಾಣಜೆಯಿತ್ತು ಕಳುಹಲು
ಪತಿಕರಿಸುವೆನು ರಕ್ಕಸನ ೧೨

ರತಿಕುಮಾರ ಅನಿರುದ್ಧನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದರೆ ರಕ್ಕಸನನ್ನು ರಕ್ಷಿಸುವೆನೆಂದು ಬೇಗ ಹೋಗಿ ಪಾರ್ವತಿಯ ಪತಿಯೊಡನೆ ಹೇಳು ಎಂದು ನಾರದನಿಗೆ ಕೃಷ್ಣ ಹೇಳಿದ.

ನಿನ್ನ ಸಹಾಯದಿಂದಸುರಾಧೀಶ್ವರ
ನೆನ್ನ ಮೊಮ್ಮನ ಬಂಧಿಸಿದ
ಮುನ್ನ ಹಿರಣ್ಯಕ ಮೊದಲಾದ ದೈತ್ಯರು
ಬನ್ನ ಬಟ್ಟುದ ಬಲ್ಲರೆಲ್ಲ ೧೩

ನಿನ್ನ ಸಹಾಯದಿಂದ ಅಸುರಾಧೀಶ್ವರ ನನ್ನ ಮೊಮ್ಮಗನನ್ನು ಬಂಧಿಸಿದ., ಈ ಹಿಂದೆ ಹಿರಣ್ಯಕ ಮೊದಲಾದ ದೈತ್ಯರು ಭಂಗಪಟ್ಟದ್ದೆಲ್ಲ ಎಲ್ಲರಿಗೂ ಗೊತ್ತು.

ಕ್ಷೀಣವಪ್ಪುದು ನಮ್ಮ ನಾವೇ ಕೀರ್ತಿಸಲೇಕೆ
ಕಾಣಬಪ್ಪುದು ಕಾದುವಲ್ಲಿ
ಜಾಣತನದ ಬುದ್ಧಿವೇಳ್ದು ರಕ್ಷಿಸ ಹೇಳು
ಬಾಣಾಸುರ ನಿನ್ನ ಭಕುತ ೧೪

ನಮ್ಮನ್ನು ನಾವೇ ಹೊಗಳಿಕೊಳ್ಳುವುದು ಉಚಿತವಲ್ಲ, ಕದನದಲ್ಲಿ ಹೋರಾಡುವಾಗ ಯಾರ ಶಕ್ತಿ ಎಷ್ಟು ಎಂಬುದನ್ನು ಕಾಣಬಹುದು. ಬಾಣಾಸುರ ನಿನ್ನ ಭಕ್ತನಾದುದರಿಂದ ಬುದ್ಧಿ ಹೇಳಿ ಕುವರಕುವರಿಯರನ್ನು ರಕ್ಷಿಸಲು ಹೇಳು.

ಜೀಯ ಹಸಾದವೆಂದೆನುತ ನಾರದಮುನಿ
ರಾಯ ಹಂಸಾರೂಢನಾಗಿ
ಕಾಯಜಹರನಾಸ್ಥಾನಕೆ ಪೋಗಿ ತಾಂ
ಪ್ರೀಯದಿಂ ಪೊಡೆಮಟ್ಟ ಶಿವಗೆ ೧೫

ನಾರದಮುನಿ ಜೀಯ ಹಸಾದ ಎಂದು ಹೇಳಿ, ಹಂಸಾರೂಢನಾಗಿ ಹೋಗಿ ಶಿವನಿಗೆ ಪ್ರೀತಿಯಿಂದ ನಮಸ್ಕರಿಸಿದ.

ನಾರದ ಮುನಿಯನೆತ್ತಿದ ತಾತ್ಪರ್ಯದಿ
ಮುರಾರಿ ಮನದೊಳು ನಗುತ
ಆರಾರ ಕೊಂಡಾಡಿಸ ಬಂದೆ ತಂದೆಯೆಂ
ದೋರಂತೆ ಕೊಂಡಾಡಿದನು ೧೬

ನಾರದನನ್ನು ಹಿಡಿದು ಮೇಲೆತ್ತಿ ಶಿವ ಮನಸ್ಸಿನಲ್ಲೇ ನಸುನಗುತ್ತ, ಯಾರು ಯಾರನ್ನು ಕೊಂಡು ಆಡಿಸಲು ಬಂದೆ ತಂದೆ ಎಂದು ಒಂದೇಸಮನೆ ಕೊಂಡಾಡಿದನು.

ದೇವ ತನ್ನಯ ಮೊಮ್ಮನ ಹರಿಬಕೆ ವಾಸು
ದೇವ ದಂಡೆತ್ತಿ ಬಂದಿಹನು
ದೇವ ಬಾಣಾತ್ಮಸಂಭವೆಯ ಕೊಡಿಸಿ ಕಾಮ
ದೇವ ಸುತನ ಸೆರೆ ಬಿಡಿಸುವುದು ೧೭

ಮಹಾದೇವ, ಕೃಷ್ಣ ತನ್ನ ಮೊಮ್ಮಗನ ಕೆಲಸಕ್ಕಾಗಿ ದಂಡು ಸಮೇತ ಬಂದಿದ್ದಾನೆ. ಬಾಣಜೆಯನ್ನು ಅನಿರುದ್ಧನಿಗೆ ಕೊಡಿಸಿ, ಅವನ ಸೆರೆಯನ್ನು ಬಿಡಿಸಿ ಎಂದು ವಿನಂತಿಸಿದನು.

ಕೇಳಲೊಲ್ಲದ ಕೇವಲ ಮೂರ್ಖ ನಾನೊಮ್ಮೆ
ಹೇಳಲಟ್ಟುವೆನೆಂದು ಚರರ
ಭಾಳಾಕ್ಷ ಕಳುಹಿ ಬಾಣಂಗೆ ಸೂಚಿಸಲಾಗಿ
ತಾಳಲಾರದೆ ಕೋಪಿಸಿದ ೧೮

ಯಾರ ಮಾತನ್ನು ಕೇಳದ ಮೂರ್ಖ ಅವನು. ಆದರೂ ನಾನು ಒಂದು ಸಾರಿ ಅವನಿಗೆ ಹೇಳಲು ಕಳಿಸುವೆನೆಂದು ಚರನನ್ನು ಬಾಣಾಸುರನಲ್ಲಿಗೆ ಕಳಿಸಿ ವಿಷಯ ಸೂಚಿಸಿದಾಗ ಅವನು ಅಸಹನೆಯಿಂದ ಸಿಟ್ಟಾದ.

ಕುಂಭಾಂಡ ಮಂತ್ರಿಯ ಕರೆಸಿ ಹೇಳಿದ ನಿಟಿ
ಲಾಂಬಕನಭಿಮಾನೋಕ್ತಿಯನು
ಶಂಬರಾರಿಯ ಕುವರಂಗೆ ಮತ್ಸುತೆ ಹೊನ್ನ
ಬೊಂಬೆಯ ಕೊಡವೇಳ್ದನಂತೆ ೧೯

ಅನಿರುದ್ಧನಿಗೆ ಚಿನ್ನದ ಬೊಂಬೆಯಂಥ ನನ್ನ ಮಗಳನ್ನು ಕೊಡಬೇಕಂತೆ. ಹಾಗೆಂದು ಹಣೆಗಣ್ಣ ಅಭಿಮಾನದ ಮಾತನ್ನು ಹೇಳಿಕಳಿಸಿದ್ದಾನೆ ಎಂದು ಮಂತ್ರಿ ಕುಂಭಾಂಡನಿಗೆ ಹೇಳಿದ.

ಕೊಟ್ಟದುಂಟಾದುದಾದೊಡೆ ನಿಮ್ಮ ವಿಭವದ
ಪಟ್ಟಕೆ ವೈಕಲ್ಯವಿಲ್ಲ
ನೆಟ್ಟನೆ ಯದುಕುಲಾಧೀಶ್ವರನೊಂದಿಗೆ
ಪಟ್ಟವಾಸಿಯು ಬೇಡ ಜೀಯ ೨೦

ಹಾಗೆ ಕೊಟ್ಟಿದ್ದೇ ಆದರೆ, ನಿಮ್ಮ ವೈಭವದ ಪದವಿಗೆ ಅದರಿಂದ ಚ್ಯುತಿ ಉಂಟಾಗುವುದಿಲ್ಲ. ಯದುವಂಶಾಧೀಶ್ವರನಾದ ಕೃಷ್ಣನೊಂದಿಗೆ ಪದವಿ ಸ್ಪರ್ಧೆ ಬೇಡ ಎಂದು ಮಂತ್ರಿ ಹೇಳಿದನು.

ಸಲ್ಲದ ಮಾತನಾಡಿದೆನೆಂದು ಕೋಪಿಸಿ
ಕಲ್ಲಗಾಣದೊಳಿಕ್ಕಿಸೆನ್ನ
ಪುಲ್ಲನಾಭನ ಮತ್ಸರದಿಂದ ನಿಮ್ಮವ
ರೆಲ್ಲರು ಲಯವನೆಯ್ದಿದರು ೨೧

ಸಲ್ಲದ ಮಾತಾಡಿದೆನೆಂದು ನೀವು ಭಾವಿಸುವುದಾದರೆ ಬೇಕಾದರೆ ನನ್ನನ್ನು ಕಲ್ಲಗಾಣಕ್ಕೆ ಹಾಕಿಸಿ. ಕಮಲನಾಭನ ದೆಸೆಯಿಂದ ನಿಮ್ಮವರೆಲ್ಲರು ನಾಶವಾದರು.

ಪರಮವೇದಗಳ ತಸ್ಕರಿಸಿದ ತಮಾ
ಸುರನು ಗೋಪ್ಯದೊಳಡಗಿರಲು
ಶರಧಿಯನು ಹೊಕ್ಕು ಮತ್ಸ್ಯರೂಪದಿ ನಿಶಾ
ಚರನ ಮರ್ದಿಸಿದಾತನೀತ ೨೨

ವೇದಗಳನ್ನು ಅಪಹರಿಸಿದ ಅಂಧಕಾಸುರನು ಸಮುದ್ರದಲ್ಲಿ ಅಡಗಿಕೊಂಡಿದ್ದಾಗ ಮತ್ಸ್ಯಾವತಾರ ತಾಳಿ ಅವನನ್ನು ಮರ್ದಿಸಿ ವೇದಗಳನ್ನು ತಂದಾತ ಶ್ರೀಕೃಷ್ಣ.

ವೃಂದಾರಕರಾದಿಯಾಗಿ ರಾಕ್ಷಸ ರಾಜ
ರೊಂದಾಗಿ ಸೊದೆಗಡಲ್ಗಡೆಯೆ
ಮಂದರಗಿರಿ ಮುಳುಗಿದಡೆ ಕಚ್ಛಪರೂಪಿ
ನಿಂದ ಬೆಂಗೊಟ್ಟವನೀತ ೨೩

ದೇವತೆಗಳು ಮತ್ತು ರಾಕ್ಷಸರು ಪಾಲ್ಗಡಲನ್ನು ಕಡೆಯುವಾಗ, ಕಡೆಗೋಲಿನಂತಿದ್ದ ಮಂದರ ಪರ್ವತ ಮುಳುಗಿದಾಗ, ಆಮೆಯಾಗಿ ಬೆನ್ನು ಕೊಟ್ಟು ಎತ್ತಿ ಹಿಡಿದವನೀತ.

ದಕ್ಷನೆಂದು ಭೂಮಿಯ ಕದ್ದದಟ ಹಿರ
ಣ್ಯಾಕ್ಷನ ಕ್ರೋಡ ರೂಪದಲಿ
ತಕ್ಷಣ ಬೆನ್ನಟ್ಟಿ ಮಡುಹಿ ತಾ ಧರಣಿಯ
ರಕ್ಷಣೆಗೆಯ್ದಾತನೀತ ೨೪

ಭೂಮಿಯನ್ನು ಕದ್ದ ಹಿರಣ್ಯಾಕ್ಷನನ್ನು ವರಾಹ ರೂಪವನ್ನು ತಾಳಿ. ಅವನನ್ನು ಬೆನ್ನಟ್ಟಿ ಮರ್ದಿಸಿ, ಧರಣಿಯನ್ನು ರಕ್ಷಿಸಿದಾತನೀತ.

ಜೀಯ ನಿಮ್ಮಜ್ಜನಜ್ಜನು ತಪವಿರ್ದು
ಸಾಯದ ವರವಾಂತು ಬಂದ
ರಾಯನ ನರಹರಿರೂಪಿಂದ ಸೀಳ್ದ ನಾ
ರಾಯಣ ದೇವೇಶನೀತ ೨೫

ಜೀಯು ನಿಮ್ಮಜ್ಜನಜ್ಜನು (ಬಾಣಾಸುರ<ಬಲಿ<ವಿರೋಚನ< ಪ್ರಹ್ಲಾದ<ಹಿರಣ್ಯಕಶ್ಯಪ ಅಂದರೆ ಬಾಣಾಸುರನಿಗೆ ವಿರೋಚನ ಅಜ್ಜ ವಿರೋಚನನಿಗೆ ಹಿರಣ್ಯಕಶ್ಯಪ ಅಜ್ಜ) ತಪಸ್ಸು ಮಾಡಿ ಸಾಯದ ವರವನ್ನು ಪಡೆದಿದ್ದ. ಆದರೆ ವಿಷ್ಣು ನರಹರಿ(ನರಸಿಂಹ) ರೂಪಿಂದ ಹೊಸ್ತಿಲಮೇಲೆ ಕುಳಿತು ತೊಡೆಯ ಮೇಲೆ ಹಾಕಿಕೊಂಡು ಅವನ ಎದೆಯನ್ನು ಸೀಳಿ ಸಾಯಿಸದವನೀತ(ಬ್ರಹ್ಮನಿಂದ ತನಗೆ ಯಾವ ಪ್ರಾಣಿಯಿಂದಲೂ, ಹಗಲು ರಾತ್ರಿಗಳಲ್ಲೊ, ಒಳಗೂ ಹೊರಗೂ, ಯಾವ ಆಯುಧದಿಂದಲೂ ಮರಣವಾಗದಂತೆ ವರ ಪಡೆದಿದ್ದ. ಆದ್ದರಿಂದಲೇ ವಿಷ್ಣು ಮಾನವದೇಹ ಸಿಂಹದ ಮುಖವನ್ನು ಹೊಂದಿ, ಹಗಲು ರಾತ್ರಿ ಎಂದು ಹೇಳಲಾಗದ ಸಂಜೆ ಹೊತ್ತಿನಲ್ಲಿ, ಒಳಗೂ ಹೊರಗೂ ಎಂದು ಹೇಳಲಾಗದಂಥ ಹೊಸ್ತಲಮೇಲೆ ಕುಳಿತು, ಯಾವ ಆಯುಧವನ್ನು ಬಳಸದೆ ತನ್ನ ಉಗುರಿನಿಂದಲೇ ಸೀಳಿದ)

ಬಡಬ್ರಾಹ್ಮಣನಾಗಿ ಹೆತ್ತಯ್ಯನ ಬೇಡಿ
ಪೊಡವಿಯನೀರಡಿ ಮಾಡಿ
ಜಡಜ ಭವಾಂಡ ಮೇಲ್ಭಾಗವ ಲೀಲೆಯಿಂ
ಪಡೆದ ತ್ರಿವಿಕ್ರಮನೀತ ೨೬

ಬಡ ಬ್ರಾಹ್ಮಣನಾಗಿ ನಿನ್ನ ತಂದೆಯಲ್ಲಿ ಮೂರು ಹೆಜ್ಜೆ ಭೂಮಿಯನ್ನು ಬೇಡಿದ. ಒಂದು ಹೆಜ್ಜೆಯನ್ನು ಆಕಾಶದ ತುಂಬ, ಮತ್ತೊಂದು ಹೆಜ್ಜೆಯನ್ನು ಭೂಮಿಯ ತುಂಬ ಹಾಗೂ ಮೂರನೆಯ ಹೆಜ್ಜೆಯನ್ನು ಅವನ ತಲೆಯ ಮೇಲಿಟ್ಟು ಪಾತಾಳಕ್ಕೆ ತುಳಿದ ತ್ರಿವಿಕ್ರಮನೀತ.

ಸಡಗರದಿಂ ಬಾಳ್ವ ಮಾಹಿಷ್ಮತಿಪುರ
ದೊಡೆಯ ತಾಮಸದಿ ಕೊಬ್ಬಿರಲು
ಕೊಡಲಿಯ ಮಸೆದುಕೊಂಡವನ ಸಾಸಿರ ತೋಳ್ಗ
ಳಡವಿಯ ಕಡಿದಾತನೀತ ೨೭

ಮಾಹಿಷ್ಮತಿ ಪುರದೊಡೆಯನಾದ ಕಾರ್ತವೀರ್ಯಾರ್ಜುನ, ಜಮದಗ್ನಿಯ ಆಶ್ರಯದಲ್ಲಿದ್ದ ಕರುವನ್ನು(ಹಸುವನ್ನು ಅಲ್ಲಿಯೇ ಬಿಟ್ಟು) ಅಪಹರಸಿಕೊಂಡು ಹೋದಾಗ, ಪರಶುರಾಮ ಸಿಟ್ಟುಗೊಂಡು ಅವನ ಸಾವಿರತೋಳುಗಳನ್ನು ಕೊಡಲಿಯಿಂದ ಕಡಿದ ಪರಶು(ಕೊಡಲಿ) ರಾಮನೀತ.

ಹರಪಾದಪಂಕೇರುಹ ಭೃಂಗ ಸಕಲ ನಿ
ರ್ಜರ ಮನೋಭಂಗನೆಂದೆನಿಪ
ಧುರಧೀರ ಲಂಕಾಧೀಶನ ಪಂಕ್ತಿ ಕಂ
ಧರವನು ತರಿದಾತನೀತ ೨೮

ಶಿವನ ಪಾದಕಮಲ ಭೃಂಗನೂ, ಸಕಲ ದೇವತೆಗಳ ಮನೋಭಂಗನೂ ಆದ ಲಂಕಾಧೀಶ ರಾವಣನ ಸಾಲುಸಾಲು ಕೊರಳನ್ನು(ಹತ್ತು ಕಂಧರ) ಕೊಯ್ದ ರಾಮನೀತ

ಪೂತನಿ ಶಕಟ ಕುಕ್ಕುಟ ಧೇನುಕಾಸುರ
ಕೃತವೀರ್ಯ ಕುಮಾರ ಅರ್ಜುನ
ಮಾತುಲ ಮೊದಲಾದ ಮಹದಾದಿ ದೈತ್ಯ
ವ್ರಾತವ ಕೊಂದಾತನೀತ ೨೯

ಪೂತನಿ, ಶಕಟ, ಕುಕ್ಕುಟ, ಧೇನುಕಾಸರ, ಕೃತವೀರ್ಯನ ಮಗ ಕಾರ್ತವೀರ್ಯಾರ್ಜುನ, ಮಾತುಲ ಮೊದಲಾದ ರಕ್ಕಸರನ್ನು ಸದೆಬಡಿದ ಶ್ರೀಕೃಷ್ಣನೀತ.

ನಾರಾಯಣ ನಾಲ್ಕು ಯುಗದೋಳು ಬಹಳಾವ
ತಾರವ ಕೈಕೊಂಡು ಬಂದು
ಘೋರಾಕೃತಿವೆತ್ತ ಖಳರ ಖಂಡಿಸಿದಾತ
ನಾರು ಹೇಳೆಂದು ಪೇಳಿದನು ೩೦

ನಾರಾಯಣ ನಾಲ್ಕು ಯುಗದಲ್ಲಿ ನಾನಾ ಅವತಾರಗಳನ್ನೆತ್ತಿ ಘೋರಾಕೃತಿಯ ಖಳರನ್ನು ಖಂಡಿಸಿದ ಶ್ರೀಕೃಷ್ಣನೀತ.

ನಳಿನೋದ್ಭವ ಮಹೇಶ್ವರ ಕಮಲಾಕ್ಷ ಕೃಷ್ಣ
ಮುಳಿದರೆ ಕಾಯುವವರುಂಟೆ
ಅಳಿದ ರಕ್ಕಸರಾಯರ ಪ್ರಾಣಲಿಂಗಗಳು
ತಳಿತಿವೆ ಜಗದಗಲದಲಿ ೩೧

ಬ್ರಹ್ಮ ಮಹೇಶ್ವರ ಕೃಷ್ಣ(ವಿಷ್ಣು) ಮುಳಿದರೆ ರಕ್ಷಿಸುವವರು ಯಾರಿದ್ದಾರೆ?ಸತ್ತ ರಾಕ್ಷಸರ ಪ್ರಾಣಲಿಂಗಗಳು ಜಗದಗಲಕ್ಕೂ ಕಂಡು ಬರುತ್ತಿವೆ.

ಶ್ರುತದೃಷ್ಟಾನುಮಾನದಿ ನೋಡು ನಿನ್ನಯ
ಪಿತ ವಿಭೀಷಣ ಧ್ರುವಾದಿಗಳು
ಮತವಳಿದ್ರಬುಜಾಕ್ಷನ ಭೃತ್ಯರಾಗಿ ಶಾ
ಶ್ವತವಡೆದರು ಕೇಡನುಳಿದು ೩೨

ಕೇಳಿ ನೋಡಿ, ಊಹಿಸಿ ನೋಡು ನಿನ್ನ ತಂದೆ ಬಲಿಚಕ್ರವರ್ತಿ, ವಿಭೀಷಣ, ಧ್ರುವ ಮೊದಲಾದವರು ಕಮಲಾಕ್ಷನ ಸೇವಕರಾಗಿ ಮೋಕ್ಷ ಪಡೆದರು, ಕೆಟ್ಟದ್ದನ್ನು ಬಿಟ್ಟು.

ಹರನೊಳು ವಿಶ್ವಾಸವನು ಬಿಡದಿರು ಚಕ್ರ
ಧರನೊಳು ಬಕುತಿಯ ಮುಡುಪಿಡು
ಎರವಿಲ್ಲದೀರ್ವರ ಕರುಣ ಕಟಾಕ್ಷದಿ
ಸ್ಥಿರರಾಜ್ಯವನಾಳಬಹುದು ೩೩

ಶಿವನಲ್ಲಿ ವಿಶ್ವಾಸವಿರಲಿ, ವಿಷ್ಣುವಿನಲ್ಲಿ ಭಕ್ತಿ ಇರಲಿ, ಇಬ್ಬರ ಕರುಣ ಕಟಾಕ್ಷದಿಂದ ಸ್ಥಿರವಾದ ರಾಜ್ಯವನ್ನು ಆಳಬಹುದು.

ದಪ್ಪಕನಾತ್ಮಸಂಭವಗೆ ತವಕುವರಿಯ
ಒಪ್ಪಿಸಿ ಮನಸಾರೆ ಬೀಳ್ಕೊಡು
ಒಪ್ಪಲೊಲ್ಲದೆ ಸಮರಕಿಳಿದೊಡಪಕೀರ್ತಿ
ಬಪ್ಪುದು ಬಲ್ಲವರ ಕೇಳು ೩೪

ಮನ್ಮಥ ಸುತನಾದ ಅನಿರುದ್ಧನಿಗೆ ನಿನ್ನ ಮಗಳನ್ನು ಕೊಟ್ಟು ಮದುವೆ ಮಾಡು, ಅದಕ್ಕೊಪ್ಪದೆ ಯುದ್ಧಕ್ಕಿಳಿದರೆ ಅಪಕೀರ್ತಿ ಬರುವುದು, ತಿಳಿದವರನ್ನು ಕೇಳು.

ರಟ್ಟು ಮಾಡುವುದಾಯತವಲ್ಲ ಹೆಣ್ಣೊಡಂ
ಬಟ್ಟುದು ಸ್ಮರಕುಮಾರನಿಗೆ
ಕೊಟ್ಟು ಸಂಧಿಯ ಮಾಳ್ಪುದೊಳಿತೆಂದು ಭೀತಿ
ಬಿಟ್ಟು ಬಿನ್ನಹವ ಮಾಡಿದನು ೩೫

ರಟ್ಟು ಮಾಡುವುದು ತರವಲ್ಲ, ಹೆಣ್ಣು ಸ್ಮರಕುಮಾರನನ್ನು ಒಪ್ಪಿಕೊಂಡಿದ್ದಾಳೆ. ಅದ್ದರಿಂದ ಅವಳನ್ನು ಕೊಟ್ಟು ಸಂಧಿ ಮಾಡಿಕೊಳ್ಳುವುದು ಲೇಸೆಂದು ಭಯಬಿಟ್ಟು ವಿಜ್ಞಾಪಿಸಿದನು.

ಪಿಂತೊರ್ವರು ಬಾಣನಾಸ್ಥಾನದಿ ಬುದ್ಧಿ
ವಂತರಿಲ್ಲೆಂದಾಡುವರು
ಮುಂತಣ ರಾಜಕಾರ್ಯವನುಸುರುವೆ ಧರಣಿ
ಕಾಂತ ಕೇಳೆಂದು ಕೈಮುಗಿದ ೩೬

ಹಿಂದೆ ಬಾಣನಾಸ್ಥಾನದಲ್ಲಿ ಯಾರೊಬ್ಬರೂ ಬುದ್ಧಿವಂತರಿರಲಿಲ್ಲ ಎಂದು ಹೇಳುವರು. ಮುಂದಿನ ರಾಜಕಾರ್ಯವನ್ನು ಹೇಳುತ್ತೇನೆ ಅವನೀಶ್ವರ ಕೇಳೆಂದು ಕೈಮುಗಿದ.

ಕಾದಲಟ್ಟಲೆಂದು ಕರೆಸಿದೊಡೆಮಗೆ ನೀ
ಬೋಧಾರುಹನಾಗಿ ಬಂದೆ
ಯಾರವರಾಯನ್ಯೆತರಲಾಗಿ ಧೈರ್ಯ ವಿ
ಚ್ಛೇದನವಾದುದು ನಿನಗೆ ೩೭

ಯುದ್ಧಕ್ಕೆ ಕಳಿಸಲು ಕರೆಸಿದರೆ, ನನಗೆ ಬೋಧೆ ಮಾಡಲು ತೊಡಗಿದೆ, ಯದುವಂಶಜ ಬಂದುದರಿಂದ ನಿನ್ನ ಧೈರ್ಯ ಸೋರಿ ಹೋಯಿತು ಎನ್ನಿಸುತ್ತದೆ.

ಜಾತಿವೀರರು ಜಾಣರಾಡುವ ರಚನೆಯ
ಮಾತಿಗೆ ಮರುಳ್ಗೊಂಬುದಿಲ್ಲ
ನೀತಿಕೋವಿದನಾದ ಕಾರಣ ನಿನಗಿಷ್ಟು
ಭೀತಿಯಾದುದು ಬೀರವಳಿದು ೩೮

ಶ್ರೇಷ್ಠವೀರರು ಜಾಣರ ಮಾತಿಗೆ ಮರುಳಾಗುವುದಿಲ್ಲ. ನೀನು ನೀತಿಕೋವಿದನಾದ ಕಾರಣ ನಿನ್ನ ಶೌರ್ಯವಳಿದು ಭೀತಿ ಮೂಡಿತು.

ಒಡೆಯ ಕೇಳು ಭೀತಿವಡಿಸುವೆನಾಹವದೊಳು
ಕಡೆಗಾಲ ಭೈರವನಂತೆ
ಬಿಡೆಯವಿಲ್ಲದೆ ಬಂದ ಯಾದವರಾಯನ
ಪಡೆಯನೆಲ್ಲವ ಸವರುವೆನು ೩೯

ಒಡೆಯ ಕೇಳು, ಯುದ್ಧದಲ್ಲಿ ಪ್ರಳಯದ ಭೈರವನಂತೆ ಯಾದವರಾಯನ ಸೈನ್ಯವನ್ನೆಲ್ಲ ಸವರಿ ಹಾಕುವೆನು, ನಿರ್ನಾಮ ಮಾಡುವೆನು.

ನಿಂದೆಯನಿಂದಾಡಿದನೆಂದು ಮನಸಿನೊಳು
ಸಂದೇಹವಿನಿತಿಲ್ಲವೆನಗೆ
ಮಂದಿವಾಳದ ಹುಯ್ಯಲೆಯ್ದಿದೆ ಸನಿಯಕೆ
ತಂದೆ ತಾರೆನಗೆ ವೀಳೆಯವ ೪೦

ನಿಂದೆ ಮಾತನ್ನು ಇಂದು ಆಡಿದೆನೆಂಬ ಅನುಮಾನ ಎಳ್ಳಷ್ಟೂ ನನಗಿಲ್ಲ. ಮದದ ಸೊಕ್ಕಿನ ಕದನ ಕೋಲಾಹಲ ಸಮೀಪಕ್ಕೆ ಬಂದಿದೆ. ಆದ್ದರಿಂದ ತಂದೆ ನನಗೆ ವೀಳಯವನ್ನು (ಅನುಮತಿ)ಕೊಡು.

ಕಟ್ಟಾಣಿ ಮಾತನಾಡಿದ ಮಂತ್ರಿಗೆ ಹೊಂ
ಬಟ್ಟಲೊಳ್ತಾಂಬೂಲವಿತ್ತು
ನೆಟ್ಟನೆ ಹರಗೆ ಬಿನ್ನಹ ಮಾಳ್ಪುದೆಂದು ಬೀ
ಳ್ಕೊಟ್ಟನು ಶಿವದೂತನೊಡನೆ ೪೧

ಚಿನ್ನದಂಥ ಮಾತಾಡಿದ ಮಂತ್ರಿಗೆ ಹೊಂಬಟ್ಟಲಲ್ಲಿ ತಾಂಬೂಲ ನೀಡಿ, ಶಿವನಿಗೆ ವಿಜ್ಞಾಪನೆ ಮಾಡಬೇಕೆಂದು ಶಿವದೂತನೊಡನೆ ಕಳಿಸಿಕೊಟ್ಟನು.

ಶಶಿಮಕುಟಾಂಕಿತನಂಘ್ರಿ ಪೂಜೆಗೆ ಮಂ
ಡಿಸಿದ ಬಾಣಾಸುರನೊಲಿದು
ಹಸಿದ ಹೆಬ್ಬುಲಿಯಂತೆ ಮಂತ್ರಿ ರಣಕೆ ಸಂವ
ರಿಸಿಕೊಂಡು ಪೊರಮಟ್ಟ ಭರದಿ ೪೨

ಈಶ್ವರನ ಪೂಜೆಗೆ ಬಾಣಾಸುರ ಪ್ರೀತಿಯಿಂದ ಸನ್ನದ್ಧನಾದ. ಕುಂಭಾಂಡ ಹಸಿದ ಹೆಬ್ಬುಲಿಯಂತೆ ರಣರಂಗಕ್ಕೆ ರಭಸದಿಂದ ಹೊರಹೊರಟ .

ಬಂದನು ಶಿವನಂಘ್ರಿಯುಗಳಕ್ಕೆ ಪೊಡಮಟ್ಟು
ನಿಂದನು ಮುಗಿದ ಹಸ್ತದಲಿ
ಕಂದರ್ಪಹರಗೆ ಬಿನ್ನಹವ ಮಾಡಿದ ಬಲಿ
ನಂದನ ನುಡಿದ ವಾಕ್ಯಗಳ ೪೩

ಕುಂಭಾಂಡ ಶಿವನ ಪಾದಕಮಲಕ್ಕೆ ನಮಿಸಿ ಕೈಮುಗಿದು ನಿಂತು, ಬಾಣಾಸುರ ಹೇಳಿದ ಮಾತುಗಳನ್ನು ಮನ್ಮಥ ಸಂಹಾರಿಗೆ ವಿಜ್ಞಾಪಿಸಿದನು.

ಮುಕ್ಕಣ್ಣ ನಿಮ್ಮ ನಿರೂಪವ ಖಳರಾಯ
ಮಿಕ್ಕನೆಂದಾರೋಪಿಸದೆ
ಅಕ್ಕರಿಂದಾರೈಕೆಯ ಮಾಡು ಕದನಕ್ಕೆ
ರಕ್ಕಸವಗೆಯು ಬಂದಿಹನು ೪೪

ಶಿವನೆ, ನಿಮ್ಮ ಅಪ್ಪಣೆಯನ್ನು ಬಾಣಾಸುರ ತಿರಸ್ಕರಿಸಿದನೆಂದು ಆರೋಪಿಸದೆ ಪ್ರೀತಿಯಿಂದ ಯುದ್ಧಕ್ಕೆ ಹಾರೈಸು, ರಕ್ಕಸವೈರಿಯಾದ ಕೃಷ್ಣ ಬಂದಿದ್ದಾನೆ.

ದೇವರ ಶಿಷ್ಯ ದೇವನಿಗೆ ಬಿನ್ನೈಸಿದ
ದೇವಪೂಜೆಯ ಮಾಡುವನಕ
ದೇವ ನಿಮ್ಮಯ ದೇವಬಲಗೂಡಿ ಶ್ರೀಕೃಷ್ಣ
ದೇವನೊಳು ಕಾದುತಿರೆಂದ ೪೫

ದೇವರ ಶಿಷ್ಯನಾದ ಬಾಣಾಸುರ ವಿಜ್ಞಾಪಿಸಿದ, ಆತ ದೇವಪೂಜೆ ಮಾಡಿ ಮುಗಿಸುವ ತನಕ, ದೇವ, ನಿಮ್ಮ ಸೈನ್ಯದೊಡನೆ ಶ್ರೀಕೃಷ್ಣನೊಡನೆ ಹೋರಾಡಬೇಕೆಂದು ಹೇಳಿದ.

ಎನಲಾ ಮಾತಿಂಗೆ ಕಿವಿಗೊಟ್ಟು ಲಾಲಿಸಿ
ಅನಲಾಂಬಕನೊಡಂಬಟ್ಟು
ಘನ ಲಾಗುವೇಗದಿ ಜೋಡಿಸಿ ನಂದಿ ವಾ
ಹನವನೇರಿದನಾಹವಕೆ ೪೬

ಆ ಮಾತಿಗೆ ಹಣೆಗಣ್ಣನು ಒಡಂಬಟ್ಟು, ಬಹುಬೇಗ ನಂದಿವಾಹನವನ್ನೇರಿ ಯುದ್ಧರಂಗಕ್ಕೆ ದೌಡಾಯಿಸಿದ.

ಸೋಮಶೇಖರನ ದಕ್ಷಿಣಭಾಗದಲಿ ಗಣ
ಸ್ತೋಮ ಕುಮಾರ ಸಂದೋಹ
ವಾಮಭಾಗದಲಿ ಸಂದಣಿಸಿ ನಡೆದುದು ಸು
ತ್ರಾಮಾದಿ ನಿಖಿಲ ನಿರ್ಜರರು ೪೭

ಶಿವನ ಬಲಗಡೆ ಗಣಸ್ತೋಮ ಕುಮಾರ ಸಮೂಹ ಸಂಚಲಿಸಿದರೆ ಎಡಗಡೆ ಇಂದ್ರನೇ ಮೊದಲಾದ ಸಕಲ ದೇವತೆಗಳ ಸಂದೋಹ ಸಾಗತೊಡಗಿತು.

ಗಜಮೇಷ ಮಹಿಷ ಮಾನಸ ನೆಗಳೇಣ
ನಿಜ ಧರ್ಮವಾರುವ ವೃಷಭ
ಭುಜಗಾರಿ ವಿಷಪುಚ್ಛ ಮೂಷಕ ಮೊದಲಾದ
ಧ್ವಜ ತತಿ ಮೆರೆದುದೊಗ್ಗಿನಲಿ ೪೮

ಆನೆ, ಟಗರು, ಕೋಣ, ಮಾನವ, ಮೊಸಳೆ, ಜಿಂಕೆ, ಕುದುರೆ, ಎತ್ತು, ಗರುಡ, ಚೇಳು, ಇಲಿ ಮೊದಲಾದ ಧ್ವಜ ಸಮೂಹ ರಾರಾಜಿಸಿತು.

ವಾರಿಮಸ್ತಕನ ಮುಂದೆಸೆಯಲಿ ಮೊಳಗುವ
ಭೇರಿ ನಾನಾ ವಾದ್ಯ ನಿಚಯ
ಭೂರಿ ಹೆಗ್ಗಾಳೆಗಳೊದರುತಿರ್ದುವು ಮದ
ನಾರಿಯ ತೊಡಕು ಬೇಡೆನುತ ೪೯

ಗಂಗಾಧರನ ಮುಂದುಗಡೆ ಭೇರಿ, ಹೆಗ್ಗಾಳೆ(ದೊಡ್ಡ ಕಹಳೆ) ಗಳು ಮೊದಲಾದ ವಾದ್ಯಸಮೂಹ ಮನ್ಮಥ ಸಂಹಾರಿಯ ಜೊತೆ ತೊಡಕು ಬೇಡವೆಂಬಂತೆ ಮೊಳಗುತ್ತಿದ್ದವು.

ಶೋಣಿತಪುರದ ಪಶ್ಚಿಮ ದಿಕ್ಕಿನಲಿ ಶೂಲ
ಪಾಣಿಯು ಪೌಜನಿಕ್ಕಿದನು
ಚೂಣಿಯ ಭಟರೆಚ್ಚಾಡುತಿರ್ದರು ಸುರ
ಶ್ರೇಣಿಯ ಬಿರುವಳೆಯಂದದಿ ೫೦

ಶೋಣಿತಪುರದ ಪಶ್ಚಿಮ ದಿಕ್ಕಿನಲ್ಲಿ ಶೂಲಪಾಣಿ ತನ್ನ ಪೌಜನ್ನು ಸಜ್ಜುಗೊಳಸಿ ನಿಲ್ಲಿಸಿದನು. ಬೇರೆಬೇರೆ ದೇವತಾಸಂಘಗಳ ಬಿರುಮಳೆಯಂತೆ ಸೇನೆಯ ಸೈನಿಕರು ಶಸ್ತ್ರಾಸ್ತ್ರಗಳಿಂದ ಹೊಡೆದಾಡುತ್ತಿದ್ದರು.

ಆ ಸಮಯದಿ ಮುನಿವರನನಟ್ಟಿದ ಕೃತ್ತಿ
ವಾಸ ದೈತ್ಯನ ಮನದಿರವ
ಕೇಶವಗುಸಿರೆನಲು ಬಂದು ನಾರದ ಲ
ಕ್ಷ್ಮೀಶಂಗೆ ಬಿನ್ನಯಿಸಿದನು ೫೧

ಆ ಸಮಯದಲ್ಲಿ ಕೃತ್ತಿವಾಸ(ಕೃತ್ತಿ=ಚರ್ಮ=ಬಟ್ಟೆ;ಹುಲಿ ಚರ್ಮಧರಿಸಿದ ಶಿವ) ಮುನಿವರನನ್ನು ರಕ್ಕಸನ ಮನಸ್ಸಿನ ಇಂಗಿತವನ್ನು ಕೇಶವನಿಗೆ ತಿಳಿಸಲು ಓಡುಗಳಿಸುತ್ತಾನೆ. ನಾರದ ಬಂದು ಲಕ್ಷ್ಮೀಶನಿಗೆ ವಿಜ್ಞಾಪಿಸಿದನು.

ಪೀತಾಂಬರ ಕೇಳು ಬಾಣ ಸಂಧಾನದ
ಮಾತು ಮುರಿದು ಮಂತ್ರಿಯೆಯ್ದಿ
ಭೂತೇಶನೊಡನೆ ಸೂಚಿಸಲಾಗಿ ಕಾಳಗ
ಕಾತ ಬಂದಿಹನು ಚಿತ್ತೈಸು ೫೨

ಪೀತಾಂಬರನೇ ಕೇಳು, ಸಂಧಾನದ ಮಾತು ವಿಫಲವಾದುದನ್ನು ಮಂತ್ರಿ ಶಿವನಿಗೆ ತಿಳಿಸಲು, ಯುದ್ಧಕ್ಕೆ ಶಿವನೇ ಬಂದಿದ್ದಾನೆ ಚಿತ್ತೈಸು ಎಂದನು.

ಓಡುಗೆಯ್ಯನ ಭಕುತಿಯೊಳವರಿರುವನ್ನಂ
ಪಾಡೆಂದೆನಗೆ ಕಾಣಿಸಿತು

ನೋಡು ನಾರದ ನಿನ್ನ ಕಣ್ಗೆ ಹಬ್ಬವನಿಂದು
ಮಾಡುವೆನಾಹವದೊಳಗೆ ೫೩

ಶಿವನ ಭಕ್ತಿಯಲ್ಲಿ ಅವರಿರುವ ತನಕ ಸುಭದ್ರವೆಂದು ನನಗೆ ತೋರುತ್ತಿದೆ. ನೋಡು ನಾರದ, ಇಂದು ಯುದ್ಧರಂಗದಲ್ಲಿ ನಿನ್ನ ಕಣ್ಣಿಗೆ ಹಬ್ಬವನ್ನುಂಟು ಮಾಡುವೆನು.

ಮರೆಯದೆ ತದನಂತರದಲಿ ಮಾತಾಡಿದ
ಮರೆಯಬೇಡಸುರರ ತರಿದು
ಹೆರೆದಲಗನ ಸಿಕ್ಕ ಬಿಡಿಸಿದೊಡೆನಗುಡು
ಗೊರೆಗೆ ಸಮವೆಂದು ಕೈಮುಗಿದ ೫೪

ಬಳಿಕ ನಾರದ ಹೇಳಿದ, ಅಸುರರನ್ನು ಸಂಹರಿಸಿ, ಜಟಾಜೂಟನ (ಶಿವನ)ತಲೆಯ ಸಿಕ್ಕನ್ನು ಬಿಡಿಸಿದರೆ, ಅದು ನನಗೆ ಉಡುಗೊರೆಗೆ ಸಮವೆಂದು ವಿನಂತಿಸಿದ.

ನಾರದಗಭಯ ಹಸ್ತವನಿತ್ತು ಶ್ರೀಹರಿ
ತೇರನು ಮುಂದಕೋಡಿಸಲು
ಘೋರಾಕೃತಿವೆತ್ತು ಕಾಲಾಗ್ನಿ ಮುಳಿದು ಹುಂ
ಕಾರದಿಂ ಇದಿರಾದುದಾಗ ೫೫

ನಾರದನಿಗೆ ಅಭಯವನ್ನು ನೀಡಿ ಕೃಷ್ಣ ರಥವನ್ನು ಮುಂದಕ್ಕೆ ಓಡಿಸಲು, ಘನಘೋರ ಆಕೃತಿಯಿಂದ ಪ್ರಳಯಾಗ್ನಿ ಹೂಂಕರಿಸುತ್ತ ಎದುರಾಯಿತು.

ಮಿಗೆ ಚಿಟಿಚಿಟಿ ಭುಗುಭುಗಿಲೆಂದು ದಳ್ಳುರಿ
ಹೊಗೆ ಸುತ್ತಿ ಬ್ರಹ್ಮಾಂಡದೊಳಗೆ
ಬಗೆಗೊಳ್ಳದೆ ಕೃಷ್ಣರಾಯನ ಬಲವ ನಾ
ಲಗೆಯಿಂದ ಸವರಿತಾಹವದಿ ೫೬

ಅದರ ದಳ್ಳುರಿ ಚಿಟಿಚಿಟಿ ಭುಗಿಭುಗಿಲ್ಲೆಂದು ಬ್ರಹ್ಮಾಂಡವನ್ನು ಆವರಿಸಿ, ಕೃಷ್ಣನ ಸೈನ್ಯವನ್ನು ನಾಲಗೆಯಿಂದ ಸವರತೊಡಗಿತು.

ಬಂದುದು ಯಾದವ ಬಲ ನೆಲನೀಂದಂತೆ
ನಿಂದುದು ಕಾಲಾಗ್ನಿಯಲ್ಲಿ
ಬೆಂದುದು ಬಿಡಿಸಿಕೊಂಬುವರಿಲ್ಲಕಟಕ
ಟೆಂದುದ್ಗರಿಸಿತು ಸಕಲ ಬಲ ೫೭

ಯಾದವ ಬಲ ನೆಲವೇ ಈದು ಬಿಟ್ಟಿತೊ ಏನೋ ಎಂಬಂತೆ ಪ್ರಳಯಾಗ್ನಿಯಲ್ಲಿ ಸಿಕ್ಕಿ ಬೆಂದಿತು. ಬಿಡಿಸಿಕೊಳ್ಳುವವರಿಲ್ಲವೆಂದು ಸಕಲಬಲ ಅಕಟಕಟ ಎಂದು ಉದ್ಗರಿಸಿತು.

ಎಂಬರ ಮಾತು ಬಾಯೊಳಗಿರೆ ಶ್ರೀಕೃಷ್ಣ
ನಂಬೋಧಿ ಮಾರ್ಗಣದಿಂದ
ಮುಂಬರಿದೈದುವ ಕಾಲಾಗ್ನಿಯ ಮೆಟ್ಟಿ
ತಂಬಲಗರೆದನಾ ಬಲಕೆ ೫೮

ಆ ಮಾತು ಅವರ ಬಾಯಲ್ಲಿರುವಾಗಲೇ ಶ್ರೀಕೃಷ್ಣ ಅಂಬುಧಿ ಮಾರ್ಗಣದಿಂದ(ಕಡಲಬಾಣ) ಮುಂಬರಿದು ಬರುವ ಪ್ರಳಯಾಗ್ನಿಯನ್ನು ಮೆಟ್ಟಿ, ಸೈನ್ಯವನ್ನು ತಂಪುಗೊಳಿಸಿದನು.

ಏ ಪಾಟಿಯ ಸಾಮರ್ಥ್ಯದಲಿ ಬಂದ ಸಂ
ತಾಪವ ಪರಿಹರಿಸಿದನೆಂದು
ಶ್ರೀ ಪರಮೇಶ ರಮೇಶಂಗೆ ಮೆಚ್ಚಿ ಸ
ಲ್ಲಾಪದಿಂ ಕೈವಾರಿಸಿದ ೫೯

ಎಷ್ಟೊಂದು ಸಾಮರ್ಥ್ಯದಿಂದ ಸೈನ್ಯದ ಸಂತಾಪವನ್ನು ಪರಿಹರಿಸಿದನೆಂದು ಶಿವ ಲಕ್ಷ್ಮೀಕಾಂತನನ್ನು ಮೆಚ್ಚುಗೆಯಿಂದ ಕೊಂಡಾಡಿದ.

ವರಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೦

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೩೮ ಹರಿಹರರ ಕಾಳಗ

ಮಧು ಕೈಟಭರ ಚರ್ಮವ ಸೀಳ್ದಿಕ್ಕಿ
ವಧಕೃತ್ಯವನು ನಿಯಮಿಸಿದ
ಯದುಕುಲೋತ್ತುಂಗ ರಂಗನ ಕೂರ್ತು ಕೃತಿವೇಳು
ಸದುಬಕುತಿಯಲಿ ಕೇಳುವೆನು ೧

ಮಧುಕೈಟಭ ಎಂಬ ರಾಕ್ಷಸರ ಆಸೆಯಂತೆ ಅವರನ್ನು ನೀರಿಲ್ಲದ ಕಡೆ ಕೊಂದು ವಧೆ ನಿಯಮವನ್ನು ಪರಿಪಾಲಸಿದ ಯದುಕುಲೋತ್ತಮ ಕೃಷ್ಣನ ಕುರಿತು ಕಥೆ ಹೇಳು, ಭಕ್ತಿಯಿಂದ ಕೇಳುವೆನು ಎಂದಳು ಸುಜ್ಞಾನವಧೂಟಿ

ಕಕ್ಕಸ ಕುಚದ ಕಾಮಿನಿಯರ ಕಂಡು ಕ
ಣ್ಣಿಕ್ಕದಂತೆನ್ನ ಚಿತ್ತವನು
ಅಕ್ಕೊತ್ತೆಗೊಂಡ ಭಾಮಿನಿರನ್ನೆ ಲಾಲಿಸು
ಸಕ್ಕತೆಯಂಥ ಮಾತುಗಳ ೨

ಗಟ್ಟಿಮೊಲೆಯ ಕಟ್ಟರೆಯದ ಕಾಮಿನಿಯರತ್ತ ಕಣ್ಣು ಹಾಯಿಸದಂತೆ ನನ್ನ ಚಿತ್ತವನ್ನು ಅಕ್ಕೊತ್ತೆಗೊಂಡ(ಅಪ್ಪಿಕೊಂಡು ಅಡವು ಇಟ್ಟುಕೊಂಡ)ಮನದನ್ನೆ ಕೇಳು, ನನ್ನ ಸಿಹಿಮಾತುಗಳನ್ನು ಆಲಿಸು.

ಚಂದರ ಶೇಖರ ಚಕ್ರಧರನ ಕೀರ್ತಿಸಲಾಗಿ
ನೊಂದು ಷಣ್ಮುಖ ವಿನಾಯಕರು
ಇಂದರಾದ್ಯಖಿಳ ನಿರ್ಜರರು ಪಂತವನಾಡಿ
ಬಂದರು ಬಿಟ್ಟ ಸೂಠಿಯಲಿ ೩

ಚಂದ್ರಶೇಖರ ಚಕ್ರಧರ(ವಿಷ್ಣು, ಕೃಷ್ಣ) ನನ್ನು ಹೊಗಳಿದ್ದರಿಂದ ನೊಂದ ಷಣ್ಮುಖ ವಿನಾಯಕರು ಹಾಗೂ ಇಂದ್ರ ಮೊದಲಾದ ಸುರರು ಬಿಟ್ಟ ಬಾಣದಂತೆ ಪಂಥ ಕಟ್ಟಿ ಯುದ್ಧ ರಂಗಕ್ಕೆ ಬಂದರು.

ಹಲಧರ ಕೃತವರ್ಮ ಸಾತ್ಯಕಿ ಪ್ರದ್ಯುಮ್ನ
ಚಲದಂಕಮಲ್ಲ ಉದ್ಧವನು
ಬಲವನೊಡಗೊಂಡು ಬಂದಹಿತರಿಗಿದಿರಾಂತು
ನಿಲಲೆಚ್ಚರಚ್ಚರಿಯೆನಿಸಿ ೪

ಬಲರಾಮ, ಕೃತವರ್ಮ, ಸಾತ್ಯಕಿ, ಪ್ರದ್ಯುಮ್ನ, ಯುದ್ಧಪ್ರವೀಣ ಉದ್ಧವನು ಸೈನ್ಯಸಮೇತ ಬಂದು ಶತ್ರುಗಳಿ ಗೆದುರಾಂತು ನಿಂದಾಗ, ಬಾಣಗಳಿಂದೆಚ್ಚರು.

ಹರಕುಮಾರಕನುಪಟಳದೇಳ್ಗೆಯ ಮುರ
ಹರಕುಮಾರಕನಂದು ಕಂಡು
ಉರುಕೂರ್ಗಣೆಗಳಿಂದೆಚ್ಚು ಬೊಬ್ಬಿರಿದ ಸಾ
ಸಿರಕಣ್ಣ ವಿಹಗ ಧ್ವಜನ ೫

ಹರಕುಮಾರ ಷಣ್ಮುಗನ ಉಪಟಳವನ್ನು ಮುರಹರಕುಮಾರನಾದ ಪ್ರದ್ಯುಮ್ನ ಕಂಡು ಹರಿತವಾದ ಬಾಣಗಳಿಂದ ಸಾಸಿರ ಕಣ್ಣ ವಿಹಗಧ್ವಜನನ್ನು(ನವಿಲಿನ ಧ್ವಜವುಳ್ಳ ಷಣ್ಮುಖನನ್ನು )ಎಚ್ಚೆ ಬೊಬ್ಬಿರಿದ.

ಭೂತೇಶನಾತ್ಮಸಂಭವ ಸವರಿದ ಮೀನ
ಕೇತನನ ಇಷು ಸಂಕುಲವ
ಆತನ ಮೇಲೆ ಪೊಂಬರಹಶೋಭಿತ ಶರ
ವ್ರಾತವನೆಚ್ಚು ಬೊಬ್ಬಿರಿದ ೬

ಹರನ ಸುತ ಮತ್ಸ ಧ್ವಜನಾದ ಪ್ರದ್ಯುಮ್ನನ ಬಾಣ ಸಮೂಹವನ್ನು ನಾಶಗೊಳಿಸಿದ ಅವನ ಮೇಲೆ ಹೊಂಬರಹ ಶೋಭಿತ ಬಾಣ ಸಮೂಹಗಳನ್ನೆಚ್ಚಿ ಬೊಬ್ಬಿರಿದ.

ತಾಗಿ ಥಟ್ಟುಗಿದುವೆಂದೆಂಬ ಹೇರಂಬ ವಿ
ಭಾಗಿಸಿ ವೀರ ಪ್ರದ್ಯುಮ್ನ
ಕೂಗಿ ಬೊಬ್ಬಿರಿದು ಕೂರ್ಗಣೆಯೇಟ ತಿನ್ನು
ಹೋಗೆಂದು ಹೊಡೆದ ಷಣ್ಮುಖಗೆ ೭

ತಾಗಿ ನಾಟಿಕೊಂಡಿತು ಎಂಬ ದೊಡ್ಡಬಾಣ(ಹೇರಂಬು)ವನ್ನು ವಿಭಾಗಿಸಿ ವೀರಪ್ರದ್ಯುಮ್ನ ಬೊಬ್ಬೆ ಹಾಕುತ್ತಾ ಹರಿತವಾದ ಬಾಣದೇಟನ್ನು ತಿನ್ನು ಎಂದು ಷಣ್ಮುಖನಿಗೆ ಹೊಡೆದ.

ಕಡಿದನು ಕಾಮನ ಕೂರ್ಗಣೆಗಳನಿದಿರಾಂತು
ನುಡಿದನು ರಣರಂಗದಿರವ
ಕಿಡಿಗಣ್ಣನಿಂದಳಿದುಳಿದ ದೇಹವನಿನ್ನು
ಸುಡಿಸದೆ ತಳರೆಂದ ನಗುತ ೮

ಕಾಮನ ಕೂರ್ಗಣೆಗಳನ್ನು ಎದುರುಗೊಂಡು ತುಂಡರಿಸಿದನು. ಕೆಂಡಗಣ್ಣನಿಂದ ಅಳಿದುಳಿದ ದೇಹವನ್ನು ಮತ್ತೆ ಕಳೆದುಕೊಳ್ಳದೆ ಇಲ್ಲಿಂದ ಹೊರಡು ಎಂದ ಷಣ್ಮುಖ.

ಸುಟ್ಟಾತನೆನ್ನ ಜೈಸಿದುದಿಲ್ಲ ತಪ
ಗೆಟ್ಟವನೆನಿಸಿಯುಮೆಯೊಡನೆ
ನೆಟ್ಟನೆ ಸಂಭೋಗವ ಮಾಡಲಾಕ್ಷಣ
ಹುಟ್ಟಲುಜ್ಜುಗಿಸಿದೆ ನೀನು ೯

ಸುಟ್ಟಾತ ನನ್ನನ್ನು ಜಯಿಸಲಿಲ್ಲ. ತಪಗೆಟ್ಟು ಉಮೆಯೊಡನೆ ಸಂಭೋಗ ಮಾಡಿದ್ದರಿಂದ ನೀನು ಹುಟ್ಟಿದೆ ಎಂಬುದನ್ನು ಮರೆಯಬೇಡ.

ಚಿಣ್ಣ ನೀನರಿಯದಾಡಿದೆ ಹೋಗೆಲವೊ ಮು
ಕ್ಕಣ್ಣನೆನ್ನರಲಂಬಿಗಳುಕಿ
ಹೆಣ್ಣೊಡಲಾಂತು ಪಿಂಗಿದರೆ ಕೊಂದಪೆನೆಂದು
ನನ್ನೊಳು ಸೆಣಸುವವರಾರು ೧೦

ಚಿಣ್ಣ ನೀನು ತಿಳಿಯದೆ ಮಾತಾಡಿದೆ, ಮುಕ್ಕಣ್ಣ ನನ್ನ ಹೂಬಾಣಕ್ಕೆ ಅಳುಕಿ ಹೆಣ್ಣೊಡಲಾಂತನು. ತೊರೆದರೆ ಕೊಲ್ಲುವೆನೆಂದು ತಿಳಿದು ನನ್ನ ವಿರುದ್ಧ ಸೆಣಸುವವರೇ ಇಲ್ಲ.

ನಾಗಭೂಷಣನಂತಿರಲಿ ನಿರ್ಜರರೊಳು
ಭೋಗ ದೇವೇಂದ್ರನ ಮೇಲೆ
ಡಾಗನೊತ್ತಿದೆ ನೋಡೆನ್ನಿಂದ ಬೆಂಡಾಗಿ
ಹೋಗದ ವೀರರಾರೆಲವೊ ೧೧

ನಾಗಾಭರಣನಾದ ಶಿವ ಹಾಗಿರಲಿ, ದೇವತೆಗಳಲ್ಲಿ ದೇವೇಂದ್ರನ ಮೇಲೆ ಮುದ್ರೆ ಒತ್ತಿದೆ. ನನ್ನಿಂದ ಬಸವಳಿಯದ ವೀರರು ಯಾರಿದ್ದಾರೆ?

ಶ್ರೀನಾರಿಗರ್ಭಸಂಜಾತನಾಗಿರಲು
ನೀನಾಡೆ ಇಂಥ ಪೌರುಷವ
ಮೀನಧ್ವಜನಾದ ಕಾರಣ ತತ್ಕುಲವ
ಹೀನ ನಾಲಗೆ ತೋರಿಸಿತು ೧೨

ಲಕ್ಷ್ಮಿಯ ಗರ್ಭಸಂಭವನಾಗಿದ್ದರೆ ನೀನಾಡೆ ಇಂಥ ಪೌರುಷದ ಮಾತನ್ನು. ನೀನು ಮೀನಕೇತನ(ಮನ್ಮಥ, ಕಾಮ) ನಾದುದರಿಂದ ಆ ಕುಲವನ್ನು ನಿನ್ನ ಹೀನ ನಾಲಗೆ ತೋರಿಸಿದೆ.

ಪಿಂಡವನು ಹೆತ್ತ ಮಾತೃಕೆ ರಕ್ಷಿಸುವುದು
ಮಂಡಲದೊಳಗುಳ್ಳ ನೀತಿ
ಹೆಂಡತಿಯಿಂದರ್ಭಕನಾಗಿ ಬೆಳೆದಂಥ
ಭಂಡ ನೀ ಹೋಗೆಂದು ನುಡಿದ ೧೩

ಹೆತ್ತ ತಾಯಿ ಪಿಂಡವನ್ನು ರಕ್ಷಿಸುವುದು ಭೂಮಂಡಲದ ನೀತಿ. ಹೆಂಡತಿಯಿಂದ ಮಗುವಾಗಿ ಬೆಳೆದ ನೀನು ನಿಜವಾಗಿಯೂ ಭಂಡ ಹೋಗೆಂದ.

ಪಾರ್ವತಿ ಜಠರದೊಳೊಗೆದವನಲ್ಲ ಒಟ್ಟು
ಆರು ಯೋನಿಜನಾದ ಪರುಕ
ಗಾರುಗೆಡೆಯ ಬೇಡೆನುತವನ ಗುಟ್ಟನಿವನು
ಹಾರುವಂತೆಚ್ಚೆ ಬೊಬ್ಬಿರಿದ ೧೪

ಪಾರ್ವತಿ ಹೊಟ್ಟೆಯಲ್ಲಿ ಹುಟ್ಟಿದವನಲ್ಲ. ಒಟ್ಟು ಆರುಯೋನಿಗಳಲ್ಲಿ ಹುಟ್ಟಿ ಷಣ್ಮುಖನಾದ ಅಶಕ್ತ. ಬೊಗಳೇಬಿಡಬೇಡ ಎಂದು ಅವನ ಹುಟ್ಟಿನ ಗುಟ್ಟನ್ನು ಇವನು ಬಟ್ಟಬಯಲು ಮಾಡಿ ಬೊಬ್ಬಿರಿದ.

ಸೀಸಕ ಮುರಿದು ಸಾರಥಿ ನೊಂದು ಪಟವಿಹ
ಗೇಶನು ಕೋಯೆಂದು ಕೂಗಿ
ಓಸರಿಸಿದ ರಥ ಸ್ತಂಭದಲಿ ಷಣ್ಮುಖನು
ಕೇಶವನಣುಗನಂಬಿನಿಂದ ೧೫

ಕೃಷ್ಣನ ಮಗನ ಬಾಣದೇಟಿಗೆ ಓರೆಯಾದ ರಥಸ್ತಂಭದಲ್ಲಿ ಷಣ್ಮುಖನ ಶಿರಸ್ತ್ರಾಣ ಮುರಿದು, ಸಾರಥಿ ನೊಂದು, ನವಿಲು ಕೋ ಎಂದು ಕೂಗತೊಡಗಿತು.

ಭಾಪುರೆ ಪಟುಭಟನಂತಿದಿರೊಳು ನಿಲ
ಲಾಪುದೆ ಕಾದುಕೊಳ್ಳೆನುತ
ಶ್ರೀ ಪರಮೇಶ್ವರನಾತ್ಮಸಂಭವ ಇಕ್ಷು
ಚಾಪಂಗೆಚ್ಚೆ ಬೊಬ್ಬಿರಿದ ೧೬

ಶೂರ ಸೈನಿಕನಂತೆ ಇದಿರಲ್ಲಿ ನಿಲ್ಲಲು ಸಾಧ್ಯವೆ? ರಕ್ಷಿಸಿಕೋ ಎನ್ನುತ್ತ ಷಣ್ಮುಖ ಇಕ್ಷುಚಾಪ(ಕಬ್ಬು ಬಿಲ್ಲ)ನಿಗೆ ಎಚ್ಚೆ ಬೊಬ್ಬಿರಿದ.

ಸರಳಿಂದ ರಥಸಾರಥಿ ನೊಂದು ಪಟಮೀನ
ಕೊರಳರೆಗಡಿದು ಕಂಪಿಸಲು
ತರಳ ಮನ್ಮಥ ಮೂರ್ಛೆಯನಾಂತು ತಿಳಿದೆದ್ದು
ಬೆರಳೆತ್ತಿ ಕೊಂಡಾಡಿದನು ೧೭

ಬಾಣದಿಂದ ರಥ ಸಾರಥಿ ನೊಂದು ಧ್ವಜದ ಮೀನಿನ ಕೊರಳು ಅರೆಗಡಿದು ಕಂಪಿಸುವಾಗ ತರಳ ಮನ್ಮಥ ಮೂರ್ಛೆಯನ್ನು ಹೊಂದಿ, ಬಳಿಕ ತಿಳಿದೆದ್ದು ಬೆರಳೆತ್ತಿ ಕೊಂಡಾಡಿದನು.

ಇದ ನೋಡು ಕಾದುಕೊ ಎಂದು ಮನ್ಮಥ ಬೆನ್ನ
ಹೊದೆಗೋಲನೊಂದನು ತೆಗೆದು
ಎದೆಯ ಸಂಮುಖದಲಿ ಹೂಡಿ ತೊಡಿಸಿ ಬಿಲ್ಲ
ಹೆದೆಯ ಕತ್ತರಿಸಲಿಕ್ಕಿದನು ೧೮

ಇದನ್ನು ಕಾದುಕೋ ಎಂದು ಬೆನ್ನ ಮೇಲಿನ ಬತ್ತಳಿಕೆಯಿಂದ ಬಾಣ ತೆಗೆದು ಎದೆಯ ಸಂಮುಖದಲ್ಲಿ ಹೂಡಿ ಬಿಲ್ಲಿನ ಹೆದೆಯನ್ನು ತುಂಡರಿಸುವಂತೆ ಎಚ್ಚಿದನು.

ಸೋಲವೆ ಸುಭಟಗೆ ಬಿಲ್ದೆದೆ ಪರಿದ ತ
ತ್ಕಾಲದಿ ಕೈನೆರವಿಂಗೆ
ಶೂಲವೊಂದಿದೆ ನೋಡು ಕಾದುಕೊಳೆನುತಲ
ಗೋಲಂಗಿಕ್ಕಿ ಬೊಬ್ಬಿರಿದ ೧೯

ಶೂರರಿಗೆ ಅಪಜಯವೆ? ಬಿಲ್ಲಿನ ಹೆದೆ ತುಂಡಾದ ಸಂದರ್ಭದಲ್ಲಿ ಕೈನೆರವಿಗೆ ಶೂಲವೊಂದಿದೆ ಕಾದುಕೋ ಎಂದು ಹೂಬಾಣನಿಗಿಕ್ಕಿ ಅಬ್ಬರಿಸಿದ.

ಕೆಂಗಿಡಿಗರೆಯುತ್ತ ಪರಿತಂದು ಮದನನ
ನುಂಗಿ ನೀರ್ಗುಡಿಯದಿರದೆಂದು
ಇಂಗಿತವರಿದು ಶ್ರೀಕೃಷ್ಣ ಚಕ್ರದೊಳಿಟ್ಟು
ಭಂಗಿಸಿದನು ಮಹಾಯುಧವ ೨೦

ಇದು ಮದನನನ್ನು ನುಂಗಿ ನೀರು ಕುಡಿಯದೆ ಇರದೆಂದು ಶ್ರೀಕೃಷ್ಣ ತನ್ನ ಚಕ್ರದಿಂದ ಆ ಆಯುಧವನ್ನು ಭಂಗಿಸಿದನು.

ಆತಂಗೆನಗೆ ಗಂಟಿಕ್ಕಿದ ಸಮರವ ಪ್ರ
ಖ್ಯಾತರು ನೋಡಬೇಕೈಸೆ
ಏತಕ್ಕೆ ನೀನಡಹಾಯ್ದೆಯೆನುತ ಶ್ರೀ
ನಾಥನಿಗೆ ಬಿಲ್ದುಡುಕಿದನು ೨೧

ಆತನಿಗೂ ನನಗೂ ನಡೆಯುತ್ತಿರುವ ಕದನವನ್ನು ಪ್ರಖ್ಯಾತರು ನೋಡಬೇಕು. ಏತಕ್ಕೆ ನೀನು ಮಧ್ಯೆ ಪ್ರವೇಶಿಸಿದೆ ಎಂದು ಲಕ್ಷ್ಮೀಕಾಂತನನ್ನು ತರಾಟೆಗೆ ತೆಗೆದುಕೊಂಡನು.

ದಪ್ಪದೊಳಾಂ ನಿನ್ನ ಜಯಸಿದೊಡಪಕೀರ್ತಿ
ಬಪ್ಪುದು ಲೋಕಾಪವಾದ
ತಪ್ಪದು ಕಾದಬೇಕಾದರೆ ಬೇಗ ನಿ
ಮ್ಮಪ್ಪನ ಕರೆತಂದು ನಿಲಿಸು ೨೨

ದರ್ಪದಿಂದ ನಾನು ನಿನ್ನ ಮೇಲೆ ಜಯ ಸಾಧಿಸಿದರೆ ಅಪಕೀರ್ತಿ ಬರುವುದು, ಲೋಕಾಪವಾದ ತಪ್ಪದು, ಹೋರಾಡಬೇಕಾದರೆ ಬೇಗ ನಿಮ್ಮಪ್ಪನನ್ನು ಕರೆತಂದು ನಿಲ್ಲಿಸು.

ಎನ್ನೊಳು ಜಯಿಸಲಾರದೆ ಮತ್ಪಿತನೊಳು
ಸನ್ನಣಿಸುವರೆ ಕಾಳಗವ
ಎನ್ನಲಾ ಮಾತನಾಲಿಸಿ ಕೃಷ್ಣ ಹಿಡಿದನು
ತನ್ನಯ ಚಕ್ರಾಯುಧವನು ೨೩

ನನ್ನನ್ನು ಜಯಿಸಲಾರದೆ ನನ್ನ ತಂದೆಯೊಡನೆ ಕಾಳಗವನ್ನು ಸನ್ನಣ(ಸಜ್ಜು)ಗೊಳಿಸುವುದು ಸರಿಯೆ ಎಂದು ಕೇಳಿದಾಗ ಕೃಷ್ಣ ತನ್ನ ಚಕ್ರವನ್ನು ಕೈಗೆತ್ತಿಕೊಂಡನು.

ಕೇಳಿಯವರ ಸಂವಾದವನದ ತಿದ್ದಲು
ಕಾಳಿ ನಿರ್ಗ್ರಂಥಾಕೃತಿಯ
ತಾಳಿ ಬಂದಿದಿರಾಗಿ ನಿಲಲಚ್ಯುತ ನೋಡಿ
ಹೂಳಿದ ನಯನಯುಗಳವನು ೨೪

ಅವರ ಸಂವಾದವನ್ನು ಕೇಳಿ ಅದನ್ನು ಸರಿಪಡಿಸಲು ಕಾಳಿ ಬೆತ್ತಲೆಯಾಗಿ ಬಂದು ಇದಿರು ನಿಲ್ಲಲು ಅಚ್ಯುತನು ಕಣ್ಣುಗಳೆರಡನ್ನೂ ಮುಚ್ಚಿಕೊಂಡನು.

ಸುಡುಸುಡು ಕಾಳಗ ಬೆಂದುದೆಂದಸುರಾರಿ
ಕಡು ಲಜ್ಜೆಗೊಂಬನಿತರೊಳು
ಷಡುಮುಖ ಶೌರಿಯೊಳು ಕಾಳಗ ಬೇಡೆಂದು
ಮಡುದಲೆಯನು ಕರೆಸಿದನು ೨೫

ಕೃಷ್ಣ ಲಜ್ಜೆಗೊಂಡು ನಿಂತಾಗ ಷಣ್ಮುಖ ಶೌರಿ(ಕೃಷ್ಣ) ಯರ ನಡುವೆ ಯುದ್ಧ ಸಲ್ಲದೆಂದು ಮಡುದಲೆಯ(ಗಂಗಾಧರ)ವಾಪಸ್ಸು ಕರೆಸಿದನು

ತ್ರಿನಯನ ಪೇಳ್ದುದನು ಕೇಳಿ ನಿಂದನು
ಸೇನಾನಿ ವಾಹನಮುಳಿದು
ತಾನಿದಿರ್ವಂದು ಮನ್ಮಥನ ಟೆಕ್ಕೆಯದ ಪೆ
ರ್ಮೀನಿಂಗೆ ಹಾಯ್ದುದಾರ್ಭಟಿಸಿ ೨೬

ಮುಕ್ಕಣ್ಣ ಹೇಳಿದ್ದನ್ನು ಕೇಳಿ ಸೇನಾನಿ ಷಣ್ಮುಖ ತನ್ನ ನವಿಲ ಮೇಲಿಂದ ಕೆಳಕ್ಕೆ ಇಳಿದನು. ಅದು ಮನ್ಮಥನ ಬಾವುಟದ ಮೀನಿಗೆ ಹಾಯ್ದುದು ಆರ್ಭಟಿಸಿ.

ಮಗನ ಟೆಕ್ಕೆಯ ಮುರಿದರೆ ಮಾನಭಂಗವೆಂ
ದಗಧರನು ವಿನತಾತ್ಮಜನ
ಮೊಗ ನೋಡಲಾಕ್ಷಣ ಮೊರೆದೆದ್ದು ಕೋಪದಿ
ಖಗರಾಜ ತುಡುಕಿದ ನವಿಲ ೨೭

ಮಗನ ಧ್ವಜ ಮುರಿದರೆ ಮಾನಭಂಗವೆಂದು ಗೋವರ್ಧನಗಿರಿಧಾರಿಯಾದ ಕೃಷ್ಣ ಗರುಡನ ಮುಖ ನೋಡಿದಾಕ್ಷಣ ಅದು ಮೊರೆದೆದ್ದು ನವಿಲನ್ನು ತುಡುಕಿತು.

ತಡೆದರೆ ತಡೆದೊದ್ದರೊದ್ದು ರೆಕ್ಕೆಯೊಳಿಟ್ಟು
ಹೊಡೆದರೆ ಹೊಡೆದು ಕೆಕ್ಕರಿಸಿ
ಕೆಡೆದರೆ ಕೆಡೆದುಗರ್ಗಳೊಳೊತ್ತಿ ಭೀಕರ
ವಡೆದು ಹೊಯ್ದಾಡಿದುವೆರಡು ೨೮

ತಡೆದರೆ ತಡೆದು, ಒದ್ದರೆ ಒದ್ದು, ಹೊಡೆದರೆ ಹೊಡೆದು, ಕೆಕ್ಕರಿಸಿ ಕೆಡೆದರೆ ಕೆಡೆದು ಉಗುರುಗಳಲ್ಲಿ ಒತ್ತಿ ಭೀಕರವಾಗಿ ಕಾದಾಡಿದವು.

ಸಿಕ್ಕಿದರೆ ಸೆಳೆಯುವುವು ಸೆಳೆದೊಳ ಹುಗುವುವು
ಕುಕ್ಕಲು ಕುಕ್ಕುವುವು ರೋಷದಿ
ಹಕ್ಕಿಗಳರಸನು ಮೋರನ ನೆಲಕಿಕ್ಕಿ
ತಿಕ್ಕಿತು ಕೂಗಿ ಬೊಬ್ಬಿರಿದು ೨೯

ಸಿಕ್ಕಿದರೆ ಸೆಳೆಯುವುವು, ಸೆಳೆದು ಒಳಹೋಗುವವು, ಕುಕ್ಕಲು ರೋಷದಿಂದ ಕುಕ್ಕುವುವು, ಹಕ್ಕಿಗಳರಸ(ಗರುಡ) ಮೋರನನ್ನು(ನವಿಲನ್ನು)ನೆಲಕ್ಕಿಕ್ಕಿ ತಿಕ್ಕಿತು ಬೊಬ್ಬೆ ಹಾಕಿ

ಗಾಳಿಗೂಳನ ಹಗೆಗೊಳಗಾದ ಶಿಖಿ ರವ
ಕೇಳಿ ನಂದೀಶನೈತರಲು
ಗೂಳಿಯೊಳಿದಿರಾಗಿ ಕಾದಬೇಕೆಂದು ಹೀ
ಯಾಳಿಸಿ ಬಿಟ್ಟುದಾ ನವಿಲ ೩೦

ಗಾಳಿಗೂಳನ ಹಗೆಗೆ(ಗಾಳಿಯೇ ಆಹಾರವಾದ ಹಾವಿನ ಹಗೆಯಾದ ಗರುಡ) ತುತ್ತಾದ ನವಿಲ ಕೂಗನ್ನು ಕೇಳಿ ನಂದೀಶ ಬರಲು, ಗೂಳಿಯೊಡನೆ ಹೋರಾಡಬೇಕೆಂದು ಹೀಯಾಳಿಸಿ ನವಿಲನ್ನು ಬಿಟ್ಟಿತು.

ನೀಲಕಂಧರನ ನೆಗ್ಗಿಸಿದಂತೆ ನೀನೆನ್ನ
ಮೇಲುರವಣಿಸೆಂದು ವೃಷಭ
ಶೂಲದಂತೆಸೆವ ಶೃಂಗಗಳಿಂದ ತಿವಿದುದು
ಬಾಲಾಹಿಸೂದನನೆದೆಯ ೩೧

ನವಿಲನ್ನು ನಜ್ಜುಗುಜ್ಜು ಮಾಡಲೆತ್ನಿಸಿದಂತೆ ನನ್ನ ಮೇಲೆ ಪ್ರತಾಪ ತೋರು ಬಾ ಎಂದು ಬಸವ ತನ್ನ ಶೂಲದಂಥ ಶೃಂಗ(ಕೊಂಬು)ಗಳಿಂದ ಗರುಡನ ಎದೆಯನ್ನು ತಿವಿಯಿತು.

ನವಿಲ ಸೋಲೆಯನೆತ್ತುವೆನೆಂದು ಬಂದೆನ್ನ
ತಿವಿದ ಸಾಹಸಿಯ ನೋಡೆನುತ
ವಿವಿಧ ವಿದೆಸೆಯಿಂದೆರಂಕೆಯೊಳಿಕ್ಕಲು
ಕವಿದು ಬಿದ್ದುದು ಭೂಮಿಯಲಿ ೩೨

ನವಿಲ ಚರ್ಮವನ್ನು ಸುಲಿಯುತ್ತೇನೆಂದು ಬಂದು ನನ್ನನ್ನು ತಿವಿದ ಸಾಹಸಿಯನ್ನು ನೋಡು ಎನ್ನುತ್ತ ವಿವಿಧ ವಿದೆಸೆ(ಉಪದಿಕ್ಕು)ಗಳಿಂದ ರೆಕ್ಕೆಯಿಂದ ಇಕ್ಕಲು(ಬಡಿಯಲು) ಭೂಮಿಗೆ ಕುಸಿದು ಬಿದ್ದಿತು.

ಬಿದ್ದಡೆ ಬಿದ್ದುದಿಲ್ಲೆನುತಲಾ ಕ್ಷಣದೊಳ
ಗೆದ್ದು ಖಗೇಶ್ವರನೆದೆಯನು
ಕದ್ದೈಸದೆ ಬಂದು ತಿವಿದ ರಭಸಕ್ಕೆ
ಬಿದ್ದು ಕುಕ್ಕರಿಸಿತುರ್ವಿಯಲಿ ೩೩

ಕೆಳಗೆ ಬಿದ್ದರೂ ಬಿದ್ದಿಲ್ಲ ಎಂಬಂತೆ ಆ ಕ್ಷಣದಲ್ಲಿ ಮೇಲೆದ್ದು ಹಿಂದುಮುಂದು ನೋಡದೆ ಬಂದು ಗರುಡನ ಎದೆಯನ್ನು ತಿವಿದ ರಭಸಕ್ಕೆ ಗರುಡ ಕುಸಿದು ಕುಕ್ಕರಿಸಿತು ಭೂಮಿಯಲ್ಲಿ.

ರೋಷವಿಮ್ಮಡಿಸಲು ಪರಿತಂದು ವಿಹಗಾ
ಧೀಶ ಭುಜವನು ಚಪ್ಪರಿಸಿ
ಈಶಲಕ್ಷ್ಮೀಶರು ಕೊಂಡಾಡುವಂತೆ ನಂ
ದೀಶನ ತಿವಿದು ಬೊಬ್ಬಿರಿದ ೩೪

ಇಮ್ಮಡಿ ಕೋಪದಿಂದ ಗರುಡ ಭುಜವನ್ನು ತಟ್ಟಿ ಈಶಲಕ್ಷ್ಮೀಶರು ಕೊಂಡಾಡುವಂತೆ ನಂದೀಶನನ್ನು ತಿವಿದು ಬೊಬ್ಬೆ ಹಾಕಿತು.

ಉರಿ ಮಸಗಿತು ನಾಸಿಕದಲ್ಲಿ ಕೆಂಗಿಡಿ
ಸುರಿವಕ್ಷಿಯಿಂದ ನಂದೀಶ
ಹರಿಹರಾದ್ಯರು ಕೀರ್ತಿಸೆ ಗರುಡನ ನೆತ್ತಿ
ಬಿರಿವಂತೆ ತಿವಿದು ಬೊಬ್ಬಿರಿದ ೩೫

ಮೂಗಿನಲ್ಲಿ ದಳ್ಳುರಿ ಧಗಧಗಿಸಿತು, ಕಣ್ಣಿನಲ್ಲಿ ಕೆಂಗಿಡಿಗಳು ಅವಲಾಗಿ ಸಿಡಿದವು. ಕೂಡಲೇ ನಂದೀಶ ಹರಿಹರರು ಕೀರ್ತಿಸುವಂತೆ ಗರುಡನ ನೆತ್ತಿ ಸೀಳುವಂತೆ ತಿವಿದು ಗುಟುರು ಹಾಕಿದ.

ಹುಗುವರು ಹೊಕ್ಕು ಹೋರುವರು ಬಿನ್ನಣಿಸಿ
ಬಿಗಿವರು ಕೈಕಾಲು ಬೆರಲ
ಸಿಗಿವರು ಸಿಕ್ಕಿದರಾಯೆನ್ನಲೊಲ್ಲದೆ
ಸಗುಣಾತ್ಮಕರು ಕಾದಿದರು ೩೬

ಪ್ರವೇಶಿಸುವರು, ಕೂಡಲೇ ಹೋರಾಡುವರು, ಬಿನ್ನಾಣದಿಂದ ಪರಸ್ಪರ ಬಿಗಿವರು, ಕೈಕಾಲು ಬೆರಳುಗಳನ್ನು ಸಿಗಿವರು, ಸಿಕ್ಕಿದರೆ ಆ ಎಂದು ಕಿರುಚದೆ ಕಾದಾಡಿದರು.

ಕೆಡೆದನು ಖಗರಾಜ ನಂದೀಶನೆಡವಿದ
ಒಡೆಮುರಿದೆದ್ದರಾಕ್ಷಣದಿ
ಅಡಹಾಯ್ದಿರ್ವರು ಧುಪ್ಪದುಪ್ಪೆಂಬಂತೆ
ಹೊಡೆದಾಡುತಿರ್ದರಾಹವದಿ ೩೭

ಬಿದ್ದ ಗರುಡ, ಎಡವಿದ  ನಂದೀಶ ಕೂಡಲೇ ಮೇಲೆದ್ದು ದೊಪ್ಪದೊಪ್ಪೆಂದು ಪರಸ್ಪರ ಹೊಡೆದಾಡಿದರು.

ನುಡಿದುವು ದೇವದುಂದುಭಿಗಳಿರ್ವರ ಸಿರಿ
ಮುಡಿಯಲಿ ಹೂಮಳೆಗರೆಯೆ
ಕಿಡಿಗಣ್ಣ ಕರೆದು ನಂದೀಶನ ತಾನೊಡಂ
ಬಡಿಸಿದ ಯುದ್ಧ ಸಾಕೆನುತ ೩೮

ದೇವದುಂದುಭಿಗಳು ಮೊಳಗಿದವು. ಇಬ್ಬರ ತಲೆಗಳ ಮೇಲೆ ಹೂಮಳೆ ಸುರಿಯಿತು. ಕೆಂಡಗಣ್ಣ ನಂದೀಶನನ್ನು ಕರೆದು ಯುದ್ಧ ಸಾಕೆಂದು ಒಪ್ಪಿಸಿದ.

ತೆತ್ತೀಸಕೋಟಿ ವೃಂದಾರಕರುಗಳ ನೆ
ಗ್ಗೊತ್ತಿದ ಸುಧಾ ವಿಷಯದಲಿ
ಅತ್ಯಂತ ಬಲ್ಲಿದ ಖಗರಾಜನೊಡನೆ ಇ
ವೊತ್ತಿಗೆ ಸಮರ ಸಾಕೆಂದು ೩೯

ಅಮೃತದ ಸಂಬಂಧವಾಗಿ ಮೂವತ್ತು ಮೂರು ಕೋಟಿ ದೇವತೆಗಳನ್ನು ದಮನಿಸಿದ ಮಹಾ ಬಲಶಾಲಿಯಾದ ಗರುಡನೊಡನೆ ಇಂದಿಗೆ ಯುದ್ಧ ಸಾಕೆಂದು ತಿಳಿ ಹೇಳಿದನು.

ಭುಜಗಧ್ವಂಸಿ ನಂದೀಶ್ವರನೊಳು ಕಾದಿ
ನಿಜಪೌರುಷದಿ ನಿಂದಿರಲು
ದ್ವಿಜರಾಜ ಬೆರೆಯದಿರೆನುತಪಚಾರಿಸಿ
ಗಜವಕ್ತ್ರನುರವಣಿಸಿದನು ೪೦

ಸರ್ಪಧ್ವಂಸಿ ಗರುಡ ನಂದೀಶನೊಡನೆ ಕಾದಾಡಿ ಪೌರುಷದಿಂದ ನಿಂತಿರಲು, ಓ ದ್ವಿಜರಾಜ (ಪಕ್ಷಿರಾಜ ಗರುಡ) ಅಹಂಕಾರ ಪಡದಿರು ಎಂದು ಅಗೌರವಿಸಿ ಗಣೇಶ ಅವೇಶದಿಂದ ಬಂದನು.

ಜೋಡಿಸಿ ಪರಿತಂದು ಮೂಷಕ ಗರುಡನ
ನೋಡಿ ಕಣ್ಗೆಟ್ಟು ತನ್ನೊಡಲ
ಬಾಡಿಸಿ ತಿಂದಪನೆಂದುರೆ ಹೊತ್ತು ಕೊಂ
ಡೋಡಿತು ವಿಘ್ನೇಶ್ವರನ ೪೧

ಸಿದ್ಧವಾಗಿ ದೌಡು ಬಂದು ಮೂಷಕ ಗರುಡನನ್ನು ನೋಡಿ ಕಂಗೆಟ್ಟು ತನ್ನೊಡಲನ್ನು ಸುಟ್ಟು ತಿನ್ನುವನೆಂದು ವಿಘ್ನೇಶ್ವರನನ್ನು ಹೊತ್ತುಕೊಂಡು ಓಡಿತು.

ಅಂಡಿಸುವುದು ಹೊಯ್ದರೆ ಬೆಚ್ಚುವುದು ತಾ
ಕಂಡ ತಕ್ಕಗಡುಗುದುರೆಯನು
ಚಂಡವಿಕ್ರಮ ಮಡದಲಿ ಮೆಲ್ಲನೊತ್ತಲು
ತುಂಡವ ತಿರುಗಿಸಿತಾಕ್ಷಣದಿ ೪೨

ಹಿಮ್ಮೆಟ್ಟುವುದು, ಹೊಡೆದರೆ ಬೆಚ್ಚುವುದು, ತಾನು ಕಂಡ ಅಗಡು(ಅಸಾಧು) ಕುದುರೆಯನ್ನು ಚಂದವಿಕ್ರಮನಾದ ಗಣೇಶ ತನ್ನ ಹಿಮ್ಮಡಿಯಿಂದ ಒತ್ತಲು ತಲೆಯನ್ನು ತಿರುಗಿಸಿತು.

ಒಕ್ಕೈಯ ವಾಘೆಯೊಳು ನಿಲ್ಲಲೊಲ್ಲದೆ
ವೆಕ್ಕಸಗೆಯ್ವುದನು ಕಂಡು
ಬೆಕ್ಕಸ ಬೆರಗಾಗಿ ಬಲರಾಮ ಕೃಷ್ಣರು
ನಕ್ಕರು ರಣರಂಗದೊಳಗೆ ೪೩

ಒಂದು ಕೈಯ ಲಗಾಮಿನಲ್ಲಿ ನಿಲ್ಲಲೊಲ್ಲದೆ ರಭಸದಿಂದ ಮುನ್ನುಗ್ಗುವುದನ್ನು ಕಂಡು ಬಲರಾಮ ಕೃಷ್ಣರು ಬೆಕ್ಕಸಬೆರಗಾಗಿ(ಆಶ್ಚರ್ಯಚಕಿತರಾಗಿ) ರಣರಂಗದಲ್ಲಿ ನಕ್ಕರು.

ಮೂಷಕ ಬೆದರಿ ತಲ್ಲಣಿಸುತಿರಲು ರಣ ವಿ
ದೂಷಕ ಬೇಡವೆಂದಿಳಿದು
ದೂಷಕ ಬಲರಾಮ ಕೈದೋರಿಸೆಂದು ವಿ
ಘ್ನೇಶ ಕರೆದು ಕದನಕಿಳಿದನು ೪೪

ಮೂಷಕ ಬೆದರಿ ತಲ್ಲಣಿಸುತ್ತಿರಲು, ರಣವಿದೂಷಕನಾದ ಗಣೇಶ ಬೇಡವೆಂದು ಕೆಳಗಿಳಿದು, ದೂಷಕ ಬಲರಾಮ ನಿನ್ನ ಕೈತೋರಿಸೆಂದು ಕದನಕ್ಕೆ ಕುಪ್ಪಳಿಸಿದನು.

ಒದವಿದ ಭಕ್ಷ್ಯಭೋಜ್ಯಕೆ ಬರಲು ಭಾದ್ರ
ಪದ ಶುದ್ಧ ಚೌತಿಯಿದಲ್ಲ
ಕದನ ಕಜ್ಜಾಯವ ತಿನ್ನೆಂದು ಸಾಮಜ
ವದನಂಗೆ ಪೆಟ್ಟನಿಕ್ಕಿದನು ೪೫

ಸಿದ್ಧವಾದ ಭಕ್ಷ್ಯಭೋಜ್ಯಕ್ಕೆ ಬರಲು ಇದು ಭಾದ್ರಪದ ಶುದ್ಧ ಚೌತಿಯಲ್ಲ. ಕದನ ಕಜ್ಜಾಯವನ್ನು ತಿನ್ನೆಂದು ಗಜಮುಖನಿಗೆ ಪೆಟ್ಟನ್ನು ಕೊಟ್ಟನು.

ಬಡಿಸಿದರುಂಡು ತೇಗುವೆ ಬಕುತರಿಗೆ ನೂ
ರ್ಮಡಿ ಸತ್ಫಲವನೆಯ್ದಿಸುವೆ
ಹಿಡಿಯೆನ್ನ ವರ ವಾರ್ಥವ್ಯಗದೆಂದೆನುತ ಕೆಂ
ಗಿಡಿಗೋಲ್ಗಳಿಂದ ಹೇರಿದನು ೪೬

ಬಡಿಸಿದರೆ ಕಂಠಪೂರ್ತಿ ಉಂಡು ತೇಗುವೆನು, ಭಕ್ತರಿಗೆ ನೂರ್ಮಡಿ ಸತ್ಫಲವನೀಯುವೆನು, ಹಿಡಿ, ನನ್ನ ವರ ವ್ಯರ್ಥವಾಗದು ಎಂದು ಕೆಂಗಿಡಿಬಾಣಗಳಿಂದ ದಾಳಿ ಮಾಡಿದನು.

ಹೇರಿದ ಹೇರಂಬುಗಳನಿಕ್ಕಡಿ ಮಾಡಿ
ತೂರಿದ ತೋರ ಹಸ್ತದಲಿ
ಬೀರಿದ ಬಿರುಗೋಲಗಳೆಂಬ ನೇಜೆಯ
ನೂರಿದನಿರ್ಗೈಗಳೆಡೆಗೆ ೪೭

ಬಿಟ್ಟ ಹೇರಂಬು(ದೊಡ್ಡ ಬಾಣ)ಗಳನ್ನು ಎರಡು ತುಂಡು ಮಾಡಿ, ದೊಡ್ಡ ಧಡೂತಿ ಹಸ್ತದಿಂದ ತೂರಿದ. ಬಿರುಸಾದ ಬಾಣಗಳನ್ನು ಬೀರಿ ಎರಡು ಕೈಗಳಿಗೂ ಬಾಣಸಸಿಗಳನ್ನು ನಾಟಿ ಹಾಕಿದನು.

ತಾಳಾಂಕನೆ ಹಲ ಹಿಡಿದು ಭೂಮಿಯ ಮೇ
ಲುಳ ಬಲ್ಲವ ಕೇಳು ನಿನಗೆ
ಕೀಲಾರಂಬ ಬೇಡೆಂದು ವಿಘ್ನೇಶ ಹೇ
ರಾಳಂಬ ಕರೆದು ಬೊಬ್ಬಿರಿದ ೪೮

ತಾಳಾಂಕನೆ (ಧ್ವಜದಲ್ಲಿ ತಾಲವೃಕ್ಷದ ಚಿಹ್ನೆಯುಳ್ಳ ಬಲರಾಮನೆ) ನೇಗಿಲು ಹಿಡಿದು ಭೂಮಿಯನ್ನು ಉಳುವ ಕೃಷಿಕ ನೀನು. ಕೀಳಾರಂಬ (ಕೃಷಿ ವ್ಯವಸಾಯ) ಬೇಡ ಎಂದು ವಿಘ್ನೇಶ್ವರ ಹೇರಾಳಂಬ (ಹೇರಳ+ಅಂಬು=ಅಧಿಕಬಾಣ) ಪ್ರಯೋಗಿಸಿ ಬೊಬ್ಬಿರಿದ.

ಬಡವ ನಾನೊಂದು ನೇಗಿಲಲಿ ನಿನ್ನ ಬೀಳ
ಹೊಡೆದು ಕಾರ್ಗಲಸಿ ಗದ್ದೆಯನು
ತಡೆಯದೆ ಸತ್ಕೀರ್ತಿ ಗಂಧಶಾಲಿಯ ಬಿತ್ತಿ
ಪಡೆವೆ ಸತ್ಫಲವ ನೋಡೆಂದ ೪೯

ಬಡವನಾದ ನಾನು ಬಂದು ನೇಗಿಲಲ್ಲಿ ನಿನ್ನನ್ನು ಬೀಳುವಂತೆ ಹೊಡೆದು, ಕೆಸರುಗದ್ದೆಯನ್ನು ಉತ್ತು, ಸತ್ಕೀರ್ತಿ ಎಂಬ ಗಂಧಶಾಲಿ(ಭತ್ತ)ಬಿತ್ತಿ ಸತ್ಫಲ ಪಡೆವೆನೆಂದ.

ಕಡುತೇಜದುಕ್ಕಲು ತೆತ್ತು ಉತ್ತವನಲ್ಲ
ದುಡಿದಿಕ್ಕುವಡೆ ದಾಷ್ಟಿಕ
ನುಡಿದಂತೆ ಕೂರ್ಗೋಲ ಕೊರಡೆಯೇಟ ಕೋಯೆನು
ತಿಡಿದನು ಡೊಳ್ಳು ಹೊಟ್ಟೆಗನ ೫೦

ತೇಜಸ್ಸಿನ ಉಕ್ಕಲು (ಉಕ್ಕುವಿಕೆ) ತೆತ್ತು ಉತ್ತವನಲ್ಲ ದುಡಿದಿಕ್ಕುವುದರಲ್ಲಿ ನಾನು ಧೈರ್ಯಶಾಲಿ. ನುಡಿದಂತೆ ಹರಿತ ಬಾಣದ ಚಾವುಟಿ ಏಟನ್ನು ಕೋ ಎಂದು ಡೊಳ್ಳು ಹೊಟ್ಟೆಗನಿಗೆ (ಗಣಪತಿಗೆ) ಕೊಟ್ಟನು.

ಬಲರಾಮ ನನ್ನೊಳು ಸಮರಕ್ಕೆ ಸೆಣಸಿ ದು
ರ್ಬಲ ರಾಮನಾಗಿ ಹೋಗೆನುತ
ಬಲಭದ್ರ ಗಜಮುಖ ತರಿದ ಕೂರ್ಗಣೆಯಿಂದ
ಬಲರಾಮನತುಳ ಗರ್ವಿಕೆಯ ೫೧

ಬಲರಾಮ ನನ್ನೊಡನೆ ಯುದ್ಧದಲ್ಲಿ ಸೆಣಸಿ ದುರ್ಬಲ ರಾಮನಾಗಿ ಹೋಗು ಎಂದು ಬಲಶಾಲಿ ಗಜಮುಖ ತನ್ನ ಕೂರ್ಗಣೆಯಿಂದ ಬಲರಾಮನ ಗರ್ವಿಕೆಯನ್ನು ತರಿದನು.

ಕತ್ತರಿಸಿದ ಬಾಹುರೆಕ್ಕೆಯ ಬಿರಡೆಗಳ
ನುತ್ತರಿಸಲು ಜೋಡು ಜರಿದು
ಬಿತ್ತರಿಸಿದುವಂಬುಗಳು ಮೆಯ್ಯೊಳು ಬಿಸಿ
ನೆತ್ತರು ಬಸಿವಂತೆ ಗೈದು ೫೨

ಕತ್ತರಿಸಿದ ಬಾಹುರಕ್ಷೆಯ ಕೀಲುಗಳನ್ನು ಕತ್ತರಿಸಲು ರಕ್ಷಾಕವಚ ಜರಿದು(ಕುಸಿದು, ಜಾರಿ) ಬಾಣಗಳು ವಿಸ್ತಿರಿಸಿದವು, ಮೈಯಲ್ಲಿ ರಕ್ತ ಬಸಿಯುವಂತೆ ಮಾಡಿ.

ಧುರದೊಳು ವಿಘ್ನೇಶ್ವರ ಮೆಚ್ಚಿ ನೀಲಾಂ
ಬರನ ತತ್ಪೆಸರ ಪಲ್ಲಟಿಸಿ
ಅರುಣಾಂಬರ ನಾಮಧೇಯವ ಮಾಡಿದ
ನೆರೆದ ಭೂಭುಜರು ಕೀರ್ತಿಸಲು ೫೩

ಯುದ್ಧರಂಗದಲ್ಲಿ ವಿಘ್ನೇಶ್ವರ ಮೆಚ್ಚಿ ನೀಲಾಂಬರ(ನೀಲಿ ವಸ್ತ್ರಧಾರಿ ಬಲರಾಮ)ನ ಹೆಸರನ್ನು ಪಲ್ಲಟಿಸಿ, ಅರುಣಾಂಬರ(ರಕ್ತ ವಸ್ತ್ರಧಾರಿ) ಎಂಬ ಹೆಸರಿನಿಂದ ಕರೆಯುವಂತೆ ಮಾಡಿದ, ಅದನ್ನು ನೆರೆದ ರಾಜರೆಲ್ಲ ಹೊಗಳಿದರು.

ನೋಡಿದ ಬಲರಾಮ ತನ್ನವಯವದೊಳು
ತೋಡಿ ಕೂರ್ಗೊಂಡಿಹ ಶರವ
ಮಾಡಿದ ಕೈಚಳಕವನೆಂದು ನಗುತ ಕೊಂ
ಡಾಡಿದನು ವಿಘ್ನೇಶ್ವರನ ೫೪

ಬಲರಾಮ ತನ್ನ ಶರೀರದಲ್ಲಿ ನಾಟಿಕೊಂಡಿರುವ ಬಾಣಗಳನ್ನು ನೋಡಿ, ವಿಘ್ನೇಶ್ವರನ ಕೈಚಳಕವನ್ನು ಕೊಂಡಾಡಿದನು.

ಸಕಲ ವಿದ್ಯಾಪ್ರಾರಂಭ ನಿರ್ವಿಘ್ನದಾ
ಯಕದೇವ ನೀನಾದ ಬಳಿಕ

ಅಕಳಂಕ ಮತ್ಪೂಜೆ ಕೊಳ್ಳೆಂದು ಶಿಲೀ
ಮುಖವ ತನ್ಮುಖದೊಳಿಕ್ಕಿದನು ೫೫

ಸಕಲ ವಿದ್ಯಾಪ್ರಾರಂಭಮೂಲಮೂರ್ತಿ, ನಿರ್ವಿಘ್ನದಾಯಕ ನೀನಾದ ಬಳಿಕ ನನ್ನ ಪೂಜೆಯನ್ನು ಕೊಳ್ಳೆಂದು ಶಿಲೀಮುಖ(ಬಾಣ)ವನ್ನು ಆತನ ಮುಖದಲ್ಲಿಕ್ಕಿದನು.

ನಿಜ್ಜರ ಗಣಪತಿಯಮಲ ಮಸ್ತಕ ಸರ
ಳ್ವೆಜ್ಜದೊಳರುಣಾಂಬು ಸುರಿಯೆ
ಮಜ್ಜನಗೆಯ್ದು ಕುಂಕುಮ ರಸಧಾರೆಯಿಂ
ದೊಜ್ಜಲಾದುದು ನಿಂದೆಡೆಯು ೫೬

ದೇವ ಗಣಪತಿಯ ನಿರ್ಮಲ ಮಸ್ತಕದಲ್ಲಿ ಬಾಣದ ರಂಧ್ರದಿಂದ ನೆತ್ತರು ಸುರಿಯಲು, ಕುಂಕುಮಬಣ್ಣದ ರಸಧಾರೆಯಲ್ಲಿ ಸ್ನಾನ ಮಾಡಿ, ನಿಂತ ಸ್ಥಳ ಕೆಸರುಮಯವಾಯಿತು.

ಹೊಳೆವ ಕೆಂಗಿಡಿಗೋಲ ಪುಷ್ಪಗಳ ಚೆಂ
ದಳಿರ ಗಂಧ ನಿಟಿಲಾಂತರದೆ
ಬಳರಾಮನಿಂದ ಪೂಜೆಯ ಕೊಂಡು ಸಮರ
ಸ್ಥಳದಿ ವಿಘ್ನೇಶನೊಪ್ಪಿದನು ೫೭

ಬಲರಾಮನಿಂದ ಹೊಳೆವ ಕೆಂಗಿಡಿಬಾಣದ ಪುಷ್ಪಗಳಿಂದ ಚೆಂದಳಿರ ಗಂಧದಿಂದ ನಿಟಿಲಾಂತರದಲ್ಲಿ(ಹಣೆಯಲ್ಲಿ)ಪೂಜೆಗೊಂಡು ರಣರಂಗದಲ್ಲಿ ಗಣಪತಿಯೊಪ್ಪಿದನು.

ಮೃಡನಾತ್ಮ ಸಂಭವ ಬಿಲ್ಲ ಬಿಸುಟು ಚೆಪ್ಪ
ಗೊಡಲಿಯನು ಕೊಂಡಾರ್ಭಟಿಸಿ
ಹೊಡೆದನು ಬಲರಾಮನ ಕೆಯ್ಯ ಕಾರ್ಮುಕ
ಕೆಡೆದುದು ತುಂಡಾಗಿ ನೆಲಕೆ ೫೮

ಶಿವಪುತ್ರನಾದ ಗಣಪತಿ ಬಿಲ್ಲನ್ನು ಬಿಸಾಡಿ ಚಪ್ಪಗೊಡಲಿಯನ್ನು ತೆಗೆದುಕೊಂಡು ಬಲರಾಮನ ಕೈಯೊಳಗಿನ ಬಿಲ್ಲು ತುಂಡಾಗಿ ನೆಲಕ್ಕೆ ಬೀಳುವಂತೆ ಹೊಡೆದನು.

ಇಕ್ಕಡಿಯಾದ ಕಾರ್ಮುಕವ ನಿವಾರಿಸಿ
ತಕ್ಕೊಂಡು ಭಾರಿಯ ಹಲವ
ಒಕ್ಕಯ್ಯೊಳಾಂತ ಪೇರೊನಕೆಯಿಂದಿಕ್ಕಿದ
ಸೊಕ್ಕಾನೆದಲೆಗನ ಮೇಲೆ ೫೯

ಎರಡು ತುಂಡಾದ ಬಿಲ್ಲನ್ನು ಬಿಸಾಡಿ, ದೊಡ್ಡ ನೇಗಿಲನ್ನು ತೆಗೆದುಕೊಂಡು ಒಂದು ಕೈಯಲ್ಲಿ ಹಿಡಿದ ದೊಡ್ಡ ಒನಕೆಯಿಂದ ಸೊಕ್ಕಾನೆದಲೆಗ (ಗಣಪತಿ) ನಿಗೆ ಇಕ್ಕಿದ.

ಹೊಡೆದ ನಿಷ್ಠುರ ಹತಿಗುದ್ಭ್ರಮೆಗೊಂಡು ಪೇ
ರೊಡಲ ತಿರ್ರನೆ ತಿರುಗಿಸಿದ
ಮೃಡ ಚಕ್ರಪಾಣಿಯ ಬಲ ದುಗ್ಧಾಬ್ಧಿಯ
ಕಡೆವ ಮಂದರಗಿರಿಯಂತೆ ೬೦

ಹೊಡದ ತೀವ್ರ ಪೆಟ್ಟಿಗೆ ಭ್ರಮೆಗೊಂಡು ಅವಶನಾಗಿ ತನ್ನ ದೊಡ್ಡ ಹೊಟ್ಟೆಯನ್ನು ತಿರ್ರನೆ ತಿರುಗಿಸಿದ, ಶೂಲಪಾಣಿ(ಶಿವ) ಚಕ್ರಪಾಣಿ(ಕೃಷ್ಣ) ಇವರಿಬ್ಬರ ಬಲ ಪಾಲ್ಗಡಲನ್ನು ಕಡೆವ ಕಡೆಗೋಲು ಮಂದರಗಿರಿಯಂತೆ.

ಮತ್ತಗಜಾನನ ಮನ ಹರವಸದಿಂದೆ
ಚ್ಚತ್ತು ಪೆರ್ಗದೆಯ ತಕ್ಕೊಂಡು
ಹುತ್ತವ ಹೊಕ್ಕರು ಬಿಡೆನೆಂದು ತಲೆ ನೆ
ಗ್ಗೊತ್ತುವಂತಪ್ಪಳಿಸಿದನು ೬೧

ಅಮಲಿನಲ್ಲಿದ್ದ ಗಜಾನನ ಪರವಶತೆಯಿಂದ ಎಚ್ಚೆತ್ತು ದೊಡ್ಡ ಗದೆಯನ್ನು ಹಿಡಿದು ಹುತ್ತವನ್ನು ಹೊಕ್ಕರೂ ಬಿಡುವುದಿಲ್ಲವೆಂದು ತಲೆ ನೆಗ್ಗಾಗುವಂತೆ ಅಪ್ಪಳಿಸಿದನು.

ಈತನ ಮಸ್ತಕ ಬಿರಿಯುವಂತಕ್ಕಲಹಿ
ನಾಥ ಮೂರ್ಛೆಯನಾಂತನು
ಚೇತನಗುಂದಿ ದಿಗ್ದಂತಿ ಮಲಗಲಾಗ
ಭೂತಲವೆಲ್ಲ ಕಂಪಿಸಿತು ೬೨

ತಲೆ ಸೀಳುವಂತೆ ಇಕ್ಕಿದಾಗ ಆದಿಶೇಷ ಮೂರ್ಛೆ ಹೋದನು. ದಿಗ್ದಂತಿಗಳು ಚೇತನಗುಂದಿ ಮಲಗಿದಾಗ ಭೂಮಂಡಲ ಕಂಪಿಸಿತು.

ಚಂಡ ಪ್ರತಾಪಿ ವಿಘ್ನೇಶ್ವರ ಮಲೆತಿರಲು
ಕಂಡು ಹಲಾಯುಧ ಮುಳಿದು
ಸೊಂಡಿಲು ದಂತಗಳೊಡೆವಂತೆ ಮುಸಲದಿ
ಕೊಂಡನು ಕೂಗಿ ಬೊಬ್ಬಿರಿದು ೬೩

ಪ್ರಚಂಡ ಪ್ರತಾಪದ ವಿಘ್ನೇಶ್ವರ ಮಲೆತಿರುವುದನ್ನು ಕಂಡು ಬಲರಾಮ ಸಿಟ್ಟಾಗಿ ಒನಕೆಯಿಂದ ಅವನ ಸೊಂಡಿಲು ದಂತಗಳು ತುಂಡಾಗವಂತೆ ಜಡಿದನು.

ನಿಟ್ಟಿಸಿ ಬಲರಾಮ ಗಜವದನರಿಗೆ ಪೂ
ವಿಟ್ಟಿಯ ಸುರರು ಚೆಲ್ಲಿದರು
ಹುಟ್ಟಿತು ಪರಿತೋಷ ಯಾದವಬಲ ಗುಡಿ
ಗಟ್ಟಿತು ಮೆಯ್ನವಿರ್ಗಳಲಿ ೬೪

ಬಲರಾಮ ಹಾಗೂ ಗಜವದನರ ಅಟಾಟೋಪವನ್ನು ಗಮನಿಸಿದ ದೇವತೆಗಳು ಪೂವಿಟ್ಟಿ(ಪೂವೃಷ್ಟಿ=ಹೂವಿನ ಮಳೆ)ಕರೆದರು. ಸಂತೋಷ ಸಂಜನಿಸಿತು. ಯಾದವ ಬಲ ಮೈನವಿರುದ್ದು ರೋಮಾಂಚನಗೊಂಡಿತು.

ಅತ್ತಳೀಶ್ವರ ಗಣಪತಿಯ ಸಂತೈಸಿದ
ಚಿತ್ತಜಪಿತನಗ್ರಜಗೆ
ಉತ್ತಮ ವಸ್ತ್ರಭೂಷಣ ಮಾಲ್ಯಾತುಲೇಪನವಿ
ತ್ತರು ಪರಮ ಸಂತಸದಲಿ ೬೫

ಆ ಕಡೆ ಈಶ್ವರ ಗಣಪತಿಯನ್ನು ಸಂತೈಸಿದ. ಈ ಕಡೆ ಮನ್ಮಥ ಪಿತನಾದ ಕೃಷ್ಣನ ಅಣ್ಣ ಬಲರಾಮನಿಗೆ ವಸ್ತ್ರಭೂಷಣ ಮಾಲ್ಯಾನುಲೇಪನವಿತ್ತರು ಸಂತಸದಿಂದ.

ವರಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೬

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೩೯. ಪರಮೇಶ್ವರ ಕೃಷ್ಣರ ಕಾಳಗ

ನರಕಾಸುರನ ಮರ್ದಿಸಿ ಹರಿನಾರು ಸಾ
ವಿರ ಕಾಂತೆಯರ ತಂದವನ
ವರ ಕಾರುಣ್ಯದಿ ಕೃತಿವೇಳು ರಸಿಕರ
ಶಿರ ಸಂಪದದ ಸುಗ್ಗಿಯಲಿ ೧

ನರಕಾಸುರನನ್ನು ಕೊಂದು ಅವನ ಹದಿನಾರು ಸಾವಿರ ಮಡದಿಯರನ್ನು ತಂದು ಮದುವೆಯಾದ ಕೃಷ್ಣನ ಕಾರುಣ್ಯದಿಂದ ಕೃತಿ ಹೇಳು, ರಸಿಕರ ಶಿಖರ ಸಂಪತ್ತಿನ ಸುಗ್ಗಿಯಲ್ಲಿ

ನಾರಿ ನಾಮವನಾಂತ ಪೆದೆವಾಸಕೆ ಸಿಕ್ಕಿ
ತೋರಿಯ ಬಿಲ್ವಾಗಿದಂತೆ
ವಾರಿಜಗಂಧಿ ಕೇಳು ನಿನಗಾನೊಳಗಾಗಿ
ಸಾರ ಸತ್ಕೃತಿಯ ವಿಸ್ತರಿಪೆ ೨

'ನಾರಿ' (ಬಿಲ್ಲಿನ ಹೆದೆ, ಸಿಂಜಿನಿ)ಎಂಬ ಹೆಸರನ್ನು ಹೊಂದಿದ ಪೆದೆವಾಸ(ಪೆದೆ+ಪಾಶ=ಬಿಲ್ಲಿನ ಹುರಿ) ಹಿಡಿತಕ್ಕೆ ಸಿಕ್ಕಿದ ದಪ್ಪ ಬಿಲ್ಲಿನ ಕಟ್ಟಿಗೆ ಬಾಗಿದಂತೆ ಹೊಂದಾವರೆ ಸುಗಂಧಿನಿ ಕೇಳು ನಾನು ಹಾಗೆಯೇ ಬಾಗಿ ಸಾರ ಸತ್ಕೃತಿಯನ್ನು ಹೇಳುವೆನು.

ಶಿವಬಲದೊಳಗಿರ್ದು ಪರಿತಂದು ಕಾಲಭೈ
ರವ ಬಲರಾಮನನು ಕಂಡು
ಜವಗಿಡದೆನ್ನೊಳು ಕಡಿದಾಡ ಬಪ್ಪುದೆಂ
ದವಗಡಿಸಿದನಾರ್ಭಟದಿ ೩

ಶಿವನ ಸೈನ್ಯದೊಳಗಿದ್ದ ಕಾಲಭೈರವ ಓಡಿಬಂದು ಬಲರಾಮನನ್ನು ಕಂಡು ವೇಗ ಕುಂದದೆ ನನ್ನೊಡನೆ ಕಾದಾಡಲು ಬರಬೇಕೆಂದು ಅವಸರಿಸಿದನು.

ರಣದೊಳು ಜಯವಧೂಟಿಯ ಮುಂದೆ ನಿನ್ನಯ
ಟೊಣಪೆಯ ಬಿಟ್ಟುಕೊಂಡಿರಲು
ಅಣಕವಾಡುವರಪ್ಸರ ಗಣಿಕೆಯರೆಲೆ
ರಣಭಂಡ ಹೋಗೆಂದು ನುಡಿದ ೪

ರಣರಂಗದಲ್ಲಿ ಜಯವನಿತೆಯ ಮುಂದೆ ಹೀಗೆ ನಿನ್ನ ಟೊಣಪೆ(ದೊಣ್ಣೆ, ಗೂಟ) ಯನ್ನು ಬಿಟ್ಟುಕೊಂಡಿದ್ದರೆ ಅಪ್ಸರ ಸ್ತ್ರೀಯರು ಅಣಕವಾಡುವರು, ಆದ್ದರಿಂದ ಇಲ್ಲಿಂದ ಹೊರಡು ಎಂದ ಬಲರಾಮ

ಜಾನಿಸಿ ನೋಡು ನೀವೆಲ್ಲ ಮಾತೃಕೆಯರ
ಯೋನಿಯೊಳು ಪೊರಮಟ್ಟು ಬರುತ
ಸೂನಿತವಸನದಿಂದೇಕೆ ಬರುವಿರಿ ಅಪ
ಮಾನಗಳ ಹೊಂದುವಿರೆಂದ ೫

ಧ್ಯಾನಿಸಿ ನೋಡಿರಿ, ನೀವೆಲ್ಲ ತಾಯಂದಿರ ಯೋನಿಯಿಂದ ಹೊರಹೊರಟು ಬಂದಾಗ ಸೂನಿತವಸನ(ಹುಟ್ಟು ಬಟ್ಟೆ=ಬೆತ್ತಲೆ) ದಿಂದೇಕೆ ಬರುವಿರಿ? ಅವಮಾನಗಳನ್ನು ಹೊಂದುವಿರಿ ಎಂದ ಕಾಲಭೈರವ

ಜಾಣತನದೊಳಧ್ಯಾತ್ಮ ಪ್ರತಿಬಿಂಬಿತ ನಿ
ರ್ವಾಣ ದೀಕ್ಷೆಯ ಮೋಕ್ಷವನು
ಕಾಣಬೇಕಾಯಿತಾದರೆ ಜಿನ್ನದೇವರ
ಠಾಣಕ್ಕೆ ತಳರೆಂದ ನಗುತ ೬

ಅಧ್ಯಾತ್ಮ ಪ್ರತಿಬಿಂಬಿತ ದಿಗಂಬರ ದೀಕ್ಷೆಯನ್ನು ಪಡೆಯುವ ಉದ್ದೇಶವಿದ್ದರೆ ಜಿನ್ನ(<ಜಿನ) ದೇವರ ಸ್ಥಳಕ್ಕೆ ಹೊರಡು ಎಂದ.

ನೋಡು ಜಿನ್ನ ಶಾಸ್ತ್ರವನು ನಿರ್ಗ್ರಂಥವ
ಮಾಡಿ ತೋರುವೆನೆಂದೆನುತ
ಹೂಡಿ ಹೊಂಬರಹದ ಕೂರ್ಗಣೆಗಳಿಂದ
ತೋಡಿದ ಬಲರಾಮನೆದೆಯ ೭

ಜಿನ್ನ ಶಾಸ್ತ್ರವನ್ನು ನಿರ್ಗಂಥ(ಬೆತ್ತಲೆ, ಕಟ್ಟುಬಿಚ್ಚಿ)ಮಾಡಿ ತೋರುವೆನು ಎನ್ನುತ್ತ ಬಿಲ್ಲಿಗೆ ಬಾಣಗಳನ್ನು ಹೂಡಿ ಬಲರಾಮನೆದೆಯನ್ನು ತೋಡಿದ.

ಎದೆಯೊಳು ತಾಗಿ ಥಟ್ಟುಗಿದುವೆಂದೆನಲಾ
ಹೊದೆಗೋಲುಗಳ ಕತ್ತರಿಸಿ
ಇದನೋಡು ಕಾದುಕೊಳ್ಳೆನುತ ಭೈರವನ
ಭ್ಯುದಯವ ಮುರಿವಂತಿಕ್ಕಿದನು ೮

ಎದೆಗೆ ತಾಕಿ ನಾಟಿಕೊಂಡವು ಎನಲು, ಅಂಥ ಬತ್ತಳಿಕೆಯ ಬಾಣಗಳನ್ನು ಕತ್ತರಿಸಿ ಇದನ್ನು ಕಾದುಕೊ ಎಂದು ಭೈರವನ ಅಭ್ಯುದಯವನ್ನು ಒಕ್ಕುವಂತೆ ಇಕ್ಕಿದನು.

ಉಕ್ಕಿದ ಕಡುಗೋಪದಿ ಕೋಲ್ಗಳ ತಿಕ್ಕಿ
ಮುಕ್ಕಿದ ಮುರಹರಾಗ್ರಜನ
ಟಕ್ಕಿಸಿ ಹೋದಡೆ ಬಿಡೆನೆಂದು ತೆಗೆದುಕೊಂ
ಡಿಕ್ಕಿದನಾ ತ್ರಿಶೂಲದಲಿ ೯

ಉಕ್ಕಿದ ಕೋಪದಲ್ಲಿ ಬಲರಾಮನ ಬಾಣಗಳನ್ನು ತಿಕ್ಕಿ ಮುಕ್ಕಿದನು. ವಂಚಿಸಿ ಹೋದರೆ ಬಿಡೆನು ಎಂದು ತ್ರಿಶೂಲವನ್ನು ತೆಗೆದುಕೊಂಡು ಇಕ್ಕಿದನು.

ಶೂಲ ಬರ್ಪುದ ಕಂಡು ಪರಬಲ ಮಸ್ತಕ
ಶೂಲನ ಶೂಲವನು ತರಿದ
ಶೂಲ ಬಿದಿರಿತು ಕೂರ್ಗಾಯವ ನೋಡೆಂದು
ಕೋಲಿಂದೆಚ್ಚಿ ಬೊಬ್ಬಿರಿದ ೧೦

ಶೂಲ ಬರುವುದುನ್ನು ಕಂಡು ಅನ್ಯಸೈನ್ಯ ಮಸ್ತಕಕ್ಕೆ (ತಲೆಗೆ) ಶೂಲವಾದವನ (ಕಂಟಕನಾದವನ)ಶೂಲವನ್ನು ಬಡಿದನು. ಶೂಲ ಅದುರಿತು. ಹರಿತವಾದ ಗಾಯವನ್ನು ನೋಡೆಂದು ಬಾಣದಿಂದ ಹೊಡೆದು ಬೊಬ್ಬಿರಿದ.

ಕದನ ಚೌಪಟ ಮಲ್ಲ ಖಂಡೆಯದಲಿ ಸಮ
ರಿದ ಸರಲ್ಗಳ ಮೋಹರವ
ಒದವಿದ ಧನುರ್ಬಾಣವ ಬಿಡು ಹಿಡಿ ಹಲಾ
ಯುಧವನೆಂದುಪಚಾರಿಸಿದ ೧೧

ಯುದ್ಧ ಚತುಷ್ಪಥ ಶೂರ ಖಡ್ಗದಿಂದ ಬಾಣ ಸಮೂಹವನ್ನು ಸವರಿದ. ಬಿಲ್ಲಬಾಣವನ್ನು ಬಿಟ್ಟು ನೇಗಿಲನ್ನು ಹಿಡಿ ಎಂದು ಸೂಚಿಸಿದ.

ನುಡಿದ ಗರ್ವವ ಬಿಡಿಸುವನೆಂದು ನೇಗಿಲ
ಹಿಡಿದನುತ್ತರ ಕರಾಗ್ರದಲಿ
ಜಡಿದು ದಕ್ಷಿಣಹಸ್ತದೊನಕೆಯಿಂದಹಿತನ
ಬಡಿದನು ಬಲ ಬೆದರ್ವಂತೆ ೧೨

ನಿನ್ನ ಅಹಂಕಾರವನ್ನು ಇಳಿಸುವೆನೆಂದು ಬಲಗೈಯಲ್ಲಿ ನೇಗಿಲನ್ನು ಹಿಡಿದು, ಎಡಗೈಯಲ್ಲಿ ಇದ್ದ ಒನಕೆಯಿಂದ ಶತ್ರುವನ್ನು ಬಡಿದನು, ಸೈನ್ಯ ಬೆಚ್ಚುವಂತೆ.

ಒಡ್ಡಿದ ಬಲರಾಮನ ಪೆಟ್ಟು ಭೈರವನು
ದೊಡ್ಡಿತೆನುತ್ತ ನಿಷ್ಠುರದಿ
ಎಡ್ಡಿಯ ನುಡಿದು ಕೃಷ್ಣಾಗ್ರಜಾತನ ಮೇಲೆ
ಜಡ್ಡಿದ ಗದೆಯಲಿ ಭೈರವನು ೧೩

ಮುಂದಿಟ್ಟ ಬಲರಾಮನ ಪೆಟ್ಟನ್ನು ಭೈರವ ದೊಡ್ಡದೆಂದು ನಿಷ್ಠುರದಿಂದ ಎಡ್ಡಿಯ (ಪೆಗ್ಗೆಯ)ಮಾತಾಡಿ ಬಲರಾಮನ ಮೇಲೆ ಗದೆಯಿಂದ ಜಡಿದನು.

ಕಳೆದನು ಬಲಭದ್ರರಾಮನು ಗದೆಯೇರ
ಪ್ರಳಯ ಭೈರವನುಪಟಳದ
ಹೊಳೆದು ನೀಲಾಂಬರ ನೇಗಿಲ ಕೊರಲ್ಗಿಕ್ಕಿ
ಸೆಳೆದವರು ಪೊಯ್ದಾಡಿದರು ೧೪

ಪ್ರಳಯ ಭೈರವನ ಉಪಟಳದ ಗದೆಯ ಗಾಯವನ್ನು ಬಲರಾಮ ಕಳೆದನು. ನೀಲಾಂಬರ(ಬಲರಾಮ) ನೇಗಿಲನ್ನು ಅವನ ಕೊರಳಿಗಿಕ್ಕಿ ಸೆಳೆದು ಪರಸ್ಪರ ಹೊಯ್ದಾಡಿದರು.

ಖಣಿಖಟಿ ತಟಿ ನಿಟಿ ನಿಳಿಲೆಂಬ ಶಬ್ದದಿಂ
ಹಣಿದಾಡುವದಟರ ಕಂಡು
ಫಣಿಭೂಷಣಾಚ್ಯುತರು ಮೆಚ್ಚೆ ಪೂಮಳೆ ತಿಂ
ತಿಣಿ ಸುರಿದುದಿರ್ವರ ಮೇಲೆ ೧೫

ಖಣಿಖಟಿ ಎಂಬ ಶಬ್ದದಿಂದ ಹೊಡೆದಾಡುವ ಶೂರರನ್ನು ಕಂಡು ಶೂಲಪಾಣಿ ಚಕ್ರಪಾಣಿಗಳಿಬ್ಬರೂ ಮೆಚ್ಚಿಕೊಳ್ಳಲು, ಇಬ್ಬರ ಮೇಲೂ ಹೂಮಳೆ ರಾಶಿ ಸುರಿಯಿತು.

ಬರಹೇಳು ಭೈರವ ಬಳಲಿದನೆಂದೀ
ಶ್ವರ ಕರೆದನು ರಣರಂಗದಲಿ
ಮೆರೆದ ನೀಲಾಂಬರ ಕಂಠೀರವನಂತೆ
ಪರಬಲ ಗಜಬಜಗೊಂಡಿತು ೧೬

ಭೈರವ ಬಳಲಿದನೆಂದು ಈಶ್ವರ ಬರ ಹೇಳಿದನು. ರಣರಂಗದಲ್ಲಿ ಬಲರಾಮ ಸಿಂಹದಂತೆ ಮೆರೆದನು. ಶತ್ರುಸೈನ್ಯ ಗೊಂದಲಗೊಂಡಿತು.

ಇಷ್ಟು ಪೌರುಷದ ಬೊಬ್ಬೆಯ ಕೇಳ್ದಸುರರು ತ
ಮ್ಮಷ್ಟಕೊಂದಾಗಿ ಯಾದವರ
ಭ್ರಷ್ಟ ಮಾಡದೆ ಬಿಡೆವೆಂದು ತಾಕಿದರು
ನಿಷ್ಟುರ ಶಸ್ತ್ರಾಸ್ತ್ರಗಳಲಿ ೧೭

ಇಷ್ಟೊಂದು ಪೌರುಷದ ಬೊಬ್ಬೆಯನ್ನು ಕೇಳಿದ ಅಸುರರು ಒಂದಾಗಿ ಯಾದವರನ್ನು ಭ್ರಷ್ಟಗೊಳಿಸದೆ ಬಿಡೆವೆಂದು ಶಸ್ತ್ರಾಸ್ತ್ರಗಳ ಸಮೇತ ಮೇಲ್ಬಿದ್ದರು.

ಉರುಬಿದರಮರಾರಿಗಳನೆಚ್ಚು ಯಾದವರು
ತರುಬಿದರು ತಲೆಯಾಂತುಕೊಂಡು
ಮಿರುಗಿದರ್ವಿಬುಧರು ವಿಬುಧರ ತಗುಳ್ದು
ಕರುಬಿದರಖಿಳ ಯಾದವರು ೧೮

ಮೇಲೆಬಿದ್ದ ಅಸುರರನ್ನು ಎಚ್ಚಿ ಯಾದವರು ಅವರನ್ನೆಲ್ಲ ದೂಡಿದರು, ಅವರ ರುಂಡಗಳನ್ನು ಆತುಕೊಂಡು ದೇವತೆಗಳು ಮಿರುಗಿದರು, ದೇವತೆಗಳನ್ನು ಕೂಡಿಕೊಂಡು ಯಾದವರು ಹೊಟ್ಟೆಕಿಚ್ಚು ಪಟ್ಟರು.

ತೆಗಸಿದರಿವರು ಹಿಂದಕ್ಕೆ ಹಿಮ್ಮೆಟ್ಟದೆ
ಹೊಗಿಸಿದರವರು ಸೂಠಿಯಲಿ
ಮಗುಳ್ಚಿದರವರು ಮಚ್ಚರದಿಂದ ಬೆನ್ನಟ್ಟಿ
ನಿಗುಚಿದರಿವರು ನಿಷ್ಠುರದಿ ೧೯

ಇವರು ಹಿಂದಕ್ಕೆ ತೆಗೆಸಿದರೆ, ಅವರು ಹಿಮ್ಮೆಟ್ಟದೆ ಹೊಗಿಸಿದರು (ಪ್ರವೇಶಿಸಿದರು) ವೇಗದಿಂದ. ಅವರು ಹಿಂದಿರುಗಿದರು, ಇವರು ಮಾತ್ಸರ್ಯದಿಂದ ಬೆನ್ನಟ್ಟಿ ಹಿಡಿದು ನಿಗುರಿಸಿದರು(ಸಾಗು ಹುಯ್ದರು)

ಹರಬಲ ಬೆರಗಾಗಿ ನಿಂದಿದೆ ಬಹುನಿಶಾ
ಚರ ಬಲ ನಿಲಗಡೆಗೊಳ್ಳದು
ಸುರಲಲದೊಳು ಸಮರ್ಬರ ಕೂಡೆ ಯಾದವ
ನರಬಲ ಹೊಯ್ದಾಡುತಿರಲು ೨೦

ಶಿವಸೈನ್ಯ ಬೆರಗಿನಿಂದ ನಿಂತಿದೆ. ರಾಕ್ಷಸ ಸೈನ್ಯ ಒಂದು ಕಡೆ ನಿಲ್ಲದು. ದೇವಸೈನ್ಯದ ಸಮರ್ಥರ ಜೊತೆ ಯಾದವ ಮನುಷ್ಯಸೈನ್ಯ ಹೊಯ್ದಾಡುತಿದ್ದಿತು.

ಬಲದೊಳು ಹೊಕ್ಕು ಬಲ್ಲಿದರ ನೆಗ್ಗೊತ್ತಿ ಹಿ
ನ್ನೆಲ ಕಡರ್ಚಿದರು ಸೂಠಿಯಲಿ
ಕಲಹ ಕಾತುರವಿನ್ನೆಂತುಟೊ ವಿಹಗೇಶ
ಹಲಧರ ಬೊಬ್ಬೆ ಎಬ್ಬಿಸಿದರು ೨೧

ಸೈನ್ಯದ ಒಳಹೊಕ್ಕು ಬಲ್ಲಿದರನ್ನು ತಗ್ಗುನೆಗ್ಗುಗೊಳಿಸಿ, ವೇಗದಿಂದ ಹಿಂದಕ್ಕೆ ದೂಡಿದರು. ಕದನ ಕಾತರ ಎಷ್ಟಿದ್ದಿತೋ ಗರುಡ ಬಲರಾಮ ಬೊಬ್ಬೆ ಎಬ್ಬಿಸಿದರು.

ನೆರೆನೊಂದು ನಿರ್ಜರ ಬಲ ಪರಮೇಶನ
ಮರೆಯೊಕ್ಕುದಿವರಿರ್ವರಿಗೆ
ಹೆರೆನೊಸಲಮರಾಂಗನೆಯರು ಹೂಮಳೆ
ಗರೆದರು ರಣರಂಗದೊಳಗೆ ೨೨

ದೇವಬಲ ಪೂರ್ಣ ನೊಂದು ಪರಮೇಶನ ಮೊರೆ ಹೊಕ್ಕಿತು. ಇಬ್ಬರಿಗೂ ಅಮರಾಂಗನೆ ಯರು ಹೂಮಳೆಗರೆದರು.

ಹುಗಲಮ್ಮದಿರುಳು ನಿಟ್ಟಿಸಿದ ಪೆರ್ಬಾವಿಯ
ಪಗಲು ಬಿದ್ದಂತಾದುದೆಮಗೆ
ಖಗರಾಜನೊಳು ಹಿಂದೆ ಕಾದಿ ನುಗ್ಗೆದ್ದವರು
ಜಗಳಕೆ ತೊಡರ್ಚಿಕೊಳಬಹುದೆ ೨೩

ಪ್ರವೇಶಿಸಲು ಧೈರ್ಯವಿಲ್ಲ. ಇರುಳು ನೋಡಿದ ಹೆಬ್ಬಾವಿಗೆ ಹಗಲು ಬಿದ್ದಂತಾದುದು ಎಮಗೆ. ಗರುಡನೊಡನೆ ಹಿಂದೆ ಹೊರಾಡಿ ನುಗ್ಗುಕಗ್ಗಾದವರು ಮತ್ತೆ ಕದನಕ್ಕಿಳಿಯಬಹುದೆ?

ಭೀತಸ್ಥರಾದ  ನಿರ್ಜರರ ಹಿತಕಾಗಿ
ಭೂತೇಶ ತಾನಡ್ಡ ಬಂದು
ಶ್ವೇತೋರಸ್ಥಲ ಬಲರಾಮನ ತೊಲಗಿಸೆಂದು
ಪೀತಾಂಬರಗೆ ಸೂಚಿಸಿದ ೨೪

ಭೀತಸ್ಥರಾದ ದೇವತೆಗಳ ಹಿತಕ್ಕಾಗಿ ಭೂತೇಶ(ಶಿವ) ಅಡ್ಡಬಂದು ಬಲರಾಮನನ್ನು ಇಲ್ಲಿಂದ ತೊಲಗಿಸೆಂದು ಪೀತಾಂಬರನಿಗೆ ಸೂಚಿಸಿದ.

ಭೀಕರ ಮೂರ್ತಿ ಸಿಂಜಿನಿಗೊಳಿಸಿರ್ದ ಪಿ
ನಾಕವ ಜೇವೊಡೆಗೆಯ್ಯಲು
ಆಕಾಶದೆಡೆಯಲ್ಲಿ ಪ್ರತಿಸೂರ್ಯರು ಮೂಡಿ
ಭೂಕಂಪವಾದುದೇನೆಂಬೆ ೨೫

ಭಯಂಕರ ಮೂರ್ತಿ ಸಿಂಜಿನಿ ಸಿದ್ಧಗೊಳಿಸಿದ್ದ ಪಿನಾಕವನ್ನು ಜೇವೊಡೆಗೈದಾಗ ಆಕಾಶದೆಡೆಯಲ್ಲಿ ಪ್ರತಿ ಸೂರ್ಯರು ಮೂಡಿ ಭೂಕಂಪವಾಯಿತು.

ಕಿಡಿಗಣ್ಣನಭಿಮತವಹುದೆಂದು ಶಾರ್ಙ್ಗವ
ಪಿಡಿದೆತ್ತಿ ಸಿಂಜಿನಿಗೊಳಿಸಿ
ನುಡಿಸಿದ ಶ್ರೀಕೃಷ್ಣ ಬ್ರಹ್ಮಾಂಡ ಭಾಂಡಗ
ಳಡಕಿಲು ಹೊಡೆ ಕೆಡೆವಂತೆ ೨೬

ಶಿವನು ಅಭಿಪ್ರಾಯ ಸೂಚಿಸಿದನೆಂದು ತನ್ನ ಶಾರ್ಙ್ಗ(ಬಿಲ್ಲು)ವನ್ನು ಹಿಡಿದೆತ್ತಿ, ಸಿಂಜಿನಿಗೊಳಿಸಿ ಜೇವೊಡೆಯಲು, ಬ್ರಹ್ಮಾಂಡ ಭಾಂಡ (ಪಾತ್ರೆ)ಗಳ ಅಡಕಿಲು(ಒಂದರ ಮೇಲೊಂದು ಪೇರಿಸಿದ ಕ್ರಮ) ಒಂದರ ಮೇಲೊಂದು ಬಿದ್ದವು.

ಕರಚರಣಂಗಳು ಮೂಡಿರ್ದ ಕೈಲಾಸ
ವರ ನೀಲಗಿರಿಯ ಕೀಳ್ಪಡಿಸಿ
ದೊರೆ ಸಾಮರ್ಥ್ಯದೊಳಿರ್ವರು ಕಾತುರದಿಂ
ಹರ ಮುರಧ್ವಂಸಿ ಕಾದಿದರು ೨೭

ರಜತಗಿರಿಗೂ(ಬೆಳ್ಳಗಿರುವ ಕೈಲಾಸಪರ್ವತ ಅರ್ಥಾತ್ ಶಿವ) ನೀಲಗಿರಿಗೂ(ಕಪ್ಪಗಿರುವ ಬೆಟ್ಟ ಅರ್ಥಾತ್ ಕೃಷ್ಣ) ಕೈಕಾಲು ಮೂಡಿದವೊ

ಏನೋ ಎಂಬಂತೆ ಮನ್ಮಥ ಧ್ವಂಸಿ ಹಾಗೂ ಮುರಧ್ವಂಸಿಗಳಿಬ್ಬರೂ ಸಮಾನ ಸಾಮರ್ಥ್ಯದಿಂದ ಕಾದಿದರು.

ಈ ಬಾಣವ ನಿರ್ಣೈಸಿಕೊಂಬಾತನ
ಕಾಬೆನೆಂದೀಶ್ವರ ನುಡಿದು
ಲಾಭದೇಟ ಮುಂಚೆ ತೆಗೆದುಕೊ ಎನ್ನತಬ್ಜ
ನಾಭನನೆಚ್ಚು ಬೊಬ್ಬಿರಿದ ೨೮

ಈ ಬಾಣವನ್ನು ನಿರ್ವಹಿಸುವಾತನನ್ನು ನೋಡುವೆನು ಎಂದು ಈಶ್ವರ, ಲಾಭದೇಟನ್ನು ಮುಂಚೆ ತೆಗೆದುಕೊ ಎಂದು ಕಮಲನಾಭನಿಗೆ ಎಚ್ಚಿ ಬೊಬ್ಬಿರಿದ.

ಶಿವ ನೀನಾದ ಕಾರಣದಿಂದ ಬಂದಾ
ಹವದೊಳು ಬೊಬ್ಬಿಕ್ಕಬಹುದು
ತವ ರಹಸ್ಯವ ಬಲ್ಲೆ ನಾನೆಂದಚ್ಯುತ
ಕವಲಂಬೊಳೆಚ್ಚು ಬೊಬ್ಬಿರಿದ ೨೯

ಶಿವ ನೀನಾದ ಕಾರಣದಿಂದ ಯುದ್ಧರಂಗದಲ್ಲಿ ಬೊಬ್ಬಿಕ್ಕಬಹುದು. ನಿನ್ನ ಗುಟ್ಟನ್ನು ನಾನು ಬಲ್ಲೆ ಎಂದು ಕೃಷ್ಣ ಕವಲುಬಾಣದಿಂದ ಎಚ್ಚಿ ಬೊಬ್ಬಿರಿದ.

ಹರಿ ನೀನಾದ ಕಾರಣದಿಂದ ಪರಮ ತಾ
ತ್ವರಿಯದಿ ನೆಗೆದಾಡಬಹುದು
ತುರಿಹದಿ ಕೈಕೊಳ್ಳೆಂದೀಶ್ವರ ಮುಂದು
ವರಿದೆಚ್ಚನಾಗ ಬಾಣದಲಿ ೩೦

ಹರಿ ನೀನಾದ ಕಾರಣದಿಂದ ಪರಮಾಸಕ್ತಿಯಿಂದ ನೆಗೆದಾಡಬಹುದು. ಬೇಗ ತೆಗೆದುಕೊ ಎಂದು ಈಶ್ವರ ಬಾಣದಿಂದ ಎಚ್ಚಿದ.

ಅಸಮಾಕ್ಷನೆಸುಗೆಯ ಘೋರಾಹಿಬಾಣದ
ವಿಷದ ಕರ್ಬೊಗೆ ಸುತ್ತಿ ಬರಲು
ಜಸವೆತ್ತ ಗರುಡ ಬಾಣದಿ ಕೃಷ್ಣರಾಯ ಖಂ
ಡಿಸಲದು ಬಯಲಾದುದಾಗ ೩೧

ಮುಕ್ಕಣ್ಣ ಪ್ರಯೋಗಿಸಿದ ಸರ್ಪಬಾಣದ ವಿಷದ ಕರಿ ಹೊಗೆ ಸುತ್ತಿಕೊಳ್ಳಲು ಶ್ರೀಕೃಷ್ಣ ಗರುಡ ಬಾಣದಿಂದ ಖಂಡಿಸಿದಾಗ ಅದು ಇಲ್ಲವಾಯಿತು.

ಗತವಾದ ಫಣಿಬಾಣವ ನೋಡುತೀಶ ಪ
ರ್ವತ ಬಾಣದಿಂದಾಗಳೆಸೆಯೆ
ಶತಕೋಟಿ ವಜ್ರಬಾಣದಿಂದಿಕ್ಕಿ ಚೂರ್ಣೀ
ಕೃತವ ಮಾಡಿದ ಕೃಷ್ಣ ನಗುತ ೩೨

ಫಣಿಬಾಣ ನಿಷ್ಫಲವಾದುದನ್ನು ಕಂಡ ಈಶ್ವರ ಪರ್ವತಬಾಣದಿಂದ ಎಚ್ಚಲು, ಕೃಷ್ಣ ವಜ್ರಬಾಣದಿಂದ ಎಚ್ಚಿ ಚೂರುಚೂರು ಮಾಡಿದ.

ಮಾಡದ ಮಾಟವ ಮಾಡಿ ನೀ ಮುನ್ನೊಂದು
ಕೋಡಗವನು ಬೀಳಲೆಚ್ಚಿದ
ಪಾಡನೆನ್ನೊಳು ತೋರಿಸೆಂದು ಕಪರ್ದಿ ನಿ
ವಾಡ ಕೂರ್ಗಣೆಯೊಳಿಕ್ಕಿದನು ೩೩

ಮಾಡದ ಮಾಟವನ್ನು ಮಾಡಿ ನೀನು ಹಿಂದೆ ಕೋಡಗ(ವಾಲಿ)ವನ್ನು ಎಚ್ಚಿ ಬೀಳಿಸಿದ ಹದವಾದ ಪಾಕಸ್ಥಿತಿಯನ್ನು ತೋರಿಸೆಂದು ಶಿವ ನಿವಾಡ(ಅನ್ವೇಷಕ) ಬಾಣದಿಂದಿಕ್ಕಿದನು.

ಇಳೆಯೊಳು ನೀ ಬಲು ಬಲ್ಲಿದ ಮುನ್ನೊಂದು
ಹಳೆಯಾನೆಯ ಮೆಟ್ಟಿ ಸೀಳಿ
ತೊಳೆಯದೆ ತೊವಲವಸ್ತ್ರವನುಟ್ಟ ಧೈರ್ಯವ
ಮೊಳೆದೋರಿಸೆಂದೆಚ್ಚ ನಗುತ ೩೪

ಭೂಮಂಡಲದಲ್ಲಿ ನೀನು ಬಹಳ ಬಲ್ಲಿದ. ಹಿಂದೆ ಒಂದು ಹಳೆಯಾನೆಯನ್ನು ಮೆಟ್ಟಿ ಸೀಳಿ, ತೊಳೆಯದೆ ಅದರ ಕೊಳೆಯ ತೊಗಲನ್ನು ಬಟ್ಟೆಯಂತೆ ಉಟ್ಟುಕೊಂಡ ಧೈರ್ಯವನ್ನು ತೋರಿಸೆಂದು ನಗುತ್ತ ಎಚ್ಚಿದರು.

ಸಂಚಲಿಸದ ಧೀರ ನೀ ಮುಚುಕುಂದನ
ಮಂಚದ ಮರೆಯ ನೀ ಹೊಕ್ಕೆ
ಹಿಂಚಾದುದಾಹವದೊಳು ನಿನ್ನ ಮಾತೆಂದು
ಪಂಚಾಸ್ಯ ನಗುತ ಕೋಲ್ಗರೆದ ೩೫

ಅಲುಗಾಡದ ಧೀರ ನೀನು ಮೂಚುಕುಂದನ ಮಂಚದ ಮರೆಯಲ್ಲಿ ಅಡಗಿದ್ದನ್ನು ಮರೆಯಬೇಡ. ಯುದ್ಧದಲ್ಲಿ ತಡವಾಯಿತು ನಿನ್ನ ಮಾತು ಎಂದು

ಪಂಚಾಸ್ಯ (ಶಿವ) ಬಾಣಪ್ರಯೋಗಿಸಿದ. (ಕೃಷ್ಣನಿಗೆ ಜಾತಕರ್ಮ ನೆರವೇರಿಸಿದವನು ಗರ್ಗಾಚಾರ್ಯ ಎಂಬುವವನು. ಅವನನ್ನು ಕಂಡು ಯಾದವರು ನಗುತ್ತಾರೆ. ಆಗ ಗರ್ಗ ಯಾದವರನ್ನು ಧ್ವಂಸ ಮಾಡುವ ಮಗನನ್ನು ಕೊಡು ಎಂದು ಶಿವನನ್ನು ಪ್ರಾರ್ಥಿಸಿ 'ಕಾಲಯವನ' ಎಂಬ ಮಗನನ್ನು ಪಡೆಯುತ್ತಾನೆ. ಅವನನ್ನು ಕೃಷ್ಣನೂ ಎದುರಿಸಲಾರದೆ ಓಡಿ ಹೋಗಿ 'ಮುಚುಕುಂದ' ರಾಜನಿದ್ದಕಡೆ ಬಚ್ಚಿಟ್ಟುಕೊಳ್ಳುತ್ತಾನೆ. ಮಲಗಿದ್ದ ಮುಚುಕುಂದನನ್ನೆ ಕೃಷ್ಣನೆಂದು ತುಳಿಯುತ್ತಾನೆ. ಕಣ್ಣು ಬಿಟ್ಟ ಮುಚುಕುಂದ ಕಾಲಯವನನ್ನು ಭಸ್ಮೀಕೃತನನ್ನಾಗಿಸುತ್ತಾನೆ. ಆ ಘಟನೆಯಲ್ಲಿರುವ ಕೃಷ್ಣನ ಭೀತಿಯನ್ನು ಎತ್ತಿ ಆಡಿದ್ದಾನೆ ಶಿವ)

ಪರಮೇಶ್ವರ ನೀ ಪರುಕನೆ ಭಸ್ಮಾ
ಸುರನಟ್ಟಿ ಬರಲೋಡಲಿಲ್ಲ
ಧುರದೊಳಗೆನ್ನಪಚಾರಿಸಬಹುದೆ ಎಂದು
ಸರಲಿಂದೆಚ್ಚ ಶಂಕರನ ೩೬

ಪರಮೇಶ್ವರ ನೀನು ಅಶಕ್ತನೆ? ಭಸ್ಮಾಸುರ ಹೆದರಲಿಲ್ಲ. ಯುದ್ಧದಲ್ಲಿ ನನ್ನನ್ನು ಆಗೌರವಿಸಬಹುದೆ?ಎಂದು ಬಾಣದಿಂದ ಶಂಕರನನ್ನು ಎಚ್ಚಿದನು.

ಧರೆಯೊಳು ನಿನ್ನ ಹೋಲುವರುಂಟೆ ಕಣ್ಣಿಗೆ
ಹೆರೆ ಕವಿದುರುಗನ ತುಳಿದ
ದೊರೆತನದೇಳ್ಗೆಯ ತೋರೆಂದು ಧೂರ್ಜಟಿ
ಶರತತಿಯಿಂದಲಿಕ್ಕಿದನು ೩೭

ಭೂಮಂಡಲದಲ್ಲಿ ನಿನ್ನ ಹೋಲುವವರುಂಟೆ? ಕಣ್ಣಿಗೆ ಹೆರೆ(ಪೊರೆ) ಕವಿದು ಹಾವನ್ನು ತುಳಿದ ನಿನ್ನ ದೊರೆತನದ ದೌಲತ್ತನ್ನು ತೋರೆಂದು ಶಿವನು ಬಾಣದಲ್ಲಿಕ್ಕಿದನು.

ಮಾಣದೆ ಮಗುಳೊಮ್ಮೆ ರಣರಂಗದೊಳಗೆ ಕ
ಣ್ಗಾಣದ ಖಲನ ಮರ್ದಿಸಿದ
ತ್ರಾಣವನೆನ್ನೊಳು ತೋರೆಂದು ತೋರಿಯ
ಬಾಣದೊಳೆಚ್ಚನೀಶ್ವರನ ೩೮

ರಣರಂಗದಲ್ಲಿ ಹಿಂದೊಮ್ಮೆ ಕಣ್ಣು ಕಾಣದ ರಕ್ಕಸನನ್ನು ಕೊಂದ ತ್ರಾಣವನ್ನು ನನಗೆ ತೋರೆಂದು ದೊಡ್ಡ ಬಾಣದಿಂದ ಎಚ್ಚಿದನು.

ನೆರೆದ ನಿರ್ಜರ ದೈತ್ಯರ ಮುಂದೆ ಕೃಷ್ಣ ನಿ
ಷ್ಠುರ ವಾಕ್ಯ ನಿನಗೇಕೆನುತ
ಪಿರಿದು ಕೋಪಾಟೋಪದಿಂದ ಮಹೇಶ್ವರ
ಜ್ವರ ಬಾಣದಿಂದಲಿಕ್ಕಿದನು ೩೯

ಸೇರಿದ ದೇವತೆಗಳು ರಾಕ್ಷಸರ ಸಮಕ್ಷಮದಲ್ಲಿ ನಿಷ್ಠುರ ಮಾತನ್ನೇಕೆ ಆಡುತ್ತೀಯೆ ಕೃಷ್ಣ? ಎಂದು ಶಿವ ಕೋಪಾಟೋಪದಿಂದ ಜ್ವರಬಾಣದಿಂದಿಕ್ಕಿದನು.

ಹರನೆಚ್ಚಬಾಣ ಬರ್ಪುದ ಕಂಡು ಶೀತ
ಜ್ವರ ಬಾಣವ ಕೃಷ್ಣ ಬಿಡಲು
ವರ ವೈಷ್ಣವ ಶೈವಾಸ್ತ್ರ ತದ್ಗಗನಾಂ
ತರದಲ್ಲಿ ಕಡಿದಾಡಿದುವು ೪೦

ಶಿವ ಎಚ್ಚಿದ ಜ್ವರ ಬಾಣ ಬರುವುದನ್ನು ಕಂಡ ಕೃಷ್ಣ ಶೀತಜ್ವರ ಬಾಣವನ್ನು ಬಿಡಲು, ವೈಷ್ಣವ ಶೈವಾಸ್ತ್ರಗಳು ಗಗನಾಂತರದಲ್ಲಿ ಕಡಿದಾಡಿದವು.

ಹುಡಿಯಾಗಲುರ್ವಿ ಪರ್ವತ ಸಪ್ತಶರಧಿಗ
ಳಡಿ ಮೇಲಾಗಲು ನಕ್ಷತ್ರ
ಮುಡಿಯಲರುಗಳಂತೆ ಸುರಿಯೆ ಮಹೇಶ್ವರ
ಹಿಡಿದನು ವರ ತ್ರಿಶೂಲವನು ೪೧

ಭೂಮಿ ಪುಡಿಪುಡಿಯಾಗಲು, ಪರ್ವತಗಳು ಸಪ್ತಸಾಗರಗಳು ತಲೆಕೆಳಗಾಗಲು, ಚುಕ್ಕಿಗಳು ಮುಡಿಯ ಹೂವಿನಂತೆ ಉದುರಲು, ಶಿವ ತ್ರಿಶೂಲವನ್ನು ಹಿಡಿದನು.

ಶೂಲಪಾಣಿಯ ನಿಟ್ಟಿಸಿ ಕೃಷ್ಣರಿಪು ಪ್ರತಿ
ಕೂಲ ಪಾರುಂಬಳೆವಿಡಿಯೆ
ಮೂಲೋಕ ತಿರ್ರನೆ ತಿರುಗುತಿರ್ದುದು ಕು
ಲಾಲ ಚಕ್ರಾಕೃತಿವಡೆದು ೪೨

ಅದನ್ನು ನೋಡಿ ಕೃಷ್ಣ ಪಾರುಂಬಳೆ(ಚಕ್ರಾಯುಧ)ಯನ್ನು ಹಿಡಿಯಲು ಮೂರುಲೋಕ ಕುಂಬಾರನ ಚಕ್ರದಂತೆ ತಿರ್ರನೆ ತಿರುಗತೊಡಗಿತು.

ಶಿವ ತ್ರಿಶೂಲದೊಳಿಡಲುಳಿದವರಿಲ್ಲ ಕೇ
ಶವ ಚಕ್ರವಾರ ಲೆಕ್ಕಿಸದು
ಹವಣಲ್ಲ ನಿಲ್ಲು ನಿಲ್ಲೆನುತಿರ್ವರಿಗೆ ಸ
ತ್ಯವ ಪೇಳ್ದುದಾಕಾಶ ವಾಣಿ ೪೩

ಶಿವ ತ್ರಿಶೂಲದಿಂದ ಪ್ರಹರಿಸಿದರೆ ಉಳಿದವರಿಲ್ಲ, ಕೃಷ್ಣನ ಚಕ್ರ ಯಾರನ್ನೂ ಲೆಕ್ಕಿಸದು. ಆದ್ದರಿಂದ ನಿಲ್ಲಿ ನಿಲ್ಲಿ ಎಂದು ಇಬ್ಬರಿಗೂ ಆಕಾಶವಾಣಿ ಸತ್ಯವನ್ನು ಹೇಳಿತು.

ಮೊಳಗುವ ದೇವದುಂದುಭಿ ನಭಸ್ತಳದಲಿ
ಬೆಳಗುವ ಮಂಗಳಾರ್ತಿಗಳ
ಮೊಳಗುವ ಮಂದಾರ ಮಾಲೆಯ ಮಹದಾದಿ
ಮಳೆಗಳ ಕರೆದರಿರ್ವರಿಗೆ ೪೪

ಮೊಳಗುವ ದೇವದುಂದುಭಿ, ಬೆಳಗುವ ಮಂಗಳಾರತಿಗಳು, ತೊಳಗುವ ಮಂದಾರ ಪುಷ್ಪಮಾಲೆಯ ಮಳೆಗರೆದರು ಇಬ್ಬರಿಗೂ

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೪೫

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯ ಚಂದ್ರರಿರುವವರೆಗೂ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

## ೪೦. ಶ್ರೀ ಕೃಷ್ಣ ಬಾಣಾಸುರರ ಕಾಳಗ

ಚಂದನವಿತ್ತ ಮೂ ಹೊರಡೆಯ ತನುವ ನೇ
ರಂದವ ಮಾಡಿ ತೋರಿಸಿದ
ವೃಂದಾವನ ತಾತ್ಪರ್ಯನ ಕಾರುಣ್ಯ
ದಿಂದ ವಿಸ್ತರಿಸು ಮೇಲ್ಗತೆಯ ೧

ಚಂದನದ ಮೂರುಡೊಂಕಿನ ತನುವನ್ನು ನೆಟ್ಟಗೆ ಮಾಡಿ ತೋರಿಸಿದ ವೃಂದಾವನ ಸಾರಾಂಶನ ಕಾರುಣ್ಯದಿಂದ ಮೇಲಾದ(ಉತ್ತಮವಾದ)ಕಥೆಯನ್ನು ಬಿತ್ತರಿಸು.

ಆಪಾರಗುಣಪೂರಿತೆ ಸತ್ಕಮನೀಯ
ರೂಪಸ್ಥೆ ಲಾಲಿಸು ನಿನ್ನ
ತಾಪತ್ರಯವ ನಿವಾರಿಪ ರಮೆಯ ಪ್ರಾ
ಣೋಪನ ಕೃತಿಯ ವಿಸ್ತರಿಪೆ ೨

ಅಪಾರ ಗುಣವಂತೆ, ಮನೋಹರ ರೂಪವಂತೆ ಕೇಳು ನಿನ್ನ ತಾಪತ್ರಯ (ಆದಿ ದೈವಿಕ, ಆದಿ ಭೌತಿಕ ಮತ್ತು ಆಧ್ಯಾತ್ಮಿಕ ಕಷ್ಟಗಳು)ಗಳನ್ನು ನಿವಾರಿಸುವ ಲಕ್ಷ್ಮೀಕಾಂತನ ಕಥೆಯನ್ನು ಬಿತ್ತರಿಸುವೆನು.

ಅತುಳ ಬಲಾಡ್ಯ ಕೃಷ್ಣನ ಕೂಡೆ ಕಂದರ್ಪ
ಜಿತು ದೇವ ಬಲಗೂಡಿ ಕಾದಿ
ಸತುಗೆಟ್ಟ ತೆರದಿ ಕೌಳಿಕವಾಂತು ತನ್ನಯ
ಋತುಪರ್ಣವನವ ಸಾರಿದನು ೩

ಕೃಷ್ಣನ ಜೊತೆ ಶಿವ ಬಲಸಹಿತ ಹೋರಾಡಿ ಸುಸ್ತಾದವನಂತೆ ವಂಚನೆಯ ಮುಸುಕು ಹಾಕಿಕೊಂಡು ಋತು ಪರ್ಣ ವನವನ್ನು ಸೇರಿದನು.

ಪುಲಿಚರ್ಮದುಡುಗೆಯ ತೆಗೆದನೆಂಬುದ ಕೇಳಿ
ಬಲಿಸುತ ಶಿವಪೂಜೆಗೆಯ್ದು
ವಿಲಸಿತ ರತ್ನ ಭೂಷಿತನಾಗಿ ಹೊರವಟ್ಟ
ಕಲಿಗಳರಸ ಕಾಳೆಗಕೆ ೪

ಹುಲಿಚರ್ಮದ ಉಡುಗೊರೆಯನ್ನು ತೆಗೆದ ಎಂಬ ಸುದ್ದಿಯನ್ನು ಕೇಳಿ, ಬಾಣಾಸುರ ಶಿವಪೂಜೆ ಮಾಡಿ ರತ್ನಭೂಷಿತನಾಗಿ ಯುದ್ಧಕ್ಕೆ ಹೊರಟ.

ತರಣಿಯ ತೇರತೇಜಿಯ ಹೀಗಳೆವ ಸಾ
ಸಿರ ಘೋಟಕಾನ್ವಿತ ರಥವ
ಭರವಸದಿಂದೇರಿ ತೆರಳಿದ ಶೋಣಿತ
ಪುರಪತಿ ವಾದ್ಯಘೋಷದಲಿ ೫

ಸೂರ್ಯ ರಥದ ಏಳು ಕುದುರೆಗಳನ್ನು ಹೀಗಳೆವಂತೆ ಸಾಸಿರ ಕುದುರೆಗಳ ರಥವನ್ನು ಏರಿ ಬಾಣಾಸುರ ವಾದ್ಯ ಘೋಷದೊಡನೆ ಬವರಕ್ಕೆ ತೆರಳಿದನು.

ತುಳಿದರೆ ಭೂಮಿ ನೆಗ್ಗುವ ದಂತಿ ಹೊಸವಜ್ರ
ಹಳಿವೆತ್ತ ರಥವಾಜಿ ನಿಚಯ
ಹೊಳೆವ ಕೂರಸಿ ಪೊಂಬಲಗೆಯ ಭಟರು ಸಂ
ದಳಿಸಿದರು ಖಳರಾಯನೊಡನೆ ೬

ತುಳಿದರೆ ಭೂಮಿ ನಜ್ಜುಗುಜ್ಜಾಗುವ ಆನೆಗಳು, ವಜ್ರದ ಕಂಬಿಯುಳ್ಳ ರಥ, ಕುದುರೆ ಸಮೂಹ, ಹೊಳೆವ ಹರಿತವಾದ ಕತ್ತಿಯ ಹಾಗೂ ಗುರಾಣಿಯ ಭಟರು ಖಳರಾಯನೊಡನೆ ಸಂದಣಿಸಿದರು.

ವಾರಿಧಿ ಸಪ್ತಕುಲಾಚಲ ಕೂಡಿದುವು
ಸೋರಿತು ಶೋಣಿತ ವರ್ಷ
ತಾರಕಿಗಳು ಹಗಲುರುಳಿದವು ದೈತ್ಯನ ರಣ
ಭೇರಿಯ ನಿಷ್ಠುರ ರವಕೆ ೭

ಸಮುದ್ರ ಸಪ್ತ ಕುಲಪರ್ವತಗಳು ಕೂಡಿದವು, ರಕ್ತದ ಮಳೆ ಸುರಿಯಿತು, ರಕ್ಕಸನ ರಣಭೇರಿಯ ನಿಷ್ಠುರ ಶಬ್ದ ರಭಸಕ್ಕೆ ಹಗಲು ಹೊತ್ತೆ ನಕ್ಷತ್ರಗಳು ಉದುರಿದವು.

ಮೂಡಿತು ಪ್ರತಿಸೂರ್ಯ ಧೂಲಕೇತುಗಳೋ
ಡಾಡಿದುವು ಗಗನಾಂತರದಿ
ಬಾಡಿತು ಜಯವಧೂಟಿಯ ಮುಖ ದೈತ್ಯನ
ಕೇಡಿಂಗೆ ತೋರಿತುತ್ಪಾತ ೮

ಪ್ರತಿಸೂರ್ಯ ಉದಿಸಿತು, ಗಗನಾಂತರದಲ್ಲಿ ಧೂಮಕೇತುಗಳು ಓಡಾಡಿದವು. ಜಯಲಕ್ಷ್ಮಿಯ ಮುಖ ಬಾಡಿತು, ರಕ್ಕಸನ ಕೇಡಿಗೆ ಉತ್ಪಾತ ತೋರಿತು.

ಅವಶಕುನಂಗಳ ನೋಡಿ ಹಿಮ್ಮೆಟ್ಟದೆ
ಶಿವಭಕುತಿಯ ಹೆಮ್ಮೆಯಲಿ
ಜವದಿಂದ ಪರಿತಹ ದೈತ್ಯನ ಸೇನಾ
ನಿವಹವನೇನ ಬಣ್ಣಿಪೆನು ೯

ಅಪಶಕುನಗಳನ್ನು ನೋಡಿ ಲೆಕ್ಕಿಸದೆ ಶಿವಭಕ್ತಿಯ ಹೆಮ್ಮೆಯಿಂದ ವಾಯು ವೇಗದಿಂದ ಹರಿದು ಬರುವ ರಕ್ಕಸನ ಸೈನ್ಯಸಮೂಹವನ್ನು ಬಣ್ಣಿಸುವ ಬಗೆ ಎಂತು?

ಹೊದರೆದ್ದ ಸಿಂಧ ಸೀಗುರಿ ರೆಂಚೆ ಬಿಗಿವಡೆ
ದೊದರುವ ಗಂಟೆಯ ರವದಲಿ
ಮದಗಜ ನೀಲಾದ್ರಿ ನಿಚಯದಿ ಪರಿತಪ್ಪ
ಪದ ಘಾತ ನೆಲನ ನೆಗ್ಗಿಸಿತು ೧೦

ಪೊದೆಯಂತೆ ಮೇಲೆದ್ದ ಬಾವುಟ, ಚಾಮರ, ರೆಂಚೆ(ಆನೆಕುದುರೆಗಳ ಪಕ್ಕದ ರಕ್ಷೆಗಾಗಿ ಹಾಕಿರುವ ಹಕ್ಕರಿಕೆ) ಬಿಗಿಯಾಗಿ ಕಟ್ಟಿದ ಗಂಟೆಯ ಶಬ್ದದಲ್ಲಿ ನೀಲಾದ್ರಿ ನಿಚಯದ ರೂಪದಲ್ಲಿ ಹರಿದು ಬರುವ ಮದಗಜಗಳ ಪದಘಾತ ನೆಲವನ್ನು ನೆಗ್ಗಿತು, ತಗ್ಗು ಬೀಳಿಸಿತು.

ಮಸೆದ ಸೂನಿಗೆಯಾಂತ ಕರಿಯ ಕಪೋಲದಿ
ಬಿಸಿಯ ಮದೋದಕ ಸುರಿದು
ಕೆಸರಾದುದುರ್ವಿಯ ದಂತಿಘಟೆಯ ಲೆ
ಕ್ಕಿಸಲೊರ್ವ ಗಣಿತಜ್ಞಗಳವೆ ೧೧

ಮಸೆದ ಸೂನಿಗೆ (ಆಯುಧ ವಿಶೇಷ) ಹೊಂದಿದ ಆನೆಯ ಕಪೋಲದಲ್ಲಿ ಬಿಸಿ ಮದೋದಕ ಸುರಿದು ನೆಲ ಕೆಸರಾಯಿತು. ಆನೆಗಳ ಸಮೂಹವನ್ನು ಲೆಕ್ಕ ಹಾಕುವುದು ಒಬ್ಬ ಗಣಿತಜ್ಞನಿಗೆ ಸಾಧ್ಯವೆ?

ಖುರಪುಟ ತಾಳ ತಾಡನದಿಂದಲಿ ಮಿಗೆ
ಯುರವಣಿಸುವ ತೀವ್ರಗತಿಯ
ತುರಗಾರೋಹ ವಾಹಕ ಸೈನ್ಯ ಪ್ರಳಯ ಸಾ
ಗರವೆನಲೊಳಕೊಂಡುದಿಳೆಯ ೧೨

ಗೊರಸುಗಳ ತಾಳ ಸಂಘಟ್ಟಣೆಯಿಂದ(ತಾಡನದಿಂದ)ಉತ್ಸಾಹಭರಿತವಾದ ತೀವ್ರಗತಿಯ ಅಶ್ವಾರೋಹ ರಾವುತರ ಸೈನ್ಯ ಪ್ರಳಯ ಸಾಗರವೆಂಬಂತೆ ಭೂಮಿಯನ್ನು ಒಳಗೊಂಡಿತು.

ಗಜರಥಗಳ ಮೇಲೆ ಗಗನವ ತುಡುಕುವ
ಧ್ವಜ ಪಟ ಛತ್ರ ಚಾಮರದಿ
ನಿಜವೈಭವದ ನಿಶಾಚರ ನಿಖಿಳ ಭೂ
ಭುಜರೈದರು ಬಾಣನೊಡನೆ ೧೩

ಆನೆ ಹಾಗೂ ರಥಗಳ ಮೇಲೆ ಮುಗಿಲು ಮುಟ್ಟುವ ಧ್ವಜ, ಛತ್ರಿ, ಚಾಮರಗಳ ವೈಭವದ ಸಕಲ ರಕ್ಕಸ ರಾಜರು ಬಾಣನೊಡನೆ ಬಂದರು.

ಕಡೆಯ ಪೆಂಡೆಯ ಗೆಜ್ಜೆ ಕಣಕಾಲ ಬಾಸಿಂಗ
ಉಡಿಯ ಕಿಗ್ಗಟ್ಟಿನ ಕಠಾರಿ
ಬಿಡೆಯವಿಲ್ಲದೆ ಪೊಲಗೆಟ್ಟ ಬಿಲ್ಲಾಳ
ಪಡೆ ನಡೆಯಿತು ಬಾಣನೊಡನೆ ೧೪

ಕಡೆಯ(ಕಂಕಣ), ಪೆಂಡೆಯ(ಕಾಲಂದುಗೆ), ಕಣಕಾಲ ಬಾಸಿಂಗ(ಕುಚ್ಚು), ಸೊಂಟದ ಕೆಳಗೆ ನೇತಾಡುವ ಕಠಾರಿ, ಸಂಕೋಚವಿಲ್ಲದೆ ಕ್ರಮ ತಪ್ಪಿದ ಬಿಲ್ಲಾಳ ಸೈನ್ಯ ಬಾಣನೊಡನೆ ನಡೆಯಿತು.

ಕಕ್ಕಡ ಕಡಿತಲೆ ಪಟ್ಟೆಯ ವಂಕುಡಿ ವಿಡಿ
ದೊಕ್ಕಯ್ಯ ಪಲಗೆ ಪೆರ್ಬಡಿಗೆ
ಎಕ್ಕಟಿಗರ ಮೇಲೆ ಚಿಮ್ಮುವ ಚಮರವ
ಲೆಕ್ಕವನು ಮಾಳ್ಪರದಾರು ೧೫

ಕಕ್ಕಡ ಕಡಿತಲೆ (ದೊಡ್ಡ ಕತ್ತಿ), ಪಟ್ಟೆಯ(ಉದ್ದವಾದ ಕತ್ತಿ), ವಂಕುಡಿ(ಕಠಾರಿ), ಒಂದು ಕೈಯ ಪಲಗೆ(ಗುರಾಣಿ), ಪೆರ್ಬಡಿಗೆ(ದಘೂತಿ ದೊಣ್ಣೆ), ಎಕ್ಕಟಿಗರ(ಗೂಢಚರರ) ಮೇಲೆ ಚಿಮ್ಮುವ ಚಾಮರಗಳ ಲೆಕ್ಕವನ್ನು ಮಾಡುವವರಾರು?

ಕವಿದರು ಮುಂಚೂಣಿಯ ಭಟರ್ಕಳು ಹೊಕ್ಕು
ತಿವಿದರು ಪರಬಲದೊಳಗೆ
ಅವಿದರು ಮುರಿದಿಕ್ಕಿ ನೂಂಕಿದರು ಸೂಠಿಯ
ಲಿವದಿರು ನೆರೆ ತರುಬಿದರು ೧೬

ಮುಂದುಗಡೆಯ ಸೈನ್ಯದ ಸೈನಿಕರು ಕವಿದರು, ಒಳಕ್ಕೆ ನುಗ್ಗಿ ತಿವಿದರು, ಶತ್ರುಸೈನ್ಯದೊಳಗೆ ಅವಿತುಕೊಂಡರು, ಭಂಗಗೊಳಿಸಿ ನೂಂಕಿದರು, ಇವರು ಶರವೇಗದಿಂದ ಅವರನ್ನು ತರುಬಿದರು.

ಮನ್ನೆಯ ಮಕುಟವರ್ಧನರೆಡ ಬಲದಲಿ
ಸನ್ನೆಯ ರಣಭೇರಿ ಮೊಳಗೆ
ಪನ್ನಗಧರ ಭೃತ್ಯನಿದಿರ್ಗೊಂಡ ಕ್ಷೀರಾಬ್ಧಿ
ಕನ್ನೆಯ ವರನೊಳಿಂತೆಂದ ೧೭

ಮಾನ್ಯ ಭೂಭುಜರು ಎಡಬಲದಲ್ಲಿ ಸಂಜ್ಞೆಯ ರಣಭೇರಿ ಮೊಳಗಲು, ಶಿವಭಕ್ತ ಬಾಣ ಎದುರುಗೊಂಡ ಲಕ್ಷ್ಮೀಕಾಂತ ಕೃಷ್ಣನಿಗೆ ಹೀಗೆ ಹೇಳಿದ

ಗೆದ್ದೆಯ ಗೊರವನೊಳು ಕಡಿದಾಡಿ ಪೊಗರುವೆ
ತ್ತಿದ್ದೆಯಾ ರಣರಂಗದೊಳಗೆ
ಬಿದ್ದೆಯ ನನ್ನ ಬಾಧೆಗೆ ಕೃಷ್ಣ ಕರೆ ನಿನ್ನ
ದೊದ್ದೆಯ ನಿಲಲೊಬ್ಬಗರಿದು ೧೮

ಕಾದಾಡಿ ಈಶ್ವರನೊಡನೆ ಗೆದ್ದೆಯಾ? ರಣರಂಗದಲ್ಲಿ ಪೊಗರು ಮೆರೆದೆಯಾ? ಈಗ ನನ್ನ ಬಾಧೆಗೆ ಬಿದ್ದೆಯೊ? ಕೃಷ್ಣ ನಿನ್ನ ಸೈನ್ಯ ಸಮೂಹವನ್ನು ಕರೆ, ನನ್ನೆದುರು ನಿಲ್ಲಲು ಯಾರೊಬ್ಬರಿಗೂ ಅಸಾಧ್ಯ.

ಬೀರವ ಬಿಸುಟು ಕಾಳೆಗಕಂಜಿ ಕಂಗೆಟ್ಟು
ನೀರೊಳು ಪೊಕ್ಕ ರಕ್ಕಸನ
ಘೋರಾಕೃತಿವೆತ್ತು ಮೀನಾಗಿ ಮಡುಹಿದ
ತೋರಹತ್ತವ ತೋರೆನ್ನೊಡನೆ ೧೯

ಶೌರ್ಯವನ್ನು ಬಿಸಾಡಿ, ಯುದ್ಧಕ್ಕೆ ಅಂಜಿ ಕಂಗೆಟ್ಟು, ಸಮುದ್ರದಲ್ಲಿ ಮುಳುಗಿದ ರಕ್ಕಸನ ಮೀನಾಗಿ ಸಂಹರಿಸಿದ ನಿನ್ನ ದೊಡ್ಡ ಕೈವಾಡವನ್ನು ನನ್ನೆದುರು ತೋರು.

ಜಗದೊಳಗೆ ಸುರಾಸುರರೊಂದುಗೂಡಿ ಪ
ನ್ನಗ ನೇಣಿನಿಂದ ಪಾಲ್ಗಡಲ
ನಗವಿಟ್ಟು ಕಡೆದೊಡೆ ಮುಳುಗಿದೊಡದ ಹೊತ್ತು
ನೆಗಹಿದ ಬಲುಹ ತೋರೆನಗೆ ೨೦

ಜಗತಿನಲ್ಲಿ ಸುರಾಸುರರು ಒಂದುಗೂಡಿ, ಮಂದರ ಪರ್ವತವನ್ನೇ ಕಡೆಗೋಲನ್ನಾಗಿ ಮಾಡಿ, ಆದಿಶೇಷನನ್ನೆ ಹಗ್ಗವನ್ನಾಗಿ ಮಾಡಿ ಕಡೆಯತೊಡಗಿದಾಗ ಮುಳುಗತೊಡಗಿದ ಪರ್ವತವನ್ನು ಹೊತ್ತ ಕೂರ್ಮಾವತಾರದ(ಆಮೆ) ಶಕ್ತಿಯನ್ನು ನನ್ನೆದುರು ತೋರು.

ನಿಂದಿಸಲೇಕೆ ಭೂತಸ್ಕರನೊಳು ಕಾಡ
ಹಂದಿಯ ರೂಪಾಂತು ನೀನು
ಅಂದಿನ ದಿನದೊಳಾತನ ಕೊಂದ ಧೈರ್ಯವ
ನಿಂದು ತೋರಿಸು ನನ್ನೊಡನೆ ೨೧

ಭೂಮಿಯನ್ನು ಕದ್ದವನನ್ನು ಕಾಡು ಹಂದಿಯ ರೂಪಾಂತು ಅವನನ್ನು ಕೊಂದ ನಿನ್ನ ಧೈರ್ಯವನ್ನು ನನ್ನೊಡನೆ ತೋರು.

ಮಿಗವಲ್ಲ ಮಾನಸ ರೂಪಲ್ಲ ಕೇಸರಿ
ಮೊಗದಿ ತೆರೆವಾಯ ಪಲ್ಗಿರಿದು
ನಖದಿಂದಲಹಿತನ ಗುಂಡಿಗೆ ಸೀಳಿದ
ಪ್ರಕಟಿತ ಬಲುಹ ತೋರೆನಗೆ ೨೨

ಮೃಗವಲ್ಲ, ಮನುಷ್ಯನಲ್ಲ, ಸಿಂಹದ ಮುಖದಲ್ಲಿ ಬಾಯಿತೆರೆದು, ಹಲ್ಲುಕಿರಿದು, ಹಿರಣ್ಯಕಷ್ಯಪನ ಗುಂಡಿಗೆಯನ್ನು ಉಗುರಿನಿಂದ ಸೀಳಿದ ನಿನ್ನ ಪ್ರತಾಪವನ್ನು ನನ್ನೊಡನೆ ತೋರು.

ನೋಡಿದೊಡೆಂಟು ಗೇಣೊಡಲ ಚೋಟುದ್ದವ
ಮಾಡಿ ಮತ್ಪಿತನಲ್ಲಿ ತಿರಿದು
ಪೀಡಿಸಿ ನೆಲನ ತೆಕ್ಕೊಂಡ ಲೆಕ್ಕವ ಕೊಡ
ದೋಡಿದರೆ ಬೆನ್ನ ಬಿಡೆ ಕೃಷ್ಣ ೨೩

ಎಂಟುಗೇಣಿನ ದೇಹವನ್ನು ಚೋಟ್ಟುದ್ದ ಮಾಡಿಕೊಂಡು ನನ್ನ ತಂದೆಯ ಬಳಿ ಬೇಡಿ ನೆಲವನ್ನು ಲಪಟಾಯಿಸಿದ ಲೆಕ್ಕವನ್ನು ಕೊಡದಿದ್ದರೆ ನಿನ್ನನ್ನು ಬಿಡುವುದಿಲ್ಲ ಕೃಷ್ಣ.

ಕೇಳಬಾರದ ಬೊಮ್ಮೇತಿಯ ನೆಗಳ್ದ ಹೇ
ರಾಳ ಪಾತಕ ಭೂಭುಜನ
ತೋಳಡವಿಯ ತರಿದೊಟ್ಟಿದೆಲ್ಲಾ ಮಂದಿ
ವಾಳವ ತೋರು ನನ್ನೊಡನೆ ೨೪

ಜಮದಗ್ನಿಯ ಆಶ್ರಮದಲ್ಲಿ ಹಸುಕರುವನ್ನು ಬೇರ್ಪಡಿಸಿ ಮಾಡಬಾರದ ಪಾತಕವನ್ನು ಮಾಡಿ ಹೋದ ಕಾರ್ತವೀರ್ಯಾರ್ಜುನನ ಸಾವಿರ ತೋಳನ್ನು ಕಡಿದ ಪರಶುರಾಮಾವತಾರದ ಕೊಡಲಿ ಪ್ರತಾಪವನ್ನು ನನ್ನೊಡನೆ ತೋರು.

ಖಳರಾಯನನುಜ ವಿಭೀಷಣ ಬಂದು ನಿನ
ಗೊಳಗುಟ್ಟು ತಿಳುಪಿದ ಕಾರಣದಿ
ಅಳವರಿದವನ ಮರ್ದಿಸಿದೆಯಲ್ಲದೆ ನಿನ್ನ
ದಳವಾಡವೇನು ನೀನೇನು ೨೫

ರಾವಣನ ತಮ್ಮ ವಿಭೀಷಣ ಬಂದು ನಿನಗೆ ಒಳಗುಟ್ಟು ತಿಳಿಸಿದ್ದರಿಂದ ರಾವಣನನ್ನು ಸಂಹರಿಸಿದೆಯಲ್ಲದೆ ನಿನ್ನ ದಳವಾಡ(ಸೈನ್ಯ ಸಮೂಹದ ಕೈವಾಡ)ವೇನು ಹೇಳು.

ಸಲೆ ಬಾಹುಬಲ್ಲಿದ ನಿನ್ನ ವಿಕ್ರಮದೇಳ್ಗೆ
ಬೆಲೆಗಟ್ಟಬಲವರಾರು
ಮೊಲೆವಾಲನುಣಿಸಿದಾಯಕನ ಪ್ರಾಣದೆಗೆದ
ಕೊಲೆಗೇಡಿ ಬಲುಹ ತೋರೆನಗೆ ೨೬

ಬಾಹುಬಲ್ಲಿದನಾದ ನಿನ್ನ ಪರಾಕ್ರಮದೇಳಿಗೆಯನ್ನು ಬೆಲೆಗಟ್ಟಬಲ್ಲವರು ಯಾರು? ಮೊಲೆ ಕುಡಿಸಿದ ಪೂತನಿಯ ಪ್ರಾಣತೆಗೆದ ಕೊಲೆ ಪಾತಕಿ ನನ್ನೊಡನೆ ನಿನ್ನ ಬಲುಹನ್ನು ತೋರಿಸು.

ಕೊಂದವರುಂಟೆ ಮಾತುಲನ ತಂದೆಗೆ ಬಿಟ್ಟು
ಬಂದವರುಂಟೆ ದುರ್ಗವನು
ಬೆಂದವರುಂಟೆ ಗೋಮಂತ ಶೈಲದಿ ಜರಾ
ಸಂಧನ ಬಲು ಸುಡುಗೆಯಲಿ ೨೭

ಕೊಂದವರುಂಟೆ ಮಾತುಲನ?(ಮಾವನಾದ ಕಂಸನನ್ನು) ರಾಜ್ಯದ

ಆಡಳಿತವನ್ನು ಕಂಸನ ತಂದೆಗೆ (ಉಗ್ರಸೇನನಿಗೆ) ಬಿಟ್ಟು ಬಂದವರುಂಟೆ? ಜರಾಸಂಧನ ಉಪಟಳವನ್ನು ಸಹಿಸಬಾರದೆ ಮಥುರೆಯನ್ನು ಬಿಟ್ಟು ದ್ವಾರಕೆ ನಗರ ಕಟ್ಟಿ ಕೃಷ್ಣ ಇತರ ಯಾದವರೊಡನೆ ವಾಸಿಸುತ್ತಿದ್ದ. ಅಲ್ಲಿಗೂ ಜರಾಸಂಧನ ಕಾಟ ದಾಪುಗಾಲು ಹಾಕಿದಾಗ ದ್ವಾರಕೆಗೆ ಹತ್ತಿರವಿದ್ದ. ಗೋಮಂತ ಬೆಟ್ಟದಲ್ಲಿ ವಾಸಿಸತೊಡಗಿದ. ಆಗ ಜರಾಸಂಧ ಹಾಕಿದ ಸುಡುಗೆಯಲ್ಲಿ ನಿನ್ನ ಹಾಗೆ ಬೆಂದವರುಂಟೆ?

ಯದುಕುಲೋತ್ತಮ ಕೇಳು ಸಮರಕೆ ಹಿಮ್ಮೆಟ್ಟಿ
ಬದುಕುವ ರಣಭಂಡರನು
ಕುದುಕುಳಿಗಳ ಜಯಲಕ್ಷ್ಮಿ ಕೂಡುವಳಲ್ಲ
ಅದು ಕಾರಣ ಪೇಳ್ದೆ ನಿನಗೆ ೨೮

ಕೃಷ್ಣ ಕೇಳು, ಯುದ್ದಕ್ಕೆ ಹಿಮ್ಮೆಟ್ಟಿ ಬದುಕುವ ರಣಭಂಡರನ್ನು, ಕುದುಕುಳಿ(ಮತ್ಸರಿ) ಗಳನ್ನು ಜಯಲಕ್ಷ್ಮಿ ಕೈ ಹಿಡಿಯುವುದಿಲ್ಲ. ಆ ಕಾರಣಕ್ಕಾಗಿ ನಿನಗೆ ಹೇಳಿದೆ.

ತಗರು ಹಿಮ್ಮೆಟ್ಟಿ ಧಾರಿಣಿಯೊಳು ಬರಸಿಡಿ
ಲೊಗೆವಂತೆ ಬಂದೆರಗುವುದು
ತೆಗೆದೆಸೆಯಲು ಸರಲ್ಗಳು ಪೋಗಿ ಗರ್ಭವ
ಬಗೆಯದೆ ಮಾಣ್ಬವೆ ಮರುಳೆ ೨೯

ತಗರು ಹಿಮ್ಮೆಟ್ಟುವುದು ಎರಡು ಪಟ್ಟು ವೇಗ ಮತ್ತು ಸಾಮರ್ಥ್ಯಗಳನ್ನು ಒಗ್ಗೂಡಿಸಿ ಬರಸಿಡಿಲಿನಂತೆ ಬಂದೆರಗಲೋಸ್ಕರ ಎಂಬುದನ್ನು ಮರೆಯಬೇಡ. ಬಿಟ್ಟ ಬಾಣಗಳು ಹೋಗಿ ಹಗೆಯ ಗರ್ಭವನ್ನು ಬಗೆಯದೆ ಸುಮ್ಮನಿರುವುದೆ, ಮರುಳೆ?

ರೂಢಿಯೊಳಮೃತ ಜಂಬೀರಸಗುಡಿಯೆ
ಕೂಡಿಸಿ ರೋಗಾಂತ್ಯವಹುದೆ
ಓಡಿದ ಪರಮ ಹಂದೆಯ ಬಾಹುಮೂಲದಿ
ಮೂಡಿ ಸತ್ಕೀರ್ತಿ ನಿಲ್ಲುವುದೆ ೩೦

ಪ್ರಪಂಚದಲ್ಲಿ ಅಮೃತ ಮತ್ತು ನಿಂಬೆ ಹಣ್ಣಿನ ರಸವನ್ನು ಕೂಡಿಸಿ ಕುಡಿದರೆ ರೋಗಾಂತ್ಯ ಆಗುವುದೆ? ಓಡಿ ಹೋದ ಪರಮ ಹೇಡಿಯ ಬಾಹುಮೂಲದಲ್ಲಿ ಸತ್ಕೀರ್ತಿ ಮೂಡಿ ನಿಲ್ಲುವುದೆ?

ಅಡಿಗಿರ್ದ ಶಾರ್ದೂಲ ಹಾರುವ ಹರಿಣನ
ಕೆಡಹಿ ರೋಹಿತವ ನೀಂಟುವುದು
ಪೊಡವಿಯೊಳಾರದು ಗೆಲವು ಸೋಲವೆಂಬುದ
ಜಡಮತಿ ತಿಳಿದು ಪೇಳೆನಗೆ ೩೧

ಅಡಗಿದ್ದ ಹುಲಿ ಹಾರುವ ಜಿಂಕೆಯನ್ನು ಕೆಡವಿ ರಕ್ತವನ್ನು ಹೀರುವುದು ಪೊಡವಿಯಲ್ಲಿ ಗೆಲವು ಸೋಲು ಯಾರದು ಎಂಬುದನ್ನು ತಿಳಿದು ಹೇಳು.

ಬಲ್ಲವಿಕೆಯ ಮಾತು ಬೇಡವೆಂದೈನೂರು
ಬಿಲ್ಲನಾರಿಯ ಭೋರ್ಗರಿಸೆ
ತಲ್ಲಣಿಸಿದುವು ಶತ್ರುಗಳೆದೆ ಕೈದೆರ
ಹಿಲ್ಲದೆ ಕರೆದ ಕೂರ್ಗಣೆಯ ೩೨

ಜ್ಞಾನದ ನುಡಿ ಈಗ ಬೇಡ ಎಂದು ಐನೂರು ಬಿಲ್ಲುಗಳ ನಾರಿ(ಮೌರ್ವಿ)ಯನ್ನು ಭೋರ್ಗರಿಸಲು ಹಗೆಗಳ ಎದೆಗಳು ಥರಥರಗುಟ್ಟಿದುವು. ಆಗ ಕೈಗೆ ಬಿಡುವು ಕೊಡದೆ ಹರಿತವಾದ ಬಾಣಗಳ ಮಳೆಯನ್ನು ಕರೆದ.

ಎಸೆಯಲೈನೂರು ಬಾಣಂಗಳನುಡಿದು ಖಂ
ಡಿಸಿದಂಬುಜಾಕ್ಷಂಗೆ ಮೆಚ್ಚಿ
ಮಸೆದ ಕೂರ್ಗಣೆಯಿಂದೆಚ್ಚಲಾ ಕಣೆ ಸಂ
ಧಿಸಲವನುಡಿದು ಖಳಗೆಚ್ಚನು ೩೩

ಎಸೆದ ಐನೂರು ಬಾಣಗಳನ್ನು ಮುರಿದು ತುಂಡರಿಸಿದ ಕಮಲನಾಭನನ್ನು ಮೆಚ್ಚಿ, ಮಸೆದ ಕೂರ್ಗಣೆಯಿಂದೆಚ್ಚಲು, ಆ ಕಣೆ ಕೃಷ್ಣನನ್ನು ಸಂಧಿಸಲು ಅವುಗಳನ್ನು ಪುಡಿಗೈದು ರಕ್ಕಸನಿಗೆ ಎಚ್ಚಿದನು.

ಎಚ್ಚೊಡಚ್ಯುತನ ಬಾಣಂಗಳ ತಡೆಗಡಿ
ದೆಚ್ಚ ಮಾರ್ಗಣದಿಂದ ದೈತ್ಯ
ಎಚ್ಚ ಕೂರ್ಗಣೆಯನಿಕ್ಕಡಿ ಮಾಡಿ ಮುರಹರ
ನೆಚ್ಚ ರಕ್ಕಸನುರಸ್ಥಳವ ೩೪

ಆ ಬಾಣಗಳನ್ನು ತಡೆಗಡಿದು ರಕ್ಕಸ ಮಾರ್ಗಣ(ಬಾಣ)ದಿಂದ ಎಚ್ಚ. ಆ ಕೂರ್ಗಣೆಯನ್ನು ಎರಡು ತುಂಡು ಮಾಡಿ ಕೃಷ್ಣ ರಕ್ಕಸನ ಎದೆಗೆ ಎಚ್ಚಿದ.

ಕೋದಂಡ ಶಿಲಿಮುಖವಿಡಿದು ತನ್ನಿದಿರಾಗಿ
ಕಾದ ಸಮರ್ಥ ನೀನಹುದು
ಆದರೀ ಮಂತ್ರಾಸ್ತ್ರವ ಕಾದುಕೊಳ್ಳೆಂದು
ಮಾಧವನೆದೆಯೊಳಿಕ್ಕಿದನು ೩೫

ಬಿಲ್ಲು ಬಾಣವಿಡಿದು ನನ್ನೆದುರು ಕಾದ ಸಮರ್ಥ ನೀನಹುದು. ಆದರೆ ಈ ಮಂತ್ರಾಸ್ತ್ರವನ್ನು ಕಾದುಕೊಳ್ಳೆಂದು ಕೃಷ್ಣನ ಎದೆಗೆಚ್ಚನು.

ನೆಲನಾವುದಾಗಸವಾವುದೆಣ್ದೆಸೆಗಳ
ಹೊಲಬಾವುದೆಂದು ತೋರಿಸದೆ
ಜಲನಿಧಿ ಜಗವ ನುಂಗಿದವೊಲು ಬಾಣಾಬ್ಧಿ
ಬಲಗೂಡಿ ಹರಿಯ ನುಂಗಿದುವು ೩೬

ನೆಲ ಯಾವುದು? ಮುಗಿಲು ಯಾವುದು? ಎಂಟು ದಿಕ್ಕುಗಳಿಗೆ ದಾರಿ ಯಾವುದು? ಎಂದು ಗೊತ್ತಾಗದಂತೆ ಸಮುದ್ರ ಜಗತ್ತನ್ನು ನುಂಗಿದಂತೆ ಬಾಣಸಮುದ್ರ ಸೈನ್ಯವನ್ನು ನುಂಗಿತು.

ಬಾಣನ ಬಾಣಾಂಬುನಿಧಿಯ ಮೇಲಾಗ್ನೇಯ
ಬಾಣವ ಶ್ರೀಕೃಷ್ಣ ಬಿಡಲು
ಬಾಣ ಖಾಂಡವ ವನವನೆಲ್ಲವ ದಹಿಸಿತು
ಬಾಣನ ಬಲದೊಳಗೆ ಹೊಕ್ಕು ೩೭

ಬಾಣನ ಬಾಣಾಬ್ದಿಯ ಮೇಲೆ ಶ್ರೀಕೃಷ್ಣ ಆಗ್ನೇಯ ಬಾಣವನ್ನು ಬಿಡಲು, ಬಾಣನ ಬಲ(ಸೈನ್ಯ)ದೊಳಗೆ ಪ್ರವೇಶಿಸಿ, ಖಾಂಡವನವನ್ನೆಲ್ಲ ದಹಿಸಿದಂತೆ ದಹಿಸಿತು.

ಪಟಪಲ್ಲವ ಛತ್ರ ಚಮರ ಝಲ್ಲರಿ ತಂ
ಬಟ ಜಗಜಗಿಪ ಜೋಡುಗಳ
ಛಟಛಟ ಧ್ವನಿಯಿಂದ ಬಿಸಿಗೊಂಡ ಕೆಂಗಿಡಿ
ಪುಟ ನೆಗೆದುವು ನಭಸ್ತಳಕೆ ೩೮

ಬಾವುಟ, ಚಿಗುರ ಛತ್ರಿ, ಚಾಮರ, ಚರ್ಮವಾದ್ಯ ಜಗಜಗಿಸುವ ರಕ್ಷಾಕವಚಗಳ ಕೆಂಗಿಡಿಗಳು, ಛಟಛಟ ಧ್ವನಿಯಿಂದ ಮುಗಿಲಿಗೆ ಪುಟ ನೆಗೆದವು.

ಸ್ಯಂದನ ಗಜ ಘೋಟಕ ಪಾಯದಳ ಗೋ
ವಿಂದನ ಸರಲ ಕೆಂಗಿಡಿಯ
ಬಂಧನಕೊಳಗಾಗೆ ವರುಣಾಸ್ತ್ರದಿಂ ಬಲಿ
ನಂದನನೆಚ್ಚು ನಂದಿಸಿದ ೩೯

ರಥ, ಆನೆ, ಕುದುರೆ, ಕಾಲಾಳು, ಕೃಷ್ಣನ ಬಾಣದ ಕೆಂಗಿಡಿಗೆ ಸಿಕ್ಕಿ ತಲ್ಲಣಿಸುತ್ತಿರಲು ಬಾಣ ವರುಣಾಸ್ತ್ರದಿಂದ ಎಚ್ಚಿ ನಂದಿಸಿದ.

ಮೇಷಾರೂಢ ಮಾರ್ಗಣ ಬೀತುದು ಹೃಷಿ
ಕೇಶ ಮತ್ತಿಮಿರಾಸ್ತ್ರವನು
ನೀ ಸಂಭಾಳಿಸಿಕೊಳ್ಳೆಂದು ದೈತ್ಯಾ
ಧೀಶಂಗೆ ಬೊಬ್ಬಿರಿದೆಚ್ಚ ೪೦

ಮೇಷಾರೂಢ(ಟಗರನ್ನು ವಾಹನವಾಗುಳ್ಳ ಅಗ್ನಿ) ಮಾರ್ಗಣ(ಅಗ್ನಿಬಾಣ) ಬತ್ತಿತು ಹೃಷಿಕೇಶನಾದ ಕೃಷ್ಣ ಮತ್ತೆ ತಿಮಿರಾಸ್ತ್ರವನ್ನು(ಕತ್ತಲಿನ ಅಸ್ತ್ರವನ್ನು) ಪ್ರಯೋಗಿಸಿದ, ಇದನ್ನು ಸಂಬಾಳಿಸಿಕೊಳ್ಳೆಂದು ದೈತ್ಯನಿಗೆ ಹೇಳಿ

ಎತ್ತ ನೋಡಿದೊಡೆ ಭೇದಿಸಲಳವಲ್ಲ ಕಾ
ರ್ಗತ್ತಲೆ ಕವಿದುದಾಹವದಿ
ಅತ್ತ ಕಠಾರಿಯ ಭಟರೊಪ್ಪಿದರು ಪುರು
ಷೋತ್ತಮನಂಗರಕ್ಷೆಯಲಿ ೪೧

ಎತ್ತ ನೋಡಿದರೂ ಭೇದಿಸಲು ಸಾಧ್ಯವಿಲ್ಲ. ಯುದ್ಧರಂಗದಲಿ ಕಗ್ಗತ್ತಲೆ ಕವಿಯಿತು. ಅತ್ತ ಕಠಾರಿಯ ಸೈನಿಕರು ಕೃಷ್ಣನ ಅಂಗರಕ್ಷೆಯಲ್ಲಿ ಒಪ್ಪಿದರು.

ಬಾಣನ ಭಟರು ಯಾದವರೆಂಬ ಬಗೆಯ ಕ
ಣ್ಗಾಣದೆ ತಮ್ಮಲ್ಲಿ ತಾವು
ಹಾಣಾಹಣೆಯೊಳು ತಿವಿದಾಡುವುದ ಜಗ
ತ್ತ್ರಾತ ನಿರೀಕ್ಷಣೆಗೆಯ್ದನು ೪೨

ಬಾಣಾಸುರನ ಸೈನಿಕರು ಯಾದವರು ಎಂಬುದನ್ನು ಪತ್ತೆ ಹಚ್ಚಲಾಗದೆ ಅರ್ಥಾತ್ ಕಣ್ಣು ಕಾಣದೆ ತಮ್ಮಲ್ಲಿ ತಾವೇ ತಿವಿದಾಡುವುದನ್ನು ಜಗತ್ರಾಣ ಈಕ್ಷಿಸಿದನು.

ಧುರದೊಳು ತುರುಗಿರ್ದ ಕೃತಕಾಂಧಕಾರ ವಿ
ಸ್ತರವ ನಿರ್ಮೂಲಗೆಯ್ವುದಕೆ
ವರ ಮೂಡಿಗೆಯಿಂದ ತೆಗೆದೆಚ್ಚ ಕೃಷ್ಣ ಭಾ
ಸ್ಕರ ಬಾಣದಿಂದ ರಕ್ಕಸನ ೪೩

ಯುದ್ಧರಂಗದಲ್ಲಿ ತುಂಬಿದ್ದ ಕೃತಕ ಕತ್ತಲನ್ನು ನಿರ್ಮೂಲನ ಮಾಡುವುದಕ್ಕೆ ಕೃಷ್ಣ ಬತ್ತಳಿಕೆಯಿಂದ ಭಾಸ್ಕರ ಬಾಣವನ್ನು ತೆಗೆದು ರಕ್ಕಸನಿಗೆ ಪ್ರಯೋಗಿಸಿದನು.

ಬೀತುದು ತಿಮಿರಾಸ್ತ್ರವೆನಬೇಡ ಬೇಡ ಮು
ಯ್ಯಾತುಕೊ ಹಿಡಿಹಿಡಿಯೆನುತ
ಮಾತುಗಾರಿಕೆಯಿಂದ ಖಳರಾಯ ಪಂಕೇಜ
ಜಾತ ಮಾರ್ಗಣದೊಳಿಕ್ಕಿದನು ೪೪

ಕತ್ತಲಿನ ಅಸ್ತ್ರ ಬತ್ತಿತು ಎನ್ನಬೇಡ. ಹಿಡಿ ಹಿಡಿ ಎನ್ನುತ್ತ ರಕ್ಕಸ ಕೃಷ್ಣನಿಗೆ ಬ್ರಹ್ಮಾಸ್ತ್ರದಿಂದ ಇಕ್ಕಿದನು.

ಮುಕ್ಕುಳಿಸುವ ಕೆಂಗಿಡಿ ರಾಶಿರಾಶಿಯ
ದಿಕ್ಕೆಂಟರೊಳಗೆ ಹೊಮ್ಮಿಸುತ
ಹೊಕ್ಕುದು ವಿಧಿಬಾಣ ಕೃಷ್ಣನಾಭಿಯಲಿ
ಕುಕ್ಕುರಿಸಿತು ಶಿಶುವೆಂಬಂತೆ ೪೫

ರಾಶಿ ರಾಶಿ ಕೆಂಗಿಡಿಗಳನ್ನು ಮುಕ್ಕುಳಿಸುತ್ತ, ಎಂಟು ದಿಕ್ಕುಗಳಲ್ಲೂ ಹೊಮ್ಮಿಸುತ್ತ, ಬ್ರಹ್ಮಾಸ್ತ್ರ ಕೃಷ್ಣನ ನಾಭಿಯನ್ನು ಹೊಕ್ಕು ಮಗುವಿನಂತೆ ಕುಕ್ಕರಿಸಿತು.

ಬೊಮ್ಮಗಿಮ್ಮಾಸ್ತ್ರ ದೇವೆಂದ್ರ ಗೀವೇಂದ್ರಾಸ್ತ್ರ
ಎಮ್ಮೊಳು ಪ್ರತಿ ಕೂಲವಲ್ಲ
ನಿಮ್ಮ ರಕ್ಕಸಗಜ್ಜವ ತೋರಿಸೆಂದೆಚ್ಚು
ದಮ್ಮನೆ ತಣಿಸಿದನು ಖಳನ ೪೬

ಬೊಮ್ಮ ಗಿಮ್ಮಾಸ್ತ್ರ ದೇವೇಂದ್ರ ಗೀವೇಂದ್ರ ಅಸ್ತ್ರಗಳು ನಮಗೆ ಪ್ರತಿಕೂಲವಲ್ಲ. ನಿಮ್ಮ ರಾಕ್ಷಸ ಕಾರ್ಯವನ್ನು ತೋರಿಸೆಂದು ಎಚ್ಚಿ ಖಳನನ್ನು ದಣಿಸಿದನು.

ಉಚಿತವಿದಹುದೆಂದು ಪರಮಸಂತೋಷದಿ
ಶುಚಿವೆತ್ತು ರಣರಂಗದೊಳಗೆ
ವಚಿಸಿದ ಶುಕ್ರದೇವರು ಕೊಟ್ಟ ಮಂತ್ರದಿ
ರಚಿಸಿದ ದೈತ್ಯ ಮಾಯಕವ ೪೭

ಪ್ರಸಕ್ತ ಸನ್ನಿವೇಶದಲ್ಲಿ ಇದು ಉಚಿತವೆಂದು ಸಂತೋಷದಿಂದ ಶುಕ್ರದೇವರು ಕೊಟ್ಟ ಮಂತ್ರವನ್ನು ಪಠಿಸಿ ರಣರಂಗದಲ್ಲಿ ರಾಕ್ಷಸ ಮಾಯಮಾಟವನ್ನು ರಚಿಸಿದ.

ಬಾಣ ಕಾರ್ಮುಕವೆತ್ತು ಕಪಟದ ಸನ್ನಣ
ಬಾಣವ ಸಮರಕ್ಕೆ ಚಾಚಿ
ಬಾಣಾಸುರ ನಭಸ್ತಳಕೆದ್ದು ಕರೆದನು
ಬಾಣಗಳ ಸತತ ವೃಷ್ಟಿಯನು ೪೮

ಬಿಲ್ಲುಬಾಣವನ್ನು ಎತ್ತಿಕೊಂಡು ಕಪಟ ಸನ್ನಾಹದ ಬಾಣವನ್ನು ಯುದ್ಧರಂಗಕ್ಕೆ ಚಾಚಿ, ಬಾಣಾಸುರ ನಭಸ್ಥಳಕ್ಕೇರಿ ಬಾಣಗಳ ಸತತ ವೃಷ್ಟಿಯನ್ನು ಸುರಿಸಿದ

ಸುತ್ತಿದ ವೀರ ಚಿಮ್ಮುರಿಯ ವಜ್ರಾಂಗಿಯ
ನೆತ್ತಿಯ ಬ್ರಹ್ಮರಂಧ್ರದಲಿ
ಕುತ್ತಿದುವಸುರೇಶ್ವರನ ಮಾರ್ಗಣ ನೆ
ಗ್ಗೊತ್ತಿದುವು ಅದಟ ಯಾದವರ ೪೯

ಸುತ್ತಿದ ರುಮಾಲಿನ, ವಜ್ರಕವಚದ, ನೆತ್ತಿಯ ಬ್ರಹ್ಮರಂಧ್ರದಲ್ಲಿ ಅಸುರೇಶ್ವರನ ಬಾಣಗಳು ಚುಚ್ಚಿ ಕೊಚ್ಚಿದವು, ದಿಟ್ಟ ಯಾದವರನ್ನು ತಗ್ಗುನೆಗ್ಗುಗೊಳಿಸಿದವು.

ಹರಿ ಶಕ್ರ ಮಳೆಗರೆಯಲು ಗೋವರ್ಧನ
ಗಿರಿಯೆತ್ತಿ ತುರುವ ಕಾದಂತೆ
ಸುರಿವ ಕೂರ್ಗಣೆಯಿಂದ ಕೂರ್ಗಣೆಯೆಚ್ಚು ನಿ
ತ್ತರಿಸಿ ಯದುಬಲವ ರಕ್ಷಿಸಿದ ೫೦

ಇಂದ್ರ ಮಳೆಗರೆದಾಗ ಕೃಷ್ಣ ಗೋವರ್ಧನ ಗಿರಿಯನ್ನೆತ್ತಿ ಗೋವುಗಳನ್ನು ರಕ್ಷಿಸಿದಂತೆ ಹರಿತವಾದ ಬಾಣಕ್ಕೆ ಪ್ರತಿಯಾಗಿ ಹರಿತವಾದ ಬಾಣವನ್ನೆಚ್ಚಿ ಯಾದವರನ್ನು ರಕ್ಷಿಸಿದ.

ಅಂಬರದಲಿ ಬಾಣ ನೆಲದಲಿ ನಿಂದು ಪೀ
ತಾಂಬರನೆಚ್ಚಾಡಲಿತ್ತ
ಕುಂಭಾಂಡ ಸೈನ್ಯ ಸನ್ನಾಹದೊಳೆರಗಿದ ನೀ
ಲಾಂಬರನೊಡ್ಡೊಡೆವಂತೆ ೫೧

ಪೀತಾಂಬರನು ನೆಲದಲ್ಲಿ ನಿಂತು ಅಂಬರದಲ್ಲಿ ಬಾಣಗಳನ್ನು ಎಚ್ಚುತ್ತಿರಲು, ಇತ್ತ ನೀಲಾಂಬರನ(ಬಲರಾಮನ)ಸೈನ್ಯ ಸಮೂಹ ಚೆಲ್ಲಾಪಿಲ್ಲಿಯಾಗುವಂತೆ ಕುಂಭಾಂಡ ಸಂಚಿನಿಂದ ಎರಗಿದನು.

ತಾಗಿದ ಭರದಿಂದ ಪ್ರದ್ಯುಮ್ನ ಹಿಂದಾದ
ಬೀಗಿದ ಸಾತ್ಯಕಿ ಮುರಿದು
ಸಾಗಿದನುದ್ಧವಂತುಬಲರಾಮನಿದಿರಾಯ
ಕೂಗಿ ಬೊಬ್ಬಿರಿದೆಚ್ಚ ಖಳನ ೫೨

ತಾಗಿದ ರಭಸದಿಂದ ಪ್ರದ್ಯುಮ್ನ ಹಿಂದಾದ, ಸಾತ್ಯಕಿ ಬೀಗಿದ(ಕುಂದಿದ:ಬೀಕು=ಕುಗ್ಗು)ಉದ್ಧವ ಹಿಂದಿರುಗಿ ಸಾಗಿದ. ಆದರೆ ಬಲರಾಮ ರಕ್ಕಸನಿಗೆ ಎದುರಾಗಿ ಬೊಬ್ಬಿರಿದು ಎಚ್ಚನು.

ಕುಳಿಕುಳಿಯಾಗಿ ಕುಂಭಾಂಡನೊಡಲೊಳಗೆ
ತುಳುಕಿದ ಕೆನ್ನೀರ ನೋಡಿ
ಬಳಿಕ ರಕ್ಕಸರಾಯ ಬಲರಾಮನೆದೆಯೊಳು
ಮುಳುಗಿಸಿದನು ಕೂರ್ಗಣೆಯ ೫೩

ಗುಂಡಿ ಗುಂಡಿಯಾಗಿ ಕುಂಭಾಂಡನೊಡಲಲ್ಲಿ ತುಳುಕುವ ರಕ್ತವನ್ನು ನೋಡಿ ಬಾಣಾಸುರ ಬಲರಾಮನ ಎದೆಯಲ್ಲಿ ಕೂರ್ಗಣೆಯನ್ನು ಮುಳುಗಿಸಿದನು.

ಸಡ್ಡೆ ಮಾಡದೆ ರಕ್ಕಸನ ಕೂರ್ಗಣೆಗಳ
ವಿಡ್ಡುರವನು ಹಾರಹೊಯ್ದು
ಅಡ್ಡವಾತಿನಲಿ ಸ್ಯಂದನ ಸೂತ ವಾಜಿಯ
ಒಡ್ಡವಣೆಯನು ಖಂಡಿಸಿದ ೫೪

ಲಕ್ಷ್ಯ ಮಾಡದೆ ರಕ್ಕಸನ ಬಾಣಗಳ ವಿಡ್ಡೂರ(<ವೈಡೂರ್ಯ=ವೈಭವ)ವನ್ನು ಹಾರಹೊಯ್ದು, ಅಡ್ಡಮಾತಿನಲ್ಲಿ ರಥ, ಸಾರಥಿ, ಕುದುರೆಗಳ ಸಮೂಹವನ್ನು ತುಂಡರಿಸಿದ.

ಸೂತ ವರೂಢ ವಾಜಿಗಳ ಕಂಧರಗಡಿಗಳು
ಭೂತಲದೊಳು ಬಿದ್ದು ಹೊರಳೆ
ಚೇತನಗಿಡದೆ ರಕ್ಕಸರಾಯ ಬಳಿಕೊಂದು
ನೂತನ ರಥವೇರಿ ಬಂದ ೫೫

ಸಾರಥಿ, ರಥ, ಕುದುರೆಗಳ ಕೊರಳ ತುಂಡುಗಳು ಭೂತಲದಲ್ಲಿ ಹೊರಳಾಡುತ್ತಿರಲು ಚೈತನ್ಯಗುಂದದೆ ರಕ್ಕಸರಾಯ ಬೇರೊಂದು ನೂತನ ರಥವೇರಿ ಬಂದ.

ಸಲುವುದು ಬಲರಾಮ ರಣರಂಗದಲಿ ನೀ
ಬಿಲುಗಾರರೊಳಗೆ ತಪ್ಪಲ್ಲ
ನಿಲುವೊಡಚ್ಚರಿ ನಮ್ಮೊಡನೆಂದು ಬಾಣ ಕ
ವಲುದಲೆ ಫಣಿಬಾಣ ಬಿಟ್ಟನು ೫೬

ಬಲರಾಮ, ನೀನು ರಣರಂಗದೊಳಗೆ ಬಿಲ್ಲುಗಾರರೊಡನೆ ಸಲುವುದು(ಪ್ರವೇಶಿಸುವುದು)ತಪ್ಪಲ್ಲ. ಆದರೆ ನಮ್ಮೊಡನೆ ನಿಲ್ಲುವುದು ಸೋಜಿಗವೆಂದು ಬಾಣಾಸುರ ಕವಲುತಲೆಯ ಬಾಣದಿಂದ ಇಕ್ಕಿದನು

ತುರಿಹದಿರಿ ಫಣಿಬಾಣ ಕಠೋರತೆಯಿಂ
ದರಿಸೈನ್ಯವ ಮುರ್ಛೆಗೊಳಿಸಿ
ಪರಿತಂದು ಶೇಷಾವತಾರನ ದಿವ್ಯ
ಚರಣಗಳೊಳೈಕ್ಯವಾಯ್ತು ೫೭

ರಭಸದಿಂದ ಫಣಿಬಾಣ ಕಠೋರತೆಯಿಂದ ಶತ್ರುಸೈನ್ಯವನ್ನು ಮೂರ್ಛೆಗೊಳಿಸಿ ದೌಡುಬಂದು ಶೇಶಾವತಾರನ(ಬಲರಾಮನ) ಚರಣಗಳಲ್ಲಿ ಐಕ್ಯವಾಯಿತು.

ಹೊದೆಗೋಲು ತೀರಲೆಚ್ಚಾಡುವೆನೆಂದರೆ
ಮೆದೆಗಡಹುವೆ ನಿನ್ನ ಬಲವ
ಗದೆವಿಡಿದಾಯತನಾಗೆಂದು ಹಲಧರ
ಸದೆ ಬಡಿದನು ಖಲೊತ್ತಮನ ೫೮

ಬತ್ತಳಿಕೆಯ ಬಾಣಗಳು ಮುಗಿಯಲು, ಬಾಣ ಪ್ರಯೋಗವೆಂದರೆ ನಿನ್ನ ಸೈನ್ಯವನ್ನು ಕೊಯ್ದು ಮೆದೆ(ಬಣವೆ) ಹಾಕುವೆನು. ಗದೆ ಹಿಡಿದು ಸಿದ್ಧವಾಗೆಂದು ಹೇಳಿ ಬಲರಾಮ ರಕ್ಕಸನನ್ನು ಸದೆಬಡಿದನು.

ಹುಟ್ಟಳಿದುದು ವಜ್ರಮುಯ ರಥ ನೇಗಿಲ
ಪೆಟ್ಟು ಸಂಧಿಸಲು ನುಗ್ಗಾಯ್ತು
ಬಿಟ್ಟುದು ಬಾಯ ರಕ್ಕಸರಾಯ ಸೈನ್ಯ ಕಂ
ಗೆಟ್ಟುದು ದೊರೆ ನೊಂದನೆನುತ ೫೯

ವಜ್ರಮಯ ರಥ ಹುಟ್ಟಳಿಯಿತು(ನಾಶವಾಯಿತು) ನೇಗಿಲ ಪೆಟ್ಟು ಬೀಳಲು ನುಗ್ಗಾಯಿತು. ರಕ್ಕಸನ ಸೈನ್ಯ ಬಾಯಿ ಬಾಯಿ ಬಿಟ್ಟಿತು, ದೊರೆ ನೊಂದನೆಂದು ಕಂಗೆಟ್ಟಿತು.

ಫಡಿರಥವೇರಿ ಕುಂಭಾಂಡ ಮಂತ್ರೀಶ್ವರ
ಜಡಿದು ವಜ್ರದ ಪೆರ್ಗದೆಯ
ನಿಡಿದೋಳಿನಿಂದ ಕೃಷ್ಣಾಗ್ರಜಾತನ ಸಿರಿ
ಮುಡಿಯಲಿ ಪೆಟ್ಟನಿಕ್ಕಿದನು ೬೦

ಪ್ರತಿ ರಥವನ್ನೇರಿ ಮಂತ್ರಿ ಕುಂಭಾಂಡ ವಜ್ರದ ಪೆರ್ಗದೆಯ ಜಡಿದು(ಸೆಳೆದು) ಬಲರಾಮನ ಸಿರಿಮುಡಿಗೆ ಪೆಟ್ಟನಿಕ್ಕಿದನು.

ತಾಗಿದ ಗದೆಯ ಗಾಯವನೊಡ್ಡಿ ತೋರಿಯ
ನೇಗಿಲ ಕೊರಲ್ಗಿಕ್ಕಿ ಸೆಳೆದು
ಬಾಗಿಸಿಕೊಂಡು ದೈತ್ಯಗೆ ಪೆಟ್ಟನಿಕ್ಕಿದ
ಮೂಗಿನೊಳು ನೆತ್ತರು ಸುರಿಯೆ ೬೧

ತಾಗಿದ ಗದೆಯ ಗಾಯಕ್ಕೆ ಪ್ರತಿಭಟಿಸಿ, ದಪ್ಪನೆಯ ನೇಗಿಲನ್ನು ಕೊರಳಿಗಿಕ್ಕಿ ಸೆಳೆದು ಬಗ್ಗಿಸಿಕೊಂಡು ಮೂಗಿನಲ್ಲಿ ರಕ್ತ ಸುರಿಯುವಂತೆ ದೈತ್ಯನಿಗೆ ಪೆಟ್ಟುಹಾಕಿದ.

ಸೊಕ್ಕಿದ ಕುಂಭಾಂಡ ರಣದೊಳು ರಕುತನ
ಕಕ್ಕಿದನು ಸಲೆ ಕೈಗಟ್ಟಿ
ಸಿಕ್ಕಿದ ಸಿಕ್ಕಿದನೆನಲಾಗಿ ಜುಣುಗಿ ಮೆ
ಯ್ಯಿಕ್ಕಿದನು ಗಗನ ಸ್ಥಳದಲಿ ೬೨

ಸೊಕ್ಕಿದ ಕುಂಭಾಂಡ ರಣರಂಗದಲ್ಲಿ ರಕ್ತವನ್ನು ಕಕ್ಕಿದನು. ಕೈಗಟ್ಟಿ(ಸೋತು ಶರಣಾಗಿ) ಸಿಕ್ಕಿದ ಸಿಕ್ಕಿದ ಎನ್ನುವಷ್ಟರಲ್ಲಿ ನುಸುಳಿಕೊಂಡು ಹೋಗಿ ಗಗಸ್ಥಲದಲ್ಲಿ ಮೈದೋರಿದನು.

ಮಂತ್ರೀಶ್ವರನ ಮೆಯ್ಗಾವಲ ರಥವಾಜಿ
ದಂತಿಗಳಾಹವದ ಮಧ್ಯಕೆ
ತಿಂತಿಣಿ ಭರವಸದಿಂದಾಗ ಪರಿತಂದು
ತೊಂತಿತುವರ ನೀಲಾಂಬರನ ೬೩

ಕುಂಭಾಂಡನ ಮೈಗಾವಲ ರಥ ಕುದುರೆ ಆನೆಗಳು ರಣರಂಗ ಮಧ್ಯಕ್ಕೆ ಗುಂಪಿನ ಬಲದಿಂದ್ಯೆತಂದು ನೀಲಾಂಬರನನ್ನು ಮುತ್ತಿತು.

ಭುಜಬಲ ಭೀಮ ಸಾರುವಭೌಮ ಕೃಷ್ಣಾ
ಗ್ರಜ ಹಲ ಮುಸಲದಿಂದೊಗೆಯೆ
ಧ್ವಜಪಟ ರಥ ಘೋಟಕ ಮದ ಸೊಕ್ಕಿದ
ಗಜಘಟೆ ಗಿಜಘಟೆಯಾಯ್ತು ೬೪

ಭುಜಬಲ ಭೀಮನೂ, ಸಾರ್ವಭೌಮನೂ, ಕೃಷ್ಣಾಗ್ರಜನೂ ಆದ ಬಲರಾಮ ಹಲ(ನೇಗಿಲು) ಮುಸಲ(ಒನಕೆ)ದಿಂದ ಸೆಣೆಯಲು ಬಾವುಟ, ರಥ, ಕುದುರೆ ಮದಿಸಿದ ಗಜಘಟೆ(ಆನೆ ಸಮೂಹ) ಗಿಜಗಟೆ(ಗಿಜಗಿಜ ಎನ್ನುವ ಗೊಂದಲದ ಗುಂಪು) ಯಾಯಿತು.

ರಣಧೀರನುದ್ದವ ಕೃತವರ್ಮ ಸಾತ್ಯಕಿ
ಗುಣಯುಕಾ ರಾಮ ಸುಧಾಮ
ಹೆಣದಿನಿ ದಡಿಗ ದೈತ್ಯರ ಕೂಡೆ ಕಾದಿ ಮಾ
ರ್ಗಣದಿಂದ ಕಡಿದೊಟ್ಟಿದರು ೬೫

ರಣಧೀರರಾದ ಉದ್ಧವ, ಕೃತವರ್ಮ, ಸಾತ್ಯಕಿ, ಗುಣವಂತ ಕಾಮ ಸುಧಾಮರು ಹೆಣತಿನ್ನುವ ದಡಿಗ ದೈತ್ಯರ ಜೊತೆ ಕಾದಾಡಿ, ಬಾಣದಿಂದ ಕಡಿದು ರಾಸಿ ಮಾಡಿದರು.

ಭಟರ ಕೂರ್ಗಣೆಯಿಂದ ಚಿಗಿದ ಪೆರ್ದಲೆಗಳಾ
ರ್ಬಟದಿಂದ ನಭಕಡರ್ದಿಳಿದು
ದಿಟ ರುಧಿರಾಬ್ಧಿಯ ನಿಖಿಳ ಗುಯ್ಯ ಮಾಲೆ
ಘಟೆಗಳಂತೆ ಕಂಗೊಳಿಸಿದುವು ೬೬

ವೀರರ ಬಾಣದಿಂದ ತುಂಡಾಗಿ ದೊಡ್ಡ ತಲೆಗಳು ಮುಗಿಲಗೇರಿ ನೆಲಕ್ಕಿಳಿದು ರಕ್ತದ ಸಮುದ್ರದ ಹಾಗೆ, ಸಾಲು ಕೊಳಗಳ ಹಾಗೆ ಕಂಗೊಳಿಸಿದವು.

ತಲೆಗಳ ತುಂಡು ತೋಳ್ಗಳ ತುಂಡು ನಡುತುಂಡು
ಸಲೆ ಜಾನು ಜಂಘೆಯ ತುಂಡು
ಬೆಲೆಗೊಳುವ ಕಟಕರಂಗಡಿಯಂತೆ ರಣದ
ನೆಲೆ ಜಿಗುಪ್ಸೆಯ ಮೂಡಿಸಿತು ೬೭

ತಲೆಗಳ ತುಂಡು, ತೋಳುಗಳ ತುಂಡು, ನಡುವಿನ ತುಂಡು, ಜಾನ(ಮೊಳಕಾಲು, ಮಂಡಿ) ಜಂಘೆ(ಕಣಕಾಲು, ಕಿರುದೊಡೆ)ಯ ತುಂಡುಗಳು ಬೆಲೆಗೊಳುವ(ವ್ಯಾಪಾರವಾಗುವ) ಕಟುಕರ ಅಂಗಡಿಯಂತೆ ರಣದನೆಲೆ(ಯುದ್ಧರಂಗ) ಜಿಗುಪ್ಸೆಯನ್ನು ಮೂಡಿಸಿತು.

ಎಲ್ಲಿ ನೋಡಿದರಲ್ಲಿ ಅಶ್ವಗಜದೊಡಲಿಂದ
ಚೆಲ್ಲಿದ ಕರುಳ ಕಾಲ್ಬಲೆಗೆ
ಬಲ್ಲಿದ ಚಮರಿಯ ಮೃಗ ಸಿಕ್ಕಿಕೊಂಡಂತೆ
ಝಲ್ಲಿಯ ಕುದುರೆ ಬಿದ್ದಿಹವು ೬೮

ಎಲ್ಲಿ ನೋಡಿದರೆ ಅಲ್ಲಿ ಕುದುರೆ ಆನೆಗಳ ಒಡಲಿನಿಂದ ಚೆಲ್ಲಿದ ಕರುಳ ಕಾಲ್ಬಲೆಗೆ (ಸಣ್ಣ ಬಲೆಗೆ) ಚಮರಿಯ ಮೃಗ ಸಿಕ್ಕಿಕೊಂಡಂತೆ ಝಲ್ಲಿಯ (ಹಿಂಡು) ಕುದುರೆಗಳು ಬಿದ್ದಿವೆ.

ತೋರಿಯ ಹಯ ಹಸ್ತಿ ಕುರಿ ಕೋಣಗಳ ಸೊಕ್ಕು
ವಾರಿ ರೋಹಿತ ಮಿದುಳುಗಳು
ಭೂರಿ ಬೇತಾಳಾದಿಗಳುಂಡು ರಣಮಹಾ
ಮಾರಿಯ ಮುಂದೆ ನರ್ತಿಸಿದುವು ೬೯

ಧಡೂತಿ ಕುದುರೆ ಆನೆ ಕುರಿ ಕೋಣಗಳ ಮದಜಲ ರಕ್ತ ಮಿದುಳಗಳನ್ನು ಭಯಂಕರ ಬೇತಾಳಗಳು ಉಂಡು, ರಣಮಹಾಮಾರಿಯ ಮುಂದೆ ನರ್ತಿಸಿದವು

ಕೇಣವಿಲ್ಲದೆ ರೋಹಿತವಾರ್ಧಿಯೊಳು ಕಟ್ಟು
ಗಾಣಕ್ಕೆ ಪಾಯ್ವ ಮೀನೆನಲು
ಗೋಣರೆಗಡಿದು ಪೆರ್ನರವಾಂತು ಮಿಡುಕುವ
ಪ್ರಾಣ ಶವಗಳೊಪ್ಪಿದುವು ೭೦

ಕೇಣ(ಭಯ) ವಿಲ್ಲದೆ ರಕ್ತಸಮುದ್ರದಲ್ಲಿ ಕಟ್ಟುಗಾಳಕ್ಕೆ ಹಾಯುವ ಮೀನೆಂಬಂತೆ ಅರೆಗಡಿದ ಕೊರಳು ತುಂಡಾಗದ ನರವೊಂದರಿಂದ ಮಿಡುಕುವ ಜೀವಶ್ರವಗಳಂತಿದ್ದವು

ತುಂಡಮುಂಡಗಳು ಮಿದುಳು ರೋಹಿತ ಕೊಬ್ಬು
ಖಂಡಗಳ ಮನದಣಿವನಕ
ಉಂಡರಿವೆಯನಾಂತು ಕಮರುದೇಗಿತು ಮರು
ಳ್ತಂಡ ಶಾಕಿನಿ ಡಾಕಿನಿಯರು ೭೧

ತುಂಡ(ಕೊಕ್ಕು, ಮುಸುಡಿ, ರುಂಡ) ಮುಂಡಗಳ, ರಕ್ತ ಕೊಬ್ಬು ಖಂಡಗಳ ಮನದಣಿವ ತನಕ ಉಂಡು, ಅರಿವೆ(ಅಜೀರ್ಣ)ಯಾಗಿ ಶಾಕಿನಿ ಡಾಕಿನಿ ಮೊದಲಾದ ಮರುಳುಗಳು ಕಮರುದೇಗಿದವು(ಹುಳಿತೇಗನ್ನು ತೇಗಿದವು)

ಕಡೆಮೊದಲಿಲ್ಲದೆ ಖಳರಾಯ ರಾವುತ
ಪಡೆ ಬಿದ್ದುದಿತ್ತ ಮೇಣತ್ತ
ತಡೆಯದೆ ಬಾಣ ಕುಂಭಾಂಡ ಖೇಚರದಿಂದ
ಕೆಡಹಿದಚಲ ಸಂಕುಲವ ೭೨

ಕೊನೆ ಮೊದಲಿಲ್ಲದ ರಕ್ಕಸನ ರಾವುತ ಸೈನ್ಯ ಬಿದ್ದುದು ಇತ್ತ. ಅತ್ತ ಬಾಣಕುಂಭಾಂಡ ಆಕಾಶದಿಂದ ಬಂಡೆಗಳನ್ನು ಅಚಲ ಕೆಡವಿದರು.

ನಿಡಿಗಲ್ಲು ನಿಶಿತ ಹಾಸರೆಗಲ್ಲು ಚೌಕದ
ಬಡಿಗಲ್ಲು ಬಟುಗಲ್ಲು ಬೀಳೆ
ತುಡುಕಿದ ವಜ್ರ ಮಾರ್ಗಣದಿಂದ ಶ್ರೀಕೃಷ್ಣ
ಹುಡಿಯೇಳಲೆಚ್ಚು ಬೊಬ್ಬಿರಿದ ೭೩

ಉದ್ದಕಲ್ಲು, ಹರಿತವಾದ ಹಾಸರೆ(ಹಾಸಿದ+ಅರೆ=ಕಲ್ಲು), ಚಚ್ಚೌಕವಾದ ಬಡಿಗಲ್ಲು, ಗುಂಡಗಿರುವ ಬಟುಗಲ್ಲು ಬೀಳತೊಡಗಿದಾಗ ಶ್ರೀಕೃಷ್ಣ ವಜ್ರ ಮಾರ್ಗಣದಿಂದ ಪುಡಿಪುಡಿಯಾಗುವಂತೆ ಎಚ್ಚಿ ಬೊಬ್ಬಿರಿದ.

ಖಗರಾಜ ಕಡುವೇಗದಿ ಪೋಗಿ ದೈತ್ಯರ
ನೆಗೆದಾಟವ ನಿಲಿಸೆನಲು
ಗಗನಕಡರಿ ಗಟ್ಟಿವರಂಕೆಯಲಿ ಬೀಳ
ಲೊಗೆದನು ಧರಣಿಯ ಸಲಕೆ ೭೪

ಗರುಡ ನೀನು ಶರವೇಗದಿಂದ ಹೋಗಿ ರಕ್ಕಸರ ನೆಗೆದಾಟವನ್ನು ನಿಲ್ಲಿಸೆನ್ನಲು ಗಗನಕ್ಕಡರಿ ತನ್ನ ರೆಕ್ಕೆಯಿಂದ ಭೂತಲಕ್ಕೆ ಬೀಳುವಂತೆ ಬಲವಾಗಿ ಬಾರಿಸಿದ

ಬಿದ್ದುದು ಬಾಣಕುಮಭಾಂಡ ವರೂಡಥ ನು
ಗ್ಗೆದ್ದುದು ಪ್ರತಿರಥವಡರಿ
ಕದ್ದಯ್ಸದೆ ಖಳರಾಯ ತ್ರಿಶೂಲದಿಂದ
ಹೆದ್ದೈವವನ ಹೆಟ್ಟಿದನು ೭೫

ಬಾಣಕುಂಭಾಂಡರ ರಥಗಳು ಬಿದ್ದು ನಜ್ಜುಗುಜ್ಜಾದವು. ಬೇರೊಂದು ರಥವೇರಿ ಭಯಪಡದೆ ಖಳರಾಯ ತ್ರೀಶೂಲದಿಂದ ಹಿರಿಯ ದೈವವನ್ನು ತಿವಿದನು

ಹೊಳೆವ ತ್ರಿಶೂಲ ಮುಮ್ಮೊನೆಯಿಂದ ಕೆಂಗಿಡಿ
ಗಳನುಗುಳ್ದುದು ನಿಷ್ಠುರದಿ
ದಳವಾಡ ದಹನವ ಮಾಡುತ್ತ ಹರಿಯುರ
ಸ್ಥಲದಲ್ಲಿ ಬಂದು ಮೋಹಿಸಿತು ೭೬

ಮೂರು ಮೊನೆಯ ತ್ರಿಶೂಲ ಕೆಂಗಿಡಿಗಳನ್ನು ಉಗುಳುತ್ತ, ಸೈನ್ಯ ಸಮೂಹವನ್ನು ದಹನ ಮಾಡುತ್ತಾ ಕೃಷ್ಣನ ಎದೆಗೆ ಬಂದು ಮೋಹಿಸಿತು(ಅಪ್ಪಳಿಸಿತು)

ನೆರೆ ತಾಗಿ ತಟ್ಟುರ್ಚಿತೆಂಬ ಶಕ್ತಿಯ ಕೈ
ಮರೆಯದೆ ಕೃಷ್ಣ ಖಂಡಿಸಿದ
ಒರೆಯೊಳಗಿರ್ದ ಚಕ್ರವ ತೆಗೆದನು ಹಗ
ಲೆರೆಯನ ಪ್ರಭೆಯ ಕೀಳ್ಪಡಿಸೆ ೭೭

ಪೂರ್ಣ ತಾಕಿ ನಾಟಕೊಂಡಿತು ಎನ್ನುವಾಗ್ಗೆ ಶಕ್ತಿಯ ಕೈಯನ್ನು ಕೃಷ್ಣ ಕತ್ತರಿಸಿದ. ಹಗಲೆರೆಯನ (ಸೂರ್ಯನ)ಪ್ರಭೆಯನ್ನು ಕೀಳಾಗಿಸುವ ಥಳಥಳಿಸುವ ಚಕ್ರವನ್ನು ಕೃಷ್ಣ ಕೈಗೆ ತೆಗೆದುಕೊಂಡನು

ಕೇಶವನಂಗುಲಿಯೊಳು ಚಕ್ರಕೋಟಿ ದಿ
ನೇಶರೊಲು ತಿರ್ರನೆ ತಿರುಗೆ
ವಾಸವ ವಿಧಿ ದೈತ್ಯರ ಛಲ ಬೀತು ಬಆ
ಣಾಸುರ ನಿಂದ ಕಣ್ಗೆಡದೆ ೭೮

ಕೃಷ್ಣನ ಕೈಬೆರಳುಗಳಲ್ಲಿ ಚಕ್ರ, ಕೋಟಿ ಸೂರ್ಯರಂತೆ ತಿರ್ರನೆ ತಿರುಗಲು ಇಂದ್ರ ಬ್ರಹ್ಮ ಹಾಗೂ ರಕ್ಕಸರ ಬಲ ಹಾಗೂ ಛಲ ಹಿಂಗಿತು. ಅದರೆ ಬಾಣ ಕಂಗೆಡದೆ ನಿಂತಿದ್ದ

ದಿಟ್ಟ ನೀನಹುದೊ ಬಲೀಂದ್ರ ನಂದನ ನಿನ್ನ
ದಟ್ಟೈಸಿದಾ ತೋಳ ಮೊದಲು
ಕೊಟ್ಟಾತಗೆ ಪೇಳ್ದು ಕಾದುಕೊಳ್ಳೆನು ತಾ
ರ್ದಿಟ್ಟ ಕೃಷ್ಣನು ಚಕ್ರದಲಿ ೭೯

ಬಲೀಂದ್ರ ನಂದನನಾದ ಬಾಣ ನೀನು ನಿಜವಾಗಿಯೂ ದಿಟ್ಟ. ನಿನಗಿರುವ ದಟ್ಟತೋಳುಗಳನ್ನು ಮೊದಲು ಕೊಟ್ಟಾತನಿಗೆ ಹೇಳಿ, ಇದನ್ನು ಕಾದುಕೊ ಎಂದು ಚಕ್ರದಲಿ ಇಕ್ಕಿದ

ನಡುಗಿದ ಕಮಲ ಸಂಭವ ಭವಾದಿಗಳ ಸೊ
ಲ್ಲುಡುಗಿತು ದೈತ್ಯೇಶ್ವರನ
ಇಡಿಕಿರಿದೊಂಬೈನೂರ ತೊಂಬತ್ತೆಂಟು
ನಿಡುದೋಳು ತುಂಡಾದವು ೮೦

ಬ್ರಹ್ಮ ನಡುಗಿದ. ಶಿವ ಮೊದಲಾದವರ ಸೊಲ್ಲುಡುಗಿತು. ರಕ್ಕಸನಲ್ಲಿ ಗಿಟಕರಿಯುತ್ತಿದ್ದ ತೊಂಬತ್ತೆಂಟು ತೋಳುಗಳನ್ನು ತುಂಡರಿಸಿದ ಕೃಷ್ಣ.

ಧೀರ ಬಾಣನ ಬಾಹುಕಡಿಗಳು ಶೋಣಿತ
ವಾರಾಶಿಯೊಳಗೆ ತೇಲಿದವು
ಘೋರಾಕೃತಿವೆತ್ತು ಚಕ್ರ ಬಂದುದು ಸಿರಿ
ನಾರಾಯಣನ ಕೈಯೆಡೆಗೆ ೮೧

ಧೀರ ಬಾಣಾಸುರನ ಬಾಹುಕಡಿಗಳು(ತೋಳ ತುಂಡುಗಳು) ರಕ್ತದ ಸಮುದ್ರದಲ್ಲಿ ತೇಲಿದವು. ಘೋರಾಕೃತಿಯನ್ನು ತಳೆದಿದ್ದ ಚಕ್ರ ಶ್ರೀಕೃಷ್ಣನ ಕೈಗೆ ಬಂದಿತು.

ರಕ್ಕಸನೆರಡು ತೋಳುಗಳ ಕಡಿದಪೆನೆಂದು
ಚಕ್ಕರವಪುನರಪಿ ತುಡುಕೆ
ಮುಕ್ಕಣ್ಣನೈತರುತುಭಯ ವೀರರಿಗಡ್ಡ
ಹೊಕ್ಕನು ಮಧ್ಯಸ್ಥನಾಗಿ ೮೨

ರಕ್ಕಸನ ಉಳಿದ ಎರಡು ತೋಳುಗಳನ್ನು ಕಡಿದುಬಿಡುತ್ತೇನೆ ಎಂದು ಚಕ್ರವನ್ನು ಮತ್ತೆ ಹಿಡಿದಾಗ ಮುಕ್ಕಣ್ಣ ಉಭಯ ವೀರರಿಗೂ ಮಧ್ಯಸ್ಥಗಾರನಾಗಿ ಅವತರಿಸಿದ

ಮಾನವರೂಪಿನೊಳುದಿಸಿದ ಪರಬೊಮ್ಮ
ನೀನೆಂದು ನೋಡಿ ಭಾವಿಸದೆ
ತಾನತಿ ಮಥನವ ಮಾಡಲುಜ್ಜುಗಿಸಿದ
ದಾನವೇಶನ ಬಿಡು ನನಗೆ ೮೩

ಮಾನವ ರೂಪಿನಲ್ಲಿ ಹುಟ್ಟಿದ ಪರಬ್ರಹ್ಮ ನೀನೆಂದು ತಿಳಿಯದೆ ಬಾಣಾಸುರ ನಿನ್ನೊಂದಿಗೆ ಸಂಘರ್ಷಕ್ಕೆ ಇಳಿದ. ಅವನ ಜವಾಬುದಾರಿಯನ್ನು ನನಗೆ ಬಿಡು

ನಿನಗಿದು ಪುರಷಾರ್ಥವೆಂದರೆ ಬಲಿಕುಮಾ
ರನ ಕೊಲ್ವನಲ್ಲೆಂದು ಕೃಷ್ಣ
ಅನಲಾಕ್ಷಗೆ ಪೇಳಲೀಶ ಸದ್ಭಕ್ತನ
ಘನ ಪೌರುಷವ ನೋಡಿದನು ೮೪

ನಿನಗಿದು ಪುರುಷಾರ್ಥ ಎನ್ನುವುದಾದರೆ ನಾನು ಬಾಣಾಸುರನನ್ನು ಕೊಲ್ಲುವುದಿಲ್ಲವೆಂದು ಕೆಂಡಗಣ್ಣನಿಗೆ ಕೃಷ್ಣ ಭರವಸೆ ನೀಡಲು, ಮುಕ್ಕಣ್ಣ ಭಕ್ತನನ್ನು ನೋಡಿದನು.

ಕತ್ತರಿಸಿದ ಬಾಹುಮೂಲದಿ ಚೆಲ್ಲುವ
ನೆತ್ತರ ನಿಲಿಸಿ ಮೆಯ್ದಡಹಿ
ಚಿತ್ತಜಹರ ಲಜ್ಜಿತನಾದ ಭಕ್ತನ
ಕುಸ್ತರಿಸಿದ ಕೃಪೆಯಿಂದ ೮೫

ಕತ್ತರಿಸಿದ ತೋಳ ಮೂಲದಿಂದ ಸುರಿಯುವ ರಕ್ತವನ್ನು ನಿಲ್ಲಿಸಿ ಮೈದಡವಿ, ನಾಚಿಕೆಯಿಂದ ನಲುಗಿದ ಭಕ್ತನನ್ನು ಈಶ್ವರ ಉಪಚರಿಸಿದನು.

ಕೇಶವನೆಡೆಗೆನ್ನಡೆಗಾವನೊರ್ವನು
ದ್ವೇಷ ಬುದ್ಧಿಯ ಮಾಡಿದರೆ
ದೋಷ ಸಂಭವಿಸುವುದೆಂದು ಧೂರ್ಜಟಿ ದ್ವೆ
ತ್ಯೇಶಗೆ ಸ್ಪಷ್ಟಪಡಿಸಿದನು ೮೬

ಕೃಷ್ಣನ ಹಾಗೂ ನನ್ನ ವಿರುದ್ಧ ಯಾರಾದರೂ ದ್ವೇಷರೋಷಗಳಿಂದ ಕುದಿದರೆ, ಅವರಿಗೆ ಉತ್ಪಾತ ತಪ್ಪದು ಎಂದು ಮುಕ್ಕಣ್ಣ ರಕ್ಕಸನಿಗೆ ಸ್ಪಷ್ಟಪಡಿಸಿದನು

ಯದುಕುಲೋತ್ತಮ ಮೊಮ್ಮಗನಿಗುಷಾದೇತಿಯ
ಮದುವೆಯ ಮಾಡುವುದೆನುತ
ವಿಧುಮಕುಟಾಂಕಿತ ಬಾಣಾಸುರೇಶನ
ಸದುಮಂತ್ರಿಯೊಡನೆ ಪೇಳಿದನು ೮೭

ಯದುವಂಶ ತಿಲಕ ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನಿಗೆ ಉಷಾದೇವಿಯನ್ನು ಕೊಟ್ಟು ಮದುವೆ ಮಾಡಬೇಕೆಂದು ಚಂದ್ರಶೇಖರ ಬಾಣಸುರನ ಮಂತ್ರಿಗೆ ಹೇಳಿದನು

ಸಂಭ್ರಮವಡೆದ ಶೋಣಿತಪುರ ನಿಖಿಳ ಕು
ಟುಂಬುವ ನೋಯಿಸದಂತೆ
ಕುಂಭಾಂಡನಿಂದ ಕಾಣಿಸಿಕೊಂಬುದೆನುತ ಪೀ
ತಾಂಬರನೊಳು ರುದ್ರ ನುಡಿದ ೮೮

ಶೋಣಿತಪುರದ ಯಾವ ಕುಟುಂಬವನ್ನು ನೋಯಿಸಿದಂತೆ ಕುಂಭಾಂಡನ ಜೊತೆ ಕಾಣಿಸಿಕೊಳ್ಳುವುದು ಎಂದು ಶಿವ ಕೃಷ್ಣನಿಗೆ ಹೇಳಿದನು

ನಿಟಿಲಾಕ್ಷ ನೀನಾಡಿದ ಮಾತು ಹೃದಯ ಸಂ
ಘಟಿತವೆ ಬಾಣನಿಗೆನಲು
ಕುಟಿಲ ಬುದ್ಧಿಯ ಬಿಟ್ಟು ಬಲಿಸೂನು ಸತ್ಯವ
ನಟಿಸಿ ಬಿನ್ನಹ ಮಾಡಿದನು ೮೯

ಹಣೆಗಣ್ಣ, ನೀನಾಡಿದ ಮಾತು ಬಾಣಾಸುರನಿಗೆ ಸಮ್ಮತವೆ? ಎಂದು ಕೃಷ್ಣ ಕೇಳಿದಾಗ, ಬಲಿಸುತ ಕುಟಿಲವನ್ನು ಬಿಟ್ಟು ದಿಟವನ್ನು ವಿನಂತಿಸಿದನು.

ಪುಲ್ಲದಳಾಕ್ಷ ನೀನತಿದೈವವೆಂಬುದ
ಬಲ್ಲ ಮತ್ಪಿತನು ನಾನರಿಯೆ
ಹೊಲ್ಲೆಹವನು ತೀರ್ಕಣೆಸೆಂದುಭಯ ಪಾಣಿ
ಪಲ್ಲವದಿಂದ ವಂದಿಸಿದ ೯೦

ಕಮಲಾಕ್ಷ, ನೀನು ಹೆದ್ದೈವವೆಂಬುದನ್ನು ನನ್ನ ತಂದೆ ಬಲ್ಲ, ನಾನರಿಯೆ. ದೋಷವನ್ನು ಮುಕ್ತಾಯಗೊಳಿಸು ಎಂದು ಎರಡೂ ಕೈಗಳಿಂದ ವಂದಿಸಿದ.

ತಪ್ಪಿನಿತಿಲದುರ್ವಿಯ ನಿಮ್ಮಡಿಗಳಿಗೆ
ಒಪ್ಪಿಸಿದನು ನಮ್ಮ ತಂದೆ
ಒಪ್ಪಿಡಿನಡುವಿನ ಮಗಳನು ಮೊಮ್ಮಗ
ನಪ್ಪುಗೆಗೆ ಒಪ್ಪಿಸುವುದರಿದೆ ೯೧

ತಪ್ಪು ಎಳ್ಳುಕಾಳು ಮುಳ್ಳುಮೊನೆಯಷ್ಟಿಲ್ಲದಿದ್ದರೂ ನಮ್ಮ ತಂದೆ ಭೂಮಂಡಲವನ್ನು ನಿಮ್ಮ ಪಾದಕ್ಕೊಪ್ಪಿಸಿದನು. ಒಪ್ಪಿಡಿ(ಒಂದು ಹಿಡಿಯಲ್ಲಿ ಹಿಡಿಯ ಬಹುದಾದಷ್ಟು ಸಣ್ಣ ಸೊಂಟ) ನಡುವಿನ ಮಗಳನ್ನು ನಿಮ್ಮ ಮೊಮ್ಮಗನ ಅಪ್ಪುಗೆಗೆ ಅರ್ಪಿಸುವುದು ಅಸಾಧ್ಯವೆ?

ಬೋಧಾರುಹನಾದ ಪರಮೇಶ ನಿಮ್ಮೊಳು
ಭೇದವಿಲ್ಲೆಂದು ಸೂಚಿಸಲು
ರೋದನ ತೀರ್ಕಣಿಸಿತು ನಿಮ್ಮ ಮೊಮ್ಮಗೆ
ಮಾಧವ ಕೊಟ್ಟೆ ಮತ್ಸುತೆಯ ೯೨

ದಿವ್ಯಜ್ಞಾನಿಯಾದ ಪರಮೇಶ ನಿಮ್ಮಲ್ಲಿ ಭೇದವಿಲ್ಲೆಂದು ಸೂಚಿಸಲು, ರೋದನ ಮುಗಿಯಿತು, ನನ್ನ ಮಗಳನ್ನು ನಿಮ್ಮ ಮೊಮ್ಮಗನಿಗೆ ಕೊಟ್ಟದ್ದೂ ಕೊಟ್ಟದ್ದೆ.

ಇಂತೀ ಬಿನ್ನಹಂಗಳ ನೀನೆನ್ನಯ
ಮಂತಿರಿಯಿಂದೊಪ್ಪಗೊಳ್ಳೆನುತ
ದಂತಿಚರ್ಮಾಂಬರಧರ ಸಮಕ್ಷದಲಿ ನಿ
ಭ್ರಾಂತಿಯಿಂ ಬೀಳ್ಕೊಂಡ ಹರಿಯ ೯೩

ಹೀಗೆ ಈ ಎಲ್ಲ ಬಿನ್ನಹಗಳನ್ನು ನನ್ನ ಮಂತ್ರಿಯಿಂದ ಒಪ್ಪಿಗೆ ಪಡೆದುಕೋ ಎಂದು ಆನೆದೊಗಲುಡುಗೆಯ ಶಿವನ ಸಮಕ್ಷಮದಲ್ಲಿ ಹರಿಯನ್ನು ಬೀಳ್ಕೊಂಡ

ಅರಳಿದ ಬೆಳ್ದಾವರೆಗಣ್ಣನ ಕೂಡೆ
ಮರಳಿ ಧೂರ್ಜಟಿ ಮಾತನಾಡಿ
ಭರದಿಂದ ವರ ಗಣಸಹಿತ ಬಾಣನ ಕೊಂಡು
ತೆರಳಿದ ಕೈಲಾಸಪುರಿಗೆ ೯೪

ಕಮಲಾಕ್ಷನ ಜೊತೆಯಲ್ಲಿ ಶಿವ ಮತ್ತೆ ಮಾತಾಡಿ, ಭರದಿಂದ ಗಣಸಮೇತ ಬಾಣನನ್ನು ಒಡಗೊಂಡು ಕೈಲಾಸಕ್ಕೆ ತೆರಳಿದ

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೯೫

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯ ಚಂದ್ರರು ಇರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.

# ೪೧. ಕೃಷ್ಣನು ಉಷಾನಿರುದ್ಧರ ಕಂಡುದು

ಉತ್ತಮ ಮುನಿಪತ್ನಿಯ ಗರ್ಭದಿ ರೂಪು
ವೆತ್ತ ಮಹಾತ್ಮಕನೆನಿಪ
ದತ್ತಾತ್ರೇಯನ ಪಾದವ ಕೂರ್ತು ಕವಿತೆಯ
ಬಿತ್ತರಿಸುವುದೆನ್ನ ಕಿವಿಗೆ ೧

ಅತ್ರಿಮುನಿಯ ಪತ್ನಿ ಅನಸೂಯೆಯ ಹೊಟ್ಟೆಯಲ್ಲಿ ಹುಟ್ಟಿದ ಮಹಾತ್ಮಾನಾದ ದತ್ತಾತ್ರೇಯನ ಪಾದವನ್ನು ಕುರಿತು ಮೆಚ್ಚಿ ಕವಿತೆಯನ್ನು ಬಿತ್ತರಿಸು.

ಮಾರನ ಮಂತ್ರದೇವತೆ ಮಂಗಳಾಂಗಿ ಮಂ
ದಾರ ಗಂಧಾನ್ವಿತೆ ಎಸೆವ
ತೋರ ನುಣ್ಮೊಲೆಯ ಮಾನಿನಿ ರನ್ನೆ ಕತೆಯ ವಿ
ಸ್ತಾರವ ಕೇಳು ಪೇಳುವೆನು ೨

ಮಾರನ ಮಂತ್ರದೇವತೆ(ಮನ್ಮಥನ ಇಷ್ಟದೇವತೆಯಾದ ರತಿ), ಮಂಗಳಾಂಗಿ, ಮಂದಾರ ಪುಷ್ಪಗಂಧಿನಿ, ಮನದನ್ನೆ ರನ್ನೆ ಕಥೆಯನ್ನು ಕೇಳು

ಹರ ತನ್ನ ಕೈಲಾಸವ ಸಾರ್ದ ಬಾಣಾ
ಸುರ ಮುಖ್ಯ ಪ್ರಮಥರೊಂದಾಗಿ
ಪರಮ ಸಂತೋಷದಿ ನಾರದ ಬಂದು ಶ್ರೀ
ವರನಂಘ್ರಿಯುಗವ ಕೀರ್ತಿಸಿದ ೩

ಬಾಣಾಸುರ ಮುಖ್ಯ ಪ್ರಮಥರೊಡನೆ ಶಿವ ಕೈಲಾಸಕ್ಕೆ ಹೋದ. ಆಗ ನಾರದ ಬಂದು ಲಕ್ಷ್ಮೀಕಾಂತ ಪಾದದ್ವಯವನ್ನು ಕೀರ್ತಿಸಿದ.

ಬಾಣನ ಪಿತ ಗರ್ವ ಪರ್ವತ ಜಿತ ವಜ್ರ
ಬಾಣಾಸುರನಾಥ ಜೇತ
ಬಾಣನ ಬಾಹುವಿಚ್ಛೇದಾಹ್ಲಾದ ಪೂ
ಬಾಣನಪಿತ ಕೃಷ್ಣ ಶರಣು ೪

ಬಾಣನ ತಂದೆಯ ಅಹಂಕಾರ ಪರ್ವತಕ್ಕೆ ವಜ್ರಾಯುಧನಾಗಿ ಮೆರೆದವನು, ಬಾಣಾಸುರನನ್ನು ಜಯಿಸಿದವನು, ಬಾಣನ ತೋಳುಗಳನ್ನು ತರಿದವನು, ಹೂಬಾಣನ ಪಿತ ನಿನಗೆ ಶರಣು

ಅಸುರ ಹಿರಣ್ಯಾಂಬಕ ಹಿರಣ್ಯ ಕಶಿಪು
ದಶಕಂಠ ಕುಂಭಕರ್ಣಾದಿ
ಶಿಶುಪಾಲ ದಂತವಕ್ತ್ರಾಂತಕ ಬ್ರಹ್ಮಾಂಡ
ಬಸುರಾಂತ ಶ್ರೀ ಕೃಷ್ಣ ಶರಣು ೫

ಹಿರಣಾಕ್ಷ, ಹಿರಣ್ಯಕಶಿಪು, ರಾವಣ, ಕುಂಭಕರ್ಣ, ಶಿಶುಪಾಲ, ದಂತವಕ್ತ್ರಾಂತಕ, ಬಸುರಲ್ಲಿ ಬ್ರಹ್ಮಾಂಡವನ್ನು ಅಡಗಿಸಿಕೊಂಡಿರುವ ಕೃಷ್ಣ ಶರಣು.

ದೈತ್ಯಾರ್ಣವ ಕುಂಭಸಂಭವ ಮಹದಾದಿ
ದೈತ್ಯಾರಣ್ಯ ದಾವಾಗ್ನಿ
ದೈತ್ಯಾಂಧಕಾರ ಸಂಹಾರ ಭಾಸ್ಕರತೇಜ
ದೈತ್ಯಾದಿ ಶ್ರೀಕೃಷ್ಣ ಶರಣು ೬

ರಾಕ್ಷಸ ಸಮುದ್ರದ ಕುಂಭಸಂಭವ(ಅಗಸ್ತ್ಯ:ಅಂದರೆ ಅವನು ಸಮುದ್ರವನ್ನೇ ಆಪೋಷನ ತೆಗೆದುಕೊಳ್ಳುತ್ತಾನೆ. ಹಾಗೆ ನೀನು ರಾಕ್ಷಸರನ್ನು ನುಂಗಿ ನೀರು ಕುಡಿದಿದ್ದೀಯೆ ಎಂಬ ಅರ್ಥ), ರಾಕ್ಷಸರ ಅರಣ್ಯಕ್ಕೆ ಕಾಳ್ಗಿಚ್ಚು, ರಾಕ್ಷಸರ ಅಂಧಕಾರ ಸಂಹಾರ ಮಾಡುವ ಭಾಸ್ಕರನಾದ ಶ್ರೀಕೃಷ್ಣ ನಿನಗೆ ಶರಣು

ಖೇಚರ ಜನ ರಕ್ಷಪಾಲ ಸರ್ವೇಶ ನಿ
ಶಾಚರ ತಲೆಗುಂಡುಗೋವಿ
ವಾಚಾವಿದೂರ ಸಾಕಾರ ಚಂದ್ರಾದಿತ್ಯ
ಲೋಚನ ಶ್ರೀಕೃಷ್ಣಶರಂಬ ೭

ದೇವತೆಗಳ ರಕ್ಷಕ, ನಿಶಾಚರರ(ರಾಕ್ಷಸರ)ತಲೆಗೆ ಗುಂಡುಗೋವಿ (ಬಂದೂಕು)ಯಾದವನು ಮಾತಿಗೆ ನಿಲುಕದವನು, ಸೂರ್ಯಚಂದ್ರರನ್ನು ಕಣ್ಣಾಗುಳ್ಳ ಶ್ರೀಕೃಷ್ಣ ಶರಣು

ತಡೆಯದೆ ಸುರ ನಿಶಾಚರ ಮಾನಸ ನಾಗ
ವಡೆಯ ಮೋಹಿಸುವ ಮಾನಿನಿಯ
ಕಡೆಗಣ್ಣಿನಿಂದ ನಿರ್ಮಿತ ಮಾಡಿದ ಜಗ
ದೊಡೆಯಾಚ್ಯುತ ಕೃಷ್ಣ ಶರಣು ೮

ಸುರಾಸುರರು ನರನಾಗರು ಮೋಹಿಸುವ ಮಾನಿನಿಯನ್ನು ಕಡೆಗಣ್ಣಿನಿಂದ ನಿರ್ಮಿಸಿದ ಜಗದೊಡೆಯ ಕೃಷ್ಣ ಶರಣು.

ರೂಪಾಂತ ನಿಖಿಳ ಬ್ರಹ್ಮಾಂಡವ ತನುರೋಮ
ಕೂಪಂಗಳೊಂದೊಂದರೊಳಗೆ
ಜೋಪಾನಗೆಯ್ದಡಗಿಸಿಕೊಂಡಿರುವಂತ
ಗೋಪಾಲ ಶ್ರೀಕೃಷ್ಣ ಶರಣು ೯

ಸಕಲ ಬ್ರಹ್ಮಾಂಡವನ್ನು ಶರೀರದ ಒಂದೊಂದು ರೋಮಕೂಪದೊಳಗೆ ಅಡಗಿಸಿ ಕೊಂಡಿರುವ ಗೋಪಾಲ ಕೃಷ್ಣ ನಿನಗೆ ಶರಣು.

ಕೊಂಡಾಡುವೊಡೆ ವೇದಶ್ರುತಿ ಪೌರಾಣಂಗಳು
ಕಂಡುದಿಲ್ಲೊಡೆಯ ನಿಮ್ಮಡಿಯ
ತೊಂಡನೆಂದಿವನ ರಕ್ಷಿಸಿಕೊಂಬುದೆನುತ ಕುಂ
ಭಾಂಡನ ತಂದು ತೋರಿದನು ೧೦

ವೇದಶಾಸ್ತ್ರ ಪುರಾಣಗಳು ನಿಮ್ಮಡಿಯನ್ನು ಕಂಡುದಿಲ್ಲ. ಸೇವಕನೆಂದು ಇವನನ್ನು ರಕ್ಷಿಸಬೇಕು ಎಂದು ಕುಂಭಾಂಡನನ್ನು ತಂದು ತೋರಿಸಿದನು.

ನೋಡಿದ ದೈತ್ಯ ದೈತ್ಯಾರಿಯನೊಲಿದು ಕೊಂ
ಡಾಡಿದ ತನ್ನ ದುಃಖವನು
ಓಡಿಸಿ ತೊರೆದಳ್ಕರಿಂದ ಬಿನ್ನಹವನು
ಮಾಡಿದ ಮಧುಸೂದನಗೆ ೧೧

ರಕ್ಕಸ ರಕ್ಕಸಾರಿಯನ್ನು ನೋಡಿದ, ಒಲಿದು ಕೊಂಡಾಡಿದ, ತನ್ನ ದುಃಖವನ್ನು ತೊರೆದ, ಮಧುಸೂದನನಿಗೆ ಪ್ರೀತಿಯಿಂದ ಬಿನ್ನಹವನ್ನು ಮಾಡಿದ.

ಯೋಚಿಸಿ ಬುದ್ಧಿವೇಳ್ದಡೆ ಕೇಳದ ಮೂರ್ಖ
ಭೂಚಕ್ರಪತಿಯ ತೋಳ್ಗಡಿದು
ನಾಚಿಸಬೇಡ ನಮ್ಮುವನೆಂದು ಮೌಳಿಯ
ಚಾಚಿದ ಕೃಷ್ಣನಂಘ್ರಿಯೊಳು ೧೨

ಬುದ್ದಿ ಹೇಳಿದರೆ ಕೇಳದ ಮೂರ್ಖ ಭೂಚಕ್ರ(ಪೃಥ್ವಿ) ಪತಿಯ ತೋಳನ್ನು ತರಿದು ಬುದ್ಧಗಲಿಸಿದೆ. ನಮ್ಮನ್ನು ನಾಚಿಸಬೇಡ ಎಂದು ಕೃಷ್ಣಪಾದಗಳಿಗೆ ತಲೆ ಚಾಚಿದ

ಜಗದೊಳು ಬುದ್ಧಿವಂತರ ಮಾತು ಮನಸಿಂಗೆ
ಒಗಡಿಸುವುದು ದುರಾತ್ಮರಿಗೆ
ಮಗನೆ ನೀನೇನ ಮಾಡುವೆ ಸುಮ್ಮನೇಳೆಂದು
ನೆಗಹಿದ ಹರಿ ನಿಶಾಚರನ ೧೩

ಜಗತ್ತಿನಲ್ಲಿ ದುರಾತ್ಮರಿಗೆ ಬುದ್ಧವಂತರ ಮಾತು ಹಿಡಿಸುವುದಿಲ್ಲ. ನೀನು ಏನು ಹೇಳಬೇಕೋ ಅದನ್ನು ಹೇಳು ಎಂದು ದೈತ್ಯನನ್ನು ಶ್ರೀಕೃಷ್ಣ ಮೇಲಕ್ಕೆತ್ತಿದ

ಎದ್ದನು ಮುಕುಳಿತಾಂಜಲಿ ಕರಪುಟದಿ ನಿಂ
ತಿದ್ದನು ನಿಶಾಚರ ಭಯದಲಿ
ಕದ್ದೈಸದೆ ಕಮಲಾಯತಾಕ್ಷನ ನೋಡಿ
ಬಿದ್ದನು ಹರ್ಷ ವಾರ್ಧಿಯೊಳು ೧೪

ಎದ್ದನು, ಕೈಮುಗಿದು ನಿಂತಿದ್ದನು, ದೈತ್ಯ ಭಯದಿಂದ ಹಿಂದುಮುಂದು ನೋಡದೆ ಕಮಲಾಕ್ಷನನ್ನು ನೋಡಿ ಸಂತೋಷಸಾಗರದಲ್ಲಿ ತೇಲಾಡಿದನು

ದೃಢ ಭಕ್ತಿಯಲಿ ನಿಂದಿರ್ದ ತಾವಿಗೆ ಕೂರ್ತು
ನಡೆದಂಘ್ರಿಯುಗಳ ಪವಿತ್ರ
ಪೊಡೆಮಟ್ಟ ಹಸ್ತಮಸ್ತಕ ಬಹು ಪುಣ್ಯವ
ಪಡೆವುವು ಪರಮಾತ್ಮಕನೆ ೧೫

ಅನನ್ಯ ಭಕ್ತಿಯಿಂದ ತಾವು ನಿಂತ ತಾವಿಗೆ ಪ್ರೀತಿಯಿಂದ ನಡೆದ ಪಾದದ್ವಯ ಪವಿತ್ರ. ದೀರ್ಘದಂಡ ನಮಸ್ಕಾರ ಮಾಡಿದ ಹಸ್ತಮಸ್ತಕ(ಕೈಮತ್ತು ತಲೆ) ಪುಣ್ಯವನ್ನು ಪಡೆಯುವವು ಪರಮಾತ್ಮ

ನೋಡಲು ದೃಕ್ಪುಣ್ಯ ಪಿರಿದು ಸಂತಸದಿ ಕೊಂ
ಡಾಡಲು ನಾಲಗೆ ಪವಿತ್ರ
ಹಾಡಕೇಳಲು ಕರ್ಣದೊಳಿರ್ದ ಪಾತಕ
ಓಡುವುದಿಳೆಯ ಜೀವರಿಗೆ ೧೬

ನೋಡಲು ಕಣ್ಣಿಗೆ ಪುಣ್ಯ, ಕೊಂಡಾಡಲು ನಾಲಗೆ ಪವಿತ್ರ, ಹಾಡನ್ನು ಕೇಳಲು ಕಿವಿಯಲ್ಲಿದ್ದ ಪಾಪ ಪಲಾಯನ ಮಾಡುವುದು ಇಳೆಯ ಜೀವರಿಗೆ.

ಮರಣಕಾಲದಿ ಕೃಷ್ಣಕೃಷ್ಣ ಕೃಷ್ಣಾಯೆಂಬ
ಸ್ಮರಣೆಯೊಂದಕೆ ಮೋಕ್ಷವಹುದು
ಶರಣರ ದ್ವಿತೀಯದರ್ಘ್ಯ ಪಾದ್ಯವನಾಂತ
ಚರಣಾನ್ವಿತ ಕೃಷ್ಣ ಜಯತು ೧೭

ಮರಣ ಕಾಲದಲ್ಲಿ ಕೃಷ್ಣ ಕೃಷ್ಣ ಎಂಬ ಸ್ಮರಣೆ ಮಾಡಿದರೆ ಸಾಕು ಮೋಕ್ಷ ಲಭಿಸುವುದು. ಭಕ್ತರ ದ್ವಿತೀಯ(ಸಂಗಾತಿಯ) ಅರ್ಘ್ಯ ಪಾದ್ಯವನ್ನಾಂತ ಚರಣಾನ್ವಿತ ಕೃಷ್ಣ ನಿನಗೆ ಜಯತು.

ಕಾಶಿಯ ಸ್ಥಲದಲಿ ಶಿವಸಮಸ್ತರಿಗುಪ
ದೇಶಿಸುವುದು ನಿನ್ನ ನಾಮ
ದೋಷಿಗಳಿದನರಿಯದೆ ಕೆಟ್ಟರು ಪುಣ್ಯ
ರಾಶಿ ನಾರಾಯಣ ಜಯತು ೧೮

ಕಾಶಿಯ ಸ್ಥಲದಲ್ಲಿ ಶಿವಸಮಸ್ತರಿಗೆ ಉಪದೇಶ ನೀಡುವುದು ನಿನ್ನ ನಾಮ. ದೋಷದ ನಡೆಯವರು ಇದನ್ನರಿಯದೆ ಕೆಟ್ಟರು, ಪುಣ್ಯಶಾಲಿ ಶ್ರೀಹರಿ ಜಯತು.

ದೂಷಕರಿಂದಾದುದಾವರೆ ಘನ ಪರಿ
ಹಾಸಕರಿಂದಾದುದಾದರೆ
ಬೇಸತ್ತು ಬಯ್ದರೆ ಪಾಪಾಬ್ಧಿಯ ಕಡೆ
ಹಾಸುವ ಶ್ರೀಕೃಷ್ಣ ಜಯತು ೧೯

ದೂಷಕರಿಂದ ಆದದ್ದಾದರೂ ಸರಿಯೆ, ಪರಿಹಾಸಕರಿಂದ ಆದದ್ದಾದರೂ ಸರಿಯೆ. ಬೇಸತ್ತು ಬಯ್ದರೆ ಪಾಪಸಮುದ್ರವನ್ನು ಕಡೆಹಾಸುವ(ಕಡೆ ಹಾಯಿಸುವ) ಶ್ರೀಕೃಷ್ಣ ಜಯತು.

ಆರಂಭ ಕೃಷಿಯನು ಮಾಳ್ಪರು ಗದ್ದೆಗೆ
ನೀರ ಹರಿಯೆ ತಿದ್ದೆನಲು
ನಾರ ಹಂಗಡವ ಮಾಡೆನಲಾಗಿ ಪಾದದ
ಬೇರ ಕೀಳುವ ಕೃಷ್ಣ ಜಯತು ೨೦

ಆರಂಬ(ವ್ಯವಸಾಯ) ಮಾಡುವವರು ಗದ್ದೆಗೆ ನೀರು ಹರಿಯೆ(ಹರಿಯುವಂತೆ) ತಿದ್ದು(ತಿರುಗಿಸು, ವಿತರಿಸು) ಎನ್ನುವಾಗ ಹಾಗೂ

ನಾರ ಹಂಗಡ(ನಾರಿನ ಹಗ್ಗ) ಮಾಡು ಎನ್ನುವಾಗ ಹರಿ ಎಂಬ ನಾಮ, ನಾರ(ಸಿಂಗ)ಎಂಬ ನಿನ್ನ ನಾಮ ಉಚ್ಚಾರಗೊಳ್ಳುವುದರಿಂದ ಕೃಷಿಕರ ಪಾಪದ ಬೇರ ಕೀಳುವ ಕೃಷ್ಣ ಜಯತು.

ದೇಶದೊಳು ಅನ್ಯರ ವರ ಜಲಲಿಪಿಯಂತೆ
ನಾಶವಹುದು ಕೊಟ್ಟೊಡನೆ
ದಾಸೋತ್ತಮರಿಂಗೆ ನೀ ಕೊಟ್ಟ ವರ ತಾಮ್ರ
ಶಾಸನವಹುದು ನನ್ನೊಡೆಯ ೨೧

ದೇಶದಲ್ಲಿ ಅನ್ಯರು ಕೊಟ್ಟ ವರ ಜಲಲಿಪಿಯಂತೆ ಕೂಡಲೇ ನಾಶವಾಗುವುದು ಆದರೆ ನೀನು ಕೊಟ್ಟ ವರ ತಾಮ್ರಶಾಸನದಂತೆ ಅಸ್ತಿತ್ವದಲ್ಲಿರುವುದು.

ನಾಮಸ್ಮರಣೆ ನಾಲಗೆಗಳವಡದೆ ಮ
ತ್ತಾ ಮರಾಮರಾವೆಂದವಗೆ
ಪ್ರೇಮದಿಂದೊಲಿದು ಸದ್ಗತಿಯ ಪಾಲಿಸಿದ ಶ್ರೀ
ರಾಮ ವಿಭೀಷಣವರದ ೨೨

ನಾಮಸ್ಮರಣೆ ಮಾಡಲು ನಾಲಗೆ ತಿರುಗದಿರುವಾಗ 'ಮರಾಮರಾ' ಎಂದು ಉಚ್ಚರಿಸಿದ ವ್ಯಕ್ತಿಗೆ ಪ್ರೇಮದಿಂದ ಮೆಚ್ಚಿ ಸದ್ಗತಿಯ ಕೊಟ್ಟ ಶ್ರೀರಾಮ ನಿನಗೆ ಶರಣು.

ಇರಿವಾವಿಗೆ ಮುರುವಿಕ್ಕಬೇಕಲ್ಲದೆ
ಮುರುವೇಕೆ ಸುರಧೇನುವಿಗೆ
ಮರುಕದಿಂದನಾಥ ಜನರನು ಪಾಲಿಪ
ಸರುವೋತ್ತಮ ದೇವ ಶರಣು ೨೩

ಇರಿವಾವಿಗೆ (ಕರೆಯುವ ಹಸುವಿಗೆ) ಮುರು(ಕಲಗಚ್ಚು) ಇಕ್ಕಬೇಕಲ್ಲದೆ ಕಾಮಧೇನುವಿಗೆ ಮುರುವೇಕೆ ಬೇಕು? ಮರುಕದಿಂದ ಅನಾಥರನು ಪಾಲಿಪ ಸರ್ವೋತ್ತಮ ನಿನಗೆ ಶರಣು

ನೀರೂಡಿ ನೆರೆ ಸಲಹಿದರೆ ಶಾಲ್ಮಲಿ ವೃಕ್ಷ
ಬೀರುವುದುಂಟೆ ಸತ್ಫಲವ
ಹಾರುವರಿಂಗೆ ನಿರ್ಜರರೊಳು ನೀ ಕಲ್ಪ
ಭೂರುಹ ಶ್ರೀಕೃಷ್ಣ ಜಯತು ೨೪

ನೀರೂಡಿ ಕಾಪಾಡಿದರೆ ಶಾಲ್ಮಲಿ(ಬೂರುಗ) ವೃಕ್ಷ ಸತ್ಫಲವನ್ನು ನೀಡುವುದೆ? ಹಾರುವರಿಗೆ ದೇವತೆಗಳಲ್ಲಿ ನೀನು ಕಲ್ಪವೃಕ್ಷ ಇದ್ದಹಾಗೆ ಕೃಷ್ಣ (ಇಲ್ಲಿ ಹಾರುವರಿಗೆ ಎಂದರೆ ಬ್ರಾಹ್ಮಣರಿಗೆ ಎಂದು ಅರ್ಥ ಮಾಡಿಕೊಂಡು ಬೇಸ್ತು ಬೀಳುವಂತೆ ಶಬ್ದ ಶಯ್ಯೆಯ ಗಾರುಡಿಗತನವಿದೆ. ಪಾರ್>ಹಾರ್ ಎಂದರೆ ನೋಡು, ನಿರೀಕ್ಷಿಸು, ಹಾರೈಸು ಎಂದರ್ಥ. ಆದ್ದರಿಂದ ಹಾರುವರಿಗೆ ಎಂದರೆ ಯಾರೂ ನಿತ್ಯ ನಿನ್ನನ್ನು ಸ್ಮರಿಸುತ್ತಾರೋ ಹಾರೈಸುತ್ತಾರೋ ಅವರಿಗೆ ಕಲ್ಪವೃಕ್ಷ ಇದ್ದಂತೆ ಎಂಬ ಅರ್ಥ ಇಲ್ಲಿ ಪ್ರಸ್ತುತ)

ಅಜಪುತ್ರ ಪೌತ್ರ ದೇವೇಂದ್ರಾದಿ ನಾ
ಕಜರೆಲ್ಲ ಪರಿವಾರ ನಿಮ್ಮ
ಭಜನೆಯ ಮಾಳ್ಪೊಡಾನರ್ಹನೆ ಶ್ರೀ ಕೃಷ್ಣ
ಬಿಜ ಮಾಡು ಪುರವ ನಿಟ್ಟಿಸಲು ೨೫

ಅಜಪುತ್ರ ಪೌತ್ರ (ಪರಮಾತ್ಮನ ಮಗ ಮೊಮ್ಮಗ) ದೇವೇಂದ್ರನಾದಿಯಾಗಿ ಸ್ವರ್ಗದಲ್ಲಿ ಜನಿಸಿದವರೆಲ್ಲರೂ ನಿಮ್ಮ ಭಜನೆ ಮಾಡುವರು. ಅದಕ್ಕೆ ನಾನು ಅರ್ಹನೆ?ಕೃಷ್ಣ ಪರಮಾತ್ಮ ಪುರವನ್ನು ನೋಡಲು ದಯಮಾಡು.

ಊರೊಳಗಾನು ಬಂದೇನ ಮಾಳ್ಪೆನು ನೀ
ನಾರದ ಮಂತ್ರಿ ಜೊತೆ ಪೋಗಿ
ಮಾರ ಕುಮಾರನ ಸತಿಗೂಡಿ ತಹುದೆಂದು
ನೀರಜದಳನೇತ್ರ ನುಡಿದ ೨೬

ಊರೊಳಗೆ ಬಂದು ನಾನೇನು ಮಾಡುವೆನು? ನಾರದ ನೀನು ಮಂತ್ರಿ ಜೊತೆ ಹೋಗಿ ಮನ್ಮಥ ಸುತನನ್ನು ಅವನ ಸತಿಸಮೇತ ಕರೆದು ತಾ ಎಂದು ಶ್ರೀಕೃಷ್ಣ ಹೇಳಿದನು.

ದೇವ ನಾರದ ಮುನಿವರ ಸಲೆ ಬಲರಾಮ
ದೇವ ಕಂದರ್ಪಾದಿಗಳ
ದೇವ ನೀ ಕಳುಹಿ ಚಿತ್ತೈಸೆಂದೆನೆ ವಾಸು
ದೇವ ಬೀಳ್ಕೊಟ್ಟ ತನ್ನವರ ೨೭

ನಾರದ ತನ್ನೊಡನೆ ಬಲರಾಮ, ಮನ್ಮಥರನ್ನು ಕಳಿಸು ಎಂದಾಗ ವಾಸುದೇವ ತನ್ನವರನ್ನು ಕಳಿಸಿಕೊಟ್ಟ

ಕುಂಭಾಂಡ ನಾರದ ಮುನಿವರ ಬಲರಾಮ
ಶಂಬರಾಂತಕ ಮುಖ್ಯರುಗಳು
ಮುಂಬರಿದರು ಶೋಣಿತಪುರದೊಳು ತಮ್ಮ
ಗಂಭೀರ ಮಗನಿರ್ದ ನೆಲೆಗೆ ೨೮

ಕುಂಭಾಂಡ, ನಾರದ, ಬಲರಾಮ, ಮನ್ಮಥರು ಶೋಣಿತಪುರದಲ್ಲಿ ಅನಿರುದ್ಧ ಇರುವಲ್ಲಿಗೆ ಹೆಜ್ಜೆ ಹಾಕಿದರು

ಭೋಂಕನೆ ಹೊಕ್ಕರು ಸೆರಮನೆಯೊಳು ಹೊನ್ನ
ಸಂಕಲೆವಡೆದ ಬಾಲಕನ
ಸಂಕಟವನು ಕಂಡು ಬಲರಾಮದೇವ ಮೀ
ನಾಂಕ ದುಕ್ಕದೊಳಪ್ಪಿದರು ೨೯

ಸೆರೆಮನೆಯಲ್ಲಿ ಸಂಕೋಲೆಯಿಂದ ಬಂಧಿತನಾದ ಬಾಲಕನನ್ನು ಕಂಡು ಸಂಕಟಪಟ್ಟು ಬಲರಾಮ ಮನ್ಮಥರು ಅವನನ್ನು ಅಪ್ಪಿಕೊಂಡರು.

ಕಂಡ ಸನ್ಮುನಿರಾಯ ಕಮನೀಯ ಇಕ್ಷು ಕೋ
ದಂಡನ ತರಳ ವಿಗ್ರಹವನು
ಮಿಂಡಗಾರಿಕೆಯಲ್ಲಿ ಗಳಿಸಿದ ಭಾಗ್ಯವ
ನುಂಡಲ್ಲದೆ ತೀರದೆಂದ ೩೦

ಕಬ್ಬುವಿಲ್ಲನ ಮಗನನ್ನು ಕಂಡ ನಾರದ'ಮಿಂಡಗಾರಿಕೆಯಲ್ಲಿ ಗಳಿಸಿದ ಭಾಗ್ಯವನ್ನು ಉಂಡಲ್ಲದೆ ತೀರದು' ಎಂದು ವ್ಯಂಗವಾಡಿದ.

ನುಡಿಸಿದರಖಿಲೋಪಚಾರದಿಂ ಸಂಕಲೆ
ಬಿಡಿಸಿದರು ಮಜ್ಜನಗೆಯ್ಸಿ
ಉಡಿಸಿ ನವ ವಸ್ತ್ರವನಾಯಾ ತಾಣಕೆ
ತೊಡಿಸಿದರು ಮಣಿ ಭೂಷಣವ ೩೧

ಸಂಕಲೆಯಿಂದ ಬಿಡುಗಡೆ ಮಾಡಿ, ಸ್ನಾನ ಮಾಡಿಸಿ, ಹೊಸ ಬಟ್ಟೆಗಳನ್ನು ಹಾಕಿ ರತ್ನದೊಡವೆಗಳನ್ನು ತೊಡಿಸಿದರು.

ಕುಂಭಾಂಡ ಮಂತ್ರಿ ಸಿಂಗರಿಸಿದ ಕಮ್ಮಲ
ರಂಬನ ಮಗನ ಮೂರ್ತಿಯನು
ಹಂಬಲಿಸುವ ಕುವರಿಯ ತನ್ನ ಸಖಿಯೊಡನೆ
ಸಂಬರಮದಲಿ ಕಡೆಸಿದನು ೩೨

ಹೂಬಾಣನ ಸುತನ ಮೂರ್ತಿಗಾಗಿ ಹಂಬಲಿಸುವ ಬಾಣಜೆಯನ್ನು ಗೆಳತಿಯ ಜೊತೆ ಸಂಭ್ರಮದಿಂದ ಕರೆಸಿದನು.

ಬಂದಳಾಕ್ಷಣ ಸಖಿಯೊಡಗೂಡಿ ವಿಲಸಿತ
ದಂದಣವಿಳಿದು ನಾರದಗೆ
ವಂದನೆಗೆಯ್ದಳು ಬಲರಾಮ ಕಾಮಂಗೆ
ಚಂದನಗಂಧಿ ಲಜ್ಜೆಯಲಿ ೩೩

ಪಲ್ಲಕ್ಕಿಯಲ್ಲಿ ಬಂದಿಳಿದ ಚಂದನಗಂಧಿ ನಾರದ, ಬಲರಾಮ, ಮನ್ಮಥರಿಗೆ ನಾಚಿಕೆಯಿಂದ ವಂದಿಸಿದಳು.

ತಲೆಗುತ್ತಿರ್ದ ಭಾವವ ನೆರೆ ನಿಟ್ಟಿಸಿ
ಬಲರಾಮ ಕಾಮನಂದನಗೆ
ಮಲಯಜಗಂಧಿ ಸಹಿತ ಪಲ್ಲಕ್ಕಿಯ
ನೊಲಿದಡರೆಂದು ಪೇಳಿದನು ೩೪

ತಲೆಬಗ್ಗಿಕೊಂಡಿದ್ದ ಲಜ್ಜಾಭಾವವನ್ನು ಮನಗಂಡ ಬಲರಾಮ ಮನ್ಮಥಪುತ್ರನಿಗೆ ಚಂದನಗಂಧಿ ಸಮೇತ ಪಲ್ಲಕ್ಕಿಯನ್ನು ಹತ್ತು ಎಂದು ಹೇಳಿದನು.

ಪುಲ್ಲಶರಾತ್ಮಸಂಭವ ಕೇಳ್ದು ಹಿರಿಯರ
ಸೊಲ್ಲನುಲ್ಲಂಘಿಸದೆ ಒಡನೆ
ಸಲ್ಲಲಿತಾಂಗಿಯ ಸಿರಿಹಸ್ತವಿಡಿದು ಪೊಂ
ಬಲ್ಲಕ್ಕಿಯೊಳಗೆ ಮಂಡಿಸಿದ ೩೫

ಹಿರಿಯರ ಸೊಲ್ಲನ್ನು (ಮಾತನ್ನು) ಉಲ್ಲಂಘಿಸದೆ ಪುಲ್ಲಶರ(ಹೂಬಾಣ) ಸುತ ಕುವರಿಯ ಕೈಯನ್ನು ಹಿಡಿದು ಪಲ್ಲಕ್ಕಿಯೊಳಗೆ ಮಂಡಿಸಿದ.

ಸೌಂದರಮಯವೆತ್ತ ಸೊಬಗುರನ್ನೆಯ ತನ್ನ
ನುಂದೊಡೆಯೊಳಗಿಟ್ಟುಕೊಂಡು
ಕಂದರ್ಪಸುತ ತೆರಳಿದ ಕೆಳದಿಯರ ಹೊ
ನ್ನಂದಣ ಬೆನ್ನ ಭಾಗದಲಿ ೩೬

ತನ್ನ ಮನದನ್ನೆ ರನ್ನೆಯನ್ನು ತೊಡೆಯ ಮೇಲೆ ಕೂಡಿಸಿಕೊಂಡು ಕೆಳದಿಯರ ಪಲ್ಲಕ್ಕಿಯ ಹಿಂದೆ ತೆರಳಿದನು.

ರಾಜಮರಾಳ ಮತ್ತೇಭ ಸಂಕುಲಕೆ ಸ
ರೋಜಾಂಘ್ರಿಯುಗದ ಸುದತಿಯರು
ಮಾಜದೆ ಮನಗೊಳಿಸುವವೊಲು ನಡೆಗೊಂಡು
ದಾ ಜಾಣೆಯರ ಸಖನಿವಹ ೩೭

ಅರಸಂಚೆ ಹಾಗೂ ಸೊಕ್ಕಿದ ಆನೆಯ ನಡಿಗೆಗೆ ಪಾದಕಮಲ ದ್ವಯದ ಸುದತಿಯರು ಮನಗೊಳಿಸುವಂತೆ ನಡೆಗೊಂಡರು, ಆ ಜಾಣೆಯರ ಕೆಳದಿ ಸಮೂಹ

ಅಪಾರ ರತ್ನಾಂಕಿತ ಚಿನ್ನ ಬೆಳ್ಳಿ ಸ್ವ
ರೂಪದ ಸುವಸ್ತ್ರಾಭರಣ
ಲೇಪನ ಹೊನ್ನ ಪೇಟಿಕೆ ನೆರೆ ನಡೆಗೊಂಡು
ದೇಪೇಳ್ವೆ ಕೇಳಾಯತಾಕ್ಷಿ ೩೮

ಅಪಾರ ರತ್ನಖಚಿತ ಚಿನ್ನ ಬೆಳ್ಳಿಗಳ ವಸ್ತ್ರಾಭರಣ ಲೇಪನ, ಚಿನ್ನದ ಪೆಟ್ಟಿಗೆ ಸಂಚನಗೊಳ್ಳುವುದನ್ನು ಹೇಗೆ ವರ್ಣಿಸಿ ಮುಗಿಸುವುದು?

ನುಡಿವ ನಾನಾ ವಾದ್ಯಘೋಷಣೆ ಕಲಶ ಕ
ನ್ನಡಿಯ ಪೆಣ್ಗಳ ರಾಗರಚನೆ
ಇಡಿಕಿರಿದುದು ಸೆಟ್ಟಿ ಸಮಯರುಗಳ ಕೆಯ್ಯ
ಗುಡಿ ನಡೆತೋರಣ ನಿಚಯ ೩೯

ನಾನಾ ವಾದ್ಯಗಳ ಘೋಷಣೆ, ಕಳಶ ಕನ್ನಡಿ, ಹೆಣ್ಣುಗಳ ರಾಗರಚನೆ, ವ್ಯಾಪಾರಿಗಳ ಧಾರ್ಮಿಕ ಜನರ ಕೈಯಲ್ಲಿರುವ ಬಾವುಟ, ನಡೆ ತೋರಣ ಸಮೂಹ ತುಂಬಿತುಳುಕಿತು.

ಕುಂಭಿನಿ ಬೆಸಲಾದುದೆಂಬಂತೆ ಜನ ನೆರೆ
ತುಂಬಿತು ಹೊನ್ನಗಸೆಯೊಳು
ಮುಂಬಿನೊಳನಿರುದ್ಧ ಪೊರಮಟ್ಟ ನಿಖಿಳ ನಿ
ತಂಬಿನಿಯರ ಸಮೂಹದಲಿ ೪೦

ಭೂಮಿಗೆ ಹೆರಿಗೆಯಾಯಿತು ಎಂಬಂತೆ ಹೆಬ್ಬಾಗಿಲಲ್ಲಿ (ಅಗಸೆಯಲ್ಲಿ)ಜನ ತುಂಬಿದ್ದರು. ಮುಂಭಾಗದಲ್ಲಿ ಅನಿರುದ್ಧ ನಿತಂಬಿನಿಯರ ಸಮೂಹದಲ್ಲಿ ಹೊರಹೊರಟ.

ದಾನವೇಶ್ವರನ ಶೋಣಿತಪುರ ದುಗ್ಧಾಬ್ಧಿ
ಮಾ ನವೀನೆಯ ಕೋಳ್ಗೊಂಡು
ಮೀನಾಂಕಸುತ ಬಹುವಾದ್ಯಘೋಷದಿಂ ಬ
ರ್ಪಾನಂದ ಸೋಜಿಗವಾಯ್ತು ೪೧

ಬಾಣಾಸುರನ ಶೋಣಿತಪುರದ ಹಾಲ್ಗಡಲಿನಲ್ಲಿ ಮಾ ನವೀನೆ(ನವೀನ ಲಕ್ಷ್ಮಿ ಉಷೆಯನ್ನು; ಮಾ=ಲಕ್ಷ್ಮಿ)ಯನ್ನು ಕೈವಶ ಮಾಡಿಕೊಂಡು ಮನ್ಮಥಸುತ ಬಹುವಾದ್ಯ ಘೋಷದಲ್ಲಿ ಆಗಮಿಸುತ್ತಿರುವುದು ಆನಂದ ಹಾಗೂ ಸೋಜಿಗದ ಚಿಲುಮೆಯಾಯಿತು.

ವಾಣೀಧರ ಮಾನಸಪುತ್ರ ಹಲಧರ
ಪಾಣಿ ಮನ್ಮಥ ಕುಮಾರಕನ
ಮಾಣಿಕ್ಯಖಚಿತ ಪಲ್ಲಕ್ಕಿಯಿಂದಿಳಿಸಿ
ಕಾಣಿಸಿದರು ಮುರಹರನಿಗೆ ೪೨

ಬ್ರಹ್ಮನ ಮಾನಸ ಪುತ್ರ ನಾರದ, ನೇಗಿಲಧಾರಿ ಬಲರಾಮ, ಮನ್ಮಥನ ಮಗ ಅನಿರುದ್ಧನನ್ನು ಮಾಣಿಕ್ಯದಪಲ್ಲಕ್ಕಿಯಿಂದ ಇಳಿಸಿ ಮುರಹರನಿಗೆ ತೋರಿಸಿದರು.

ಪುಳಿಯಿಂದೊಳೆದೊಪ್ಪವಿಕ್ಕಿದ ಹೊನ್ನ ಪು
ತ್ತಳಿಯಂಥ ಮದುಮಕ್ಕಳೊಲಿದು
ಗಳಿಲನೆ ಬಂದು ಶ್ರೀ ಕೃಷ್ಣರಾಯನ ಪಾದ
ನಳಿನಕ್ಕೆ ನೊಸಲ ಚಾಚಿದರು ೪೩

ಹುಳಿಯಿಂದ ಉಜ್ಜಿ ತೊಳೆದು ಒಪ್ಪವಿಕ್ಕಿದ ಚಿನ್ನದ ಗೊಂಬೆಗಳಂಥ ಮದುಮಕ್ಕಳು ಗಳಿಲನೆ(ಬೇಗನೆ) ಬಂದು ಶ್ರೀಕೃಷ್ಣರಾಯನ ಪಾದ ನಳಿನಕ್ಕೆ ಹಣೆ ಚಾಚಿದರು

ಅಡಿವಿಡಿದಿರ್ದ ದಂಪತಿಗಳನುರೆ ಸಿರಿ
ಮುಡಿವಿಡಿದೆತ್ತಿದ ಬಳಿಕ
ನಿಡುಗಣ್ಣಿಂದ ನಿಟ್ಟಿಸಿ ತಾತ್ಪರ್ಯದಿ
ನುಡಿಸಿದ ಪೌತ್ರ ಪೌತ್ರಿಕೆಯ ೪೪

ಪಾದ ಹಿಡಿದಿದ್ದ ದಂಪತಿಗಳನ್ನು ತಲೆ ಹಿಡಿದು ಎತ್ತಿದ ಮೇಲೆ, ನೀಳಗಣ್ಣಿನಿಂದ ನಿಟ್ಟಿಸಿ ಮೊಮ್ಮಗ ಮೊಮ್ಮಗಳನ್ನು ಮಾತಾಡಿಸಿದ.

ಈ ಪಾಟಿಯ ಸೌಂದರವೆಣ್ಣು ಕಮನೀಯ
ರೂಪಸ್ಥ ನಿನಗಲ್ಲದುಳಿದ
ಕಾಪುರುಷರ್ಗೆ ಕೈಸಾರುವುದಿಲ್ಲೆಂದು
ಶ್ರೀಪತಿ ಪರಿತೋಷವಡೆದ ೪೫

ಇಷ್ಟೊಂದು ಸುಂದರ ಹೆಣ್ಣು ಸುಂದರ ರೂಪಸ್ಥನಾದ ನಿನಗಲ್ಲದೆ ಬೇರೆಯವರಿಗೆ ದಕ್ಕುವುದಿಲ್ಲ ಎಂದು ಶ್ರೀಕೃಷ್ಣ ಹರ್ಷಿಸಿದ.

ಬಪ್ಪುದು ಬಹುದಲ್ಲದೆ ಮಾಣ್ಬುದೆ ಗಟ್ಟ
ದುಪ್ಪು ಬೆಟ್ಟದ ನೆಲ್ಲಿಕಾಯ್ಗೆ
ಸುಪ್ಪತ್ತಿಗೆಯೊದಗಿದಂತೆ ಸುಗುಣಾನಿರುದ್ಧಗೆ
ಕಪ್ಪುರಗಂಧಿ ದೊರಕಿದಳು ೪೬

ಬರುವುದು ಬಂದಲ್ಲದೆ ಬಿಡುವುದೆ? ಗಟ್ಟದ(ಬೆಟ್ಟದ ಅಥವಾ ನದಿ

ಸೋಪಾನದ) ಉಪ್ಪು, ಬೆಟ್ಟದ ನೆಲ್ಲಿಕಾಯಿಗೆ ಸುಪ್ಪತ್ತಿಗೆ ಸುನಾಯಾಸವಾಗಿ (ಆಯಾಸವಿಲ್ಲದೆ ಸುಲಭವಾಗಿ)ಸಿಕ್ಕಿದಂತೆ ಸುಗುಣ ಅನಿರುದ್ಧನಿಗೆ ಕಪ್ಪುರಗಬಧಿ ಉಷೆ ದೊರಕಿದಳು

ದ್ವಾರವತಿಯೆಲ್ಲಿ ಶೋಣಿತಪುರವೆಲ್ಲಿ
ದೂರಸಮೀಪವಂಗೈಸಿ
ನೀರಜಭವ ಕಟ್ಟಿದ ಕಂಕಣ ತಪ್ಪ
ಬಾರದು ಕೈಗೂಡಿತೆಂದ ೪೭

ದ್ವಾರಾವತಿ ಎಲ್ಲಿ?ಶೋಣಿತಪುರ ಎಲ್ಲಿ? ದೂರ ಸಮೀಪಗಳು ಅಂಗೈಗೆ ಅಂಗೈ ಹೆಣೆದು (ಅಂಗೈಸಿ) ಬ್ರಹ್ಮ ಕಂಕಣ ತಪ್ಪದೆ ಕೈಗೂಡಿತೆಂದ.

ಆ ಕಮಲಜ ಮುಖ್ಯ ಸುರ  ಮಾನಸ ನಾಗಾ
ನೀಕಕ್ಕೆ ವೈವಾಹ ಸುಖದ
ನೀ ಕೊಡಬೇಕೆಂದು ಪೊಡೆಮಟ್ಟು ವರಚಿತ್ರ
ಲೇಖೆ ಬಿನ್ನಹವ ಮಾಡಿದಳು ೪೮

ಬ್ರಹ್ಮನಾದಿಯಾಗಿ ಸುರರು, ಮಾನವರು, ನಾಗರು ಈ ಎಲ್ಲ ಸಮೂಹಕ್ಕೆ ವಿವಾಹದಲ್ಲಿ ಭಾಗವಹಿಸುವ ಸುಖವನ್ನು ನೀಡಬೇಕೆಂದು ಚಿತ್ರಲೇಖೆ ಕೃಷ್ಣನಿಗೆ ವಂದಿಸಿ ಬಿನ್ನಹ ಮಾಡಿದಳು.

ಓರಂತೆ ಜಗದ ಜೀವರ ಕುಣಿಸುವ ಸೂತ್ರ
ಧಾರಿ ನಿನ್ನಾಜ್ಞೆಯಿಲ್ಲದೆಯೆ
ಬೇರೊಂದು ಕಪಟನಾಟಕವಂತೂ ಜರುಗ
ಬಾರದು ಕೇಳಂಬುಜಾಕ್ಷ ೪೯

ನಿರಂತರವಾಗಿ ಜಗದ ಜೀವರನ್ನು ಕುಣಿಸಿ ಮಣಿಸುವ ಸೂತ್ರಧಾರಿ, ನಿನ್ನ ಆಜ್ಞೆಯಿಲ್ಲದೆ ಬೇರೊಂದು ಕಪಟನಾಟಕ ಜರುಗಬಾರದು ಕೇಳು ಕಮಲಾಕ್ಷ.

ಹವಣಿಸಿ ಹಲವು ಕಬ್ಬುನವ ತಾಡಿಸುವವರು
ತವರ ವರ ತಾಡಿಸುವದರಿದೆ
ಭುವನ ಜಂತುಗಳ ದಂಪತಿಗೆಯ್ವ ಕರ್ತೃ ನಿ
ನ್ನವರ ವೈವಾಹಕೆ ಹೊರತೆ ೫೦

ಹವಣಿಸಿ(ಅಣಿಗೊಳಿಸಿ) ಹಲವು ಕಬ್ಬಿಣಗಳನ್ನು ತಾಡಿಸುವವರು ತವರವರ (ತಮ್ಮವರನ್ನು ತವರವನ್ನು) ತವರನ್ನು ತಾಡಿಸುವುದು ಅಸಾಧ್ಯವೆ? ಲೋಕದ ಜೀವಜಂತುಗಳನ್ನು ದಂಪತಿಗೈವ ನೀನು ನಿನ್ನವರನ್ನು ಮಾಡದಿರಲು ಸಾಧ್ಯವೆ?

ಚಿತ್ರಲೇಖೆಯ ವಚನವ ಕೇಳ್ದು ಪಂಕಜ
ಪತ್ರಾಕ್ಷ ಪರಿತೋಷವಡೆದು
ಮಿತ್ರೇಂದು ಶಿಖಿಲೋಚನ ತಪಧ್ವಂಸಿಯ
ಪುತ್ರಾನುಕೂಲೆಯ ಪೊಗಳ್ದ ೫೧

ಚಿತ್ರಲೇಖೆ ಮಾತನ್ನು ಕೇಳಿ ಹರ್ಷಗೊಂಡ ಕೃಷ್ಣ, ಸೂರ್ಯಚಂದ್ರ ಅಗ್ನಿಗಳನ್ನು ಕಣ್ಣಾಗುಳ್ಳವನ ತಪಸ್ಸನ್ನು ಧ್ವಂಸ ಮಾಡಿದ ಮನ್ಮಥನ ಮಗನಾದ ಅನಿರುದ್ಧನಿಗೆ ಅನುಕೂಲೆಯಾಗಿ ಕೆಲಸ ಮಾಡಿದ ಚಿತ್ರಲೇಖೆಯನ್ನು ಹೊಗಳಿದ.

ನೀ ಮಾಡಿದ ಮಾಟವೆನಿತಾಡಿದೊಡುಂಟು
ಕಾಮಾತ್ಮಜಗೆ ಮೇದಿನಿಯ
ಕೋಮಲೆಯರ ಶಿರೋಮಣಿಯ ಕೂಡಿಸಿದೆಯೆಂ
ದಾ ಮಾನಿನಿಯನು ಮನ್ನಿಸಿದ ೫೨

ಮನ್ಮಥಸುತನಿಗೆ ಕುಂಭಿನಿಯ ಕೋಮಲೆಯರ ಶಿರೋಮಣಿಯನ್ನು ಕೂಡಿಸಲು ನೀನು ಮಾಡಿದ ಮಾಟದ ಬಗೆಗೆ ಎಷ್ಟು ಹೇಳಿದರೂ ಮುಗಿಯುವುದಿಲ್ಲ ಎಂದು ಚಿತ್ರಲೇಖೆಗೆ ಗೌರವ ತೋರಿಸಿದ.

ಮುರಹರ ನೋಡು ಚಿತ್ತೈದು ಕುಂಭಾಂಡ ತ
ತ್ಪುರಜನ ಸಹಿತ ಕಾಣಿಕೆಯ
ವರ ವಸ್ತುಗಳ ತಂದಿಹನೆಂದು ನಾರದ
ಸ್ಮರ ಬಲಾದಿಗಳ್ಗೆ ತೋರಿದನು ೫೩

ಕುಂಭಾಂಡ ಪುರಜನ ಸಮೇತ ಕಾಣಿಕೆಯಾಗಿ ಬೆಲೆಯುಳ್ಳ ವಸ್ತುಗಳನ್ನು ತಂದಿದ್ದಾನೆಂದು ನಾರದನು ಕೃಷ್ಣನಿಗೆ ಬಲರಾಮನಿಗೆ ಮನ್ಮಥನಿಗೆ ತೋರಿಸಿದನು.

ರಂಭಾಸ್ತ್ರೀಯ ಕೀಳ್ಪಡಿಸುವ ವಧು ನಿಕು
ರುಂಬದಿಂ ಮುತ್ತಿನಾರತಿಯ

ಹೊಂಬರಿವಾಣದಿಂ ಬೆಳಗಿಸಿ ಮಂತ್ರಿ ಪೀ
ತಾಂಬರಧರನ ಕೀರ್ತಿಸಿದ ೫೪

ರಂಭೆಯನ್ನು ನಾಚಿಸುವ ಸ್ತ್ರೀಸಮೂಹದಿಂದ ಮುತ್ತಿನಾರತಿಯನ್ನು ಚಿನ್ನದ ಹರಿವಾಣದಲ್ಲಿ ಬೆಳಗಿಸಿ, ಮಂತ್ರಿ ಪೀತಾಂಬರ(ಕೃಷ್ಣ)ನನ್ನು ಹೊಗಳಿದ.

ಕ್ಷೋಣೀ ವಿಬುಧ ಭೂಭುಜ ವೈಶ್ಯ ಶೂದ್ರ ಸ
ದ್ವಾಣಿಜರುಗಳ ಕೈಯಿಂದ
ಮಾಣಿಕ ಮೌಕ್ತಿಕ ಮುಖ್ಯ ವಸ್ತುವನಿಕ್ಕಿ
ಕಾಣಿಸಿದನು ಕಂತುಪಿತಗೆ ೫೫

ಲೋಕದ ವಿದ್ವಾಂಸರು, ಪೃಥ್ವೀಪತಿಗಳು, ವೈಶ್ಯರು, ಶೂದ್ರರು, ಬಣಜಿಗ ಜನರ ಕೈಯಿಂದ ಮುತ್ತು ರತ್ನಗಳನ್ನು ಕಂತುಪಿತ ಕೃಷ್ಣನಿಗೆ ಇಡಿಸಿದನು.

ತೋಳುಡಿದಸುರಾಧಿಪನ ಗೇಹವ ಮುಟ್ಟು
ಗೋಳ ತನ್ನಯ ದ್ರವ್ಯಸಹಿತ
ಬಾಳುವೆಗಿರಬೇಕೆಂದು ವಂಚಿಸದೆ ಕೃ
ಪಾಳುವಿಗಿತ್ತು ವಂದಿಸಿದ ೫೬

ಬಾಣಾಸುರನ ಅರಮನೆಯನ್ನು ಹಾಗೂ ದ್ರವ್ಯವನ್ನು ಬದುಕಿಗೆ ಬೇಕಾಗುತ್ತದೆಂದು ವಶಪಡಿಸಿಕೊಂಡು ವಂಚನೆ ಮಾಡದೆ ಕೃಪಾಳು ಕೃಷ್ಣನಿಗೆ ಕೊಟ್ಟನು

ವಿತ್ತವಂಚನೆಯ ಮಾಡದೆ ತಂದು ನಮ್ಮಯ
ಚಿತ್ತವ ಗೆದ್ದೆ ನೀನೆನುತ
ಸತ್ತರಾಜಿತ ಕುವರಿಯ ಕಾಂತ ರಜನೀ ಚ
ರೋತ್ತಮಗಿತ್ತು ಮನ್ನಿಸಿದ ೫೭

ಐಶ್ವರ್ಯ ವಂಚನೆಯನ್ನು ಮಾಡದೆ ತಂದು ನಮ್ಮ ಮನಸ್ಸನ್ನು ಗೆದ್ದೆ ನೀನು ಎಂದು ಸತ್ಯಭಾಮಾ ಕಾಂತ ನಿಶಾಚರನನ್ನು ಗೌರವಿಸಿದ

ಕಡಗಭಾಪುರಿದ್ವಯ ಭುಜಕೀರ್ತಿ ಕಟ್ಟಾಣಿ
ಪಡೆದ ಕಂಧರದ ಮಾಲಿಕೆಯ
ಜಡಚರ ಕರ್ಣಕುಂಡಲ ಮಕುಟಾಂಗುಲೀಯಕ
ದೊಡನುಡುಗೊರೆಯ ಪಾಲಿಸಿದ ೫೮

ಕಡಗ(ಕೈಬಳೆ) ಭಾಪುರಿ(ತೋಳಿನ ಆಭರಣ) ಭುಜಕೀರ್ತಿ, ಕಟ್ಟಾಣಿ (ಶ್ರೇಷ್ಠ ಮುತ್ತು)ಯ ಕೊರಳಹಾರ, ಮೀನಾಕಾರದ ಕರ್ಣಕುಂಡಲ, ಕಿರೀಟ, ಉಂಗುರಗಳೊಡನೆ ಉಡುಗೊರೆಯನ್ನು ಕೊಟ್ಟ (ಜಡಚರ<ಜಲಚರ=ಮೀನು)

ಬದ್ಧವುಳ್ಳವ ನಿನ್ನ ಬಗೆ ಕಾಣಬಂತನಿ
ರುದ್ಧಗೆ ಕೊಟ್ಟೆವೀ ನೆಲನ
ಕದ್ದಯ್ಸದೆ ಕಮದನಿಚ್ಛೆಯೊಳಿಹುದೆಂದು
ಶುದ್ಧಾತ್ಮನಿತ್ತ ವೀಳೆಯವ ೫೯

ಬದ್ಧವುಳ್ಳವ(ನಿಯಮಕ್ಕೆ ಒಳಪಟ್ಟವ) ನೀನು, ನಿನ್ನ ಮನಸು ತಿಳಿಯಿತು. ಅನಿರುದ್ಧನಿಗೆ ನೆಲವನ್ನು ಕೊಟ್ಟೆವು, ಹಿಂದುಮುಂದು ನೋಡದೆ ಕಂದನ ಇಚ್ಛೆಯಂತಿರು ಎಂದು ಶುದ್ಧಾತ್ಮನಾಥ ಕೃಷ್ಣ ವೀಳ್ಯವನು ಕೊಟ್ಟನು

ಮರೆಯದೆ ಮಂತ್ರೀಶ ಪೇಳ್ದ ಪೇಳ್ದರಿಗುಡು
ಗೊರೆಯಿತ್ತು ಮನ್ನಿಸಲೊಡನೆ
ನೆರೆ ಬಲ್ಲವರು ಕೀರ್ತಿಸಿದರು ಮೂಲೋಕ
ದೆರೆಯನ ಪರಮ ಪೌರುಷವ ೬೦

ಕುಂಭಾಂಡ ಮಂತ್ರಿ ಮರೆಯದೆ ಹೇಳಿದ. ಹೇಳಿದವರಿಗೆಲ್ಲ ಉಡುಗೊರೆ ಕೊಟ್ಟು ಗೌರವಿಸಲು ಮೂಲೋಕದೊಡೆಯನ ಪೌರುಷವನ್ನು ಬಲ್ಲವರು ಹೊಗಳಿದರು

ಅಪರಿಮಿತಾಗಮ ಶ್ರುತಿಶಾಸ್ತ್ರ ಪೌರಾಣ
ಉಪನಿಷದ್ವಾಕ್ಯಾತೀತ
ಲಪನಚತುಷ್ಟಯ ನುತಿಮಾಡಿಲರಿಯ ಮ
ಜ್ಜಪ ಕೀರ್ತನೆಗೆ ನಿಲುಕುವುದೆ ೬೧

ಅಪರಿಮಿತ ಆಗಮ ಶ್ರುತಿ ಶಾಸ್ತ್ರ ಪುರಾಣ ಉಪನಿಷತ್ತುಗಳಿಗೆ ಅತೀತನು ನೀನು. ಚತುರ್ಮುಖ ಬ್ರಹ್ಮ ನಿನ್ನನ್ನು ಸ್ತುತಿ ಮಾಡಲು ತಿಳಿಯ. ಹಾಗಿರುವಾಗ ನಮ್ಮ ಜಪತಪ ಕೀರ್ತನೆಗೆ ನಿಲುಕುವುದು ಅಸಾಧ್ಯ

ಒಂದು ಪಕ್ಷದಲಿ ಬಾಣನ ದೆಸೆಯಿಂದ ಬಾ
ಲೇಂದು ಶೇಖರನ ನೋಡಿದೆವು

ಇಂದು ನಿಮ್ಮಂಘ್ರಿಯ ಕಂಡು ಮದ್ಭವಬೀಜ
ಬೆಂದುದೆಂದರು ದ್ವಿಜೋತ್ತಮರು ೬೨

ಬಾಣನ ದೆಸೆಯಿಂದ ಬಾಲೇಂದ್ರ ಶೇಖರನ (ಶಿವನ)ನನ್ನು ನೋಡಿದೆವು. ಈಗ ನಿಮ್ಮ ಪಾದದರ್ಶನದಿಂದ ನಮ್ಮ ಭವ(ಹುಟ್ಟುವುದು) ಬೀಜ ಬೆಂದುದೆಂದು ಬ್ರಾಹ್ಮಣರು ಹೊಗಳಿದರು.

ನೀನಲ್ಲದನ್ಯದೈವವ ಪೂಜೆಗೆಯ್ದು ಮ
ತ್ತೇನ ಕಂಡರು ಖಳಾಧಮರು
ಮಾನವನಾಗಿ ಭೂಭಾರವನಿಳುಹುವ
ಶ್ರೀನಾಥ ಶರಣೆಂದರವರು ೬೩

ನೀನಲ್ಲದೆ ಅನ್ಯದೈವವನ್ನು ಪೂಜೆಗೆಯ್ದು ಏನು ಸಾಧಿಸಿದರು ರಕ್ಕಸರು? ಮಾನವನಾಗಿ ಭೂಭಾರ ಇಳುಹಿದ ಶ್ರೀಕೃಷ್ಣ ನಿನಗೆ ಶರಣೆಂದರು

ವಿಜಯ ಲಕ್ಷ್ಮೀಶ ವಿದ್ವಜ್ಜನ ಮೊದಲಾದ
ಪ್ರಜೆ ಪ್ರಮಥರು ಕೀರ್ತಿಸುವ
ಭಜನೆಗೆ ಮೆಚ್ಚಿ ಭಾಗ್ಯವ ಕೊಟ್ಟು ಬೀಳ್ಕೊಂಡು
ಬಿಜ ಮಾಡಲುದ್ಯೋಗಿಸಿದ ೬೪

ಲಕ್ಷ್ಮೀಶನು ವಿದ್ವಾಂಸರು ಮೊದಲಾದ ಪ್ರಜೆಗಳು ಪ್ರಮಥರು ಕೀರ್ತಿಸುವ ಭಜನೆಗೆ ಮೆಚ್ಚಿ ಭಾಗ್ಯವನ್ನು ಕೊಟ್ಟು ಬೀಳ್ಕೊಂಡು ಹೊರಡಲುದ್ಯೋಗಿಸಿದ

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೬೫

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು

## ೪೨. ಶ್ರೀಕೃಷ್ಣನು ದ್ವಾರಕಿಗೆ ಬಂದುದು

ಕಮಲಜ ಪಿತ ಕಾಮತನೂಜ ರಿಪು ಜಿತ
ಕಮಲಾರೂಢ ಸತ್ಕ್ರಿಡ
ಕಮಲೇಶ ಕಮಲೋದರ ಕಮಲಧರನಂಘ್ರಿ
ಕಮಲವ ಕೂರ್ತು ಪೇಳು ಕತೆಯ ೧

ಕಮಲಜ ಪಿತನ(ಬ್ರಹ್ಮನ ತಂದೆ)ನ್ನು, ಅನಿರುದ್ದನ ವೈರಿ ಬಾಣಾಸುರನನ್ನು ಗೆದ್ದವನನ್ನು, ಗುರುಡವಾಹನನ್ನು, ಪೃಥ್ವಿಗೊಡೆಯನನ್ನು ಬ್ರಹ್ಮಾಂಡವನ್ನು ಉದರದಲ್ಲಿ ಒಳಗೊಂಡವನನ್ನು ಲಕ್ಷ್ಮೀಧರನನ್ನು ಮೆಚ್ಚಿ ಕಥೆ ಹೇಳು

ಭಾಗ್ಯವಡೆದ ಭಾಮಿನಿ ಮನೋರಥವಾಜಿ
ವಾಗೆಯ ಪಿಡಿದು ಅಚ್ಯುತ ಕೃತಿಯ
ಯೋಗ್ಯವೆಂದಾಲಿಸಿದರೆ ನಿನಗಾಯುರಾ
ರೋಗ್ಯ ಸಂಪಿದವ ಪೆರ್ಚಿವುದು ೩

ಭಾಗ್ಯ ಪಡೆದ ಭಾಮಿನಿ ಕೇಳು, ನಿನ್ನ ಮನಸ್ಸಿನ ಕುದುರೆಯ ಲಗಾಮನ್ನು ಹಿಡಿದು ಕೃಷ್ಣನ ಕೃತಿಯನ್ನು ಆಲಿಸಿದರೆ ನಿನಗೆ ಆಯುರಾರೋಗ್ಯ ಸಂಪದವನ್ನು ಹೆಚ್ಚಿಸುವುದು

ದೇಶವನಳಲಿಸಬೇಡೆಂದು ಲಕ್ಷ್ಮೀ ನಿ
ವಾಸ ಕುಂಭಾಂಡಗೆ ಬೆಸಸಿ
ತಾ ಸಂವರಿಸಿಕೊಂಡು ಹತ್ತಿದ ವಿಹಗಾ
ಧೀಶನ ವಿಮಲ ಕಂಧರವ ೨

ದೇಶದ ಜನರನ್ನು ಅಳಿಸಬೇಡ ಎಂದು ಲಕ್ಷ್ಮೀಕಾಂತ ಕುಂಭಾಂಡನಿಗೆ ಆಜ್ಞಾಪಿಸಿ, ತಾನು ಪಕ್ಷಿರಾಜನ ಕೊರಳನ್ನು ಏರಿದನು

ಅನಿರುದ್ಧ ಬಾಣನಂದನೆ ಚಿತ್ರಲೇಖಾ
ವನಿತೆ ಮುಂತಾದ ಪೆಣ್ಜನ
ರೆನಿತುಂಟವರ ವಸ್ತುವ ಪ್ರತಿಷ್ಠಿಸಿದರು
ವಿನತೆಯ ಸುತನ ಬೆನ್ನಿನಲಿ ೪

ಅನಿರುದ್ಧ ಉಷಾದೇವಿ ಚಿತ್ರಲೇಖೆ ಮುಂತಾದ ಹೆಣ್ಣುಗಳ ವಸ್ತುಗಳನ್ನು ಗರುಡನ ಬೆನ್ನ ಮೇಲೆ ಪ್ರತಿಷ್ಠಾಪಿಸಿದರು

ಕಲಹ ಕಾತುರದ ರಥ ಹಸ್ತಿ ಘೋಟಕ
ವಿಲಸಿತ ಪಾದಚಾರಿಗಳು
ಹಲಧರ ಕಂದರ್ಪ ಪಿಂದೆ ಯಾದವ ಬಲ
ನೆಲೆಸಿದುದು ಗರುಡೋತ್ತಮನ ೫

ಯುದ್ಧದ ರಥ, ಆನೆ, ಕುದುರೆ, ಕಾಲಾಳು, ಬಲರಾಮ, ಮನ್ಮಥ ಯಾದವ ಬಲ ಗರುಡೋತ್ತಮನ ಹಿಂಭಾಗದಲ್ಲಿ ನೆಲೆಸಿತು

ರಕ್ಕಸವಗೆ ಖಗರಾಜಂಗೆ ಪೇಳ್ದ ಪೆ
ಣ್ಮಕ್ಕಳು ಭೀತಿಸದಂತೆ
ಚೊಕ್ಕಟವಾಗಿ ನೀ ತಳರೆಂದ ಕೂಡಲೆ
ಪಕ್ಕವನು ಪರುಟವಿಸಿದನು ೬

ರಾಕ್ಷಸವೈರಿ ಪಕ್ಷಿರಾಜನಿಗೆ ಹೆಣ್ಣುಮಕ್ಕಳು ಭಯಪಡದಂತೆ ಎಚ್ಚರಿಕೆಯಿಂದ ಹೊರಡು ಎಂದು ಹೇಳಿದ ಕೂಡಲೇ ರೆಕ್ಕೆಯನ್ನು ಹರಡಿದನು

ಜಾಡಿಸಿ ನಭಕುಪ್ಪರಿಸಲ್ಕೆ ನಿಲ್ಲದ
ಲ್ಲಾಡಿತು ಪದಿನಾಲ್ಕು ಲೋಕ
ಕೋಡಿ ಬಿದ್ದುವು ಸಪ್ತಶರಧಿ ದುವ್ವಾಳಿಯ
ಮಾಡಿ ಗರುಡ ಉಪಟಳಗೈದ ೭

ಜಾಡಿಸಿ ಮೇಲಕ್ಕೆ ಕುಪ್ಪಳಿಸಲು ಹದಿನಾಲ್ಕು ಲೋಕಗಳು ಅಲ್ಲಾಡಿದವು. ಸಪ್ತಸಾಗರಗಳು ಕೋಡಿಬಿದ್ದವು. ನಾಗಾಲೋಟದಲ್ಲಿ ಸಾಗಿ ಗರುಡ ಉಪಟಳಗೈದ

ಅಸುರಾಧಿಶನ ಮುರಿದಿಕ್ಕಿ ಗಗನದಲಿ
ಬಿಸರುಹ ಲೋಚನ ತೆರಳಿದ
ವಿಸರವ ನೋಡೆನುತ ಬಲ್ಲಿದರಿಗೆ ಬಟ್ಟೆ
ಸುಸರವೆಂದರು ಪುರಜನರು ೮

ಅಸುರೇಶನನ್ನು ಕೊಂದು ಕಮಲಾಕ್ಷ ಖೇತ್ರದಲ್ಲಿ ಸಾಗಿದ ಹಬ್ಬುಗೆಯನ್ನು ನೋಡು ಎಂದು ತೋರಿಸುತ್ತಲೇ ಪುರಜನರು 'ಬಲಾಢ್ಯರಿಗೆ ಬಟ್ಟೆ(ದಾರಿ) ಸುಸರ (ಸುಲಭ) ' ಎಂದರು

ಭೂಭಾರಕನಾಗಿ ಸೊಕ್ಕಿರ್ದ ದೈತ್ಯ ಮ
ತ್ತೇಭ ಕಂಠೀರವ ಗಗನದಿ
ಶೋಭಾಯಮಾನದಿ ನಡೆಗೊಂಡುದ ಕಂಡು
ಕಾಬನ್ನ ಪೊಗಳ್ದರೂರುಗರು ೯

ಭೂಮಿಗೆ ಭಾರವಾಗಿ ಸೊಕ್ಕಿನಿಂದ ಬೀಗುತ್ತಿದ್ದ ದೈತ್ಯ ಮತ್ತೇಭ ಕಂಠೀಕರವ (ಮದಿಸಿದ ಆನೆಗೆ ಸಿಂಹರೂಪದಲ್ಲಿದ್ದ ಕೃಷ್ಣ) ಗಗನದಲ್ಲಿ ನಡೆಗೊಂಡುದ ಕಂಡು, ಕಾಣುವವರೆಗೂ ಅವನನ್ನು ಹೊಗಳಿದರು

ಅಳವಾಂತು ಗರುಡಕೃಷ್ಣನ ಕೊಂಡು ತಳರ್ದ
ವಳಯದಿ ಪುಣ್ಯ ಮೂರುತಿಯ
ನೆಳಲು ಬಿದ್ದ ಸರಹದ್ದಿನ ವಿವಿಧ ರಾಜ್ಯ
ಪೊಳಲವರು ಪುಣ್ಯವೆಯ್ದಿದರು ೧೦

ಶಕ್ತಿಯನ್ನು ಒಗ್ಗೂಡಿಸಿಕೊಂಡು ಗರುಡ ಕೃಷ್ಣನನ್ನು ಹೊತ್ತುಕೊಂಡು ಹೋದ ವಲಯದಲ್ಲಿ ಪುಣ್ಯಮೂರ್ತಿಯ ನೆರಳು ಬಿದ್ದ ಸರಹದ್ದಿನ ವಿವಿಧ ರಾಜ್ಯ ಪಟ್ಟಣಿಗರು ಪುಣ್ಯವಂತರೆಂದುಕೊಂಡರು

ಕಾಳೋರಗಬೇದಿ ರಥ ಮುಂದೆ ಹಿಂದೆ ಮ
ರಾಳ ವಾಹನ ಕೀರ್ತಿಸಲು
ಸೂಳಯಿಸಿದುವು ನಾನಾ ವಾದ್ಯ ಗಗನಾಂತ
ರಾಳದಿ ದಿಗ್ತಟ ಬಿರಿಯಲು ೧೧

ಕೃಷ್ಣನ ರಥ ಮುಂದೆ. ಹಿಂದೆ ನಾರದ ಕೀರ್ತಿಸವುದಕ್ಕೆ ದಿಗಂತ ಬಿರಿಯುವಂತೆ ನಾನಾ ವಾದ್ಯಗಳು ಗಗನಾಂತರಾಳದಲ್ಲಿ ಧ್ವನಿಗೈದವು

ಇಂದಿರಾದಿ ನಿಖಿಳ ನಿರ್ಜರರು ವಿಮಾನದ
ಸಂದಣಿಗಳಿಗಿದಿರ್ವಂದು
ದಂಧಳ ಧಳರೆಂದು ಬಾರಿಸಿದರು ದೇವ
ದುಂಧುಭಿಗಳನುಘೇ ಎನುತ ೧೨

ಇಂದ್ರನೇ ಮೊದಲಾದ ವಿಮಾನ(ಕಥ) ಸಮೂಹಗಳಿಗೆ ಎದುರು ಒಂದು ಧಂಧಳ ಧಳರೆಂದು ದೇವದುಂದುಭಿಗಳನ್ನು ಬಾರಿಸಿದರು, ಉಘೇ ಎಂದು ಕೂಗುತ್ತ.

ನಾಡನಿವಾಸಿಗಳು ಕೈವಾರಿಸುತಿರಲು
ಆಕಾಶ ಪಥವ ತೀರ್ಕಣಿಸಿ
ಗೋಕರ್ಣರಿಪು ವೈನತೇಯ ಬಂದನು ಶೋ
ಭಾಕರ ದ್ವಾರಕಾಪುರಿಗೆ ೧೩

ಸ್ವರ್ಗಲೋಕದ ವಾಸಿಗಳು ಹೊಗಳುತ್ತಿರಲು ಆಕಾಶ ಮಾರ್ಗವನ್ನು ಮುಗಿಸಿ ಗೋಕರ್ಣ (ಹಾವು)ವೈರಿ ವೈನತೇಯ (ಗರುಡ) ದ್ವಾರಕಾಪುರಿಗೆ ಬಂದನು

ಕಂಗೊಳಿಸುವ ಗೋಮತಿಯ ತೀರದಿ ನಿತ್ಯ
ಶೃಂಗಾರ ವನದ ಮಧ್ಯದಲಿ
ಮಂಗಳವಿಭವದಿ ಶ್ರೀಕೃಷ್ಣನಿಳಿದ ವಿ
ಹಂಗೇಶ್ವರನ ಕುಸ್ತರಿಸಿ ೧೪

ಕಂಗೊಳಿಸುವ ಗೋಮತಿ ನದಿಯ ತೀರದಲ್ಲಿರುವ ಶೃಂಗಾರ ವನದ ಮಧ್ಯದಲ್ಲಿ ಪಕ್ಷಿರಾಜನನ್ನು ಉಪಚರಿಸಿ ಶ್ರೀಕೃಷ್ಣ ಕೆಳಗಿಳಿದನು

ಸದಮಲ ಸರ್ವಜ್ಞ ನಿಂದು ನಿಟ್ಟಿಸೆ ಪ
ಕ್ಕದ ಗರಿಯ ಗರುಡ ಪಸರಿಸಲು
ಮದುವಕ್ಕಳಿಳಿದರು ಮಂತ್ರೀಶನಂದನೆ
ಮೊದಲಾದ ಪೆಣ್ಣುಗಳೊಡನೆ ೧೫

ಶ್ರೀಕೃಷ್ಣ ನೋಡುತ್ತಿದ್ದಂತೆ ಗರುಡ ತನ್ನ ರೆಕ್ಕೆಯ ಗರಿಯನ್ನು ಹರಡಲು ಚಿತ್ರಲೇಖೆ ಮೊದಲಾದ ಹೆಣ್ಣುಗಳೊಡನೆ ದಂಪತಿಗಳು ಇಳಿದರು

ಮುಸಲಾಂತ ಮೀನಧ್ವಜ ಮುಖ್ಯ ಯಾದವ
ಪ್ರಸರ ಮಾಬಲವಿಳಿದೊಡನೆ
ಜಸವೆತ್ತ ಬಾಣನ ಬಹಳ ಭಂಡಾರ ಬೊ
ಕ್ಕಸದ ಹೊರೆಗಳನಿಳುಹಿದರು ೧೬

ಬಲರಾಮ ಮನ್ಮಥ ಮೊದಲಾದ ಯಾದವ ಸಮೂಹದ ಮಾಬಲ (ಮಹಾಸೈನ್ಯ) ಇಳಿದೊಡನೆ, ಬಾಣನ ಬೊಕ್ಕಸದ ಹೊರೆಗಳನ್ನು ಇಳಿಸಿದರು

ಬನಬನದೆಡೆಯ ಭಾಸಿತಮಪ್ಪ ವಿಮಲ ಜೀ
ವನಗೊಳದೆಡೆಯ ಪೆರ್ದೊರೆಯ
ಮನಗೊಂಬ ನೀರಾಟದಿ ಹಸ್ತಿಹಯ ನೆರೆ
ಜನರಿದ್ದುದಿಳೆ ಹಡೆದಂತೆ ೧೭

ವನದಲ್ಲಿ ಪ್ರಕಾಶಮಾನವಾದ ನಿರ್ಮಲ ನೀರಿನ ಸರೋವರಗಳ ಸ್ಥಳದಲ್ಲಿ ದೊಡ್ಡ ನದಿಯ ಬಳಿಯಲ್ಲಿ ಭೂಮಿ ಹಡೆದಂತೆ ಆನೆ ಕುದುರೆ ಜನಜಂಗುಳಿ ಮನವನ್ನು ಸೆಳೆಯುವ ನೀರಾಟದಲ್ಲಿ ಇದ್ದುದು

ಪಲಸು ಮುಂತಾದ ಪಣ್ಗಳ ಮೆದ್ದು ತೆಂಗಾಯ
ಜಲವೀಂಟಿ ಮುಗುಳುಗಳ ಮುಡಿದು
ಬಲ ಪರಿತೋಷವ ಪಡೆದುದು ಯಾದವ
ಕುಲಶಿರೋಮಣಿಯ ಸನ್ನೆಯಲಿ ೧೮

ಹಲಸು ಮೊದಲಾದ ಹಣ್ಣುಗಳನ್ನು ತಿಂದು, ಎಳನೀರನ್ನು ಕುಡಿದು, ಹೂಗಳನ್ನು ಮುಡಿದು ಸೈನ್ಯ ಸಂತೋಷವನ್ನು ಪಡೆಯಿತು ಯದುವಂಶ ಲಲಾಮನ ಸೂಚನೆಯಂತೆ

ನೀಲಾಂಬರ ಕಂತು ಮೊದಲಾದ ಯಾದವ
ಜಾಲ ನಿರ್ಜರರು ಸಂದಣಿಸೆ
ಕೋಲಾಹಲದೊಸಗೆಯ ವಾದ್ಯ ಮೊಳಗಿತು
ಮುಲೋಕ ಕಿವಿ ಸದ್ದುಗಿಡಲು ೧೯

ಬಲರಾಮ ಮನ್ಮಥ ಮೊದಲಾದ ಯಾದವ ಸಮೂಹ, ದೇವತೆಗಳು ಗುಂಪು ಕೂಡಲು ಮೂರುಲೋಕದ ಕಿವಿಗಳು ಕಿವುಡಾಗುವಂತೆ ಹರ್ಷದ ವಾದ್ಯಗಳು ಮೊಳಗಿದವು

ಊರೊಳಗತಿ ಹರ್ಷವನಾಂತು ಪರಮ ಶೃಂ
ಗಾರವ ಮಾಡಿ ಕರ್ಪುರದ
ಆರತಿ ಕಳಸ ಕನ್ನಡಿವೆಂಗಳೊಡನ
ಕ್ರೂರ ಬಂದಿದಿರ್ಗೊಂಡ ಹರಿಯ ೨೦

ಊರನ್ನು ಶೃಂಗಾರಗೊಳಿಸಿ, ಕರ್ಪೂರದಾರತಿ ಕಳಸ ಕನ್ನಡಿ ಹೆಣ್ಣುಗಳೊಡನೆ ಅಕ್ರೂರ ಶ್ರೀಹರಿಯನ್ನು ಎದುರುಗೊಂಡ.

ಕನಕಪುಷ್ಪಾಂಜಲಿ ವಸ್ತ್ರನಿವಾಳಿ ಶೋ
ಭನ ರಾಗದಾರತಿವೆಳಗಿ
ಘನ ಪರಿತೋಷದೆ ಪೊಡೆಮಟ್ಟುದಾ ಪುರ
ಜನ ಜಯಜಯತೆಂದೆನುತ ೨೧

ಬೊಗಸೆಯಲ್ಲಿ ಕನಕಪುಷ್ಪಗಳನ್ನು ಚೆಲ್ಲಿ, ವಸ್ತ್ರಗಳನ್ನು ನಿವಾಳಿಸಿ (ದೃಷ್ಟಿತೆಗೆದು) ಶುಭಸಮಾರಂಭದ ಸಂಕೇತವಾಗಿ ಆರತಿ ಬೆಳಗಿ ಪುರಜನ ಸಂತೋಷದಿಂದ ಜಯ ಜಯವೆಂದು ನಮಸ್ಕರಿಸಿದರು

ಭವರೋಗಹರ ಬಾಣಕುಂಭಾಂಡ ಸುತೆ ಕಂತು
ಕುವರನನೊಡಗೊಂಡು ಲಲಿತ
ಚವರ ಬೊಂಬಾಳವನೇರಿ ಮೆಲ್ಲಡಿಯಿಟ್ಟ
ವಿವರವನೇನ ಬಣ್ಣಿಪೆನು ೨೨

ಕೃಷ್ಣನು, ಅನಿರುದ್ಧ ಉಷಾದೇವಿ ಚಿತ್ರಲೇಖೆಯರನ್ನೊಳಗೊಂಡು ಚಾಮರದ ಪಲ್ಲಕ್ಕಿಯನ್ನೇರಿ ಮೆಲ್ಲಡಿಯಿಟ್ಟನು

ಭಾಗವತರ ಸಂಕೀರ್ತನೆ ಸನಕಾದಿ
ಮಾಗಧ ಜನರ ಕೈವಾರ
ಆಗಮಸ್ತುತಿಪಾಠ ಧವಳಶೋಭನ ವಿನಿ
ಯೋಗದಿ ಹೊಕ್ಕ ದ್ವಾರಕಿಯ ೨೩

ಭಾಗವತರ ಸಂಕೀರ್ತನೆ, ಸನಕನೇ ಮೊದಲಾದ ವಂದಿಮಾಗಧರ ಪ್ರಶಂಸೆ, ವೇದಗಳ ಸ್ತುತಿ, ನಿರ್ಮಲ ಮಂಗಳ ವಿನಿಯೋಗದಲ್ಲಿ ದ್ವಾರಕಿಯನ್ನು ಪ್ರವೇಶಸಿದನು

ಹೊನ್ನಗಸೆಯ ಬಾಗಿಲ ಕದಕಡರ್ಚಿದ
ಕನ್ನಡಿ ಮಕರ ತೋರಣದಿ
ಸನ್ನಣಿಸಿದ ಸೀಗುರಿಯ ನಿಟ್ಟಿಸಲು ಭಾಂಡ
ದನ್ನವ ಸುರಿದರುಗ್ಗಡದಿ ೨೪

ಮಹಾದ್ವಾರದ ಬಾಗಿಲ ಕದಕ್ಕೆ ಲಗತ್ತಿಸಿದ ಕನ್ನಡಿ, ಮೆರವಣಿಗೆಯಲ್ಲಿ ಹಿಡಿದ ತೋರಣ(ಮಕರ ತೋರಣ) ಸಜ್ಜುಗೊಂಡ ಚಾಮರಗಳನ್ನು ನೋಡಲು ಉತ್ಸಾಹದಿಂದ ಪಾತ್ರೆಯ ಅನ್ನವನ್ನು ಸುರಿದರು

ಪೊಗಳಲದಾರ ಜಿಹ್ವೆಗೆ ಸಾಧ್ಯ ಮಣಿಹರ್ಮ್ಯ
ಯುಗಳಪಕ್ಷದ ಮುಂಬಿನಲಿ
ನೆಗಳು ಸುಂಡಿಲ ತೋರಣ ಗುಡಿ ಬಹು ಕುರು
ಜುಗಳ ಹೊಂಗಳಸದುನ್ನತಿಯ ೨೫

ರತ್ನಖಚಿತ ಸೌಧ, ಎರಡೂ ಪಕ್ಕದ ಮುಂದುಗಡೆ ಮೊಸಳೆ, ಆನೆ, ಬಾವುಟ ಹಾಗೂ ಕುರುಜು ( ಸಣ್ಣ ತೇರು)ಗಳ ಹೊಂಗಳಸದ ಉನ್ನತಿಯನ್ನು ಹೊಗಳಲು ಯಾರ ನಾಲಗೆಗೆ ಸಾಧ್ಯ?

ಅಂಗಡಿ ಬೀದಿಯ ಸಾಲು ಸೌಧವನೇರಿ
ಹೆಂಗಳಚ್ಯುತನ ಮೂರ್ತಿಯನು
ಕಂಗಳಿಂ ಮಿಗೆ ನೋಡಿ ಬೆಮೆಗೊಂಡು ನವ್ಯ ಪು
ಷ್ಪಂಗಳನೆರಚಿದರುತ್ಸವದಿ ೨೬

ಅಂಗಡಿ ಬೀದಿಯ ಎರಡೂ ಪಕ್ಕದ ಸಾಲು ಸಾಲು ಸೌಧಗಳನ್ನೇರಿ ಹೆಣ್ಣುಗಳ ಸಮೂಹ ಅಚ್ಯುತನ ಮೂರ್ತಿಯನ್ನು ಕಣ್ಣಾರೆ ನೋಡಿ ಭ್ರಮಾವಶರಾಗಿ ಮೀಸಲು ಪುಷ್ಪಗಳನ್ನು ಅಚ್ಯುತನ ಮೇಲೆ ಎರಚಿದರು.

ಪಸುರ್ಗೂಳ ಹರಿವಾಣಗಳೊಳು ತುಂಬಿ ರಂ
ಜಿಸುವ ರತ್ನದಾರತಿ ಬೆಳಗಿ
ದಸರಿ ಪಟ್ಟಾವಳಿ ಚಿತ್ರ ವಸ್ತ್ರವ ನಿವಾ
ಳಿಸಿದರಚ್ಯುತನಂಘ್ರಿಗಳಲಿ ೨೭

ಹರಿವಾಣದಲ್ಲಿ ಹಸುರು ಅನ್ನವನ್ನು ತುಂಬಿ, ರತ್ನದಾರತಿ ಬೆಳಗಿ ದಸರಿ(ವಸ್ತ್ರ ವಿಶೇಷ) ಪಟ್ಟಾವಳಿ (ರೇಷ್ಮೆ ವಸ್ತ್ರ) ಚಿತ್ತಾರದ ವಸ್ತ್ರಗಳನ್ನು ಕೃಷ್ಣಪದಗಳಲ್ಲಿ ನಿವಾಳಿಸಿದರು.

ಪುಡಿ ಕಪ್ಪುರ ಕಸ್ತೂರಿ ಕುಂಕುಮ ಧೂಳಿ
ಬಿಡಿಮುತ್ತು ಮಾಣಿಕದೊಡನೆ
ಹಿಡಿಹೊನ್ನ ಸೂರೆಯ ಬಿಟ್ಟರಿಕ್ಕೆಲದಂ
ಗಡಿಗರತೀವ ಮೋದದಲಿ ೨೮

ಕರ್ಪೂರದ ಪುಡಿ, ಕಸ್ತೂರಿ, ಕುಂಕುಮ ಧೂಳು, ಬಿಡಿಮುತ್ತು ರತ್ನದೊಡನೆ ಎರಡೂ ಕಡೆಯ ಅಂಗಡಿಗರು ಅಮಿತ ಸಂತೋಷದಿಂದ ಹಿಡಿಹಿಡಿ ಚಿನ್ನವನ್ನು ಸೂರೆಬಿಟ್ಟರು (ಧಾರಳವಾಗಿ ನೀಡಿದರು)

ಆತನಚ್ಯುತನಾತನನಿರುದ್ಧ ಲೋಕ ವಿ
ಖ್ಯಾತ ಬಾಣಾತ್ಮಜೆಯವಳು
ಆ ತಾಯಿ ಚಿತ್ರಲೇಖಾನಾರಿ ನೋಡೆಂದು
ಮಾತಾಡುತಿದ್ದರೂರುಗರು ೨೯

ಆತನು ಕೃಷ್ಣ, ಆತನು ಅನಿರುದ್ಧ, ಲೋಕವಿಖ್ಯಾತ ಬಾಣಸುತೆ ಉಷಾದೇವಿ ಅವಳು, ಆ ತಾಯಿ ಚಿತ್ರಲೇಖೆಯನ್ನು ನೋಡೆಂದು ಊರುಗರು ಮಾತಾಡುತ್ತಿದ್ದರು.

ನಾಗೇಂದ್ರ ತಲ್ಪನನಿದಿರ್ಗೊಳಲೆಯ್ತಂದ
ರಾಗೇಂದುವದನೆಯರ ಕೈಯ
ಶ್ರೀಗಂಧ ಧೂಪಾರತಿ ದೀಪಾರಣ್ಯದ
ಬೇಗೆಯೊಲು ಪೊಗೆ ಮುಸುಗಿದುದು ೩೦

ಶೇಷಶಾಯಿಯನ್ನು ಎದುರುಗೊಳ್ಳಲು ಬಂದ ರಾಗೇಂದುವದನೆ (ಪೂರ್ಣಚಂದ್ರೋದಯ ಕಾಲದ ಅರುಣಬಣ್ಣ)ಯರ ಕೈಯಲ್ಲಿನ ಶ್ರೀಗಂಧದ ಧೂಪಾರತಿ ದೀಪಾಕಣ್ಯದ (ದೀಪಗಳಕಾಡಿನ) ಬೆಂಕಿಯಂತೆ ಹೊಗೆ ಮುಸುಕಿತು.

ಹುರಿದುದು ಭವಬೀಜ ದುಷ್ಕರ್ಮದಂಕುರ
ಹರಿದುದು ಕಪಟದ ಬೇರು
ಸುರಿದುದಾನಂದಾಶ್ರು ಕೃಷ್ಣನಂಘ್ರಿಯ ಕಂಡು
ಪುರದವರು ಪುಣ್ಯ ಪೊಂದಿದರು ೩೧

ಭವಬೀಜ ಹುರಿದು ಕರಕಲಾಯಿತು ಮೋಸದ ಬೇರು ಹರಿದು ತುಂಡಾಯಿತು. ಹರ್ಷದ ಕಣ್ಣೀರು ಸುರಿಯಿತು. ಕೃಷ್ಣನ ಪಾದ ದರ್ಶನದಿಂದ ಪುರದವರು ಪುಣ್ಯ ಹೊಂದಿದರು.

ಲೋಕೇಶನ ಕಾಪಲಿರ್ದಾತನ ಬಾಹು
ಶಾಖೆಯ ಸವರಿ ಪೌತ್ರನೊಡನೆ
ಈಕೆಯೊಡಗೂಡಿ ಬಂದ ನೋಡೆಂದೆನುತ
ಆಕೆವಾಳರು ಹೊಗಳಿದರು ೩೨

ಈಶ್ವರನ ರಕ್ಷೆಯಲ್ಲಿದ್ದ ಬಾಣಾಸುರನ ತೋಳುಗಳನ್ನು ಸವರಿ ಮೊಮ್ಮಗನೊಡನೆ ಈಕೆಯನ್ನು ಒಡಗೊಂಡು ಬಂದನೆಂದು ಶೂರರು ಹೊಗಳಿದರು.

ಪಾಡಲು ಪರಮ ಸಂಪದವಕ್ಕು ಸ್ತೋತ್ರವ
ಮಾಡಲು ಮಂಗಳವಹುದು
ನೋಡಲು ನಸಿದು ಪೋಪುದು ಪಾಪವೆಂದು ಕೊಂ
ಡಾಡಿದರು ಕುಶಲಜ್ಞರೊಲಿದು ೩೩

ಹಾಡಲು ಪರಮ ಸಂಪದ ಲಭಿಸುತ್ತದೆ. ಸ್ತೋತ್ರ ಮಾಡಿದರೆ ಮಂಗಳವಾಗುವುದು. ನೋಡಲು ಪಾಪ ನಸಿದು(ನಶಿಸಿ) ಹೋಗುವುದು ಎಂದು ಕುಶಲಜ್ಞರು ಹೊಗಳಿದರು.

ಸುರ ನರ್ತಕಿಯರು ಮಾತ್ಸರ್ಯವಾಂತರೀ
ನರನರ್ತನಗಾರ್ತಿಯರ
ಪರಮೋತ್ಸವದಿ ನೋಡುತ ಬಂದ ಲಕ್ಷ್ಮೀ
ವರ ತನ್ನ ರಾಜ ಮಂದಿರಕೆ ೩೪

ಸುರ ನರ್ತಕಿಯರು ಅಸೂಯೆಗೊಂಡರು. ಏಕೆಂದರೆ ಲಕ್ಷ್ಮೀಕಾಂತ ನರನರ್ತಕಿಯರನ್ನು ನೋಡುತ್ತಾ ರಾಜ ಮಂದಿರಕೆ ಬಂದದ್ದಕ್ಕಾಗಿ.

ಡಣರೆಂಬ ಗಜಘಂಟೆಯ ನಾದ ವಾದ್ಯಘೋ
ಷಣ ಪಾಠಕರ ಕೈವಾರ
ಪ್ರಣವೋಚ್ಚಾರಣ ರಭಸವ ನಿಲಿಸಿದ
ಗುಣಯುತ ಕೈಯ ಸನ್ನೆಯಲಿ ೩೫

ಆನೆಯ ಘಂಟನಾದ, ವಾದ್ಯಘೋಷ, ಪಾಠಕರ ಪ್ರಶಂಸೆ, ಓಂಕಾರ ಉಚ್ಚಾರಣೆಗಳ ರಭಸವನ್ನು ಕೈಸನ್ನೆಯಿಂದ ಕೃಷ್ಣ ನಿಲ್ಲಿಸಿದ

ಇನರಶ್ಮಿಯ ಕೀಳ್ಪಡಿಸುವ ಮಕುಟ ವ
ರ್ಧನರ ಮಾಬಲವ ಕುಸ್ತರಿಸಿ
ಘನರಮ್ಯ ವಸ್ತ್ರ ಭೂಷಣವಿತ್ತು ತತ್ಪುರ
ಜನರ ಬೀಳ್ಕೊಟ್ಟನರ್ತಿಯಲಿ ೩೬

ಸೂರ್ಯ ರಶ್ಮಿಯನ್ನು ಕೀಳಾಗಿಸುವ ಮಕುಟವರ್ಧನರ ಮಹಾಸೈನ್ಯವನ್ನು ಉಪಚರಿಸಿ, ತತ್ಪುರ ಜನರಿಗೆ ವಸ್ತ್ರ ಒಡವೆಗಳನಿತ್ತು ಬೀಳ್ಕೊಟ್ಟ ಪ್ರೀತಿಯಿಂದ.

ತಾಳ ಮದ್ದಳೆ ಗೀತ ನರ್ತನಗಾರ್ತಿಯ
ರ್ಮೇಳ ವಿದ್ವತ್‌ಭೂಸರರ
ಜಾಳಕಭಯವಿತ್ತು ಬೀಳ್ಕೊಟ್ಟು ಚವರ ಬೊಂ
ಬಾಳವನಿಳಿದ ಮಾಧವನು ೩೭

ತಾಳಮದ್ದಳೆ ಗೀತ ನರ್ತನಗಾತಿಯರ ಮೇಳ, ಬ್ರಾಹ್ಮಣರ ಸಮೂಹಕ್ಕೆ ಅಭಯವನ್ನು ಕೊಟ್ಟು ಚಾಮರ ಪಲ್ಲಕ್ಕಿಯಿಂದಳಿದ.

ಉಘೆಯೆಂಬ ಶಬ್ದಸಂಭ್ರಮದಿಂದ ಬಹಳ ನರ
ಬುಗೆಯ ಸೇವಕರು ಕಂಚುಕಿಯು
ಉಘೆಯೆನುವುಜ್ಜಗದಲೆ ರತ್ನಖಚಿತ ಹಾ
ವುಗೆಯ ಮೆಟ್ಟಿಸಿದರಚ್ಯುತಗೆ ೩೮

ಉಘೆ ಎಂಬ ಘೋಷಣೆಯ ಸಂಭ್ರಮದಲ್ಲಿಯೇ ಸೇವಕರು ಮತ್ತು ದ್ವಾರಪಾಲಕರು ಅಚ್ಯುತನಿಗೆ ರತ್ನಖಚಿತ ಪಾದುಕೆಗಳನ್ನು ಮೆಟ್ಟಿಸಿದರು.

ಮಲೆವ ದೈತ್ಯರ ಗಂಡ ದಾಸೋತ್ತಮರನಂ
ಡಲೆವ ದುಷ್ಕೃತಗಳ ಗಂಡ
ಕೊಲಲೊಡರ್ಚುವ ಮೃತ್ಯುವಿನ ಗಂಡನ ಪಾದ
ಜಲರುಹಯುಗವ ನೋಡಿದರು ೩೯

ಮಲೆತು ನಿಲ್ಲುವ ರಕ್ಕಸರ ಗಂಡನ, ದಾಸೋತ್ತಮರಿಗೆ ತೊಂದರೆಕೊಡುವ ದುಷ್ಕೃತ್ಯಗಳ ಗಂಡನ, ಕೊಲ್ಲಲು ಯತ್ನಿಸುವ ಮೃತ್ಯುವಿಗೆ ಗಂಡನ ಪಾದಕಮಲಗಳನ್ನು ನೋಡಿದರು.

ಕಂಡರು ಪುಣ್ಯಕ್ಷೇತ್ರವ ಪುಣ್ಯತೀರ್ತವ
ಕಂಡರು ಪುಣ್ಯ ಮಾರ್ಗವನು
ಕಂಡರು ಪುಣ್ಯ ಲೋಕದಿಲೋಕವ ಸೂರೆ
ಗೊಂಡರು ಕೇಳಾಯತಾಕ್ಷಿ ೪೦

ಪುಣ್ಯಕ್ಷೇತ್ರವನ್ನು, ಪುಣ್ಯ ತೀರ್ಥವನ್ನು, ಪುಣ್ಯ ಮಾರ್ಗವನ್ನು ಕಂಡದ್ದೇ ಅಲ್ಲದೆ ಲೋಕಾದಿಗಳನ್ನು ದೂರೆಗೊಂಡರು.

ಬತ್ತಿತು ಭವಸಾಗರ ಯಮಪುರ ಮಾರ್ಗ
ಕುತ್ತಿತು ಕೃಷ್ಣ ಭಕ್ತರಿಗೆ
ಎತ್ತಿತು ಗುಡಿತೋರಣ ವೈಕುಂಠಕೆ
ಹತ್ತಿತು ಹರಿಯ ಸೂಠಿಯಲಿ ೪೧

ಹುಟ್ಟುಸಾವಿನ ಸಾಗರ ಬತ್ತಿತು, ಯಮಪುರದ ಮಾರ್ಗ ತಲೆಕುತ್ತಿತು (ಬಗ್ಗಿಸಿತು) ಕೃಷ್ಣಭಕ್ತರಿಗೆ ಗುಡಿತೋರಣ ಎತ್ತಿತು, ಹರಿಯ ಸೂಠಿಯಲಿ (ವಾಯುವೇಗದಲ್ಲಿ) ವೈಕುಂಠಕ್ಕೆ ಹತ್ತಿತು.

ನಾಲಗೆಯೊಂದು ಸಾಲದು ಹೊಗಳಲು ಹರಿಭಕ್ತಿ
ಶೀಲ ಶ್ರೀವೈಷ್ಣವೋತ್ತಮರು
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ
ಕಾಲವ ಪಡೆದರಾಕ್ಷಣವೆ ೪೨

ಹೊಗಳಲು ನಾಲಗೆಯೊಂದು ಸಾಲದು. ಹರಿಭಕ್ತಿ ಶೀಲ ಶ್ರೀ ವೈಷ್ಣವೋತ್ತಮರು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಕಾಲವನ್ನು ಪಡೆದರು ಆ ಕ್ಷಣದಲ್ಲೆ

ಉದ್ದವದೇವನ ಕೈಲಾಗಿನಲಿ ದೈತ್ಯ
ಮದ್ದನ ಮೆಲ್ಲಡಿಯಿಡಲು
ಹೆದ್ದೊರೆ ಕಟ್ಟಿಗೆಕಾರುದಗ್ಗಡದಿ ಹೊಗಳ
ಲೆದ್ದರು ಹರಿಸರ್ವೋತ್ತಮನ ೪೩

ಉದ್ದವದೇವನ ಕೈ ಹಿಡಿತದಲ್ಲಿ ದೈತ್ಯ ಮದ್ದನ (ಮರ್ದನ) ಮೆಲ್ಲನೆ ಹೆಜ್ಜೆ ಇಡಲು ಪ್ರವಾಹರೂಪಿ ಕೋಲುಕಾರರು ಹರಿಸರ್ವೋತ್ತಮನನ್ನು ಹೊಗಳಲು ಮೇಲೆದ್ದರು

ಭೂನಾಥ ಪಾದವೆಚ್ಚರಿಕೆ ಸುವರ್ಣ ಸೋ
ಪಾನದಾರೋಹಣ ಜತನ
ಶ್ರೀನಾಥ ಸರಗು ಸಂಭಾಳಿಕೆಯಷ್ಟಾವ
ಧಾನವೆಂದೆನಲಡರಿದನು ೪೪

ಪಾದ ಎಚ್ಚರಿಕೆ, ಸುವರ್ಣ ಸೋಪಾನದ ಆರೋಹಣ ಜೋಪಾನ, ಶ್ರೀನಾಥ ಸೆರಗು ನಿರ್ವಹಣೆಯ ಎಂಟು ಎಚ್ಚರಿಕೆಗಳು ಎನ್ನಲು ಹತ್ತಿದನು.

ವಿಲಸಿತ ಮಾಣಿಕ್ಯರಚಿತ ಮಂಟಪದ ಬಾ
ಗಿಲ ಗುಡಿ ತೋರಣೈಶ್ವರ್ಯವ
ನಲವಿಂದ ನೋಡಾಲಾಕ್ಷಣದಲಿ ಗೋವಳ
ಬಲಬಂದು ನಮಿಸಿದುದಾಗ ೪೫

ರತ್ನಖಚಿತ ಮಂಟಪದ ಬಾಗಿಲಲ್ಲಿರುವ ಬಾವುಟ ತೋರಣಗಳನ್ನು ಹರ್ಷದಿಂದ ನೋಡುತ್ತಿರಲು ಗೋಪಾಲ ವೃಂದ ಬಂದು ವಂದಿಸಿತು.

ನಿಟ್ಟಿದಿರಾಗಿ ತಂದರು ಹೊನ್ನ ಹರಿವಾಣದೊ
ಳಿಟ್ಟ ನೈವೇದ್ಯ ಸಂಕುಲವ
ನಿಟ್ಟಿಸಲಮಲ ವಸ್ತ್ರವ ನಿವಾಳಿಸಿ ತೆಗೆ
ದೊಟ್ಟಿದರುಭಯ ಪಕ್ಷದಲಿ ೪೬

ಚಿನ್ನದ ಹರಿವಾಣದಲ್ಲಿಟ್ಟ ನೈವೇದ್ಯವನ್ನು ಎದುರುಗಡೆ ತಂದರು. ನಿರ್ಮಲ ವಸ್ತ್ರವನ್ನು ನಿವಾಳಿಸಿ ತೆಗೆದು ಎರಡೂ ಪಕ್ಕದಲ್ಲಿ ಒಟ್ಟಿದರು (ರಾಶಿ ಹಾಕಿದರು)

ಮುಂದೆಸೆಯಲಿ ಬಾಣಸುತೆ ಚಿತ್ರಲೇಖೆ ಪೆಣ್
ವೃಂದದೊಳನಿರುದ್ಧ ಬರಲು
ಕಂದರ್ಪ ಸುತನ ಯುದ್ದ ಮಾಡಿ ಗೆದ್ದುತಂದ
ಮಂದರಧರನ ಪಾಡಿದರು ೪೭

ಮುಂಭಾಗದಲ್ಲಿ ಉಷಾದೇವಿ ಚಿತ್ರಲೇಖೆ ಸ್ತ್ರೀ ಸಮೂಹದ ಜೊತೆ ಅನಿರುದ್ಧ ಬರಲು, ಯುದ್ದ ಮಾಡಿ ಕಂದರ್ಪಸುತ ಅನಿರುದ್ಧನನ್ನು ಗೆದ್ದು ತಂದ ಮಂದರಧರ (ಕೃಷ್ಣ) ನನ್ನು ಕುರಿತು ಹಾಡಿದರು.

ಅಕಳಂಕ ನಾರದ ಬಲರಾಮ ಸ್ಮರ ನಾ
ಯಕರೆಡಬಲದೊಳಿಟ್ಟಣಿಸೆ
ಸಕಲ ಸಾಸದಿಂದೊಳಪೊಕ್ಕು ಮುರಾಸುರಾಲಿ
ತಕನ ಕಂಡರು ವಧೂಟಿಯರು ೪೮

ನಾರದ ಬಲರಾಮ ಮನ್ಮಥ ನಾಯಕರು ಎಡಬಲದಲ್ಲಿ ಇಡಿಕಿರಿದಿರಲು, ಕಂಡ ಸಾಹಸವನ್ನೆಲ್ಲ ಮಾಡಿ ಒಳಹೊಕ್ಕು ವಧೂಟಿಯರು ಮುರಾರಿಯನ್ನು ಕಂಡರು.

ಅಂದವಡೆದ ಮೆಯ್ನವಿರ್ಗುಡಿ ತೋರಣ
ಚೆಂದಳಿರ್ದುಟಿ ಕುಚಕಳಶ
ಮಂದಸ್ಮಿತ ಮುಖ ಕನ್ನಡಿಯವರ್ಕೈ
ತಂದರು ಕೃಷ್ಣನಿದ್ದೆಡೆಗೆ ೪೯

ಚಂದದ ಮೈನವಿರ(ಮೈಗೂದಲ)ಬಾವುಟ ತೋರಣ, ಕೆಂಪು ಚಿಗುರಿನ ತುಟಿ, ಕುಚಕಳಶ, ನಗುಮುಖದ ಕನ್ನಡಿಯವರು ಕೃಷ್ಣನಿದ್ದೆಡೆಗೆ ಬಂದರು.

ಅಧಿನಾಯಕಿ ರುಕ್ಮಿಣಿ ಸತ್ಯಭಾಮೆಯರು
ಹದಿನಾರು ಸಾವಿರ ಹೆಣ್ಣು
ಇದಿರ್ಗೊಂಡರು ಮುತ್ತಿನಾರತಿವೆಳಗಿ ಶ್ರೀ
ನಿಧಿ ನಿರ್ಜರಾಧೀಶ್ವರನ ೫೦

ಪಟ್ಟದರಸಿ ರುಕ್ಮಿಣಿ ಸತ್ಯಭಾಮೆ ಹಾಗೂ ಹದಿನಾರು ಸಾವಿರ ಹೆಣ್ಣುಗಳು ಕೃಷ್ಣನನ್ನು ಎದುರುಗೊಂಡು ಮುತ್ತಿನಾರತಿ ಬೆಳಗಿದರು

ಮಣಿಪಾತ್ರೆಯ ಸಾರ್ಚಿ ಹೊಂದಂಬಿಗೆಯಗ್ಗ
ವಣಿಯಿಂದ ಪಾದವ ತೊಳೆದು
ದಣಿವನಕ ನೋಡಿ ಕಣ್ಮನ ಸತ್ಯಭಾಮೆ ರು
ಕ್ಮಿಣಿದೇವಿಯರು ಹೊಗಳಿದರು ೫೧

ರತ್ನಪಾತ್ರೆಯನ್ನು ತಂದು, ಚಿನ್ನದ ತಂಬಿಗೆಯ ಅಗ್ಗವಣಿಯಿಂದ ಪಾದ ತೊಳೆದು ಕಣ್ಮನ ದಣಿಯುವ ತನಕ ನೋಡಿ ರುಕ್ಮಿಣಿ ಸತ್ಯಭಾಮೆ ಹೊಗಳಿದರು.

ಅನಿರುದ್ಧ ಹೋದನೆಂಬ ದುಕ್ಕದಲಿ ಕಂ
ಬನಿಗರೆದಾನು ಶೋಕಿಸಲು
ಮುನಿಯ ಸಾಕ್ಷಿಯಲಿ ಸದ್ಗುವರನ ತಹೆನೆನು
ತಿನಿವಾತುಗಳನಾಡಿದಿರಿ ೫೨

ಅನಿರುದ್ಧ ಹೋದ ಎಂಬ ದುಃಖದಲ್ಲಿ ಕಣ್ಣೀರು ಸುರಿಸುತ್ತಾ ನಾನು ಶೋಕ ಮಾಡಲು, ಮುನಿವರನ ಸಾಕ್ಷಿಯಲ್ಲಿ ಕುವರನ ತರುವೆನೆಂದು ಸಿಹಿ ಮಾತನ್ನಾಡಿದಿರಿ

ಏಕವಾಕ್ಯ ಪ್ರತಿಷ್ಠಾಚಾರ್ಯನೆಂದೆಂಬ
ಲೋಕೈಕ ಬಿರುದಾಂಕ ಪ್ರಭುವೆ
ಶ್ರೀಕಂಠ ಭಜಕನ ತೋಳ್ಗಳ ತರಿದು ವಿ
ವೇಕದಿಂ ತಂದೆ ಮತ್ಸುತನ ೫೩

ಏಕವಾಕ್ಯ ಪರಿಪಾಲನಾಚಾರ್ಯ ಎಂಬ ಲೋಕೈಕ ಬಿರುದಾಂಕಿತ ಪ್ರಭುವೆ, ಶಿವನಭಕ್ತನ ತೋಳುಗಳನ್ನು ತರಿದು ನನ್ನ ಮಗನನ್ನು ವಿವೇಕದಿಂದ ತಾಯ ಬಳಿಗೆ ತಂದೆ.

ಆನೆಗೈಯ ಕಬ್ಬಿನ ಕೋಲ ಸೆಳೆತಂದ
ಮಾನವ ಮೃಗರಾಜ ಸ್ವರೂಪ
ನೀನಲ್ಲದಿನ್ನಾರೆನುತ ಕೊಂಡಾಡಿದಳು
ಶ್ರೀನಾರಿ ಪರಿತೋಷವಡೆದು ೫೪

ಆನೆಯು ಸೊಂಡಿಲಲ್ಲಿದ್ದ ಕಬ್ಬಿನ ಜಲ್ಲೆಯನ್ನು ಸೆಳೆ ತಂದ ಮಾನವಮೃಗರಾಜ(ನಾರಸಿಂಹ) ಸ್ವರೂಪ, ನೀನಲ್ಲದೆ ಇನ್ನಾರು ಎಂದು ಲಕ್ಷ್ಮೀ ಸಂತಸದಿಂದ ಕೊಂಡಾಡಿದಳು.

ತ್ರಾಣಿಗಳರಸ ದೈತ್ಯನ ಮಹಾಗರ್ವವ
ಹೂಣಿಸಿ ತಮ್ಮನರಿಯದವರ
ನಾಣಿಸಿ ಎನ್ನ ಮೊಮ್ಮಗೆ ತಕ್ಕವಧು ಕ
ಟ್ಟಾಣಿ ರತ್ನವ ತಂದೆ ಜೀಯ ೫೫

ಸಮರ್ಥರ ಸಾರ್ವಭೌಮ, ರಕ್ಕಸನ ಗರ್ವವನ್ನು ಹೂತು, ತಮ್ಮನ್ನು ಅರಿಯದವರನ್ನು ನಾಣಿಸಿ (ನಾಚಿಕೆಪಟ್ಟುಕೊಳ್ಳುವಂತೆ ಮಾಡಿ) ನನ್ನ ಮೊಮ್ಮಗನಿಗೆ ತಕ್ಕ ವಧು ಶ್ರೇಷ್ಠ ಮುತ್ತನ್ನು ತಂದೆ ಜೀಯ

ವಿಧವರಿಯದೆ ಕೆಟ್ಟರು ನಿನ್ನ ಮಹಿಮಾ
ಸ್ಪದ ಗೋಪ್ಯವನು ತಾಮಸರು
ಆದನೇನ ಬಣ್ಣಿಪೆನೆನಲು ರುಕ್ಮಿಣಿಯ ನಾ
ರದ ಮುನಿರಾಯ ಕೀರ್ತಿಸಿದ ೫೬

ತಾಮಸರು ನಿನ್ನ ಮಹಿಮೆಯನ್ನು ಅರಿಯದೆಯೇ ಕೆಟ್ಟರು. ಅದನ್ನು ಏನೆಂದು ಬಣ್ಣಿಸಲಿ ಎಂದು ರುಕ್ಮಿಣಿ ಹೇಳಿದಾಗ ಆಕೆಯನ್ನು ನಾರದ ಹೊಗಳಿದ.

ನೀ ಬಲ್ಲೆ ತಾಯೆ ನಾಲ್ಮೊಗ ಬಲ್ಲ ಬಲಿ ಬಲ್ಲ
ನಾ ಬಲರಾಮ ವೈನತೇಯ
ಶ್ರೀ ಭಾಗೀರಥಿಧರ ವಜ್ರಿ ಬಲ್ಲರು ಅಬ್ಜ
ನಾಭನ ಗುಣಗಣಂಗಳನು ೫೭

ನಿನಗೆ ಗೊತ್ತು ತಾಯೆ, ಬ್ರಹ್ಮನಿಗೆ ಗೊತ್ತು, ಬಲಿಗೆ ಗೊತ್ತು, ಬಲರಾಮ, ಗರುಡ, ಗಂಗಾಧರ ಇಂದ್ರರಿಗೆ ಗೊತ್ತು ಕಮಲನಾಭನ ಗುಣಗಣಗಳು.

ಬಿಸರುಹಸಖ ಮುಖ್ಯ ನವಗ್ರಹಂಗಳನು ಪೂ
ಜಿಸಿ ಚತುರ್ದಶ ಮುನಿವರರು
ಹಸನಾಗಿ ಜಾನಿಸಿದರು ತಕ್ಕಿಸಲು ಕಷ್ಟ
ಕುಶಲವ ಪಿತ ಕೃಷ್ಣನಿರವ ೫೮

೫೮. ಸೂರ್ಯ ಮೊದಲಾದ ನವಗ್ರಹಗಳನ್ನು ಪೂಜಿಸಿ ಹದಿನಾಲ್ಕು ಮುನಿವರರು ಹಸನಾಗಿ ಧ್ಯಾನಿಸಿದರೂ ಕೂಡ ಅಪ್ಪಿಕೊಳ್ಳಲು ಕಷ್ಟ ಕುಶಲವ ಪಿತ(ಕುಶಲವರ ತಂದೆ)ರಾಮನ ಹಾಗೂ ಕೃಷ್ಣನ ಅಸ್ತಿತ್ವವನ್ನು

ಶುಕ ಪರಾಶರ ವ್ಯಾಸ ಕಪಿಲ ಕುಂಭಜ ಭೃಗು
ಬಕದಾಲ್ಭ್ಯ ವಾಶಿಷ್ಠ ಮುನಿಪ
ನಿಕರದಿ ಬಲ್ಲವರರಿವರು ನರದೇ
ಹಿಕರೇನ ಬಲ್ಲರಚ್ಯುತನ ೫೯

ಶುಕ, ಪರಾಶರ, ವ್ಯಾಸ, ಕಪಿಲ, ಅಗಸ್ತ್ಯ, ಭೃಗು, ಬಕದಾಲ್ಭ್ಯ, ವಶಿಷ್ಠ ಮುನಿಗಳ ಸಮೂಹದಲ್ಲಿ ಬಲ್ಲವರು ಅರಿಯುವರು, ನರದೇಹಿಗಳೇನ ಬಲ್ಲರು ಕೃಷ್ಣನನ್ನು?

ಜ್ಯೋತಿರ್ಮಯ ಪೂರ್ಣ ಪರಬೊಮ್ಮ ನಿತ್ಯ ವಿ
ಭೂತೀಶನೊತ್ತಟ್ಟಿಗಿರಲಿ
ಜಾತಿ ಪದ್ಮನಿ ನಿನ್ನ ಮೊಮ್ಮನ ವಧು ಗಾಡಿ
ಕಾತಿಯ ನೋಡೆಂದ ಮುನಿಪ ೬೦

ಜ್ಯೋತಿರ್ಮಯ ಸ್ವರೂಪನೂ, ಪೂರ್ಣ ಪರಬ್ರಹ್ಮನೂ, ವಿಭೂತಿಪುರುಷನೂ ಆದವನು ಹಾಗಿರಲಿ, ನಿನ್ನ ಮೊಮ್ಮಗನ ಮಡದಿ ಪದ್ಮಿನಿಜಾತಿಯ ಗಾಡಿಕಾತಿಯನ್ನು ನೋಡೆಂದು ನಾರದನು ಹೇಳಿದನು.

ಸಿರಿಕೃಷ್ಣನ ಮೇಲಣ ದಿಟ್ಟಿಯನಿತ್ತ
ತಿರುಹಿ ರತ್ನಾಂಚಿತ ಹೇಮ
ಹರಿವಾಣದಾರತಿಗಳನೆತ್ತಿ ನಿಖಿಲೋಪ
ಚರಿಯವ ಮಾಡಿದರು ಬಿಡದೆ ೬೧

ಶ್ರೀಕೃಷ್ಣನ ಮೇಲಿನ ದೃಷ್ಟಿಯನ್ನು ಇತ್ತ ಹೊರಳಿಸಿ, ರತ್ನಖಚಿತ ಚಿನ್ನದ ಹರಿವಾಣದ ಆರತಿಗಳನ್ನೆತ್ತಿ ಸಕಲ ಸೇವೆಯನ್ನು ಮಾಡಿದರು.

ಪಾಡಿದರಾಗಮೋಕ್ತಿಯಲಿ ಬಾಸಿಂಗವ
ಸೂಡಿದರು ತೊಂಡಿಲ ತೊಡಿಸಿ
ನೋಡಿದರು ಪರಮ ಸಂತೋಷದಿ ಮದುವೆಯ
ಮಾಡಿದರು ಮಣಿ ಮಂಟಪದಲಿ ೬೨

ಆಗಮೋಕ್ತಿಯಲ್ಲಿ ಹಾಡಿದರು, ಬಾಸಿಂಗವನ್ನು ಸೂಡಿದರು(ತೊಡಿಸಿದರು, ಮುಡಿಸಿದರು) ತೊಂಡಿಲ(ತಲೆಯಲ್ಲಿ ಧರಿಸುವ ಮುತ್ತಿನ ಆಭರಣ) ತೋಡಿಸಿ ನೋಡಿದರು, ರತ್ನಮಂಟಪದಲ್ಲಿ ಪರಮ ಸಂತೋಷದಿಂದ ಮದುವೆಯನ್ನು ಮಾಡಿದರು.

ಸಡಗರದಲಿ ಕರ್ವುವಿಲ್ಲನ ಸುತನುಷೆಯ
ನೊಡಗೊಂಡು ಮಂತ್ರಿಜೆ ಸಹಿತ
ಪೊಡಮಟ್ಟರು ರುಕ್ಮಿಣಿ ಸತ್ಯಭಾಮೆ ಪೆ
ಣ್ಗಡಣಕೆ ರತಿದೇವಿ ಸಹಿತ ೬೩

ಸಡಗರದಿಂದ ಅನಿರುದ್ಧನು ಉಷೆಯನೊಡಗೊಂಡು ಚಿತ್ರಲೇಖೆ ಸಮೇತ, ರುಕ್ಮಿಣಿ ಸತ್ಯಭಾಮೆ ರತಿದೇವಿ ಸಹಿತ ಪೆಣ್ಗಡಣಕ್ಕೆ ನಮಸ್ಕರಿಸಿದರು.

ಗಾವಿಲ ದೈತ್ಯನ ಬಲೆಗೆ ಬಿದ್ದೊಡಲಾಂತು
ಜೀವಿಸಿ ಬಂದುದೆ ಎನಗೆ
ಸಾವಿರಲಕ್ಷೋಪಲಕ್ಷ ನಿಧಿಯೆಂದು ರತಿ
ದೇವಿ ಮುದ್ದಾಡಿದಳು ಮಗನ ೬೪

ದಡ್ಡ ದೈತ್ಯನ ಬಲೆಗೆ ಬಿದ್ದು ಜೀವಸಹಿತ ಮರಳಿ ಬಂದದ್ದೇ ನನಗೆ ಲಕ್ಷೋಪಲಕ್ಷ ನಿಧಿಯೆಂದು ಮಗನನ್ನು ಮುದ್ದಾಡಿದಳು.

ಸೊಸೆಯ ಲಾವಣ್ಯವ ನೊಡಿ ಸಂತಸವೆತ್ತು
ಸೊಸೆಗೂಡಿ ಕಂಸ ಮರ್ದನನ
ಹಸೆಯ ಮದುವಕ್ಕಳು ಸಹಿತ ಕೃಷ್ಣಾಂಘ್ರಿಗೆ
ಒಸಗೆಯಿಂ ಪೊಡಮಟ್ಟರೊಲಿದು ೬೫

ಸೊಸೆಯ ಸೌಂದರ್ಯವನ್ನು ನೋಡಿ ಸಂತಸಗೊಂಡು, ಹಸೆಮಣೆ (ಮದುವೆ ಸಂದರ್ಭದಲ್ಲಿ ಹೆಣ್ಣುಗಂಡುಗಳ ಕೆಳಕ್ಕೆ ಹಾಕುವ ಪೀಠ)ಯೇರಿದ ಮದುಮಕ್ಕಳ ಸಮೇತ ಕಂಸಮರ್ದನನಾದ ಕೃಷ್ಣನಿಗೆ ಹರ್ಷದಿಂದ ನಮಸ್ಕರಿಸಿದರು.

ನಾರದ ಮೊದಲಾದ ಪಿರಿಯರ್ಗೆ ತಾ ನಮ
ಸ್ಕಾರವ ಮಾಡಿ ಸಂತಸದಿ
ಆರೊಗಣೆಗೆ ಚಿತ್ತೈಸೆಂದು ಶ್ರೀ ಮನೋ
ಹಾರಂಗೆ ಬಿನ್ನವಿಸಿದಳು ೬೬

ನಾರದ ಮೊದಲಾದ ಹಿರಿಯರಿಗೆ ತಾನು ವಂದಿಸಿ, ಸಂತಸದಿಂದ ಊಟಕ್ಕೆ ದಯಮಾಡಿಸಿ ಎಂದು ಶ್ರೀಕಾಂತನಿಗೆ ಬಿನ್ನವಿಸಿದಳು.

ಎನಲಾಕ್ಷಣ ಬಂಧುವರ್ಗ ನಿಬ್ಬಣ ಪೆ
ಣ್ಣಿನ ಮದುವಕ್ಕಳು ಸಮೇತ
ಘನ ಪರಿತೋಷದಿ ಪರಮಾನ್ನ ಘೃತಭೋ
ಜನವ ಮಾಡಿದ ಕೃಷ್ಣರಾಯ ೬೭

ಕೂಡಲೇ ಕೃಷ್ಣ ನೆಂಟರಿಷ್ಟರು, ನಿಬ್ಬಣದ ಹೆಣ್ಣುಮಕ್ಕಳು, ಮದುಮಕ್ಕಳು ಸಹಿತ ಸಂತೋಷದಿಂದ ಪರಮಾನ್ನ ತುಪ್ಪದೂಟವನ್ನು ಮಾಡಿದರು.

ಗಂಧೋದಕದಿಂದ ಕಯ್ದೊಳೆದಮಲ ಸು
ಗಂಧವ ಮೆಯ್ಯೂಡಿಕೊಂಡು
ಗಂಧಸಂಯುಕ್ತ ತಾಂಬೂಲವನೊಲಿದು ಗೋ
ವಿಂದನೆಲ್ಲರಿಗೆ ಪಾಲಿಸಿದ ೬೮

ಸುಗಂಧ ಜಲದಿಂದ ಕೈಯನ್ನು ತೊಳೆದು, ನಿರ್ಮಲ ಸುಗಂಧವನ್ನು ಮೈಗೆ ಪೂಸಿಕೊಂಡು, ಸುಗಂಧಯುಕ್ತ ತಾಂಬೂಲವನ್ನು ಗೋವಿಂದ ಎಲ್ಲರಿಗೆ ವಿತರಿಸಿದ.

ಆಣಿಮುತ್ತಿನ ಚಾವಡಿಯಲ್ಲಿ ಕಮನೀಯ
ಮಾಣಿಕ್ಯ ಸಿಂಹ ಪೀಠದಲಿ
ರಾಣಿಯರೊಡ್ಡೊಲಗದಿ ಗದಾಚಕ್ರ
ಪಾಣಿ ಮಂಡಿಸಿದ ಕೇಳು ಕೆಳದಿ ೬೯

ಶ್ರೇಷ್ಠ ಮುತ್ತಿನ ಸಭಾಮಂಟಪದಲ್ಲಿ, ಸುಂದರ ರತ್ನಸಿಂಹಾಸನದಲ್ಲಿ, ರಾಣಿಯರ ಒಡ್ಡೋಲಗದಲ್ಲಿ ಚಕ್ರಪಾಣಿ ಮಂಡಿಸಿದ.

ಬಾಣನ ಮನೆಯ ಭಂಡಾರ ಬೊಕ್ಕಸವ ಪೂ
ಬಾಣನಂದನಗೆ ತಾರ್ಕಣಿಸಿ
ಬಾಣಜೆ ಸಹಿತ ಮಂದಿರವ ತುಂಬಿಸಿ ಕೊಟ್ಟ
ಬಾಣಾರಿ ದುರಿತ ಸಂಹಾರಿ ೭೦

ಬಾಣಾಸುರನ ಮನೆಯ ಭಂಡಾರ ಬೊಕ್ಕಸವನ್ನು ಹೂಬಾಣನಂದನ ಅನಿರುದ್ಧನಿಗೆ ಹಸ್ತಾಂತರಿಸಿ, ಬಾಣಾರಿಯೂ ದುರಿತಸಂಹಾರಿಯೂ ಆದ ಶ್ರೀಕೃಷ್ಣ ಬಾಣಜೆ ಸಮೇತ ಮನೆ ತುಂಬಿಸಿ ಕೊಟ್ಟ

ಹರೆ ಕಾಳೆ ಮೊದಲಾದ ವಾದ್ಯ ಘೋಷದಿ
ವರಬಂಧು ಬಳಗವನ್ನೆಲ್ಲ
ಪರಿತೋಷದಿಂದ ಬೀಳ್ಕೊಟ್ಟನು ಗೋಕುಲ
ದೆರೆಯ ನಾರದ ಗರುತ್ಮರನು ೭೧

ಹರೆ, ಕಹಳೆ ಮೊದಲಾದ ವಾದ್ಯಗಳ ಘೋಷದಿಂದ ಬಂಧುವರ್ಗ ಹಾಗೂ ನಾರದ ಗರುಡರನ್ನು ಗೋಕುಲದೊಡೆಯ ಶ್ರೀಕೃಷ್ಣ ಸಂತೋಷದಿಂದ ಬೀಳ್ಕೊಟ್ಟನು.

ಮನ್ನಣೆವಡೆದು ಬೀಳ್ಕೊಂಡೆಯ್ದಿದರು ಖಗ
ರನ್ನ ನಾರದರತ್ತಲಿತ್ತ
ತನ್ನ ವಧೂಟಿಯರೊಡನೆ ನಿರ್ಜರ ಶಿರೋ
ರನ್ನ ಶ್ರೀ ಕೃಷ್ಣನೊಪ್ಪಿದನು ೭೨

ಮನ್ನಣೆ ಪಡೆದು ಖಗರತ್ನ ನಾರದರತ್ತ ಹೋದರು, ಇತ್ತ ತನ್ನ ರಾಣಿಯರೊಡನೆ ಶ್ರೀಕೃಷ್ಣನೊಪ್ಪಿದನು.

ಗಂಧಶಾಲಿಯ ಗದ್ದೆಯೊಳಗಿದ್ದ ಕಳೆಯ ಕೀ
ಳ್ವಂದದಿ ಖಳರ ತೀರ್ಕಣಿಸಿ
ವೃಂದಾರಕ ಭೂಸುರ ರಕ್ಷಪಾಲ ಗೋ
ವಿಂದನಾ ಪುರದೊಳೊಪ್ಪಿದನು ೭೩

ಭತ್ತದ ಗದ್ದೆಯೊಳಗಿದ್ದ ಕಳೆಯನ್ನು ಕೀಳುವಂತೆ ಖಳರನ್ನು ಕೊಂದು ದೇವತೆಗಳ ಭೂದೇವತೆಗಳ ರಕ್ಷಕ ಆ ಪುರದಲ್ಲಿ ಒಪ್ಪಿದನು

ದುಷ್ಟರ ಮುರಿದು ಸಜ್ಜನರ ಪಾಲಿಗೆ ಸಂ
ತುಷ್ಟಿಯ ಮಾಡಿ ಭಕ್ತರಿಗೆ
ಇಷ್ಟಾರ್ಥವನೀವ ಕೃಷ್ಣ ದ್ವಾರಕಿಯೊಳ
ಗಷ್ಟೈಶ್ರರ್ಯದೊಳೊಪ್ಪಿದನು ೭೪

ದುಷ್ಟರನ್ನು ಸಂಹರಿಸಿ ಶಿಷ್ಟರನ್ನು ರಕ್ಷಿಸುವ ಮೂಲಕ ಸಂತುಷ್ಟಿಯನ್ನು ನೀಡಿ, ಭಕ್ತರಿಗೆ ಇಷ್ಟಾರ್ಥವನ್ನು ಈಡೇರಿಸುವ ಕೃಷ್ಣ ದ್ವಾರಕಿಯಲ್ಲಿ ಅಷ್ಟೈಶ್ವರ್ಯದಲ್ಲಿ ಒಪ್ಪಿದನು.

ಭೋಜ್ಯವಸ್ತುಗಳೊಳು ಮುಖ್ಯವಾದುದು ಲಲಿ
ತಾಜ್ಯ ನಿರ್ಜರ ಜನರಿಗದು
ಸ್ವಾಜ್ಯ ಗುಣಾಢ್ಯ ಶ್ರೀಕೃಷ್ಣ ಸುಮೃದ್ಧಸಾ
ಮ್ರಾಜ್ಯವನಾಳಿದನು ಮುದದಲಿ ೭೫

ಭೋಜ್ಯ(ಊಟ)ವಸ್ತುಗಳಲ್ಲಿ ಮುಖ್ಯವಾದದ್ದು ಆಜ್ಯ(ತುಪ್ಪ). ಸುರಾಮರರಿಗೆ ಧರಾಮರರಿಗೆ ಅದು ಸ್ವಾಜ್ಯ(ಸ್ವಾದ್ಯ=ರುಚಿ, ಸವಿ). ಗುಣಾಢ್ಯ ಶ್ರೀಕೃಷ್ಣ ಸಮೃದ್ಧ ಸಾಮ್ರಾಜ್ಯವನ್ನು ಮುದದಿಂದ ಆಳಿದನು.

ನಿರ್ಮತ್ಸರದೊಳೀ ಕೃತಿಯ ಕೇಳ್ದವರಿಗೆ
ಧರ್ಮಾರ್ಥಕಾಮ ಮೋಕ್ಷಗಳ
ಭರ್ಮಾಂಬರನೀವ ಭಾಮೆ ಕೇಳು ನಮ್ಮ ದು
ಷ್ಕರ್ಮ ವಿಚ್ಛೇದನವಾಯ್ತು ೭೬

ನಿರ್ಮತ್ಸರದಿಂದ ಈ ಕೃತಿಯನ್ನು ಕೇಳಿದವರಿಗೆ ಭರ್ಮಾಂಬರ (ಪೀತಾಂಬರ ಕೃಷ್ಣ; ಭರ್ಮ=ಸ್ವರ್ಣ, ಬಂಗಾರ) ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಕೊಡುವನು. ಮನದನ್ನೇ ಕೇಳು, ನಮ್ಮ ದುಷ್ಕರ್ಮ ವಿಚ್ಛೇದನವಾಯ್ತು.

ಯೋಗಿ ಹೃತ್ಕಮಲಾಸನ ದೈತ್ಯ ಸಂಹಾರಿ
ರಾಗಿಪ ಭೋಗದೇವೆಂದ್ರ
ಕಾಗಿನೆಲೆಯ ನರಸಿಂಹಾದಿಕೇಶವ
ಸಾಗುವ ಜನಮನೋರಥವ ೭೭

ಯೋಗಿಗಳ ಹೃದಯ ಪೀಠಸ್ಥ, ರಕ್ಕಸ ಸಂಹಾರಿ, ಪ್ರೇಮ ಭೋಗಗಳ ದೇವೇಂದ್ರ ಎಂಬ ಬಿರುದಿಗೆ ಪಾತ್ರನಾದ ಕಾಗಿನೆಲೆಯ ನರಸಿಂಹಾದಿಕೇಶವ ಜನಮನದಿಚ್ಛೆಯನ್ನು ಸಾಗುವನು(<ಸಾಕುವನು= ರಕ್ಷಿಸುವನು)

ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ೭೮

ವರ ಮೋಹನ ತರಂಗಿಣಿ ಎಂಬ ಕಾವ್ಯವನ್ನು ಬರೆದು ಓದಿ ಕೇಳಿದ ಜನರನ್ನು ಸೂರ್ಯಚಂದ್ರರಿರುವ ತನಕ ಲಕ್ಷ್ಮೀಕಾಂತ ಬಿಡದೆ ರಕ್ಷಿಸುವನು.